## ಪಾಲ್ಕುರಿಕೆ ಸೋಮನಾಥನ

# ಬಸವ ಪುರಾಣ

### ಅನುವಾದ-ಅಧ್ಯಯನ

ಡಾ. ಪಿ.ವಿ. ನಾರಾಯಣ



ವಸಂತ ಎಂಟರ್‌ಪ್ರೈಸಸ್
ನಂ. 224, 4ನೇ ಮುಖ್ಯರಸ್ತೆ,
3ನೇ ಅಡ್ಡರಸ್ತೆ, ಚಾಮರಾಜಪೇಟೆ
ಬೆಂಗಳೂರು-560 018

**"PALKURIKE SOMANATHANA BASAVA PURANA"** a Kannada rendering in verse from Telugu by **Dr. P.V. Narayana** - Published by : **Vasantha Enterprises,** No. 360, 10th 'B' Main, Jayanagar 3rd Block, Bangalore-560 011

| | | |
|---|---|---|
| ಪ್ರಥಮ ಮುದ್ರಣ | : | 2009 |
| ಬೆಲೆ | : | **ರೂ. 275/-** |
| ಉಪಯೋಗಿಸಿದ ಕಾಗದ | : | 70 ಜಿ.ಎಸ್.ಎಂ. ಮ್ಯಾಪ್‌ಲಿಥೋ |
| ಪುಟಗಳು | : | 506 |
| ಮುಖಪುಟ | : | ಆರ್ಟ್ ಫೋಕಸ್ |
| ಹಕ್ಕುಗಳು | : | ಲೇಖಕರದ್ದು |

**ವಸಂತ ಎಂಟರ್‌ಪ್ರೈಸಸ್**
ನಂ. 224, 4ನೇ ಮುಖ್ಯರಸ್ತೆ
3ನೇ ಅಡ್ಡರಸ್ತೆ, ಚಾಮರಾಜಪೇಟೆ
ಬೆಂಗಳೂರು–560018

ಅಕ್ಷರ ಜೋಡಣೆ: ಎಂ. ಮಹೇಶ್
ಕುಮುದ ಗ್ರಾಫಿಕ್ಸ್, ಬೆಂಗಳೂರು

ದೂ: 9945814774

ಮುದ್ರಕರು :
ಶ್ರೀಮಾನ್ ಪ್ರಿಂಟೆಕ್ಸ್
ನಂ 77, ಮಾಗಡಿ ರಸ್ತೆ, ಅಗ್ರಹಾರ ದಾಸರಹಳ್ಳಿ
ಬೆಂಗಳೂರು – 560 079. ✆: 9900543225

## ಅರ್ಪಣೆ

ತನ್ನ ಸಮಕಾಲೀನರಿಗಿಂತ ಆಲೋಚನಾವಿಧಾನದಲ್ಲಿ ಎಂಟನೂರು
ವರ್ಷಗಳು ಮುಂದಿದ್ದ, ತನ್ನ ವಿಚಾರಧಾರೆಯಿಂದ
ಈಗಲೂ ನಮಗೆ ಪ್ರಸ್ತುತವಾಗಿರುವ
ಈ ಪುರಾಣಾಂತರ್ಗತನಾದ
ಐತಿಹಾಸಿಕ ವ್ಯಕ್ತಿ

**ಬಸವಣ್ಣನಿಗೆ**

## ಎರಡು ಮಾತುಗಳು

### ಪ್ರಸ್ತುತ ಅನುವಾದ

ಐತಿಹಾಸಿಕ ಮಹತ್ವವುಳ್ಳ ಈ ಕೃತಿಯನ್ನು ಅನೇಕ ದೃಷ್ಟಿಗಳಿಂದ ಅಭ್ಯಾಸ ಮಾಡುವ ಅವಶ್ಯಕತೆಯಿದೆ; ವಿಶೇಷವಾಗಿ ತೌಲನಿಕ ಅಧ್ಯಯನ ಈ ಕೃತಿಯನ್ನೊಳಗೊಂಡಂತೆ ಇನ್ನೂ ಬಹಳವಾಗಿ ನಡೆಯಬೇಕಾಗಿದೆ. ಮೊದಲ ವೀರಶೈವ ಪುರಾಣವೂ, ಬಸವಚರಿತ್ರೆಯೂ, ಕನ್ನಡದ ಮುಂದಿನ ಅನೇಕ ಕಾವ್ಯಗಳಿಗೆ ಮಾರ್ಗದರ್ಶಕವೂ ಆದ ಕೃತಿ ತದ್ರೂಪವಾಗಿ ಕನ್ನಡಿಗರಿಗೆ ಲಭ್ಯವಾಗಲೆಂಬ ಆಸೆಯಿಂದ ಈ ಅನುವಾದವನ್ನು ಸಿದ್ಧಪಡಿಸಲಾಗಿದೆ. ಭೀಮಕವಿಯ 'ಬಸವಪುರಾಣ'ವು ಸೋಮನಾಥನನ್ನೇ ಆಧರಿಸಿದ್ದರೂ, ಬಹಳಷ್ಟು ಮಟ್ಟಿಗೆ ಅನುಸರಿಸಿದ್ದರೂ, ಅದರಲ್ಲಿ ಭೀಮಕವಿಯು ಅನೇಕ ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ. ಹೀಗಾಗಿ ಎಷ್ಟು ಮೂಲದ್ದು. ಎಷ್ಟು ಭೀಮಕವಿಯದು ಎಂಬ ಅನುಮಾನ ತೆಲುಗು ಬಾರದವರನ್ನು ಕಾಡಬಹುದು. ತೌಲನಿಕ ಅಭ್ಯಾಸಕ್ಕೆ ತೆಲುಗು ಬಾರದವರಿಗೆ ಇದರಿಂದ ಅಡ್ಡಿ. ಆದ್ದರಿಂದ ಆದಷ್ಟೂ ಮೂಲಕ್ಕೆ ಹತ್ತಿರವಾಗಿರಬೇಕೆಂಬುದೇ ಈ ಅನುವಾದದ ಉದ್ದೇಶ. ಅದನ್ನು ನೆರವೇರಿಸಲು ಈ ಕೆಳಗಿನ ಮಾರ್ಗವನ್ನು ಹಿಡಿಯಲಾಗಿದೆ:

೧) ಮೂಲದ ಛಂದಸ್ಸನ್ನೇ ಇಲ್ಲಿ ಬಳಸಲಾಗಿದೆ. ಎಂದರೆ ಇಲ್ಲಿನದು ಅಂಶಗಣಘಟಿತ ದ್ವಿಪದ; ಕನ್ನಡದಲ್ಲಿ ಇದು ತುಂಬ ಕ್ವಚಿತ್ತಾಗಿ ಬಳಕೆಯಾದ ಛಂದಸ್ಸು. ಪ್ರತಿ ಪಾದದಲ್ಲಿ ಮೂರು ವಿಷ್ಣುಗಣಗಳೂ ಕೊನೆಯಲ್ಲೊಂದು ಬ್ರಹ್ಮಗಣವೂ ಬರುತ್ತದೆ. ದ್ವಿಪದದ ಎರಡು ಸಾಲುಗಳಲ್ಲಿ ಮೂಲದಲ್ಲಿ ದ್ವಿತೀಯಾಕ್ಷರ ಪ್ರಾಸವಿದೆ; ಆದರೆ ಅನುವಾದದಲ್ಲಿ ಅದನ್ನನುಸರಿಸಲು ಸಾಧ್ಯವಾಗಿಲ್ಲ. ಮೂಲದಲ್ಲಿರುವಷ್ಟು ಸಾಲುಗಳೇ ಅನುವಾದದಲ್ಲಿಯೂ ಇವೆ, ಒಂದು ಸಾಲು ಹೆಚ್ಚಿಗೆ ಇಲ್ಲ, ಒಂದು ಸಾಲು ಕಡಿಮೆಯಲ್ಲ, ಇದು ಮೂಲದ ಓಟವನ್ನು ತದ್ರೂಪವಾಗಿ ಸೆರೆಹಿಡಿಯಬೇಕೆಂಬ ಆಕಾಂಕ್ಷೆಯನ್ನು ಬಹುಮಟ್ಟಿಗೆ ಈಡೇರಿಸುತ್ತದೆ.

೨) ಸಾಧ್ಯವಾದ ಕಡೆಗಳಲ್ಲೆಲ್ಲ ಕನ್ನಡದಲ್ಲೂ ಬಳಕೆಯಾಗುತ್ತಿರುವ, ಮೂಲ ತೆಲುಗು ಕಾವ್ಯದಲ್ಲಿ ಬಂದಿರುವ, ಸಂಸ್ಕೃತ ಶಬ್ದಗಳನ್ನು ಉಳಿಸಿಕೊಳ್ಳಲಾಗಿದೆ. ತೆಲುಗು ಶಬ್ದಗಳು ಬಂದಾಗ, ಅನಿವಾರ್ಯವಾಗಿ ಸಾಧ್ಯವಾಗದ ಕಡೆಗಳಲ್ಲಿ ಹೊರತು,

ಕನ್ನಡದ ಜ್ಞಾತಿ ಶಬ್ದಗಳನ್ನೇ ಬಳಸಲಾಗಿದೆ. ತೆಲುಗಿನಲ್ಲಿ ಬಳಕೆಗೊಂಡು, ಕನ್ನಡದಲ್ಲಿ ಕೆಲವು ಕಡೆಗಳಲ್ಲಾದರೂ ಉಪಯೋಗದಲ್ಲಿದೆ ಎಂದು ಖಾತರಿಯಾದ ಶಬ್ದಗಳನ್ನು ಅನುವಾದದಲ್ಲಿ ಹಾಗೆಯೇ ಬಳಸಿಕೊಳ್ಳಲಾಗಿದೆ. ಮೂಲ ಗ್ರಂಥದ ಶಬ್ದಕೋಶಕ್ಕೆ ಅನುವಾದ ಆದಷ್ಟೂ ಸನಿಹದಲ್ಲಿರಬೇಕೆಂಬುದೇ ಇಲ್ಲಿನ ಆಶಯ.

೩) ಮೂಲದ ಹಾಗೆಯೇ ಸಾಲುಗಳು ಛಂದೋನುಗತವೇ ಹೊರತು ವಾಕ್ಯವು ಸಾಲಿನ ಮಧ್ಯದಲ್ಲಿ ಮುಗಿಯಬಹುದು, ಶಬ್ದಗಳೂ ಮುಂದಿನ ಸಾಲಿಗೆ ಮುಂದುವರೆಯಬಹುದು. ಹಾಗೆ ಶಬ್ದಗಳು ಎರಡು ಸಾಲುಗಳ ನಡುವೆ ಒಡೆದಿದೆ ಎಂದು ತೋರಿಸಲು '–' ಗೆರೆಯೊಂದನ್ನು ಬಳಸಲಾಗಿದೆ.

ಉದಾ:

ಜಂಗಮಲಿಂಗೈಕ್ಯಸದ್ಭಕ್ತಿಯುಕ್ತಿ–
ಯನ್ನಂಗೀಕರಿಸಿ ಪೂಜೆಯನು ಮಾಡುತ್ತ–
ಲೊಡಬಡೆ ರಾಜವದುಪಚಾರಗಳನು

ಆದರೆ ಸಮಾಸಪದವಾಗಿದ್ದರೂ ಎರಡು ಸ್ವತಂತ್ರ ಶಬ್ದಗಳು ಒಡೆದಿರುವಾಗ ಅಂತಹ ಕಡೆ ಗೆರೆಯನ್ನು ಬಳಸಿಲ್ಲ. ಉದಾ:

ಭಕ್ತಿಯಿಂದಾ ಮಡಿವಾಳ ಮಾಚಯ್ಯ
ದೇವರ ಶ್ರೀಪಾದಕಂಜಯುಗವನು

ಸುಲಭವಾಗಿ ಇದು ತಿಳಿಯುವುದರಿಂದ ಈ ವಿಧಾನವನ್ನು ಅನುಸರಿಸಲಾಗಿದೆ.

## ಕೃತಜ್ಞತೆಗಳು

ಪಾಲ್ಕುರಿಕೆ ಸೋಮನಾಥನ 'ಬಸವಪುರಾಣ'ದ ಸ್ವರೂಪಸ ಕಲ್ಪನೆ ತೆಲುಗು ಬಾರದ ಕನ್ನಡಿಗರಿಗೆ ಆಗಲೆಂಬ ಮಹತ್ವಾಕಾಂಕ್ಷೆಯಿಂದ, ತೌಲನಿಕ ಅಧ್ಯಯನಕ್ಕೆ ಉಪಯುಕ್ತವಾಗಲೆಂಬ ದೃಷ್ಟಿಯಿಂದ ಸಾಕಷ್ಟು ಶ್ರಮವಹಿಸಿ ಈ ಅನುವಾದವನ್ನು ಸಿದ್ಧಪಡಿಸಲಾಗಿದೆ. ಮುಖ್ಯವಾಗಿ ಶ್ರೀ ಬಂಡಾರು ತಮ್ಮಯ್ಯನವರು ಸಂಪಾದಿಸಿದ, ಮದರಾಸಿನ ವಾವಿಳ್ಳ ರಾಮಸ್ವಾಮಿ ಶಾಸ್ತ್ರುಲು ಅಂಡ್ ಸನ್ಸ್ ಅವರು ಪ್ರಕಟಿಸಿದ ತೆಲುಗು 'ಬಸವಪುರಾಣಮು'ವನ್ನು ಪಾಠಕ್ಕಾಗಿ ಆಧರಿಸಲಾಗಿದೆ. ಶ್ರೀ ಬಂಡಾರು ತಮ್ಮಯ್ಯನವರಿಗೆ ನನ್ನ ಕೃತಜ್ಞತೆಗಳು. ಮೊದಲ ಮುದ್ರಣವನ್ನು ೧೯೮೨ರಲ್ಲಿಯೇ ಹೊರತಂದಿದ್ದ ಸಿರಿಗೆರೆಯ ಅಣ್ಣನ ಬಳಗಕ್ಕೆ, ತೌಲನಿಕ ಅಧ್ಯಯನಗಳ ಲೇಖನಗಳನ್ನೊಳಗೊಂಡ ಈ ಆವೃತ್ತಿಯನ್ನು ಸುಂದರವಾಗಿ ಹೊರತರುತ್ತಿರುವ ವಸಂತ ಪ್ರಕಾಶನದ ಶ್ರೀ ಮುರಳಿ ಅವರಿಗೆ, ನನ್ನ ಕೃತಜ್ಞತೆಗಳು ಸಲ್ಲುತ್ತವೆ.

**–ಪಿ.ವಿ. ನಾರಾಯಣ**

# ಪರಿವಿಡಿ


**ಪ್ರಥಮಾಶ್ವಾಸ**

ಕಥಾರಂಭ ..... ೯
ಲೋಕವೃತ್ತಾಂತ ..... ೧೦
ಶಿಲಾದನ ತಪಸ್ಸು ..... ೧೧
ನಂದಿಕೇಶ್ವರನ ಅವತಾರ ..... ೧೩
ಕಪ್ಪಡಿಯ ಸಂಗಮಕ್ಕೆ ..... ೩೬
ಸಂಗಯ್ಯ ಪ್ರತ್ಯಕ್ಷನಾದದ್ದು ..... ೩೭

**ದ್ವಿತೀಯಾಶ್ವಾಸ**

ಬಸವನಿಗೆ ದಂಡನಾಯಕ ಪದವಿ ..... ೪೨
ಕಲ್ಯಾಣಕ್ಕೆ ಬಂದುದು ..... ೪೩
ಬಸವನ ಭಾಷೆ ..... ೪೯
ಬಸವೇಶ್ವರನ ಶಿವಾಚಾರನಿರತಿ ..... ೫೨
ಚೆನ್ನಬಸವನ ಮಹಿಮೆ ..... ೫೪
ಚೆನ್ನಬಸವನು ಬಸವನನ್ನು ಸ್ತುತಿಸಿದುದು ..... ೫೬
ಅಲ್ಲಮನ ಆಗಮನ ..... ೫೭
ಅಲ್ಲಮನಿಗೆ ಬೋನವಿಟ್ಟದ್ದು ..... ೫೯
ಪಾರ್ವತಿಯು ಪ್ರಮಥರಿಗೆ ಬೋನವಿಟ್ಟ ಕಥೆ ..... ೬೨
ಬಸವನಿಗೆ ವರವಿತ್ತದ್ದು ..... ೬೬
ಬದನೆಕಾಯಿ ಲಿಂಗವಾದದ್ದು ..... ೬೭
ಬಿಲ್ಲೇಶ ಮಲ್ಲಯ್ಯನ ಕಥೆ ..... ೬೮
ಕಾಟಕೋಟನ ಕಥೆ ..... ೬೯
ಜೋಳವು ಮುತ್ತಾದ ಕಥೆ ..... ೭೦

ಮೊರಟದ ಬಂಕಯ್ಯನ ಕಥೆ ..... ೭೦
ಸಂಗಮೇಶನು ಬಸವನ ಮೂರನೇ ಕಣ್ಣು ಕೇಳಿದ್ದು ..... ೭೧
ಗೊಲ್ಲತಿಯ ಪವಾಡ ..... ೭೫
ತಿರುಚಿಟ್ಟಂಬಲನ ಕಥೆ ..... ೭೬
ಸಿದ್ಧರಾಮನು ಕೈಲಾಸಕ್ಕೆ ಹೋದದ್ದು ..... ೭೭

## ತೃತೀಯಾಶ್ವಾಸ

ನರಿಗಳು ಕುದುರೆಗಳಾದ ಕಥೆ ..... ೮೭
ಬಸವನು ಹೆಂಡತಿಯ ಸೀರೆಯನ್ನು ಜಂಗಮಗಿತ್ತದ್ದು ..... ೮೮
ಮುಗ್ಧಸಂಗಯ್ಯನ ಕಥೆ ..... ೯೨
ರುದ್ರಪಶುಪತಿಯ ಕಥೆ ..... ೧೦೧
ನಕ್ಕನೈನಾರು ಕಥೆ ..... ೧೦೪
ಬೆಜ್ಜಮಹಾದೇವಿಯ ಕಥೆ ..... ೧೦೬
ಕೊಡಗೂಸಿನ ಕಥೆ ..... ೧೧೧
ದೀಪದ ಕಲಿಯಾರ ಕಥೆ ..... ೧೧೬
ನಾಟ್ಯನಮಿತ್ತಂಡಿಯ ಕಥೆ ..... ೧೨೧
ಉಡುಮೂರಿ ಕಣ್ಣಪ್ಪನ ಕಥೆ ..... ೧೨೫
ಕಲಿಯಂಬ ನಾಯನಾರ ಕಥೆ ..... ೧೪೨
ಸಕಲೇಶ್ವರ ಮಾದಿರಾಜಯ್ಯನ ಕಥೆ ..... ೧೪೩

## ಚತುರ್ಥಾಶ್ವಾಸ

ಮಡಿವಾಳ ಮಾಚಯ್ಯನ ಕಥೆ ..... ೧೬೧
ರಾಜನಿಗೆ ದೂರಿತ್ತದ್ದು ..... ೧೬೨
ಮಡಿವಾಳನ ಮಹಿಮೆ ..... ೧೬೪
ಇರುವಂದಾಡಾರಿಯ ಕಥೆ ..... ೧೬೮
ಬಾಹೂರ ಬ್ರಹ್ಮಯ್ಯನ ಕಥೆ ..... ೧೭೧
ಶಂಕರದಾಸಿಮಯ್ಯನ ಕಥೆ ..... ೧೭೮
ನಿಂಬವ್ವೆಯ ಕಥೆ ..... ೧೮೪
ಸಿರಿಯಾಳನ ಕಥೆ ..... ೧೮೫
ನಿಂಬವ್ವೆಯ ಕಥೆ ..... ೧೯೧
ಸರಸಿಂಗನಯನಾರನ ಕಥೆ ..... ೧೯೪

ಕೊಟಾರಿ ಚೋಳನ ಕಥೆ ..... ೧೯೬
ಹಲಾಯುಧನ ಕಥೆ ..... ೧೯೭
ಸಿರಿಯಾಳನ ಮಹಿಮೆ ..... ೧೯೯
ಹಲಾಯುಧನ ಬಹಿಷ್ಕರಿಸಿದ್ದು ..... ೨೦೦
ಪಾರ್ವರಿ–ಸಂಗಳವ್ವೆಯರ ಪ್ರಾರ್ಥನೆ ..... ೨೦೨
ಮಿಂಡನೈನಾರನ ಕಥೆ ..... ೨೦೫
ಶಿವಭಕ್ತರ ಮಹಿಮೆ ..... ೨೧೨
ಬಾಣನ ಕಥೆ ..... ೨೧೩
ಪಿಟ್ಟವ್ವೆಯ ಕಥೆ ..... ೨೧೪
ಕಲಿಕಾಮದೇವನ ಕಥೆ ..... ೨೧೪
ಎಣುಮೂರ್ತಿ ನೈನಾರ ಕಥೆ ..... ೨೧೬
ಕಡಮಲನಂಬಿಯ ಕಥೆ ..... ೨೧೭
ಗುಗ್ಗುಳು ಕಲಿಯಾರನ ಕಥೆ ..... ೨೧೭
ಅರಿವಾಲು ನಾಯನಾರ ಕಥೆ ..... ೨೧೮
ಅಡಿಭರ್ತನ ಕಥೆ ..... ೨೧೯
ಏಣಾದಿನಾಥನ ಕಥೆ ..... ೨೨೦
ಚೇದಿವಲ್ಲಭನ ಕಥೆ ..... ೨೨೧
ಕರಯೂರ ಚೋಳನ ಕಥೆ ..... ೨೨೧
ಕಳಿಯಂಬನೈನಾರ ಕಥೆ ..... ೨೨೨
ಇರುವದಾಂಡಾರಿಯ ಕಥೆ ..... ೨೨೨
ದಂಗುಳಿ ಮಾರಯ್ಯನ ಕಥೆ ..... ೨೨೩
ಗಣಪಾಲನ ಕಥೆ ..... ೨೨೩
ಕುಂಬಾರ ಗುಂಡಯ್ಯನ ಕಥೆ ..... ೨೨೪
ಪೂಸಲ ನಯನಾರ ಕಥೆ ..... ೨೨೬
ಮತ್ತೆ ಕೆಲವರ ಕಥೆ ..... ೨೨೬


**ಪಂಚಮಾಶ್ವಾಸ**


ಕಿನ್ನರ ಬ್ರಹ್ಮಯ್ಯನ ಕಥೆ ..... ೨೨೯
ಕುರಿಯ ಕಥೆ ..... ೨೩೦
ಕಲಕೇತ ಬ್ರಹ್ಮಯ್ಯನ ಕಥೆ ..... ೨೪೦

ಮೋಳಿಗೆ ಮಾರಯ್ಯನ ಕಥೆ ..... ೨೪೫
ಕನ್ನದ ಬ್ರಹ್ಮಯ್ಯನ ಕಥೆ ..... ೨೫೦
ಮುಸಿಡಿಯ ಚೌಡಯ್ಯನ ಕಥೆ ..... ೨೫೫
ಸುರುಗಿ ಚೌಡಯ್ಯನ ಕಥೆ ..... ೨೬೫
ತೆಲುಗು ಜೊಮ್ಮಯ್ಯನ ಕಥೆ ..... ೨೬೯


**ಷಷ್ಠಾಶ್ವಾಸ**


ಏಕಾಂತ ರಾಮಯ್ಯನ ಕಥೆ ..... ೨೭೬
ಇರುತ್ತಾಂಡಿಯ ಕಥೆ ..... ೨೮೨
ಪಿಳ್ಳನೈನಾರನ ಕಥೆ ..... ೨೮೩
ನಿಡುಮಾರನ ಕಥೆ ..... ೨೮೯
ನಮಿನಂದಿಯ ಕಥೆ ..... ೨೯೦
ಸಾಂಖ್ಯ ತೊಂಡನ ಕಥೆ ..... ೨೯೨
ಕೋವೂರ ಬ್ರಹ್ಮಯ್ಯನ ಕಥೆ ..... ೨೯೪
ಜೇಡರದಾಸಯ್ಯನ ಕಥೆ ..... ೨೯೪
ಹಿರಿಯ ನಾಚಯ್ಯನ ಕಥೆ ..... ೩೦೪
ಸೋಮಣ್ಣನ ಕಥೆ ..... ೩೦೫
ವೈಜಕ್ಕವ್ವೆಯ ಕಥೆ ..... ೩೦೭
ಸೊಡ್ಡಳದೇವ ಬಾಚಯ್ಯನ ಕಥೆ ..... ೩೧೫
ಅರಿಯಮನ ಕಥೆ ..... ೩೨೦
ವೀರಶಂಕರನ ಕಥೆ ..... ೩೨೨
ಶಿವಲೆಂಕ ಮಂಚಯ್ಯನ ಕಥೆ ..... ೩೨೩


**ಸಪ್ತಮಾಶ್ವಾಸ**


ಶಿವನಾಗಯ್ಯನ ಕಥೆ ..... ೩೪೦
ಕಲ್ಲಿದೇವಯ್ಯನ ಕಥೆ ..... ೩೪೩
ಬಿಬ್ಬಬಾಚಯ್ಯನ ಕಥೆ ..... ೩೪೯
ಮಾದಾರ ದೂಡಯ್ಯನ ಕಥೆ ..... ೩೫೬
ಬಾಸನ ಭೀಮಯ್ಯನ ಕಥೆ ..... ೩೫೭
ಶ್ವಪಚಯ್ಯನ ಕಥೆ ..... ೩೫೭

ಉದ್ಭಟನ ಕಥೆ ..... ೩೫೮
ಕಕ್ಕಯ್ಯನ ಕಥೆ ..... ೩೬೦
ಭೋಗಯ್ಯನ ಕಥೆ ..... ೩೬೨
ಗುಡ್ಡವ್ವೆಯ ಕಥೆ ..... ೩೬೬
ಕಲ್ಯಾಣಪುರದ ಭಕ್ತರು ..... ೩೭೧
ಬೇಡರ ತಕರಾರು ..... ೩೭೩
ಬಸವಣ್ಣನ ವಿಷಾರೋಗಣೆ ..... ೩೭೮
ಜಗದೇವ ದಂಡನಾಯಕನ ಕಥೆ ..... ೩೮೮
ಏಲೇಶ್ವರ ಕೇತಯ್ಯನ ಕಥೆ ..... ೩೮೯
ಸವರದ ನಾಚಯ್ಯನ ಕಥೆ ..... ೩೯೩
ಅಲ್ಲಯ್ಯ ಮಧುಪಯ್ಯರ ಕಥೆ ..... ೩೯೭

**ಅನುಬಂಧ** ..... ೪೦೯

**ಅರ್ಥಕೋಶ** ..... ೪೧೩

# ಬಸವ ಪುರಾಣ

## ಪ್ರಥಮಾಶ್ವಾಸ

ಶ್ರೀ ಗುರುದೇವ ಸಂಚಿತಗುಣೋತ್ತಂಸ
ಯೋಗಿಂದ್ರಹೃದಯ ಪಯೋಜಾತಹಂಸ
ಪರಮಕೃಪಾಮೂರ್ತಿ ಭಕ್ತಜನಾರ್ತಿ
ಹರ ತ್ರಿಜಗತ್ಸ್ಫೂರ್ತಿಯಾನಂದವರ್ತಿ
ಭವರೋಗವಿಚ್ಛೇದಿ ಭಕ್ತ ವಿನೋದಿ
ಶಿವತತ್ವಸಂವಾದಿ ಚಿರತರಾಮೋದಿ
ನಿತ್ಯಸ್ವರೂಪನುನ್ಮೀಲ ಪ್ರತಾಪ
ಪ್ರತ್ಯಯಗತಪಾಪ ಭಕ್ತಪ್ರದೀಪ
ಭಾವನಾತೀತ ಸದ್ಭಾವನೋಪೇತ
ಸಾವಯವಖ್ಯಾತನಮಿತನಜಾತ–

ನಾದ್ಯಂತರಹಿತ ವೇದಾಂತಾರ್ಥಸುಹಿತ
ವಿದ್ಯಾತ್ಮ ಸಹಿತ ಸಂವಿತ್ಸೌಖ್ಯಮಹಿತ
ಭಕ್ತಪರಾಧೀನ ಭಕ್ತನಿಧಾನ
ಭಕ್ತಸಮಾಧಾನ ಭಕ್ತವಧಾನ
ಭಕ್ತಪರಂಜ್ಯೋತಿ ಭಕ್ತವಿಭೂತಿ
ಭಕ್ತದುಃಖಾರಾತಿ ಭಕ್ತಾನುಭೂತಿ
ಭಕ್ತವ್ರಜತ್ರಾಣ ಭಕ್ತಧುರೀಣ
ಭಕ್ತಜನಪ್ರಾಣ ಪರಮಕಲ್ಯಾಣ
ಮನ್ಮನೋರಮ್ಯ ನಿರ್ಮಲಭಾವಗಮ್ಯ
ಚಿನ್ಮಯ ಸೌಮ್ಯನ ಭಜಿಸಿ ಕೀರ್ತಿಸುತ;

ಹೃದಯದಲಿ ಮದೀಯವಲ್ಲಭನಾದ
ಮಲ್ಲಿಕಾರ್ಜುನದೇವನನ್ನೊಲಿದಿರಿಸಿ;

ಸಮುದಿತಸಾರೂಪ್ಯ ಶಾಶ್ವತರಾದ
ಪ್ರಮಥರ ತ್ರಿಭುವನ ಪ್ರಥಮರ ನೆನೆದು;
ಪ್ರಕಟಲಿಂಗೈಕ್ಯ ಪುರಾತನಭಕ್ತ
ನಿಕರವ ಶಿವನೆಂದು ನಿಷ್ಠೆಯಿಂ ಕಂಡು;
ವ್ಯಕ್ತಲಿಂಗಗಳ ಸದ್ಭಕ್ತಿರಸಾಭಿ–
ಷಿಕ್ತರ ನೂತನಭಕ್ತರ ನೆನೆದು;
ಬಸವಚರಿತ್ರೆಯೀ ವಸುಮತಿಯಲ್ಲಿ
ಪ್ರಸರಿಪ ತತ್ಕಥಾಪ್ರೌಢಿಯೆಂತೆನಲು;

ಶ್ರೀಮನ್ಮಹಾದೇವನಾ ಸಿಂಹಾಸನವು
ಹೈಮವತೀಶನ ಸುವಿಹಾರಸ್ಥಳವು.
ಹರಭಕ್ತರಿಗೆಲ್ಲ ಏಕಾಂತವಾಸ
ಪರಮಯೋಗಿಗಳ ಹೃತ್ಪ್ರಮದಾವಹವೆನೆ
ನರರಿಗೆ ಕರ್ಮಸಂಹರಣೈಕಹೇತು–
ವಾರವಾರಯ್ಯೆ ಸುರರಿಗದಾಶ್ರಮಭೂಮಿ.
ಸಕಲತೀರ್ಥಗಳಿಗೆ ಜನಯಿತ್ರಿಯೆನಿಸಿ
ಪ್ರಕಟಿಸಲೊಪ್ಪಿತು ಶ್ರೀಪರ್ವತೇಂದ್ರ.
ಉರ್ವಿ ತತ್ಪರ್ವತ ಸಾರ್ವಭೌಮನಿಗೆ
ಪೂರ್ವವಕ್ತ್ರಾಂಕವಿಸ್ಫುರಣ ಕಾಂತಿಯಲಿ

ಮೆರೆದುಕುಮಾರಶೈಲೋತ್ತಂಸಲೀಲೆ–
ಯಿಂ ತ್ರಿಪುರಾಂತಕ ಪೆಂಪಿನಿಂದೆಸೆಯೆ;
ತತ್ತ್ರಿಪುರಾಂತಕಸ್ಥಾನ ವಾಸ್ತವ್ಯ–
ನಾಗಿದ್ದು ತ್ರಿಪುರಾಂತಕನನಭಿನುತಿಪ
ಆ ಪುರಸಂಹಾರನಪರಾವತಾರ
ರೂಪಿತ ಖ್ಯಾತಿನಿರೂಢಿಯ ಪಡೆದ–
ನಾ ಸದಾಶಿವಮೂರ್ತಿಯವಿತಥೈಶ್ವರ್ಯ
ಭಾಸುರಚರಲಿಂಗಪಟುದೀಪ್ತಿಯೆಸೆಯೆ,
ಆ ಕಾಲಕಂಧರನನವದ್ಯಹೃದ್ಯ
ಸಾಕಾರ ವಿಭ್ರಮವ್ಯಾಪ್ತಿ ಪೆಂಪೆಸೆಯೆ,

ದೇವನಾ ವೀರವ್ರತಾಚಾರಸಾರ–
ವದು ಚೆಲುವಾಗಿ ಸ್ಫುರಿಸಿ ಮಿಂಚಿ ಹೊಳೆವ
ಜಂಗಮರತ್ನನು ಶರಣಸಮ್ಮತನು
ಲಿಂಗೈಕ್ಯವರ್ತಿ ಗತಾಂಗವಿಕಾರಿ

ಪಂಡಿತಾರಾಧ್ಯ ಕೃಪಾಸಮುದ್ಗತನು
ಮಂಡಿತಸದ್ಭಕ್ತಿಮಾರ್ಗಪ್ರಚಾರಿ
ವಿಲಸಿತಪರಮಸಂವಿತ್ಸುಖಾಂಭೋದಿ-
ಯಹ ಕರಸ್ಥಲಿ ಸೋಮನಾಥಯ್ಯನವರು;
ಬಸವ ಕಾರುಣ್ಯರಸಸುಧಾವಾರ್ಧಿಯಲಿ
ಅಸದೃಶಲೀಲೆಯಿಂದೋಲಾಡಿ ನಿತ್ಯ

ನಿಯಮವ್ರತಾಚಾರ ನಿರುಪಮನಿಷ್ಠೆ-
ಯಿಂದಲಿ ತತ್ವನಿರ್ಣಯವನು ಹೊಂದಿ
ಅತುಲಗೋಷ್ಠೀಸುಖಸ್ಥಿತಿಯಿಂದ ಭಕ್ತಿ
ಮತಿನಿಯಮಗಳ ಹೊಂದಿದ ಮಲ್ಲಿನಾಥ;
ಆದಿ ವೇದಾಂತ ಸಿದ್ಧಾಂತ ಪುರಾಣ
ವೇದಶಾಸ್ತ್ರಾಗಮವಿಹಿತ ಮಾರ್ಗಗಳ
ತನುಮನೋಧನನಿವೇದನ ಸಮಗ್ರದಲಿ
ಸಂತತ ಜಂಗಮಾರ್ಚನೆಗಳ ಮಾಡಿ
ಒಲುಮೆಯಿಂ ಗ್ರಾಮಸೀಮಾಲಂಘನವ್ರ-
ತಾಲಂಕಾರವ ಮಾಡಿಯಾಚಾರಲೀಲೆ-

ಯಿಂದಧಿಕದಿ ಕುಮಾರಾದ್ರಿಗೆ ಪೂರ್ವ
ದೆಸೆಗೆ ಮೆಟ್ಟಲುಗಳನೊಪ್ಪೆ ಮಾಡಿಸುತ
ಮಹಿತಸದ್ಭಕ್ತಿ ಸಮಂಚಿತವೃತ್ತಿ-
ಯಿಂದಿರುತಿಹ ರೆಂಟಾಲದ ಮಲ್ಲಿನಾಥ;
ನಿರತಿಶಯ ಪ್ರೀತಿಯಿಂ ನಿತ್ಯವೈದು
ಕರವೀರಪುಷ್ಪವ ಹರನಿಗರ್ಪಿಸುತ-
ಲೊಂದಿನವೊಂದು ಹೂ ಕಡಿಮೆಯದಾಗೆ
ಗಕ್ಕನೆ ತನನೇತ್ರಕಮಲವರ್ಪಿಸುತ
ಭವನಿಂದಸದೃಶವಹ ಕಣ್ಣ ಪಡೆದು
ಧ್ರುವಕೀರ್ತಿಯನು ಹೊಂದಿದಾ ದೋಚಮಾಂಬೆ;

ಧೀರನು ಮುನ್ನಯದೇವಯೋಗೀಶ-
ನಿಗೆ ಕೂರ್ಮೆ ಶಿಷ್ಯನು ನಾರಯಾಂಕನಿಗೆ
ಪುತ್ರನು ಪರಮಪವಿತ್ರನು ವಿಮಲ
ಗಾತ್ರಾಂಚಿತನು ನೀಲಕಂಠನಗ್ರಜನು,
ಜಗದಭಿನುತನು ಪ್ರಸಾದಾವಧಾನಿ
ನಿಗಮಾರ್ಥವೇತ್ತ ಕೋಡಗಿ ತ್ರಿಪುರಾರಿ;

ಮೊದಲಾಗಿ ಸಕಲಭಕ್ತಾನೀಕವಲರೆ
ಮಾನಿತಭಕ್ತಿಸಾಮ್ರಾಜ್ಯ ಸಂಪದವು
ಅತಿಶಯವೆನಿಸಲು ಚಿರತರಮಹಿಮೆ-
ಯಿಂದಲೊಪ್ಪಿರುತಿರೆ ತಾನೊಂದು ದಿವಸ

ಮಂಡಿತಾಸಂಖ್ಯಾತ ಮಾಹೇಶ್ವರರಿಗೆ
ದಂಡಪ್ರಣಾಮಗಳುಚಿತವಾಚರಿಸಿ
ಭಕ್ತಿದಯಾರಸಪರಮಾಮೃತಾಭಿ-
ಷಿಕ್ತನಾಗುತಲಿ ಗೋಷ್ಠೀಪ್ರಸಂಗದಲಿ
"ಅಸದೃಶವೆನಿಪ ಬಸವ ಪುರಾಣವನು
ಅತಿಶಯವೆನೆ ಹೇಳಲಿಷ್ಟವುಳ್ಳೆನಗೆ
ವರಕಥಾಸೂತ್ರವ ತಿಳಿಸುತಲೆನ್ನ
ಚರಿತಾರ್ಥನೆನಿಸಿರಿ ಕರುಣೆಯಿಂದೆ"ನುತ
ಸನ್ನುತಿಗೈಯುತ ಸಸ್ಪೃಹತ್ವದಲಿ
ಬಿನ್ನಿವಿಸಲು ಭಕ್ತವಿತತಿ ಹರ್ಷಿಸುತ

ಸಮುದಿತಪ್ರೀತಿ ಪ್ರಸಾದಾವಲೋಕ-
ನವನು ಹರಿಸುತಲಿ ಎನ್ನ ವೀಕ್ಷಿಸುತ
"ಬಸವಪುರಾಣವ ಪ್ರಸರಿಪಶಕ್ತಿ-
ಯತಿಶಯವಾಗಿ ಹೊಂದಿಹೆಯದರಿಂದ
ರಚಿಯಿಸು ಬಸವಪುರಾಣವ ನೀನು
ಅಚಲಿತ ಭಕ್ತ ಹಿತಾರ್ಥಕಾರಣದಿ"
ಎನ್ನಲು ಭಕ್ತಜನಾವಳಿಯಾಜ್ಞೆ-
ಯನು ತಲೆಯಲಿ ಹೊತ್ತು ರಚಿಸುವೆ ಕವಿತೆ:
ಆದರವೆತ್ತ ಕರ್ಣಾಟದೇಶಕ್ಕೆ
ಕೋಟೀರದಂತೆಸೆಯುವ ಗೊಬ್ಬೂರೆನುವ

ಒಂದಗ್ರಹಾರಮಹಾಜನೋತ್ತಮನ
ಕಾಯಪೂಜಿತಪಾದಕಮಲದ್ವಯನಹ
ಶಾಂಭವವೇಧದೀಕ್ಷಾಸದ್ವಿಶೇಷ
ಸಂಭಾವಿತಾಶ್ರಿತಜನಸಮುತ್ಕರನು
ಸುರುಚಿರಪ್ರಣವವಿಸ್ಫುರಿತೋಪದೇಶ
ಚರಿತಾರ್ಥ ನಿಖಿಲಶಿಷ್ಯಪ್ರತಾನನೆನೆ
ಕಿಂಕರನಿಚಯ ಹೃತ್ಪಂಕೇರುಹಾಂತ-
ರಾಂಕಿತ ವರಸಚ್ಚಿದಾನಂದಮೂರ್ತಿ-

ಪಾತ್ರನು ಭವಲತಾದಾತ್ರನು ವಿಷಯ
ಚೈತ್ರನು ವಿಮಲಚರಿತ್ರನು ಸಕಲ

ಭವನು ಪಾವನಮೂರ್ತಿ ಬುಧಚಕ್ರವರ್ತಿ
ಪ್ರಮಿಮಲಕೀರ್ತಿ ಸದ್ಭಕ್ತಿ ಪ್ರಪೂರ್ತಿ–
ಯೆಂದು ವಿನುತಿವೆತ್ತ ಆಚಾರ್ಯ ಮಹಿಮ–
ನೆನಿಸಿದ ಮಂಡೆಗೆ ಮಾದಿರಾಜನನೆ,
ಆ ಮಹಾತ್ಮನ ಸಮುದ್ಯತ್ಕೃಪಾಪೂರಿ–
ತಾಮೃತಹಸ್ತಕೃತಾವತಾರನಹ
ಆ ಗುರುದೇವ ಪಾದಾಬ್ಜ ಸೌರಭ್ಯ
ಭೋಗಲೀಲಾ ವರಪುಷ್ಪಂಧಯನಹ
ಆ ಶಿವಯೋಗಿಯುದಾತ್ತಮೂರ್ತಿ ಪ್ರ–
ಕಾಶಿತಹೃತ್ಪದ್ಮ ಕರ್ಣಿಕಾಂತರನು,

ಆ ದಿವ್ಯದೇಹಿದಯಾಕಲಿತ ಪ್ರ–
ಸಾದಪಾದೋದಕಾಸ್ವಾದ ತತ್ಪರನು,
ಗುರುಪರತಂತ್ರನು ಗೊಬ್ಬೂರ ವಿಭುವು
ಪರಮ ಶಿವಾಚಾರಪಥವರ್ತನನಹ
ಲಿಂಗೈಕ್ಯನಿಷ್ಠಾವಿಲೀನಮಾನಸನು
ಸಂಗನಾಮಾತ್ಯನು ಜಗದುಪಕಾರಿ–
ಯೆಂದಿಂತು ಭಕ್ತಸಭಾಭ್ಯಂತರಾಳ–
ದಿಂ ನಿನ್ನ ನುತಿಸೆ ಕೇಳುತ ಲಸತ್ಪ್ರೀತಿ
ಪಸರಿಸೆ ಜಂಗಮ ಭಕ್ತನೆನಿಸುತ
ಬಸವಪುರಾಣೈಕ ಪಾತ್ರ ತಾನೆನಿಸಿ

ಅಚಲಿತ ಪ್ರೀತಿಯದನುಕೂಲವೆನಿಸಿ
ರಚಿಸುವೆ ಬಸವಪುರಾಣಸತ್ಯವಿತೆ–
ಯವಧಾನವಂತನಾಗುತ ನೀನು ಕೇಳು
ಸವಿಶೇಷಭಕ್ತಿಯಿಂ ಸಂಗನಾಮಾತ್ಯ !
ಧರೆ'ಗುಮಾ ಮಾತಾಪಿತಾರುದ್ರ'ನೆನಲು
ವರಪುರಾಣೋಕ್ತಿಯೀಶ್ವರನ ಕುಲಜನೆ
ಶರಣಗಣಾಸ್ರಯ ಸಕಲಸ್ವರೂಪ
ಗುರುಲಿಂಗವರ ಕರೋದರಜನಿತನೆ ನೀ
ಭಕ್ತ ಕಾರುಣ್ಯಾಭಿಷಿಕ್ತನೆ ಪಾಶ–
ಮುಕ್ತನೆ ಕೇವಲ ಭಕ್ತಿಗೋತ್ರನೆನೆ

ಭ್ರಾಜಿಷ್ಣುವಹ ವಿಷ್ಣು ರಾಮಿದೇವನೆನೆ
ತೇಜಿಷ್ಣುವಹ ಶ್ರಿಯಾದೇವಿತಾಯೊಡನೆ
ಗೌರವದಿಂದಿಹ ಪ್ರೇಮದ ಸುತನೆ
ವೀರಮಾಹೇಶ್ವರಾಚಾರವ್ರತನೆ ವಿ-
ಖ್ಯಾತ ಸದ್ಭಕ್ತಿಯಿಂ ಕಲಕಟ್ಟಕೂರ
ಪೋತಿದೇವರ ಪದಾಂಬುಜಷಟ್ಪದನಹ
ಸಕೃತಾನ್ಮತಹ ಕರಸ್ಥಲಿ ವಿಶ್ವನಾಥ
ಪ್ರಕಟವರಪ್ರಸಾದಕವಿತ್ವಯುತನೆ
ವಡಗಾಮು ರಾಮೇಶುವರಶಿಷ್ಯನೆಂದೆ-
ನಿಸಿರುವ ಚೆನ್ನರಾಮನ ಪ್ರಾಣಸಖನೆ

ಸಂಭಾವಿತನೆ ಭವಿಜನಸಮಾದರಣ
ಸಂಭಾಷಣಾದಿ ಸಂಸರ್ಗದೂರನೆನಿ-
ಸಿದ ಪಾಲ್ಕುರಿಕಿ ಸೋಮನಾಥನೆಂದೆನಲು
ಕೀರ್ತಿಪಡೆದಿಹ ನಿರ್ಮಲ ಚರಿತ್ರನಹ
ಉರುತರವಹ ಗದ್ಯಪದ್ಯೋಕ್ತಿಗಿಂತ
ಸರಸದಿ ಮೆರೆಯುವ ಜಾನುತೆಲುಗು ವಿ-
ಚಾರಿಸಲದು ಸರ್ವಸಾಮಾನ್ಯವೆನಿಸಿ
ಬರುವ ದ್ವಿಪದಗಳನೀಯೆಡೆ ಬರಿಯ
ತೆಲುಗು ಮಾತುಗಳೆನಬಹುದೆ? ವೇದಗಳ
ಸಮವೆನೆ ನೋಡಬೇಕದುವೆಯೆಂತೆನಲು
ಅಳತೆಗೆ ಕೊಳಗ ಪ್ರಮಾಣವೆನಿಸಲು
ಅಳತೆಯ ಸೊಲಗೆಯು ಪ್ರಮಾಣ ತಾನೆ?
ಅಲ್ಪಾಕ್ಷರಗಳಿಂದನಲ್ಪಾರ್ಥ ರಚನೆ-
ಯನು ಕಲ್ಪಿಸುವುದಲ್ಲವೆ ಕವಿವಿವೇಕ?
ಅಲರಿಸಿ ಬಸವನ ನೆನೆವ ನೆನಹನು
ಬಲುಹಾಗಿ ಮಾಡಿ ಭಾವಗಳನು ಮೆರೆಸಿ-
ಯಕಳಂಕಲಿಂಗ ರಹಸ್ಯಸಿದ್ಧಾಂತ
ಸಕಲ ವೇದಪುರಾಣಸಮ್ಮತವಾದ
ಆತತ ಸಕಲಪುರಾತನಭಕ್ತ
ಗೀತಾರ್ಥಸಮಿತಿಯೇ ಮಾತೃಕೆಯೆಂಬ

ಪೂರಿತವಾಗೊಪ್ಪುವಾ ಮಣಿಗಳಲಿ
ದಾರದಂತೆಯೆ ಪುರಾತನಭಕ್ತವಿತತಿ

ಚರಿತೆಗಳಲಿ ಸೇರಿಸುತ್ತ ಬಸವನ
ಚರಿತೆಯ ವರ್ಣಿಪೆ ಸತ್ಕೃತಿಯೆನಿಸೆ.
ಅಸದೃಶಲಿಂಗದೇಹಸ್ಥನಾಗಿದ್ದ
ಬಸವನ ಬೇರೊಂದು ಭಾವವೆಂಬತೆ
ಕಂಡು ವರ್ಣಿಸುವುದು ತಪ್ಪೆನಬಹುದೆ?
ಹಿರಿಭಕ್ತಿ ವರ್ಧನಾರ್ಥದಲೆ ತಾನಿದ್ದ
ಬಸವಗೆ ಶರಣೆನ್ನೆ ಪಾಪದ ಕ್ಷಯವು
ಬಸವಗೆ ಶರಣೆನ್ನೆ ಪರಮ ಪಾವನವು

ಬಸವಗೆ ಶರಣೆನ್ನೆ ಪ್ರತ್ಯಕ್ಷಸುಖವು
ಬಸವಗೆ ಶರಣೆನ್ನೆ ಭವರೋಗನಾಶ
ಬಸವಗೆ ಶರಣೆನ್ನೆ ಭಕ್ತಿವರ್ಧನವು
ಬಸವಗೆ ಶರಣೆನ್ನೆ ಬಂಧಮೋಚನೆಯು
ಬಸವಗೆ ಶರಣೆನ್ನೆ ಭಾಗ್ಯಸೇರ್ಪಡೆಯು
ಬಸವಗೆ ಶರಣೆನ್ನೆ ಮೆರೆವುದು ಶೀಲ
ಬಸವಗೆ ಶರಣೆನ್ನೆ ಹರಿವುದಾಪದವು
ಬಸವಗೆ ಶರಣೆನ್ನೆ ಪ್ರಬಲ ಸಂಪದವು
ಬಸವಗೆ ಶರಣೆನ್ನೆ ಅತಿಶಯ ಕೀರ್ತಿ
ಬಸವಗೆ ಶರಣೆನ್ನೆ ಫಲಿಸುವುದಿಚ್ಛೆ

ಬಸವಗೆ ಶರಣೆನ್ನೆಯಹುದು ವಾಕ್ಸಿದ್ಧಿ
ಬಸವಗೆ ಶರಣೆನ್ನೆ ಬುದ್ಧಿಭ್ರಾಜಿಪುದು.
ಹೆಚ್ಚೇಕೆ ಬಸವಯೆಂದೆನ್ನುತ ಮೆರೆವ
ನಿನ್ನಕ್ಷರತ್ರಯವನ್ನೊಂದು ಬಾರಿ
ಯಾರು ಸ್ಮರಿಸುವರೊ ಮುದದಿಂದಲವನ
ವದನವು ಶಿವನಲ್ಲೆ ನೆಲೆಸುವುದೆನಲು
ಸಂತತ ಬಸವನ ಪ್ರಸ್ತುತಿಸುತಿರೆ
ಹರಿವುದು ಚೋದ್ಯವೇ ಭವವಂಧನಗಳು
ಬಸವನು ಕೇವಲ ಭಕ್ತನೆ ತಿಳಿಯೆ
ಅಸಮಾಕ್ಷಾನಾ ರೂಪದಿಂ ನಿಂತನಲದೆ

ಬಸವನು ವಸುಧೆ ಮೇಲುದಿಸಿದಷ್ಟಕ್ಕೆ
ಬಸವನ ನರನೆಂದು ಹೇಳಲುಬಹುದೆ?
ಹರನು ನಿರಾಕಾರನದರಿಂದ ಬಸವ-
ನಾರಯ್ಯೆ ಸಾಕಾರದಿಂದಲರಲು ನೋಡಿ

ಶರಣನಾಗಿ ಬಸವ ಸಂದಿಲ್ಲದಿಹನು
ಶರಣನಾಗುತ ಪರಮನು ತೋರಿಬರಲು
ಪರಮಭಕ್ತಸ್ಥಿರಿ ಬಸವಗಾಗುವುದು.
ಭಕ್ತನಾಗುತ ಲಿಂಗ ರೂಪವ ಕೊಳಲು
ವ್ಯಕ್ತಿಯಾಗುತ ಬಸವನು ಸೇವೆಗೈವ.

ಪರಮಾತ್ಮ ರೂಪನೆ ಬಸವನು ತಿಳಿಯೆ
ಪರಮೇಶ ತಿಳಿವನಾ ಬಸವನ ಬಗೆಯ
ಸಾಲೋಕ್ಯಸಾಮಿಪ್ಯ ಸಾರೂಪ್ಯಪದಗ-
ಳನ್ನೋಳಿಯಿಂ ಹೊಂದೆ ಸಾಯುಜ್ಯವೊಂದೆ
ಆಗುವುದೀ ಬಸವಸ್ವಾಮಿಗಲದೆ
ಆಹುದೇನು ಬೇರೆಯಿನ್ನಿತರರಿಗೆಲ್ಲ?
ಪ್ರಮಥಾಗ್ರಗಣ್ಯನು ಬಸವನೀಶನಿಗೆ
ಸಮಶೀಲ ಭಕ್ತನು ಜಂಗಮಗಣಕೆ
ಲಿಂಗದೇವನಿಗೆ ಬಹುಪ್ರಿಯ ಬಸವ
ಜಂಗಮಕೋಟಿಗೆ ಪರಮ ದಾಸೋಹಿ

ಏರಲು ವಾಹನವೆಂದು ಈಶ್ವರಗೆ
ಏರೆ ಸಿಂಹಾಸನವೀಶ ಭಕ್ತರಿಗೆ
ಕಾಲಕಂಧರನಿಗೆ ಕರವಾಳ ಬಸವ;
ಶೀಲದ ಭಕ್ತರ ಕೈಯ ಕನ್ನಡಿಯು,
ಬಸವನ ಸ್ತುತಿಸಲು ಯಾರಿಗೆ ಸಾಧ್ಯ
ವಶವೆ ಎಂಥವನಿಗು ಬಸವನನರಿಯೆ
ಸಂಪನ್ನನಾಗುತ ಲಿಂಗಜಂಗಮದಿ
ಹೊಂಪುಳಿವೋಗಿ ಹೂಗಂಪಾಗಿಯಿರುವ-
ನದರಿಂದ ಬಸವನ ಸ್ತುತಿಯಗೈವುದಕೆ
ದೇವಾಸುರರಿಗು ತಾ ತೆಳ್ಳನೆನಿಪುದು

ಎನಲು ಸಾಮಾನ್ಯನರಿಯುವನೆ ದೋಷ-
ವೆಂಬಂತೆಯವನಿಗೆ ಹವಣೆ ಕೀರ್ತಿಸಲು,
ತಾನದು ಕೋಟಿಯ ಪಡೆದಿರುವವನ
ಹತ್ತು ಸಹಸ್ರದ ಕುಳವಾಗೆಂದಂತೆ;
ಆ ಪರಮಜ್ಯೋತಿ ಸ್ವರೂಪನಾದವಗೆ
ದೀಪಕಂಬಗಳನು ಎತ್ತಿಸಿದಂತೆ

ಭವನಿರ್ಮಿತಗಳಾದ ಪತ್ರಪುಷ್ಪಗಳ
ಭವನಿಗೆ ನಾವು ಸಮರ್ಪಿಸಿದಂತೆ
ಹೊರತು ಕೀರ್ತಿಸಲೆನಗದು ಸಾಧ್ಯವೇನು?
ಪ್ರಾಕಟದಲಿ ಭಕ್ತಿಭಂಡಾರಿ ಚರಿತೆ–

ಯಾದರೂ ಲೋಕಹಿತಾರ್ಥವೆ ಹೊರತು
ಎನ್ನಳವದು ಲಘು ವರ್ಣನೆಗೈಯೆ
ನವರಸ ರಸಿಕತೆಗೆ ಹೆಸರುಗೊಂಡ
ಶಿವಕವಿಪ್ರವರ ಚಿತ್ತಗಳಲರ–
ಲೀ ರೀತಿಯಿತರರು ಹೇಳುವುದೇನು?
ತಪ್ಪಾದ ದಾರಿಯ ದಡಬಡ ಹೇಳಿ
ಹಿರಿಯೋದುಗಳನೆಲ್ಲ ವ್ಯರ್ಥಗೊಳಿಸುತ
ಕೆಟ್ಟರು ತಮ್ಮ ಊರವರೆ ಬೈವಂತೆ.
ಮೃಡಮಹತ್ವವ ಕಾಣುವುದದು ಬೊಂಕೆನಲು
ಮಿಗೆ "ಕವಯಃ ಕಿಂ ನ ಪಶ್ಯಂತಿ"ಯೆನುತ

ಕುಕವಿಗಳನು ಪರಿಗಣಿಸದೆ ಭರದಿ
ನುತಿಸುವೆ; ತತ್ಕಥಾವಿಧವದೆಂತೆನಲು

**ಕಥಾರಂಭ :**

ಶ್ರೀ ಕೀರ್ತಿ ಸಂಚಿತಾಂಚಿತವರಭಕ್ತಿ
ಸಾಕಾರ, ವಿನಮಿತಾಮಾತ್ಯ ಸಂಗಾಖ್ಯ
ಶ್ರೀ ರಜತಾಚಲಶೃಂಗದೊಳಲ್ಲಿ
ಮಾರಾರಿಯುಮೆಯರು ಮಾನಿತಕ್ರೀಡೆ
ಯಿಂದಲಿ ಸುಖಸಂಕಥಾವಿನೋದದಲಿ
ಸೊಗಯಿಸುತಿರುವಾಗ ಶುದ್ಧ ಶಿವೈಕ
ಮಾನಸರಹ ಉಪಮನ್ಯುವು ಭೃಂಗಿ–
ಯಾನಂದಿಕೇಶ್ವರನಾದಿಯಾಗಿದ್ದ

ಪ್ರಮಥರೋಲೈಸಲು ಪರಿಮಿತವಾದ
ಸಮಯೋಚಿತವನರಿತೆಯ್ದು ಪ್ರೀತಿಯಲಿ
ನಾರದನೆನೆ ಮುನಿನಾಯಕೋತ್ತಮನು
ಭೂರಿ ಸರ್ವಾಂಗದಿ ನೆಲಮುಟ್ಟಿ ಮೊಕ್ಕಿ
ಮುಕುಳಿತಹಸ್ತದಿ ಮೊಕ್ಕುತ ಮತ್ತೆ
ಸಕಲಲೋಕಾಲೋಕ ಚರಿತೆಯನೆಲ್ಲ

ಬಿನ್ನೈಸಬಯಸಿರಲರಿತದ ಶಿವನು
ತಿಂಗಳಗಣ್ಣಲಿ ವೀಕ್ಷಿಸುತಿರಲು
ಅವಸರೋಚಿತದಲಿ ಅಂಬಿಕಾದೇವಿ
ಶಿವನನುಮತದಿ ಕೈಸನ್ನೆಯಿಂ ಕರೆದು

"ಹೋಗಿಬಂದಿಹ ಕಾರ್ಯಗಳನು ಬಿನ್ನೈಸು
ನೀನಿರುವಂತೆಯೆ ಶಿವನಿಗೆಂ"ದೆನಲು
ಆ ಮುನೀಶ್ವರನು ಮಹಾಲಿಂಗದೇವ
ಸಮ್ಮುಖದಲಿ ಕರಾಬ್ಜಗಳನು ಮುಗಿದು

**ಲೋಕವೃತ್ತಾಂತ :**

"ಸಕಲಲೋಕಾಲೋಕ ಚರಿತೆಗಳೆಲ್ಲ
ಪ್ರಕಟಿತಭಕ್ತಿಯದೆಂದಿನಂತಿಹುದು
ನರಲೋಕದಿ ಉಮಾನಾಥನೆ! ನಿಮ್ಮ ಭಕ್ತಿ
ಚರಿತವದೇನೂ ವಿಸ್ಪಷ್ಟವಾಗಿಲ್ಲ;
ಭರದಿ ಶಿವಾಚಾರ ತತ್ಪರರಾಗಿ
ಭವಿಗಳೊಡನೆ ಕೆಲರುಸುರದಲಿಹರು

ಲೋಕಪ್ರಪಂಚದಿ ಸೇರುತ ಕೆಲರು
ಲೋಕಬೋಧೆಗೊಳಗಾಗದಿಹರು ಮತ್ತೆ
ಕೆಲವರಾನಂದಮಗ್ನತೆಯಲಿ ತಮ್ಮ
ಮರೆತು ಲೋಕಗಳಿಗೆ ಮೈಮರೆತಿಹರು.
ಉನ್ನತ ಸದ್ಭಕ್ತಿಯುಕ್ತರು ಕೆಲರು
ಇರುವರು ತಮ್ಮೊಡಲುಗಳನು ಮರೆಸಿ
ಈ ಕಾರಣದಲೀಶ ನಿಮ್ಮಯ ಭಕ್ತಿ
ತುದಿಮೊದಲಾರಿಗೂ ತೋರದಿರುವುದು.
ಅದಕೆ ದೃಷ್ಟಪ್ರತ್ಯಯಗಳಿಂದಲೀಗ
ಸಂದೇಹಗಳು ತಗ್ಗಿ ಸದ್ಭಕ್ತಿಯುಕ್ತಿ
ಸುಸ್ಥಿರವಾಗಿ ಲಿಂಗಸ್ಥಲಜಂಗ–
ಮಸ್ಥಲ ತತ್ಪ್ರಸಾದಸ್ಥಲಗಳಲಿ
ಸಂಪನ್ನರಹ ಜಗಜ್ಜನರೆಲ್ಲ ಭಕ್ತಿ
ಸೊಂಪದು ಕೊಳ್ಳೆಗೆ ಒಳಗಾಗಲೇಕೆ
ನೀನೆ ಪ್ರಸನ್ನತೆಯಿಂ ಬಂದು ಲೋಕ
ಪಾವನವೆನೆ ಭಕ್ತಿ ಪಾಲಿಸಬೇಕು"

ಎಂದು ಬಿನ್ನವಿಸಲು ಆ ದೇವದೇವ
ನನುರಾಗಚಿತ್ತಂದಿಂದಾತಗಿಂತೆಂದ:
"ನಂದಿಕೇಶ್ವರನಿಗೂ ನನಗು ಬಂದಿಷ್ಟು
ಸಂದಿಲ್ಲದಿಹುದು ನಿಸ್ಸಂದೇಹವಾಗ–

ಲೀತನ ಕಳಿಸುವೆನೀತನಿಂ ಪರಮ
ಪೂತವಾಗುತ ಲೋಕ ಬೋಧೆವಡೆವುದು"
ಎನೆ ಗಿರಿರಾಜತನಯೆ ಪ್ರಾಣೇಶನನು
ನೋಡುತ ಮುಕುಳಿತಕರಕಂಜೆಯಾಗಿ
"ನಂದೀಕೇಶ್ವರನಿಗೂ ನನಗೂ ಒಂದಷ್ಟು
ಸಂದಿಲ್ಲದಿಹುದು ನಿಸ್ಸಂದೇಹವೆನಲು
ಭಕ್ತೈಕತನುವೆಂದು ನುಡಿಯುವ ವಿಧವೊ,
ವ್ಯಕ್ತಿಯಾಗಾತನು ನೀವೆಂದ ವಿಧವೊ
ಅಣತಿಯೀ"ಯೆಂದಂಬಿಕೆ ಬೇಡಿಕೊಳಲು
ನಾರದ ಕೇಳಲು ಅಭವನಿಂತೆಂದ:

"ಅಹುದಹುದಂತೆಯೆ ಅಂಬುಜನೇತ್ರೆ
ನಿಜನಿಜ ಭಕ್ತೈಕ ತನುವವ ನಾನು
ಹೇಳುವೆ ಕೇಳು ವಿಶೇಷವಿನ್ನೊಂದ
ತಪ್ಪದೆಯವನಲ್ಲಿ ತರ್ಕಿಸಿ ನೋಡ–
ಲೇನು ಕಾರಣವೆಂದು ತಿಳಿಯೆ ನೀ ಕೇಳು
ತಾಮರಸಾನನೆ, ತತ್ಕಥೆಯನ್ನು

**ಶಿಲಾದನ ತಪಸ್ಸು :**

ಆದಿಯ ವಿವಿಧಯುಗಾದಿಗಳಲ್ಲಿ
ಆದರದಿಂದ ಶಿಲಾದ ತಾನೆಂಬ
ತಾಪಸಮುಖ್ಯನು ತಪವೊಂನರಿಸಿದ
ಶ್ರೀ ಪರ್ವತದ ನೈರುತ್ಯದ ಭಾಗದಲ್ಲಿ

ಕಂದಮೂಲಾದಿಗಳನು ಗಾಳಿ ನೀರು–
ನಿಂದು ರಶ್ಮಿಗಳ ದಿನೇಶರಶ್ಮಿಗಳ
ನಾಹಾರವಾಗಿ ತ್ರಿಕೋಟ್ಯಬ್ದಿ ಸಲಿಸಿ
ಸಾಹಸದಲಿ ಮತ್ತೆ ಶತಕೋಟಿವರುಷ
ಸಾಸಿವೆ ಗಾತ್ರದ ಶಿಲೆಯಾಹಾರದಲಿ
ಭಾವಿಸೆ ಘೋರತಪವನರ್ಥಿಯಿಂದ

ಮಾಡೆ ಪ್ರತ್ಯಕ್ಷವಾಗುತ ನಾವು ನಿಂದು
ಮತಿಗಿಷ್ಟವಾದುದ ಬೇಡೆಮ್ಮನೆನಲು
ತಾನಾಗ ಸಾಷ್ಟಾಂಗನಾಗುತ ನಮಿಸಿ
ಚಿತ್ತದಿ ಪ್ರೀತಿಯು ಚಿಗುರಿ ವ್ಯಾಪಿಸಲು

"ಸರ್ವಜ್ಞ ಪಶುಪತಿ ಶಂಕರ ಶರ್ವ
ಸರ್ವಲೋಕೇಶ್ವರ ಶಾಸ್ವತ ಸಾಂಬ!
ಅವಧಾರು, ವೇದವೇದಾಂತಾವಗಮ್ಯ!
ಅವಧಾರು ಬಿನ್ನಪವಾಶ್ರಿತ ಸುಲಭ!
ಶ್ರೀ ಮನ್ಮಹಾದೇವ ಶಿವಲಿಂಗಮೂರ್ತಿ
ಕೊರತೆಯೇನಿದೆ ಸ್ವಾಮಿ ನಿಮ್ಮ ಕೃಪೆಯಲಿ,
ಆದರೂ ನನಗೊಂದು ಅಭಿಮತವಾಗ-
ಲದನು ಬೇಡುವೆ ಮಹಾದಾನಿ, ಈ ಕ್ಷಣವೆ
ನಿನ್ನಂತಹವನನು ನಿಜಭಕ್ತಜನಪ
ರಾಯತ್ತ, ಸುತನಾಗಿ ದಯದಿ ಕರುಣಿಸು"

ಎನ್ನಲಾನವನಿಗೆ ಅಭಿಮತಾರ್ಥವನು
ಕರುಣಿಸಲಿರುವಾಗ, ವನಜಾಕ್ಷಿ, ಕೇಳು,
ಅಷ್ಟರಿಂ ಹೋಗದೆ ಆ ಶಿಲಾದ ಮುನಿ-
ಯತಿಶಯ ಭಕ್ತಿಯಿಂ ಸಾಷ್ಟಾಂಗವೆರಗಿ
"ಅಭಿಮತವಹ ಪುತ್ರನನ್ನೀಯೆ ನೀನು
ಭವ, ನಿನ್ನ ಭಕ್ತಿಯಲ್ಲಣುಮಾತ್ರ ಕೂಡ
ಕಡಿಮೆಯಾದರೆ ತಲೆ ಕಡಿದು ಹಾಕುವೆನು
ಆ ಕುಮಾರಗೆ ನೀನೆ ಅಡ್ಡವಾಗಿರಲು!
ಅಲ್ಲದೆ ಮಗನು ತಾನಿಂತಿಲ್ಲದಿರಲು
ನೆಟ್ಟನೆ ನಾನೊಲ್ಲೆ ನೀನೀವ ವರವ-"

ನೆಂದು ಬಿನ್ನಹವನು ಮಾಡುತಿದ್ದವನ
ಸಂಚಿತಭಕ್ತಿಗೆ ಸಂಪ್ರೀತಿಯೊಂದಿ
ಆದಿಸೃಷ್ಟಿಗೆ ಮುನ್ನವಾದಿಯಾಗಿರುವ
ಆದಿ ಮದೀಯ್ಯಾಂಶವೆನಿಸಿದ ವೃಷಭ
ಧರ್ಮರೂಪದಲಿ ಕೃತಯುಗದಿ ಧರ್ಮ
ವದು ನಾಲ್ಕು ಪಾದಗಳಲಿ ನಡೆಯುವುದು;
ಒಪ್ಪಲು ತ್ರೇತಾಯುಗದಲಿ ಧರ್ಮ
ವದು ಮೂರು ಪಾದಗಳು ನಡೆಯುವುದು;

ಜಗದಲಿ ದ್ವಾಪರಯುಗದಲ್ಲಿ ಪಾದ
ಯುಗದಲಿ ಧರ್ಮನಿಯುಕ್ತಿ ನಡೆವುದು;

ಭರದಿ ಕಲಿಯುಗದಲ್ಲೊಂದು ಪಾದದಲಿ
ಚರಿಪುದು ಧರ್ಮನಿರೂಢಿಯು ಬೆಳಗೆ.
ಈ ರೀತಿಯಿಂದಲಿ ಧರ್ಮಸ್ವರೂಪ
ವಾಗಿ ಲೋಕಹಿತಾರ್ಥವಹನಲ್ಲದಿವನು
ಪೊಣ್ದು ದ್ವಿತೀಯಶಂಭುವೆನುವ ಹೆಸರಿ-
ನಲಿ ನಿತ್ಯನಾಗುತ ಪರಮಾನಂದದಲಿ
ನಮಗೆ ವಾಹನವಾಗಿ ಪ್ರಮಥರ ಮುಖ್ಯ
ಗೋಕುಲಪತಿಯಾಗಿ ಶ್ರೀಕರ ಮಹಿಮೆ
ಮೆರೆವಾದಿವೃಷಭೇಂದ್ರನನು ತಾನು ನೋಡಿ
"ಘನ ಶಿಲಾದನಿಗೆ ನೀ ನಂದೀಶನೆನಲು

ಜನ್ಮಿಸು ; ನೀನೆಯೆ ಹುಟ್ಟಬೇಕಯ್ಯ;
ಇಲ್ಲದಿರಾನೀಗ ಹುಟ್ಟಬೇಕಯ್ಯ;
ರೂಪಿಸಿ ಧರ್ಮಸ್ವರೂಪರಾಗಿರುವ
ಮಹಿಮೆಯ ಪ್ರಥಮಗಣೇಂದ್ರರರಲ್ಲೆಲ್ಲ
ಪ್ರೀತಿಯು ಹೆಚ್ಚಲು ಮದ್ಭಕ್ತಿಯುಕ್ತಿ
ಹೆಚ್ಚಿದವನೆನಲು ನಿನಗಿತ್ತೆನದಕೆ
ತಾನು ಹೆಚ್ಚಿನ ಭಕ್ತಿ ಹೊಂದಿದ ಪುತ್ರ-
ನ ವಿನಾ ಶಿಲಾದನು ತಾನೊಲ್ಲೆನೆಂದ.
ಇತ್ತ ವರವನಿನ್ನು ನಾ ತಪ್ಪಬಹುದೆ
ಅಚ್ಚರಿಯೆನಲು ನಮ್ಮಾಣತಿಯಂತೆ
ಹುಟ್ಟು ದ್ವಿತೀಯ ಶಂಬುವೆನೆ ಬುವಿಯಲಿ"

**ನಂದಿಕೇಶ್ವರನ ಅವತಾರ:**

ಎನಲಾಗಲೆನ್ನುತಲಾನಂದದಿಂದ
ತಾ ಹುಟ್ಟಿದನಯೋನಿಸಂಭವನೆನಲ-
ವನಿಗಧಿಕದಿ ನಂದಿಕೇಶ್ವರನೆನುತ
ಹುಟ್ಟಿದೊಡನೆ ಹುಟ್ಟಿತೆನ್ನಯ ಭಕ್ತಿ
ಹುಟ್ಟುವ ಮುನ್ನ ಹುಟ್ಟಿತು ನನ್ನ ಚಿಂತೆ
ಪರಮತತ್ವಾಮೃತದಾ ಮೊಲೆಹಾಲು
ಗರುಪದಧ್ಯಾನವಿಸ್ಫುರಣದ ಬೆಣ್ಣೆ
ವೇದಾಂತಸೂಕ್ತಿಗಳೇ ತೊದಲನುಡಿ

ಆದಿಶಿವಾಚಾರವದುವೆ ವರ್ತನೆಯು
ಆಗೆ ಮದೀಯಾಂಘ್ರಿ ಕಮಲವನಾತ್ಮ-
ದಲ್ಲಿರಿಸುತ ಭಕ್ತಿಲೋಲತ್ವವೆಸೆಯೆ
ನಡೆದು ಹರಿವ ನದಿಗಳ ನಟ್ಟ ನಡುವೆ
ಚಳಿಗಾಲವೆಲ್ಲ ದವಡೆವರೆ ನಿಂದು
ಏಕಪಾದಾಂಗುಷ್ಠವನಿಳೆಯಲ್ಲೂರಿ
ಆಕಾಶದೆಡೆಗೆ ಮುಖಾಂಬುಜವೊಗ್ಗಿ
ವರ್ಷವು ಘೋರೆಂದು ರಭಸದಿ ಸುರಿಯೆ
ಹರ್ಷವ ಪಡೆವುತಲ್ಲಾಡದೆ ನಿಂತು
ಮೇದಿನಿಯಲಿ ತಲೆಯೂರಿ ಮೇಲೆರಡು
ಪಾದಗಳನ್ನೆತ್ತಿ ಪಂಚಾಗ್ನಿ ನಡುವೆ

ನೆನೆಯುವ ಹೃದಯವು ತಾಪವನೊಂದೆ
ನುಡಿಯುವ ಬಾಯೆಲ್ಲ ಪಟಪಟನೊಡೆಯೆ
ಕಾಂಬ ರೆಪ್ಪೆಗಳವು ಸುರಸುರ ಕಮರೆ
ಉರಿಯುವ ಬಿಸಿಲಲೆಡೆವಿಡದೆ ನಿಂತು
ಬುವಿಯು ಕಂಪಿಸಲಂಭೋನಿಧಿಗಳು ಇಂಗೆ
ರವಿಶಶಿ ಮುಳುಗಲು ಕೂರ್ಮವಲುಗಲು
ದಿಕ್ಕರಿಗಳುಡುಗೆ ದೆಸೆಗಳು ಕುಗ್ಗೆ
ಕುಲಗಿರಿಗಳು ನುಗ್ಗೆ ಅಹಿಪತಿ ಮುಲುಗೆ
ದಿಕ್ಪತಿಗಳದುರೆ ದಿವಿಯೆಲ್ಲವುದುರೆ
ವಾಕ್ಪತಿ ಬೆದರೆಯಧ್ವರಗಳು ಚೆದರೆ

ಹರಿ ತಲ್ಲಣಿಸಲು ಬ್ರಹ್ಮಾಂಡಗಳುರುಳೆ
ಧರೆಗುಲ್ಕೆಗಳು ಬೀಳೆ ಸುರರು ಹೆದರಲು
ಅಪರಿಮಿತವೆನಿಸುವತಿವೀರ ಘೋರ
ತಪವಾಚರಿಸಿದ ಚಿತ್ರವಿಚಿತ್ರವೆನಲು;
ಭಯಭ್ರಾಂತರಾಗುತಜಾಚ್ಯುತರುಗಳು
ಸಂತಾಪಚಿತ್ತರಾಗುತ ದೇವತೆಗಳು
ಗಕ್ಕನೆ ನಾವಿದ್ದ ಕಡೆಗೆಲ್ಲ ಬಂದು
ನಮಿಸಿ ಸಾಷ್ಟಾಂಗದಿ ಕೈಗಳ ಮುಗಿದು
"ದೇವ ದೇವೇಶ್ವರ ದೇವತಾರಾಧ್ಯ,
ದೇವಚೂಡಾಮಣಿ, ದೇವಾಧಿದೇವ

ಪರಮಭಟ್ಟಾರಕ ಪರಮಸ್ವತಂತ್ರ
ಪರಮೇಶ ಪರಮಾತ್ಮ ಪರಮನೆ ಪರನೆ,

ಶಂಕರ, ದುರಿತಭಯಂಕರ, ಅಭವ
ಅಕ್ಷಯ, ಸರ್ವಜ್ಞ, ಅಖಿಲಲೋಕೈಕ
ರಕ್ಷಕ, ದಕ್ಷಮಖಕ್ಷಯ, ದಕ್ಷ"
ಎಂದೆಮ್ಮ ಕೀರ್ತಿಸಲಚ್ಯುತಾದಿಗಳ
ಕಾಣುತ್ತಲಾನಾಗ ಕಣ್ಣಲ್ಲೆ ನಕ್ಕು
"ಇನಿತು ಸಂತಾಪಿಸಲೇತಕೆ ನೀವು,
ಭ್ರಾಂತಿಯೊಂದಿದ ಹುಚ್ಚು ಪಶುಜೀವಿಗಳಿರ!

ನಂದೀಶ್ವರನು ಗೈಯುವೀ ನವ್ಯತಪದ
ಮಹಿಮೆಯ ಕಂಡು ಶಂಕಿಸಿ ಬಂದಿರೇನು?
ಕೈಗೊಂಬನೇ ಶ್ರೀಪ ನಿನ್ನ ಪದವಿಯ?
ಕೋರ್ವನೇ ಬ್ರಹ್ಮ, ನಿನ್ನೊಂದು ಪದವಿಯ?
ಎಲವೊ ದೇವೇಂದ್ರ, ನೀ ಪಡೆದ ಪದವಿಯ
ಹೆಸರಾಂತ ಬಲ್ಲನೇ? ಹೆಚ್ಚು ಮಾತೇಕೆ
ಖಂಡಿತದಲ್ಲಾತನಾವ ಪದವಿಯ
ಮನದಲ್ಲು ನೆನೆಯನೆನ್ನಯ ಭಕ್ತರಾಣೆ"
ಎಂದು ಪ್ರಸನ್ನನಾಗುತಲಾನು ಅವರ
ಮನಗಳ ದಿಗಿಲ ನಿವಾರಿಸ ಬಯಸಿ

ಎಲ್ಲರೋಲ್ಯೆಸುತ ಬರಲಲ್ಲಿಗೈದು
ನಂದಿಕೇಶ್ವರನ ಮುಂಬಳಿಯೊಳಗಿರಲು
ಅವನಂತರಂಗದಲೆನ್ನನು ಕಂಡು
ನಾ ಬೆಳ್ಳಬೆಳಕಾಗಿ ಕಾಣಬಂದಿರಲು
ಆಗಲಾಶ್ಚರ್ಯ ಪ್ರಹರ್ಷ ಭಕ್ತಿಗಳು
ಮುಪ್ಪುರಿಗೊಳೆ ಮನವುಲ್ಲಸಗೊಳಲು
ಸಾಷ್ಟಾಂಗವೆರಗಿ ಮದಂಘ್ರಿಕಂಜಗಳ
ಹೃಷ್ಟನಾಗೆಣಿಸುತ ಪುಲಕಿಸಿ ನಮಿಸಿ
ಆನಂದ ಬಾಷ್ಪ ಪೂರ್ಣಾಸ್ಯನಾಗಾಗೆ
ಮೈಯರೋಮಾಂಚಸಮ್ಮಿಳಿತವಾಗಧಿಕ

ಗದ್ಗದ ಕಂಠದಿ ಕರಗಳ ಮುಗಿದು
ತದ್ಗತಚಿತ್ತನಾಗುತ ಪ್ರಸ್ತುತಿಸಲು
"ಮೆಚ್ಚಿದೆ ವರ ನಿನಗಿತ್ತೆನು ಕೇಳು
ಇಚ್ಛೆಯಾದುದ ನಂದಿಕೇಶ್ವರ"ಯೆನಲು
ದರಹಾಸಕಾಂತಿ ವಕ್ತದಲಿ ತುಳ್ಕಾಡೆ
ಅಚ್ಚರಿಯೆನಲಿಂತೆನಗೆ ಬಿನ್ನವಿಸಿದ.

"ಪಿರಿನಿಧಿ ತಾನಿರೆ ಮಣ್ಣ ಕೇಳುವರೆ?
ನಿನ್ನೊಂದು ಕೇಳುವ ನಿರ್ಗುಣಿಯಿಹನೆ?
ಪದವಿಗಿದವಿಗಳು ಕೆಲಸಕ್ಕೆ ಬರವು
ಸದಮಲಭಕ್ತಿ ಪ್ರಸಾದಿಸು ದೇವ"

ಎನೆ ಗಾಢಾಲಿಂಗನಾವಳಿಯಲಿ ಅವನ
ತನುವನೆನ್ನಯ ತನುವಿಗೆ ಸೇರಿಸುತ್ತ
"ಭವದೀಯಗಾತ್ರ ಸಂಸ್ಪರ್ಶನ ಸುಖವು
ಮಧುರವಾಗೇರೆ ವಾಹನವಾಗು ಎನಲು
ಆದಿ ಮದೀಯವಾಹನವಾದೆ ನೀನು
ವೇದಾಂತನುತ, ಮಹಾವೃಷಭೇಂದ್ರ"ಯೆನುತ
ಪ್ರಮಥೇಂದ್ರ ಪದವಿಗೆ ಪಟ್ಟವ ಕಟ್ಟಿ
ಅಮಿತ ಸರ್ವಜ್ಞತ್ವವನ್ನಾಗಲೀಯೆ
ಒಂದೆಡೆ ಶ್ರೀಧರನೊಂದೆಡೆಯಜನು
ಒಂದೆಡೆ ದೇವೇಂದ್ರನೊಂದೆಡೆ ಸುರರು

ಮೈಚಾಚಿ ನಮಿಸುತ ಕರಗಳ ಮುಗಿದು
ಶರಣೆಂದು ನಂದಿಕೇಶ್ವರನ ಕೀರ್ತಿಸಲು
ಅತ ದಯಾಮತಿಯಿಂ ಮೃದುವಾಗಿ
ನತರಾದ ಸುರರನರೆವಿರೆದ ಕಂಗ-
ಳಲಿ ನೋಡೆ ಹೆದರಿದ ಸುರರೆಂದಿನಂತೆ
ಅಧಿಕ ಭೀತಿಯ ಬಿಟ್ಟು ನೋಡುತ್ತಲಿರಲು
ಶ್ರೀ ಗಿರಿ ನೈಋತ್ಯಭಾಗವು ಪುಣ್ಯ
ಭಾಗವಾ ಕ್ಷೇತ್ರವು ಪರಮಪಾವನವು
ನಂದಿಕೇಶ್ವರನ ಪುಣ್ಯತಪ ಕಾರಣದಿ
'ನಂದಿಮಂಡಲ'ವೆಂಬ ಹೆಸರ ತಳೆಯಿತು.
ಅಲ್ಲಿ ವರ್ತಿಸುತಿರುವಖಿಲಜೀವರಿಗೆ
ಅಪವರ್ಗವಿತ್ತೆನು ಇಂದೀವರಾಕ್ಷಿ !
ದೊರೆಕೊಂಡ ನಂದಿಕೇಶ್ವರಚರಿತವನು
ವಿರಚಿಸುವವರಿಗೆ ಕೇಳುವವರಿಗೆ
ಅಚಲಿತಬುದ್ಧಿ ದೃಷ್ಟಾದೃಷ್ಟಸಿದ್ಧಿ
ಪ್ರಚುರವಚಶ್ಶುದ್ಧಿ ಭಕ್ತಿ ಸಮೃದ್ಧಿ
ಇಂತೀ ಕಾರಣದಿಂದಲೀ ನಂದಿಕೇಶ-
ನೆಂತಿದ್ದರೆನೆನ್ನಿಂದಲಿ ಬೇರೆಯಹನೆ?"
ಎಂದಾಣತಿಯನೀಯಲಖಿಲಾಂಡಪತಿಗೆ
ಅನುರಾಗದಲಿ ಜಗದಂಬೆ ಕೈಮುಗಿದು

ಆ ನಂದಿಕೇಶನನಾಗಾಗ ನೋಡಿ
ಸಮ್ಮದವರಳಲು ಎಂದಳು ಮತ್ತೆ:
"ಈ ನಿರಹಂಕಾರವೀ ಸದಾಚಾರ-
ವೀ ನಿರಂತರ ಭಕ್ತಿಯೀ ಪ್ರಭುಶಕ್ತಿ-
ಯೀ ಸಿದ್ಧಪಾಂಡಿತ್ಯವೀ ನಿತ್ಯಸತ್ಯ-
ವೀ ಸುಕುಮಾರತ್ವವೀಯಾತ್ಮತತ್ವ-
ವೀ ಶುದ್ಧ ಚಾರಿತ್ರವೀ ಪುಣ್ಯಗೋತ್ರ-
ವೀ ಶುಭಾಂಚಿತಮೂರ್ತಿಯೀಲಸತ್ಕೀರ್ತಿ
ಯಾರಿಗಿರುವುದಯ್ಯ ಯಾವುದೆ ರೀತಿ
ಆರಯ್ಯೆ ನಿಮಗಿರುವಂತಹ ಶಕ್ತಿ?
ನಿಮ್ಮ ಧರಿಸೆ ನಿನಗಲ್ಲದನ್ಯರ್ಗೆ-
ಯೆಂದೆಂದು ಶಕ್ಯವೇನೀಶ ಸರ್ವೇಶ?
ಅಂತಿದುವಲ್ಲದೆ ನಿನ್ನಂಶವಿರದ
ವ್ಯಕ್ತಿಯು ನಿನಗೆಂತು ಅನುಕೂಲವಹನು"
ಎನ್ನುವ ಗಿರಿರಾಜಸುತೆಯ ವಾಕ್ಯಗಳ
ಕೇಳುತ ಮುದಿತಾತ್ಮದಿಂ ವಿಶ್ವೇಶ್ವರನು
ನಾರದನೆಡೆ ನೋಡಿ "ನಂದಿಕೇಶ್ವರನ
ಗೌರವಮಹಿಮೆ ವಿಖ್ಯಾತಿ ಕೇಳಿದೆಯ"
ಎನುತಲಾ ನಂದೀಶನಧಿಕದಯಾರ್ದ್ರ
ವನಧಿಯಲದ್ಭುತ ನೋಡುತ್ತಲಿರಲು

ಅತಿಶಯ ಭಯವು ತಾನೊಂದಿಷ್ಟು ದೃಷ್ಟಿ
ಅತಿಶಯ ಸಿಗ್ಗು ತಾನೊಂದಿಷ್ಟು ಮುದವು
ತನಗೆ ಭೂಷಣವಾಗಿ ಮೆರೆಯುತಲಿರಲು
ಎವೆಯಲ್ಲಿ ಹರ್ಷಾಶ್ರುಕಣಗಳು ತುಂಬೆ
ಸುಲಭರೋಮಾಂಚಕಂಚುಕಿತಾಂಗನಾಗಿ
ನೆನಹಿನಿಂ ಹೃದಯವು ತಟಪಟನದಿರೆ
ಮಸ್ತಕವಿನ್ಯಸ್ತಹಸ್ತದಿಂ ತನ್ನ
ಪ್ರಸ್ತುತಿಸಲು ಪ್ರಭು ನಂದಿಕೇಶನನು
ಕಣ್ಸನ್ನೆ ಕೈಸನ್ನೆಯಿಂ ಬಳಿ ಕರೆದು
ತನ್ನ ನಿರ್ಮಲ ಪ್ರಸಾದವ ಕೃಪೆಗೈದು

ಸ್ನೇಹ ಕರುಣೆಗಳು ತುಂಬಿ ಹರಿಯಲು
ಆಯಂಬಿಕಾಧವನಾತಗಿಂತೆಂದ:

"ಇದು ಶ್ರುತಿಸ್ಮೃತಿಮೂಲವಿದು ಧರ್ಮಶೀಲ-
ವಿದು ವಿಮಲಾಚಾರವಿದು ತತ್ವಸಾರ-
ವಿದು ಸುಮಹಾತತ್ವವಿದು ಕೃತಾರ್ಥತ್ವ-
ವಿದು ಆದಿಪಥವೆಂದು ವಿದಿತವಾಗಿರಲು
ನಿನ್ನ ಕತದಿ ನಿರ್ಣೀತವೆ ಆದ ಭಕ್ತಿ
ಲೋಕದೊಳೆಲ್ಲೆಡೆಯವಲೋಕವಾಯ್ತು
ಪ್ರಮಥಾಧಿಪತಿಗಳ್ಗೆ ಪಾರ್ವತೀಸತಿಗೆ
ವಿಮಲ ಮದೀಯ ತತ್ವವ ಪ್ರಭೋದಿಸಿದ

ರೀತಿಗಿಂತಲು ಇದು ಸ್ಪಷ್ಟವಾಗಿರಲು
ಅರುಹಿದೆ ನಾನಿದ ಮಿಗಿಲಾದ ಕೂರ್ಮೆ-
ಯಿಂದ : ಸರ್ವಜ್ಞನೆಂಬುವ ನಾಮ ನಿನಗೆ
ಈ ರೀತಿ ನನ್ನಿಂದ ಸಲುವುದೆಲ್ಲೆಡೆಗೆ
ಅದರಿಂದಲೂ ಮರ್ತ್ಯಲೋಕಕ್ಕೆ ಹೋಗಿ
ಪೂಣ್ದು ದ್ವಿತೀಯಶಂಭುವೆನುವ ಮಹಿಮ
ವ್ಯಕ್ತಿಯಾಗುತ ಲೋಕವಿಹಿತಾರ್ಥಕಾಗಿ
ಭಕ್ತಿಹಿತಾರ್ಥದಿಂ ಪರಮಾರ್ಥವಾಗಿ
ನಮ್ಮ ವಿನೋದಾರ್ಥ ಮರ್ತ್ಯವ ಪರಮ
ಪಾವನಗೊಳಿಸು ಬಸವನಾಮದಿಂದ"

ಎನ್ನಲು ಮುಗಿದುಕೈ ನಂದಿಕೇಶ್ವರನು
ತಾ ಬಿನ್ನಪವಗೈದ ದೇವದೇವನಿಗೆ :
"ನಿನ್ನಾಜ್ಞೆಯನು ತಲೆಯಲಿ ಹೊತ್ತು ಕೆಲಸ-
ಗೈವನು ನನಗಿಷ್ಟುಹೇಳಬೇಕೇನು?
ಮರ್ತ್ಯಲೋಕಕೆ ಮತ್ತೆ ಬೇರೊಬ್ಬನಾದ
ಕರ್ತನಿರುವನೆ ಲೋಕತ್ರಯವರದ?
ಇಲ್ಲಿರಲೇನು? ನಾನಲ್ಲಿರಲೇನು?
ಎಲ್ಲಿರಲೇನು? ನಾ ನಿನ್ನಲ್ಲೆಯಿರುವೆ"
ಎಂದು ಬಿನ್ನಯಿಸಲು ನಂದಿಕೇಶ್ವರನ
ವಿನಯೋಕ್ತಿಗಳಿಗಿಂತು ಜಗವಿಭುವೆಂದ:

"ಗುರುಲಿಂಗಮೂರ್ತಿಸ್ವರೂಪದಿ ಬಂದು
ಪರಮತತ್ವಾರ್ಥತತ್ಪರನನಾಗಿಸುವ
ಪ್ರಾಣಲಿಂಗಗಳಾಗಿ ಭ್ರಾಜಿಪ ನಿನ್ನ
ಪ್ರಾಣಾಂಗಗಳನೊಡಗೂಡಿಯಾನಿರುವೆ

ರೂಢಿಯಿಂ ಜಂಗಮರೂಪದ ತಳೆದು
ಭರದಿ ನಿನ್ನೊಡಗೂಡಿ ವಿಹರಿಸುತಿರುವೆ
ತನುಮನಧನಗಳು ವ್ಯರ್ಥವಾಗದೊಲು
ಅವುಗಳನೆನ್ನಲ್ಲಿ ಸೇರಿಸಿಕೊಳುವೆ
ನನ್ನ ಪ್ರಾಣಗಳಿಗೆ ಪ್ರಾಣವಾಗಿರುವ
ನನ್ನ ಪ್ರಮಥರಿಗೆ ಪ್ರಾಣವೆನಿಸುವ

ನಿನ್ನ ನನ್ನಲಿ ಎಂದು ಸಂದಿಲ್ಲದಿಹುದು
ತಿಳಿಯದೆ ನಿನಗೇನು ಲೋಕಪಾವನನೆ!"
ಎನೆ ಪ್ರೀತಿಯಿಂ ನುಡಿವಾ ಶಂಕರನಿಗೆ
ತನುವೆಲ್ಲ ಕರವಾಗೆ ತಾ ಮೊಕ್ಕಿನಿಂದು
"ಬಿನ್ನಹವೇತಕೆ ನುಡಿಯುವೆ"ಯೆನುತ
ಆ ನಂದಿಕೇಶನು ಸಾಷ್ಟಾಂಗವೆರಗಿ
ಪ್ರಮಥಸನ್ನಿಹಿತದಿ ಭ್ರಾಜಿಪ ಶಿವನ-
ನಮಿತತೇಜೋಮೂರ್ತಿಯಾತ್ಮದಿ ನಿಲಿಸಿ
ನರಲೋಕ ತಾನಿಲ್ಲಿಯಲ್ಲಿಯೆಂದೆನುತ-
ರೈತಂದ ರಯದಿಂದ ; ಇತ್ತಲೀಯೆಡೆಗೆ-

ಗುರುತರವಾದ ಶ್ರೀಗಿರಿಯ ಪಶ್ಚಿಮದಿ
ನರನುತವಾಗಿ ಕರ್ನಾಟದೇಶದಲಿ
ಒಪ್ಪಿರುವಂಥ ಪ್ರಖ್ಯಾತಸದ್ಭಕ್ತಿ
ನೆಲೆಯಾದ ಹಿಂಗುಳೇಶ್ವರ ಭಾಗವಾಟಿ-
ಯೆಂಬಗ್ರಹಾರದಿ ವಿಖ್ಯಾತಿಯಿಂದ-
ಲಿದ್ದ ಮಂಡೆಗೆ ಮಾದಿರಾಜನೆಂಬುವನು.
ಅವನ ಪರಮಸಾಧ್ವಿಸತಿಯು ಮಾದಾಂಬೆ
ಸತತ ಶಿವಾಚಾರ ಸಂಪನ್ನೆ ಧನ್ಯೆ
ಹದಿಬದೆತನವನು ಪಡೆದ ಹಿರಿಯಳು
ಉತ್ತಮೆಯಾಕೆ ಧರ್ಮೋಪೇತಗಾತ್ರೆ

ಎಲ್ಲರಿಗಿಂತಲು ಹಿರಿತನದಲ್ಲಿ
ಭೇಷೆನಿಸುವ ಜೀವನವನು ನಡೆಸುತ
ಮಕ್ಕಳಿಲ್ಲದಿರಲು ಕಡುದುಃಖಿಯಾಗಿ
ಹಿರಿನೋಂಪಿಗಳನೆಲ್ಲ ಶ್ರಮಪಟ್ಟು ನೋಂತು

ಆದ್ಯರು ಹೊತ್ತಗೆಗಳಲೆಲ್ಲ ಹುಡುಕಿ
'ಹೃದ್ಯದಿಂದಲಿ ನಂದಿಕೇಶ್ವರ ನೋಂಪಿ
ಕಾಮ್ಯಾರ್ಥಸಿದ್ಧಿಗೆ ಕಾರಣ'ವೆನುತ
ಸಮ್ಯಗ್ವ್ರತದ ಸ್ಥಿತಿಯ ಸತಿಗೆ ಹೇಳೆ
ಆ ಮಹಾತ್ಮರು ಹೇಳಿದಂತೆಯೆ ಗುಡಿಗೆ
ಭರದೆಯ್ದಿ ನಂದಿಕೇಶ್ವರನನು ಕಂಡು

ಸರ್ವಾಂಗಗಳು ಧರೆ ಸಂಧಿಸೆ ನಮಿಸಿ
'ಸರ್ವಜ್ಞ ನಂದಿಕೇಶ್ವರ, ದಯಾಂಭೋಧಿ'
ಯೆಂದು ಪ್ರಸ್ತುತಿಗೈದು ಭಕ್ತಿಯಿಂ ನಮಿಸಿ-
ಯಂಚಿತವ್ರತಚರ್ಯೆಗಳನಾಚರಿಸುತ
ಭರದಲಿ ಸೋಮವಾರವೆಯಾದಿಯಾಗಿ
ಒಂಬತ್ತು ದಿನವುತ್ಸುಕತೆಯಿಂದ ನೋಂತು
ಮರುದಿನ ನಂದಿಗೆ ಮಜ್ಜನಕೆರೆದು
ಸುಂದರ ಚಂದನಕುಸುಮಗಳಿತ್ತು
ಮೆತ್ತನೆ ವಸ್ತ್ರವ ಮೈತುಂಬ ಹೊದಿಸಿ
ಉತ್ತಮಾಭರಣಗಳುರು ಗೆಜ್ಜೆಗಳನು

ಅಂದುಗೆಗಂಟೆಗಳೆಳವಡೆ ತೊಡಿಸಿ
ಹೊಂದುವ ಹೊನ್ನಕೊಂಬನು ಗೊರಸುಗಳ
ಇಟ್ಟು, ಫಾಲದಲಿ ತಾ ಪಟ್ಟೆಯು ಹೊಳೆಯೆ
ಕಟ್ಟಿ ನಂದಿಗೆಯಲಂಕಾರವ ಮಾಡಿ-
ಯಕ್ಷತೆ ಧೂಪದೀಪಾದಿಯನಿತ್ತು
ಆ ಕ್ಷಣದಲಿ ಪಂಚಭಕ್ಷ್ಯವನಿತ್ತು
ಹುಗ್ಗಿಯ ಮುಂದಕೆ ರಾಶಿಯಾಗಿರಿಸಿ
ಖಂಡಸಕ್ಕರೆಯ ತುಪ್ಪದಿ ಕಲಸಿತ್ತು
ಪರಮಮಾಹೇಶ್ವರ ಪ್ರತತಿಗೆಲ್ಲಕ್ಕು
ಪರಿಣಾಮವೆನಿಸೆ ಸಪರ್ಯೆಯ ಮಾಡಿ

"ನಂದೀಶ ನಂದೀಶ ನವನಂದಿನಾಥ
ಇಂದುಕಳಾಧರನೇರುವ ಕುದುರೆ!
ಎನ್ನಣ್ಣ , ಎನ್ನಪ್ಪ , ಎನ್ನಯ್ಯ ಬಸವ
ನಿನ್ನಂಥ ಸದ್ಭಕ್ತ ನಿನ್ನಂಥ ಪುತ್ರ-
ನನು ಖ್ಯಾತಿಯಿಂದೊಬ್ಬನನು ಕರುಣಿಸಲು
ಪ್ರೀತಿಯಿಂ ನಿನ್ನಯ ಹೆಸರನಿಡುವೆನು'

ಎನಲಾಗ ಮಾದಲಾಂಬೆಗೆ ನಂದಿ ತಾನು
ಜನರೆಲ್ಲವರಿಯೆ ಪ್ರಸಾದವನೀಡೆ
ಹೃದಯಕ್ಕೆ ವದನಕ್ಕೆ ಆ ಪ್ರಸಾದವನು
ಪ್ರೀತಿಯಿಂ ಮುಟ್ಟಿಸಿ ತಲೆಯಲಿ ಮುಡಿದು

ಮೊಕ್ಕಿನಿಜಾವಾಸಕೈತಂದಳಾಕೆ.
ಅಧಿಕ ಶುಭಶಕುನವೆದುರಾಗುತಿರಲು
ಎಂದಿಗಿಂತಲು ತಮಗನುರಾಗರಸವು
ಹೆಚ್ಚಾಗುತಿರೆ ಸತಿಪತಿಗಳು ಲೀಲೆ-
ಯಿಂದ ವರ್ತಿಸಲು, ಮುನ್ನವೆ ಭೂಲೋಕಕ್ಕೆ
ಬಾಲೇಂದುಶೇಖರ ತಾ ನಿಯೋಗಿಸಿರೆ
ಬಂದಿಹ ನಂದಿಕೇಶ್ವರನಾತ್ಮದಲ್ಲಿ
ಅಚ್ಚರಿಯೊಂದೆ ತಾನೆಯ್ತಂದ ಕೆಲಸ-
ಕನುಗುಣದಿಂ ತನ್ನ ತನಯನಾಗೆಂದು
ವನಜಾಕ್ಷಿ ನೋನಲು ಏನ ಹೇಳುವುದು?

ನೆನೆಸಿದ ಕಾರ್ಯವು ಕೈಗೂಡಿತೆಂದು
ಸತಿಯಗರ್ಭದಿ ಪ್ರವೇಶಿಸಿದ ಸಮಯದಿ
ಮಡದಿಯ ಮಾಸವು ನಿಂತಿತಾಕ್ಷಣವೆ.
ನೆರೆ ಗರ್ಭಚಿಹ್ನೆಗಳಂಕುರಿಸಿದವು,
ಅಮೃತಾಂಶುವಹ ಪುತ್ರ ಸತಿಯಗರ್ಭದಲಿ
ಅಮರ್ದಿರಲೇನೆಂಬೆ ಹಸಿವಿಲ್ಲವಾಯ್ತು:
ಜಲಜಾಕ್ಷಿ ಬಸುರಲ್ಲಿ ಸದ್ಭಕ್ತಿರುಚಿಕ-
ನಲರುತಿರಲು ರುಚಿಯರುಚಿಗಳಾಯ್ತು;
ಪಾಂಡುರಾಗದ ಮೂರ್ತಿ ಸತಿಯ ಗರ್ಭದಲಿ
ಇರುತಿರಲತಿ ಬಿಳಿದಾಯ್ತು ಮೈಬಳ್ಳಿ;

ಸತಿಯ ಶೀಲದ ಗರ್ಭ ಭವಿಪಾಕಗಳಿಗೆ
ಒಡಬಡದಿರಲೋಕರಿಕೆಯಾಯ್ತವಳಿಗೆ;
ಊಗಿ ಸುತನ ಬರುವಿಕೆಗೆ ಬಾಯ್ತೆರೆದ
ರೀತಿಯಿಂ ಸತಿಗೆ ಆಕಳಿಕೆಯುಂಟಾಯ್ತು;
ಶಿವಮೂರ್ತಿ ತನ್ನ ಗರ್ಭದಿ ಬಂದು ಸೇರೆ
ಶಿವಯೋಗನಿದ್ರೆಯಾ ಚೆಲುವೆಗೆ ನಿದ್ರೆ
ಕಾಲಕಂಧರಮೂರ್ತಿ ಬಸುರೊಳಗಿರಲು
ಲಲಿತಾಂಗಿಯಾ ಮೊಲೆತೊಟ್ಟು ಕಪ್ಪಾಯ್ತು.

ಬೆಳೆಯಲು ಶಿವಮೂರ್ತಿವನಿತೆ ಗರ್ಭದಲಿ
ಆಕೆಯ ನಡುವಿನ ಬಡತನ ಹೋಯ್ತು

ಯೋಗೀಂದ್ರಹಂಸನಾ ಸತಿಯ ಗರ್ಭದಲಿ
ರಂಜಿಸೆ ಕುಗ್ಗಿತು ನಡಿಗೆಯ ವೇಗ–
ವೆನಲು ಮಾನಿನಿಗರ್ಭ ದಿವಸದಿವಸಕೆ
ಸೊಂಪಾಗಿ ತಂಪಾಗಿ ಪೆಂಪಾಗಿ ಬೆಳೆದು
ನವಮಾಸಗಳು ತುಂಬೆ ನಂದೀಶಮೂರ್ತಿ
ಮೃದುವಾದ ಬಸಿರಲ್ಲಿ ಕೋಮಲವಾದ
ಜನನಿಯ ಗರ್ಭಾವಾಸದ ಗುಹಾಂತರವೆ
ತನ್ನ ಸಮಾಧಿಗೆ ಸುಖಸ್ಥಾನವಾಗೆ
ಸಿದ್ಧ ಪದ್ಮಾಸನಾಸೀನನು ಸತಿಯ
ಶುದ್ಧಾತ್ಮದಿಂ ಭೂತಶುದ್ಧಿಗೆ ಹೊಕ್ಕ.

ಗಡಿಗೆಯ ನೂಕಿ ನೀರನು ಹೊರಚೆಲ್ಲಿ
ಅಡರಲೀ ರೀತಿಯಿಂದಗ್ನಿ ತಾ ಸುಡಲು
ಬೂದಿ ತಾ ಹೊತ್ತದು ಹೊಗೆಯದು ತಾನು
ಊದನು ಹೊತ್ತಿಸಿದನು ದೀಪವೊಂದ.
ಒಪ್ಪುವ ದೀಪದಿ ತಾನಿದ್ದ ಮನೆಯ
ಕರಿಕಾಗಿ ಮಾಡದೆ ದಹಿಸಿತು ಒಳಗೆ
'ಹೀಗೆ ಕಾಲನು ಊರಿದಿಂತಹ ಮಗುವು
ಇರುವನೇ' ನೆನುತಲಿ ಮಿತ್ರಶತ್ರುಗಳು
ತಮ್ಮಯ ದಾರಿಯಲ್ಲಿರದೆ ಭಯದಲಿ
ಭ್ರಮೆಯಿಂದ ತಹತಹಿಸೋಡುತಲಿರಲು

ಶುದ್ಧಿಯಿಂ ತಾ ಚೌದಳಾಬ್ಜವ ಕಳೆದು
ಬಂದು ತ್ರಿಕೂಟದ ಧರೆಯಲಿ ನಿಂದು
ಸಚ್ಚರಿತ್ರದಿ ಸುಪ್ತಸರ್ಪವ ಸೋವಿ
ನಿರ್ಮಲ ಷಡ್ದಳಕಮಲವ ಸೇರಿ
ಅರ್ಥಿಯಿಂ ದಶದಳಕಮಲವನೊಂದಿ
ಭರದಿ ದ್ವಾದಶದಳ ಪದ್ಮವ ಹೊಂದಿ
ಷೋಡಶದಳ ಪದ್ಮ ಸುರುಚಿರಸೌಖ್ಯ
ಕ್ರೀಡಾವಿಲೋಲನಾಗುತ ನಲಿದಾಡಿ
ದಾಟಿಯಾದ್ವಿದಳ ಪದ್ಮದೊಳಗೆ ತನ್ನ
ನಾಟಿಸಿ ಸಚ್ಚಿದಾನಂದವ ಪಡೆದು

ಹೊರಟಧೋಮುಖವಾದ ಷಟ್ಕಮಲಗಳ
ಮುನ್ನಡೆದಿಂತೂರ್ಧ್ವಮುಖಗಳಾಗೆಸೆಯೆ
ನಿಶ್ಚಲ ಕೋದಂಡ ನಿಜಗತಿಯಲಿಹ
ಪಶ್ಚಿಮ ನಾಳ ಸಂಭವವೆನಿಸಿರುವ
ನಾದಕ್ಕೆ ಸೊಕ್ಕಿ ಮುಂದಕೆ ನಿಲುಕಿ
ಸರಿಯೂರ್ಧ್ವಮುಖಸಹಸ್ರದಳಾಂಬುಜಾತ.
ದಲ್ಲಧೋಮುಖವಾಗಿ ಹೊಳೆಯುತ ದಿವ್ಯ-
ನಾಗುತ ಷೋಡಶಾಂತವ್ಯೋಮಚಂದ್ರ
ಭವ್ಯಸುಧಾಪಾನಪಾರವಶ್ಯದಲಿ

ಆತತದಿಂ ಪರಂಜ್ಯೋತಿಸ್ವರೂಪ-
ದಿಂ ತನ್ನ ಕಾಂತಿಯೆ ಪ್ರಭೆಯಾಗಿ ಬೆಳಗೆ
ಹೊಳೆಯುತಿರುವ ಆ ಪ್ರತಿಮೆಯ ಗರ್ಭದಲಿ
ಬೆಳಗುವ ದೀಪದ ವಿಧವ ಹೋಲುತಿರೆ
ಪಾಂಡುರಾಗವ ಹೊತ್ತ ಸತಿಯ ಗರ್ಭದಲಿ
ತೊಳಗುತ ಬೆಳಗುತ ಪುತ್ರನೀ ವಿಧದಿ
ತೊಡಗಿ ಶಿವಧ್ಯಾನ ತತ್ಪರತ್ವದಲಿ
ತಾಯ ಬಸುರಲಿರೆ ಮೂರುವರ್ಷಗಳು
ಸುತ ಭರಾಕ್ರಾಂತಿಯಿಂದತಿ ಶ್ರಮ ಪಟ್ಟು
ಸತಿಯಂದು ನಂದಿಕೇಶನ ಗುಡಿಗೆಯ್ದು

"ನೋಂಪಿಗೀಂಪಿಗಳ ಬೇವಿನೊಳ್ಳೈದೆ ಕಲೆಸಿ
ನಿನ್ನನು ಮರೆಹೊಕ್ಕೆ ನಿಖಿಲ ಲೋಕೇಶ
ಮರೆಹೊಕ್ಕ ರೀತಿಯಿಂ ಮನ್ನಿಸಿಯೆನ್ನ
ಸುತನಿತ್ತು ಮೆರೆಸಿದುದೀಗ ಚೆನ್ನಾಯ್ತು.
ಪುಣ್ಯವ ಮಾಡಿದ ಸತಿಯರೊಂಬತ್ತು
ತಿಂಗಳು ಹೊತ್ತು ಮಕ್ಕಳ ಹಡೆಯುವರು.
ಮೆಲ್ಲಗೆ ಮೂರುವರ್ಷಗಳಾಯ್ತು ನನಗೆ
ಇಂತು ತೊಂದರೆಯಿತ್ತೆಯಯ್ಯ ನಾನರಿಯೆ.
ದುರ್ಭರವಾದ ಈಯರ್ಭಕನಿಂದ
ಗರ್ಭವು ಕಕ್ಕಟಿಗರ್ಭವೆನಿಸಿತು.

ಆರಯ್ಯೆ ನೀನೀವ ವರಗಳು ಸಾಕು
ನೋವನು ಮಾಣಿಸೈ ಇನ್ನೇನವೊಲ್ಲೆ
ಮುಂದೆನಗೇನಿಹುದೋ ನಾನು ಕಾಣೆ

ಎಂದೂ ಕೇಳ್ದರಿವೆವೇನಿಂಥ ಗರ್ಭಗಳ?”
ಎಂದು ತಾನಲ್ಲಿಗಲ್ಲಿಗೆ ನಿಂತುಕೊಳುತ
ತನುವಿಗೆ ಶ್ರಮವಾಗೆ ಮನೆಗೆ ತಾ ಬಂದು
ಮಂಚದಲುಸ್ಸೆಂದು ಪರಿತಾಪದಿಂದ
ತಂಪಾಗಿಯಾರ್ದ್ರಚಂದನವಾರಿ ತೊಡೆದ
ನೆವದಿಂದ ಕಣ್ಮುಚ್ಚಿ ನಿದ್ರೆಯ ಮಾಡೆ
ಮಡದಿಯ ಕನಸಿನಲ್ಲುಕ್ಷವಲ್ಲಭನು

ಜಂಗಮಲಿಂಗವೇಷವನೊಪ್ಪೆ ಧರಿಸಿ–
ಯಂಗನೆಗಿರೀತಿಯಾಣತಿಯತ್ತ:
“ನಿನ್ನ ಮನಸ್ತಾಪವನ್ನು ಮಾಣಿಸಲು
ಭರದಿಂದ ಬಂದಿಹೆ ಕಮಲಾಯತಾಕ್ಷಿ
ನಿನ್ನ ಹೊಟ್ಟೆಯಲಿರುವಾ ಕುಮಾರಕನು
ಲೋಕಪಾವನಮೂರ್ತಿಯಹನು, ಕೇವಲನೆ?
ಆದಿವೃಷಭನು ಶಿಲಾದನ ಮಗನು;
ಆ ದೇವದೇವನಾಣತಿಯನು ಕೊಂಡು
ಭಕ್ತಹಿತಾರ್ಥದಿಂ ಹುಟ್ಟುತ ನಿನಗೆ
ವ್ಯಕ್ತಿಯಾಗೆಂದೆನು, ಚಿಂತಿಸಬೇಡ

ಹುಟ್ಟುವ ಪುತ್ರನು, ಹುಟ್ಟಿದ ಕ್ಷಣವೆ
ಬಸವನೆನ್ನುವ ಹೆಸರಿಡು ನೀ ಪೆಂಪೆನಿಸೆ”
ಎಂದಾಣತಿಯನೀಯೆ ತಾನೆಚ್ಚರಾಗಿ
ಕಣ್ಣಿಟ್ಟು ನೋಡುತಲಾರ ಕಾಣದಲೆ
“ಈತ ನಮ್ಮಯ ನಂದಿಕೇಶನು ತಾನೆ
ಬಂದನು ಸಲಹಲು ಎಂಬುದು ನಿಜವು
ಬದುಕಿದೆ; ನನ್ನ ಜನ್ಮದ ಫಲವಿಂದು
ತುದಿ ಮುಟ್ಟಿ”ತೆನುತ ಸಂತೋಷಾಬ್ಧಿಯಲ್ಲಿ
ತೇಲಿ ಸ್ತ್ರೀಯರು ಬಂಧುಗಳು ವಿಸ್ಮಯದಲಿ
ಕೇಳಲು ಕನಸೆಲ್ಲವನು ಮುದದಿಂದ

ತಿಳಿಸಿ ತಾನಿರಲು ಕೋಮಲೆಯುದರದಲಿ–
ಯಿದ್ದ ಮಹಾತ್ಮನ ಹೃನ್ನಳಿನವೆನೆ
ತಾನಾಗಿ ಹೊಳೆಯುವ ತತ್ಪರಂಜ್ಯೋತಿ–
ಯನ್ನು ಪ್ರಬೋಧಿಸಿ ಬಂದಗೆಲಸವ
ಮರೆತೆಯ’ಯೆನ್ನಲು ಎದ್ದು ಸದ್ಭಕ್ತಿ–

ಯರಕೆಯಾಗದ ರೀತಿ ಸಾಷ್ಟಾಂಗವೆರಗಿ
ಪ್ರೀತಿಯ ಮಗನು ಮುಗಿದಕೈಗಳೊಡನೆ
ಆ ತಾಯ ಗರ್ಭದಿನಂದುದಯಿಸಿದ-
ನರ್ಧೋದಯಯದೊಳಗೇ ಆತನಲಿದ್ದ
ಅರ್ಧೇಂದುಮೌಳಿ ಗುಪ್ತಾಕೃತಿ ತಳೆದು

ಅಂಗದ ಮೇಲೆಲ್ಲ ಕಡುಸಾಂಗವಾಗಿ
ಲಿಂಗಸಾಹಿತ್ಯದ ಲೀಲೆಯಿಂಗೈದ.
"ತಾ ಬಂದ ದಾರಿಯನಾರು ಕಾಣದೊಲು
ಯಾವೆಡೆಯೆಲ್ಲಿದ್ದು ಬಂದನೊ ತಪಸಿ
ಇದು ವಿಚಿತ್ರ"ವೆನಲು ಮನೆಯವರೆಲ್ಲ
ಬೆದರುತಲೆಲ್ಲ ವಿಭ್ರಾಂತಿಯಿಂ ನೋಡ-
ಲುಟ್ಟಿಹ ಮುಡಿಯು ಕೆಂಜೆಡೆಮುಡಿನಡುವೆ
ಮೃಡನುಟ್ಟ ರೀತಿಯ ಬಿಳಿದಾದ ವಸ್ತ್ರ
ಕಟ್ಟಿದ ಮೃದುವಸ್ತ್ರ ಕಚ್ಚಟದೊಡಿಗೆ
ಧರಿಸಿದ ರುದ್ರಾಕ್ಷಭೂಷಣಗಳನು

ರಾಗಿ ಕುಂಡಲಗಳು ರತ್ನಗಂಬಳಿಯು
ಯೋಗದಂಡವನೊಂದು ಕೈಯಲಿ ಕೊಡೆಯು
ಬೂದಿಬೊಕ್ಕಸವಾಗಿಯೊಪ್ಪುವ ಮೈಯ
ಬೂದಿಯಿಂ ಮರೆವ ತ್ರಿಪುಂಡ್ರರೇಖೆಗಳು
ಥಳಥಳವೆನೆ ಮಿರುಗುವ ಹಲ್ಲಸಾಲು
ಗಲ್ಲದೊತ್ತಿನ ನೀಳಗಡ್ಡವು ತೊಳಗೆ
ತಾಪಸರಾಜನೊಬ್ಬನು ತಾಪಸಿಯೊಲು
ಆಗ ಮಾದಾಂಬೆಗೆ ಅನುರಾಗವೆಸೆಯೆ
"ಇಲ್ಲಿನ ಕಪ್ಪಡಿಸಂಗಮೇಶ್ವರದಿ
ಎಲ್ಲ ಕಾಲಕು ಇಹೆನು; ಅದು ಹೇಗೆಂದೆನಲು

ನಾನು ಕೂಡಲ ಸಂಗಮೇಶ್ವರ ಹೆಸರಿ-
ನಿಂದಲಾಗುಡಿಯಲ್ಲಿ ಕದಲದೆಯಿರುವೆ.
ಎನ್ನಯ ಮಗನಿವನೊಂದು ಜನ್ಮದಲಿ
ಲೋಕಹಿತಾರ್ಥದಿಂ ನಿನಗುದಯಿಸಿದ-
ನದಕೆ ನೋಡಲು ಬಂದೆ ; ಈ ಭವದಲ್ಲಿ
ನಾನವನಿಗೆ ಗುರು, ಇನ್ನುಮೇಲಿಂದ
ನಿನ್ನ ನಂದನಗೆ ಲಿಂಗಾನರ್ಪಿತವನು

ಇನಿತಾದರುಣಿಸಬೇಡಮ್ಮ ಎನ್ನಾಣೆ”
ಎನುತಲದೃಶ್ಯನಾಗೈದನಾಗಾತ.
ಮನಸಿಜಹರನು ತಾ ಹೋಗಲಷ್ಟರಲಿ

ಬಾಲಾರ್ಕಕೋಟಿಯ ಪ್ರಭೆಯ ಕೀಳ್ಮಾಡಿ
ಬಾಲನ ತೇಜವು ಹರಡುವಂತಾಗಿ
ಸೂಚೀಮುಖವಕೂಡ ಹೊಗಬರದಂಥ
ಅತಿಶಯ ತಿಮಿರವು ಎಲ್ಲ ಮಾನವರ
ಅಜ್ಞಾನತಿಮಿರವು ಕೊಂಚವಿಲ್ಲದಲೆ
ವಿಜ್ಞಾನಮಯವಾಗಿ ವೇಗದಿ ಹರಿಯೆ
ಬೆಳಗಾಗದೇ ಹೋದ ರೀತಿಯ ಕಂಡು
ರಾಗಿಸೆ ನಿಖಿಲವು ರವಿಪ್ರಭೆಯಾಯ್ತು.
ಜನನಿ ಜನಕರು ಸತ್ಪುತ್ರನ ನೋಡಿ
ಅನುರಾಗರಸವಾರ್ಧಿಯಲಿ ಮುಳುಗಾಡಿ

ಭಕ್ತರ ಕರೆವಂತೆ ಹೇಳುವ ತಾವು
ಭಕ್ತಿ ಪ್ರಣಾಮಗಳಾಚರಿಸುತ್ತ
ಯುಕ್ತದಿಂ ಸಿಂಹಾಸನದ ಮೇಲೆ ತತ್ಕ್ಷ–
ಣದಲಿ ವಿಭೂತಿವೀಳ್ಯಗಳನರ್ಪಿಸುತ
ಪಾದೋದಕಗಳಿಂದ ಶಿಶುಮೈಯ ತೊಳೆದು
ಬೂದಿಯ ಫಾಲದಿ ಪೂಸಿ ಮೇಲ್ಬಳಿದು
ಪಂಚಮಹಾವಾದ್ಯ ಪಟಲುಗಳುಲಿಯ–
ಲಂಚಿತಾಗಣ್ಯಪುಣ್ಯನಹ ತತ್ಸುತಗೆ
ಬಸವನಾಮವನಿಟ್ಟು ಆ ಪತಿಸತಿಯ–
ರಧಿಕಸಂತಸದಿಂದಲಿರಲು ಕುಮಾರ

ಹಿಂದೆ ಕತ್ತಲೆಯಿರೆ ತನದೆಷ್ಟು ತೇಜ–
ವೆನುವಂತೆ ದೀಪವ ಕಂಡು ನಗುವನು,
ಸನ್ನುತಲಿಂಗ ಪ್ರಸಾದಮಗ್ನತೆಯ–
ಲಿರುವಂತೆ ಮೊಲೆಯುಣ್ಣದಲೆ ಸುಮ್ಮನಿರುವ,
ಶಿವಸುಖಾಮೃತವನು ಕೈಯಲಿ ಹಿಡಿದು
ಸವಿನೋಡುವಂತೆ ಹಸ್ತಗಳ ಚೀಪುವನು,
ಶಿವನಪದಧ್ಯಾನನಿಶ್ಚೇಷ್ಟಿತಾವಸ್ಥೆ–
ಯನು ಪಡೆದಂತೆ ತಾ ಬೆರೆಗುವಡೆವನು,

ಗಲಿಬಿಲಿ ಸಂಸಾರನಿಂತೋಡೆ ನೂಕಿ
ನಲವಿಂದಾಡುವ ರೀತಿ ಕೈಗಳಾಡಿಸುವ,

ಮಾಯಾಪ್ರಪಂಚವು ಬಳಿಬರದಂತೆ
ಬೀಳಲೊದೆವ ರೀತಿ ಕಾಲನಾಡಿಸುವ,
ಭರದಿ ತಾ ಪೂಣ್ದು ಬಂದಿಹ ಕೆಲಸಗಳು
ತಡವಾದುದೆನೆ ಹೆದರ್ದವೊಲು ಬೆಚ್ಚುವನು,
ಭವಸ್ತುತಿಯಾನಂದಬಾಷ್ಪಗಳುಗುವ
ಬಗೆಯೊಳೆ ಕಂಗಳಲಶ್ರುವುಗುವುದು,
ಭವಬಾಧೆಗಳ ತಾಳುತಲಿ ಮೊರೆಯಿಡುವ
ಭವಿಗಳನಾಲಿಸುವಂತಾಲಿಸುವನು,
ಒಡೆಯರಡಿಗಳಿಗೆ ಬಿದ್ದು ಮೊರೆಯಿಡು
ವಂತೆ ನೆಲದ ಮೇಲೆ ಬೋರಲಾಗುವನು,

ಇಳೆಯಲಿ ಮರೆತ ನಿರ್ಮಲಶಿವಭಕ್ತಿ
ತಲೆಯೆತ್ತುವಂತೆ ತಾ ತಲೆಯನೆತ್ತುವನು,
ಬೆರಗೊಂದೆ ಪದ್ಮಾಸನಾಸೀನವೃತ್ತಿ-
ಯನ್ನಭ್ಯಸಿಸುವಂತೆ ಕುಳಿತುಕೊಳ್ಳುವನು,
ಪೂಣ್ದ ದ್ವಿತೀಯಶಂಭುವೆನುವ ನಂದಿ
ನಾನೆಂಬ ಭಾವದಿಂದಂಬಳಿಕ್ಕುವನು,
ವೀರಮಾಹೇಶ್ವರಾಚಾರಗಳೆಲ್ಲ
ರಾಶಿಯಾಗುತ ನಿಲ್ಲುವಂತೆ ನಿಲ್ಲುವನು,
ಯತ್ನದಿಂದಾದಿಮಾರ್ಗವು ತಪ್ಪದಂತೆ
ಅಡಿಯಿಡುವವೊಲು ತಪ್ಪಡಿಗಳನಿಡುವ-

ನಭವನ ಹೆಸರ್ಗೊಂಡ ಮಾತ್ರ ಗದ್ಗದಿಕೆ-
ಯಾದಂತೆ ತೊದಲಮಾತುಗಳನಾಡುವನು,
ಬಲ್ಲಿದರೆಮ್ಮಯ ಶಿವಭಕ್ತರೆಂದು
ಕುಣಿದಾಡುವಂತೆ ತಾ ಹಾರಿಯಾಡುವನು,
ಅಂತು ವಿನೋದವಾಡುವ ಪ್ರಾಯದಲ್ಲಿ
ಸಂತತದಲಿ ಶಿವಾರ್ಚನೆಯ ಮಾಡುವನು,
ಬುದ್ಧಿಯು ಬೆಳೆಯುವ ಕಿರುಪ್ರಾಯದಲ್ಲಿ
ಸಿದ್ಧಭಕ್ತರ ಶಿವನಂತೆ ಕಾಣುವನು.
ಸರ್ವಜ್ಞನಾದ ವೃಷಭಮೂರ್ತಿಯವಗೆ
ಸರ್ವವಿದ್ಯೆಗಳು ಸಹಜವಾಗಿ ಬಂತು

ಗತಭಕ್ತಿಯುಕ್ತಿಯಿಂ ಗರ್ಭಾಷ್ಟಮದಲಿ
ಸುತನುಪನಯನವ ಶುಭಮುಹೂರ್ತದಲಿ
ಮಾಡಬೇಕೆನುತತಿ ಸಡಗರಗೊಳಲು
ತಾನಾಗ ಬಸವನು ತಂದೆಗಿಂತೆಂದ :
"ಮುಂಜಿಯೆಂದೇನಿದ ಮಾಡುವೆಯೀಗ,
ಜಡನೆಂತಾದೆಯೊ ನೀನೀಶ್ವರನನೋಲೈಸಿ?
ಪರಮನ ಗುರುವಾಗಿ ಪಡೆದು ದುರ್ನರರ
ಗುರುವೆಂದೋಲೈಸೆ ನರಕವಲ್ಲವೇನು?
ಗತಪೂರ್ವ ಜನ್ಮಸಂಸ್ಕಾರಗೊಂಡವಗೆ
ವಿತತದ್ವಿಜತ್ವವು ಪತನವೆನಿಸದೆ?

ನಿರ್ಮಲ ಗುರುಕೃಪಾನವಿತಜನ್ಮನಿಗೆ
ಕರ್ಮಜನ್ಮವದು ದುಷ್ಕರ್ಮವೆನಿಸದೆ?
ಆ ಗುರು ಪಾದವನರ್ಚಿಸುವವಗೆ
ಅಗ್ನಿಯಲಿ ಹವಿಯು ಬೇಳ್ವುದು ಸರಿಯೆ?
ಮಲಹರಾತ್ಮಕವಾದ ಮಂತ್ರವ ಕಲಿತು
ಹಲಮಂತ್ರಗಳ ಕೊಳ್ಳೆ ಪಾಪವೆನಿಸದೆ?
ಶೂಲಿಭಕ್ತರಿಗೆತ್ತುವಂಥ ಕೈಗಳನು
ಪಾಶಬದ್ಧರಿಗೆತ್ತೆ ತಪ್ಪಾಗದಿಹುದೆ?
ಕರ್ಮಪಾಶಗಳನು ಸಂಪೂರ್ಣ ಹರಿದು
ಕರ್ಮರಜ್ಜುವ ಕಟ್ಟಿಕೊಳುವುದು ಸರಿಯೆ?

ರುದ್ರಾಕ್ಷಿಭಸಿತಾದಿ ಮುದ್ರೆಗಳಿರಲು
ಕ್ಷುದ್ರಮುದ್ರೆಗಳನು ಧರಿಸಲುಬಹುದೆ?
ಈ ರೀತಿ ಪಾಶಕೆ ದೂರವಾಗಿರುವ
ವೀರಮಾಹೇಶ್ವರಾಚಾರದೀಕ್ಷಿತನ
ನಿರ್ಮಿತೋಭಯಕರ್ಮನಿರ್ಮಲನನ್ನು
ಕರ್ಮಾಬ್ಧಿಯಲಿ ನೂಕೆ ಧರ್ಮವೇ ನಿನಗೆ?
ನಿರ್ಮಲ ಕಣ್ಣುಗಳಲಿ ಕಾಣ್ಕೆಯಾಗಿ
ಬರುವುದೆ ಬಸವನ ಮುಂಜಿಯ ಮಾಡೆ?
ಬ್ರಹ್ಮ ಶಿರೋಹರ ಪ್ರಮಥೈಕವಂಶ್ಯ-
ನನು ಬ್ರಹ್ಮವಂಶ್ಯನೆನ್ನುತ ಭಾವಿಸುವುದೆ?

ಜಾತಿಗೋತ್ರಾತೀತ ಸದ್ಗುರುಜಾತ-
ನನು ಜಾತಿಗೋತ್ರಕ್ರೀಗಳ್ಗೆ ನೂಕುವುದೆ?

ಅಕುಲಸ್ಥನಾಗಿರುವಭವನ ಭಕ್ತ-
ನನು ಯಾವ ಕುಲವೆಂದು ನಿರ್ಣಯಗೈವೆ?
ಅದರಿಂದಲೆಷ್ಟು ಮಾರ್ಗಗಳಲಿ ಮುಂಜಿ-
ಯನು ತೋರಬಾರದಾ ಕಥೆ ಹೇಳಲೇನು?"
ಎನ್ನಲು ತಂದೆಯಿಂತೆಂದ ಪುತ್ರನಿಗೆ :
"ಕೇಳಯ್ಯ, ಬಸಯ್ಯ, ವಿಪ್ರಮಾರ್ಗದಲಿ
ಆಗಮವಿಧಿ ಹದಿನಾರು ಕರ್ಮಗಳು
ಆ ಗರ್ಭಸಂಸ್ಕಾರವಾದಿಯಿಂದಿಹವು

ಅದರಲೊಂದಾದರೂ ನೂನವೆನಿಸಲು
ಅಗ್ರಕುಲೋತ್ತಮನಾಗನು ತಾನು
ಇದಕೆ ವಿರೋಧವೆಲ್ಲಿದೆ ರುದ್ರಗಣವು
ನಾಂದಿ ಮುಖ್ಯನುಪನಯನ ಪೂಜೆಗಳಿಗೆ
ಆಧಾರ ಪ್ರಣವವು ಭರ್ಗನೇ ದೈವ-
ವೆನುವುದು ಮಂತ್ರಗಳಿನಿತುಮಲ್ಲದೆಯೆ
ತೊಡುವ ಸೂತ್ರಗಳೆಲ್ಲ ಭೀಮಸರ್ಪಗಳು
ಹಿಡಿಯುವ ಪಾತ್ರೆಯು ಬ್ರಹ್ಮನ ಶಿರವು
ಪಾಲಾಶದಂಡವು ಪಂಕಜೋದರನ
ಬೆಮ್ಮೊಳೆ ತಲೆಸುತ್ತಕೂದಲು ಜಡೆಯು

ತೊಟ್ಟ ಕೃಷ್ಣಾಜಿನವದು ಗಜಾಜಿನವು
ಇಟ್ಟ ಮೇದಾವಿಯದು ವಿಭೂತಿಯಾಗೆ
ಹರನೆ ಭಿಕ್ಷಾಟನೆಯಾಚರಿಸಲ್ಕೆ
ಹೊರಡುವ ವೇಷವ ಮೆರೆಯಲು ಧರಿಸಿ-
ದಂತೆಯೆ ಹೊರತು ಬ್ರಾಹ್ಮಣನಾಗನೆನಲು,
ಇದುವು ವಿರುದ್ಧವೇನೀಶಭಕ್ತನಿಗೆ ?
ಮುಂಜಿಗೈಯಲು ಭಕ್ತಿ ಬರಿದುಗೊಳ್ಳುವುದೆ?
ವಾಚಾಳಿತನದಿಂದ ಬೇರೆಯಾಡದಿರು.
ಹಸುಗೂಸುಗಳ ಮಾತು ಕೆಲಸವಿಲ್ಲದವು
ತಡೆಯದೆ ಮಾಡು ನಾ ಹೇಳಿದುದನ್ನ.

ಇಂಥ ಚೋದ್ಯಗಳನು ಅರಿವೆವಾವೆಂದು
ಕಂದ, ನಮ್ಮುದರದಿ ಹುಟ್ಟಲು ನೀನು
'ಅನ್ನವಿಕ್ಕುವ ಪುತ್ರನುದಿಸಿದನಿನ್ನು
ಮೇಲಾಯ್ತು' ಎಂದಾವು ಲೀಲೆಯಿಂದಿರಲು

ಹುಟ್ಟಿದ ಕುಲಪುರಗಳನು ಹೋಗಾಡ-
ಲೆಂತಯ್ಯ! ಯೋಚಿಸು ಕಂದ, ನಮ್ಮಯ್ಯ!
ಕುಲದೀಪಕನು ಹುಟ್ಟೆ ಕುಲವರ್ಧಿಸುವುದು
ಕುಲನಾಶಕನು ಹುಟ್ಟೆ ಕುಲವಳಿಯುವುದು
ಕುಲಗಳಿಗೆಲ್ಲ ನೀ ಗುದ್ದಲಿಯಿಡಲು
ಹೊರಗಟ್ಟರೇನೆನ್ನ ವಿಪ್ರರು ಕೇಳೆ?

ನಿನ್ನ ಕೈವಿಡಿದು ಅನೀತಿಯಿಂ ಕುಲವು
ವ್ಯರ್ಥದಿಂ ಹಾಳಾಗಿ ಕೆಡಲೆಂತು ಬಹುದು?
ಯುಕ್ತಿ ಹೇಳಿದೆನಿನ್ನು ಒಲ್ಲೆನೆಂದೆನಲು
ಭಕ್ತಿಯು ನೀನಿನ್ನು ಹಾಳಾಗಿ ಹೋಗಿ"
ಎನ್ನುತ ನಿಷ್ಠುರೋಕ್ತಿಗಳನು ನುಡಿಯೆ
ಕೇಳುತ ಬಸವನಿಂತೆಂದ ಕೋಪದಲಿ:
"ಬ್ರಾಹ್ಮ್ಯ ಭಕ್ತಿಗಳನು ಜೊತೆಗೂಡಿಸದಿರು
ಬ್ರಾಹ್ಮ್ಯವು ಬೇರೆ ದರ್ಶನವಾಗಿರುವುದು,
ಬೇರೆಯ ದೈವವು ಬೇರೆಯ ಮಂತ್ರ
ಬೇರೆಯಾಚಾರ್ಯನು ಬೇರೆಯ ವೇಷ

ಧ್ಯಾನ ಬೇರೆಯೆ ಬ್ರಾಹ್ಮ್ಯಕರ್ಮವೆ ಬೇರೆ
ತಿಳಿಯಲು ಆಚಾರ್ಯಮಾರ್ಗವೆ ಬೇರೆ
ಆದರೆ ಅಗ್ನಿ ಮುಖವು, ಬ್ರಹ್ಮಶಿರವು
ಆದಿರುದ್ರನು ಶಿಖೆ, ಹರಿಯು ತಾನುದರ,
ಪ್ರಾಣಾದಿವಾಯುವು ಪ್ರಾಣಗಳ್, ಯೋನಿ
ಕ್ಷೋಣಿ ಶ್ವೇತವೆ ತಾನು ನೋಡಲು ವರ್ಣ
ಅಸಮಾಕ್ಷವಿಧವೆ ಗಾಯತ್ರಿ ಸಾಂಖ್ಯಾಯ-
ನಸ ಗೋತ್ರವಿಪ್ಪತ್ತುನಾಲ್ಕಕ್ಷರಗಳು
ಅದಕೆ ಮತ್ತೆಯು ತ್ರಿಪಾದಗಳು ಷಟ್ಕುಕ್ಷಿ
ಸಂದೇಹವೊಂದಿಲ್ಲ ಪಂಚಶೀರ್ಷಗಳು

ಎಂದೆನ್ನುವುದು ತಾನೆ ನಿಮ್ಮ ಯಾಜ್ಞಿಕವು
ಕೇಳು ದೈವವು ತಾನು ಬೇರಲ್ಲವೇನು?
ಅದರಿಂದಲಿದುವೆ ಸಾಂಖ್ಯಾಯನ ಮತವು
ದೈವವೆನಲು ಇಲ್ಲ ತಾ ಬಹುರೂಪು
ಅದಕಾಚಾರ್ಯನು ಧರೆಯಲಿ ಕರ್ಮಜಡನು
ಅದಕೆ ಮಂತ್ರವು ತಾನು ಗಾಯತ್ರಿಯೆನಲು

ಪ್ರತಿದಿನ ಕ್ರಿಯಕರ್ಮ ಬಂಧವು ವೇಷ-
ವಿತರೇತರವು ಮೋಕ್ಷಹೇತುವೇ ಹೇಳು?
ಅಲ್ಲದೆ ಷಡ್ದರ್ಶನಾತೀತವಾದ
ಮದನಾರಿಸದ್ಭಕ್ತಿಮಾಗವ ಕೇಳು:

ಶ್ರುತಿ 'ವಿಶ್ವತಶ್ಚಕ್ಷುಖುತ'ವೆಂದು ಹೊಗಳೆ
ಸ್ತುತಿಯ ಮೀರಿದ ಅತಿಸೂಕ್ಷ್ಮದ ರೂಪ
ಆದಿಗೆ ಅದಿ ನಿತ್ಯಾನಂದ ಮೂರ್ತಿ
ಶ್ರೀದಿವ್ಯಮೂರ್ತಿಯು ತಾನೆ ಸುದೈವ
ಇಂತಹೀಶ್ವರನನಾತ್ಮದಿ ಹೊಂದಿ ಕರದಿ
ಹಿಡಿದಿರುವಂತಹ ಪೃಥುದಯಾಮೂರ್ತಿ
ಪ್ರಕಟಿಸೆ 'ನಗುರೋರಧಿಕ'ವೆನೆ ಮೆರೆವ
ಸಕಲಸ್ವರೂಪ ಮತ್ ಸಮಯಸದ್ಗುರುವು
ಮಂತ್ರಕೆಲ್ಲಕು ರಾಜಮಂತ್ರವಾಗಿರುವ
ಮಂತ್ರವು ತಾನದಕಾಷಡಕ್ಷರಿಯು

ಭವದೂರವಹ ಜಟಾಭಸಿತರುದ್ರಾಕ್ಷ
ಸವಿಶೇಷಮೋಕ್ಷಾನುಸಾರಿ ವೇಷವದು
ಭುವಿಜನ್ಮ ಪಾಪೌಘಭೂಜಕುಠಾರ-
ವವಿರಳಸತ್ಕ್ರಿಯಾಷ್ಟಾಂಗ ಸದ್ಭಕ್ತ
ಸಂದರ್ಶನಗಳಲಿ ಸಕಲಪಾಪಗಳು
ಅಡಗಿ ಮೋಕ್ಷಾಂಗನೆಯಹುದದರಿಂದ
ಇದು ಫಲಪ್ರಾಪ್ತಿಯಿದಕೆ ಮೇಲೆ ಲಿಂಗ
ಪದಸೇವನೋತ್ಕೃಷ್ಟಟಭವ್ಯ ಸೌಖ್ಯಗಳ
ಫಲವಿಂಥದೆನಲಾಗದರಿಯೆ ಶ್ರುತಿಗಳ
ಹವಣೆ ಜೀವನ್ಮುಕ್ತಿತತ್ವಾತ್ಮಕವಿದು

ಅದರಿಂದ ಬೇರೆ ಮಾರ್ಗದ ರೀತಿ ನೋಡು
ಭಾವಿಸೆ ಬ್ರಾಹ್ಮ್ಯವು ಭವನಭಕ್ತಿಯನು
ಇಹುದೆಂಬುವರು ದರ್ಶನಗಳನು ಕೆಲರು
ಕಲಿಸಿರುವುದೆ ತಾವು ಮುನ್ನೊಂದೊಂದರಲಿ
ದರ್ಶನಗಳನುಂಟುಮಾಡಲು ತಿಳಿಯೆ
ದರ್ಶನವದು ಬೇರೆ ತತ್ವದ ರೂಪ
ಅರಿಯಲೀಶ್ವರಪದ ತಲ್ಲೀಯ ಸೌಖ್ಯ
ಫಲಕಾರಣವೆ ಕರ್ಮಪಾಶಬಂಧನವು.

ಇಂತಲ್ಲದುಭಯವ ಒಂದೆಯೆನ್ನುವರೆ?
ಅಂತಲ್ಲವೈ ನಿಟಿಲಾಕ್ಷಭಕ್ತನಿಗೆ

'ಧರೆಯನ್ಯದೇವತಾಸ್ಮರಣ ಮಾತ್ರದಲಿ
ಕೋಟಿಯಿಪ್ಪತ್ತೆಂಟು ನರಕಗಹಳವು'
ಎನೆ ಶ್ರುತಿಗಳ ಕೇಳಿರಾ ಹಾರುವನಿಗೆ
ದಿನಕರಪಾವಕದಿಕ್ಪಾಲಕರನು
ಹರಿವಿರಿಂಚಾದಿಯಖಿಲದೇವತೆಗಳ
ಮೂರು ಸಂಧ್ಯೆಗಳಲಿ ವಂದಿಸಬೇಕು
ವಂದಿಸದಿರಲು ಹಾಳಹುದು ಬ್ರಾಹ್ಮ್ಯವದು
ಭಜಿಸಲು ಭಕ್ತಿ ಹಾಳಹುದದರಿಂದ
ಬ್ರಾಹ್ಮಣನಾಗಿರೆ ಭಕ್ತನೆಂತಹನು?
ಬ್ರಾಹ್ಮಣನಹನೆ ತಾ ಭಕ್ತನಾದವನು?

ಮಾವಿನ ಬೀಜವ ಮಹಿಯಲಿ ಬಿತ್ತೆ
ಬೇವಹುದೇ ಹೆಚ್ಚು ಕಥೆಗಳವೇಕೆ?
ಸಹಜಲಿಂಗೈಕ್ಯನಿಷ್ಠಾಯುಕ್ತಿ ಭಕ್ತಿ
ಬಹುದೇವತಾಸೇವೆ ಬ್ರಾಹ್ಮಣ ಪಥವು;
ಕುಲಸತಿಯಂತೆ ನಿಶ್ಚಲಯುಕ್ತಿ ಭಕ್ತಿ
ಬೆಲೆವೆಣ್ಣಿನಂತೆಯಾ ವಿಪ್ರಮಾರ್ಗ;
ಅದರಿಂದ ನಂದಿಮುಖ್ಯಸ್ಥಿತಿಗೊಲಿದು
ಆದಿದೇವನೆ ದೈವನೆನೆ ಮಂತ್ರವರಿತು
ತಾರುದ್ರವೇಷವ ತಳೆದಿಹ ಮೇಲೆ
ಅವರಂತೆ ನಾನಾಚರಿಸಬೇಡವೇನು?

ಮನೆದೈವವಾದ ಸರ್ವೇಶ್ವರನಿರಲು
ಬಲುದೈವವೋಲೈಸೆ ಧರ್ಮವೆ ಹೇಳು?
ಆದರಿದನು ಹೇಳುವುದರಿಂದಲೇನು
ಅದಕೆ ಸಂಶಯವೆ ಗೌತಮನ ದಧೀಚಿ
ವ್ಯಾಸನ ಶಾಪವು ವಹ್ನಿಪಾಲಾಗೆ
ಭೂಸುರರಿಗೆ ಭಕ್ತಿ ಹೊಂದುವುದೇನು?
ಉರವಣೆಯಿಂದ ಭಕ್ತ್ಯುದ್ರೇಕಗಳಲಿ
ಪರಮಾರ್ಥವುಳಿಯಲು ನುಡಿವನೆ ಹೊರತು
ಆ ಶ್ರುತಿಸ್ಮೃತಿ ಮೂಲವಾಗಿರದೊಂದು
ಭಂಡವಾದವಿದೆಂದು ಭಾವಿಸಬೇಡ.

ಕರ್ಮಮಾರ್ಗವದೆನಿಸದಲೆ ಬ್ರಾಹ್ಮ್ಯವದು
ನಿರ್ಮಲಶಿವಭಕ್ತಿನಿಷ್ಠಿತವಹುದೆ?
ಇಂಥ ಬ್ರಾಹ್ಮಣಮಾರ್ಗವನು ತಥ್ಯವೆಂದು
ಹಿಡಿದಾಡಿದರೆ ಉಪಯೋಗವೇನಿಲ್ಲ.
ಕಾಗೆಯು ಬೆಳೆಸಿದ ಕೋಗಿಲೆಮರಿಯು
ಕಾಗೆಯಂತಿರುವುದೆ ಕಾವುಕಾವೆನುತ?
ಎಲ್ಲಿಯ ತಾಯಿ ನೀವೆಲ್ಲಿಯ ತಂದೆ
ಎಲ್ಲಿಯ ಸಂಬಂಧ ಧರ್ಮೇತರರಿರ?
ಚನ್ನಯ್ಯನೇ ತಾತ ಚೇರಮ ತಂದೆ
ಚಿಕ್ಕಪ್ಪ ಕಕ್ಕಯ್ಯ ಮಗನು ನಾನೆಂದು

ಇಚ್ಛೆಯ ಸದ್ಭಕ್ತಿವಿಧಿಯೆನಗಿರಲು
ನನಗೇನು ತೊಂದರೆಯಿದುವೆ ನಿಶ್ಚಯವು.
ನಿಮಗಿಷ್ಟ ಬಂದಂತೆ ಇರಿ ನೀವು, ನಾನು
ನನ್ನಿಷ್ಟಕಿರುವೆನು ಹೆಚ್ಚು ಮಾತೇಕೆ?"
ಎಂದು ಸಹೋದರಿಯಹ ನಾಗಮಾಂಬೆ-
ಯೊಡನೆ ತಾನಿನ್ನಲ್ಲಿ ಇರಬಾರದೆನುತ
ಮತ್ತೆ ಬಂದನು ಫಣಿಹಾರಿಯ ಮನೆಗೆ.
ನರರಿದು ಚೋದ್ಯವೆನ್ನುತಲಲ್ಲಿಯಾಗ
ಮುಂಜಿಗೋಸುಗ ಮುಂಚೆ ತಾ ಬಂದಿದ್ದವನು
ಸುದತಿ ಮಾದಾಂಬೆಯ ಭ್ರಾತ ಸಜ್ಜನನು

ಪಾಂಡುರಂಗನ ಭಕ್ತಿಪರನು ಬಿಜ್ಜಳನ
ಭಂಡಾರಿ ಬಲದೇವದಂಡನಾಯಕನು
'ಶಿವಭಕ್ತನಿಗೆ ಲಗ್ನಗೈವೆನೆಹೊರತು
ಭವಿಗೀವೆ'ನೆಂಬ ಮುಂಚಿನ ಭಾಷೆ ನೆನೆದು
"ಇಂಥ ಭಕ್ತನಿಗೀಗಲೀಯದೆ ಮಗಳ-
ನಿನ್ನೆಂತಹವನಿಗೀವೆನು ನಾನಿ"ನ್ನೆನುತ
ಬಸವಕುಮಾರನ ಬಳಿಗೆ ತಾ ಹೋಗಿ
ಸಂತಸದಲಿ ಮಗಳನ್ನಿತ್ತು ನಮಿಸಿ
"ನನ್ನ ಮಗಳ ಕೊಂಡು ನನ್ನನು ರಕ್ಷಿ-
ಸೈ ಬಸವಣ್ಣ ಮಾಹೇಶ್ವರತಿಲಕ !"

ಎನುತ ಪ್ರಾರ್ಥನೆಗೈದು ಆ ಬಸವಯ್ಯ-
ನನುಮತದಲಿ ಪುರಮಭಿರಮ್ಯವೆನಿಸೆ

ನಕರತೋರಣಗಳ ಮಣಿತೋರಣಗಳ
ಮುಕುರತೋರಣಗಳ ಕಟ್ಟಲು ಹೇಳಿ
ಮೆರೆಯೆ ಬೀದಿಗಳಲಿ ಕಸ್ತೂರಿಯಲುಬು
ಮುಕ್ತಾಫಲಗಳ ರಂಗೋಲಿಯೊಪ್ಪಿರಲು
“ಬನ್ನಿ ಭಕ್ತರ ಕರೆತನ್ನಿ , ನೀವೆದುರು
ಗೊಂಡು ವೇಗದಲೋಡಿ ಬರಮಾಡಿ”ರೆನುತ
ಇಲ್ಲಿ ತಾ ಬರುವಯ್ಯಗಳಿಗೆ ನಮಿಸುತ

ಸಿಂಹಾಸನಸ್ಥರ ಮಾಡಿಯಾ ಕರ್ಮ–
ಸಂಹಾರಮೂರ್ತಿಗಳಡಿಗಳ ತೊಳೆದು
ಅವಿರಳ ನವ್ಯ ಪುಷ್ಪಾಂಜಲಿಯಿತ್ತು
ಪ್ರವಿಮಲಧೂಪದೀಪಗಳನರ್ಪಿಸುತ–
ಲಾಮಹಾತ್ಮರಿಗೆ ಸಾಷ್ಟಾಂಗದಲಾಕ್ಷ–
ಣದಲಿ ವಿಭೂತಿವೀಳ್ಯಗಳನರ್ಪಿಸುತ
ಕೋಲಾಟವನು ಪಾತ್ರ ಗೊಂಡ್ಲಿಪೇರಣಿಯ
ಕೇಳಿಕೆ ಜೋಕೆಯ ಲೀಲೆಯಿಂ ನಟಿಸೆ
ನಿಲ್ಲದೆ ‘ಚಾಂಗು ಭಲಾ’ಗಳ ಶಬ್ದ–
ವಾಯತಿಯಿಂದಾಗಸದಲಿ ಘೂರ್ಣಿಸಲು

ಇಂಪಾಗಿ ವೇಣುವೀಣಾವಾದ್ಯವಿತತಿ–
ಗಳುಲಿದು ಲೀಲೆಯಿಂದೊಮ್ಮೆಗೆ ಮೊರೆಯ–
ಲಾನಂದಗೀತೆಗಳನು ಹಾಡುವವರು;
ಪೂಣ್ದು ಶಂಕರಗೀತೆಗಳ ಹಾಡುವವರು;
ಜತಿಗೀತೆಗಳ ಮೇಲೆ ಚಪ್ಪಾಳೆಯಿಡುತ–
ಲತಿಶಯ ಶಿವಭಕ್ತಿಯಿಂದಾಡುವವರು;
ಆದಿಪುರಾತನಾಪಾದಿತ ಕೃತಿಗ–
ಳನು ವೇದಾರ್ಥದ ರೀತಿ ವಿವರಿಸುವವರು;
ಶಿವಮರುಳಿನ ರೀತಿ ಗುರಿಯಿಲ್ಲದಂತೆ
ಸಂಭ್ರಮದಲಿ ನಂದಿಯನ್ನಾಡುವವರು;

ನಮಿಸಿ ಶಿವಾನಂದದಲಿ ತಮ್ಮ ಮರೆತು
ನಿಶ್ಚಯಸುಖದಲಿ ನಿದ್ರಿಸುವವರು;
ನಿಖಿಲ ಮಾಹೇಶ್ವರನಿಕರವೆಯಿಂತು
ಸುಖಲೀಲೆಯಲಿ ತೇಲುತಿರೆ ಬಸವಯ್ಯ
ನಾಪಾದಜಲದಿಂದಲಭಿಷಿಕ್ತನಾಗಿ

ಒಪ್ಪೆ ದಿವ್ಯಾಂಬರಯುಗ್ಮವನುಟ್ಟು
ಭಸಿತವ ನೆರೆ ಪುಣ್ಯಮಯವಾಗಿ ಪೂಸಿ
ನೊಸಲ ತ್ರಿಪುಂಡ್ರವು ತಾನೊಪ್ಪೆ ಧರಿಸಿ
ಶಿಖೆಗೆ ಪ್ರಸಾದಸುಮಗಳನು ಮುಡಿದು
ಒಪ್ಪುವ ರುದ್ರಾಕ್ಷಭೂಷಗಳಿಟ್ಟು

ಸಾರದಿಂ ಲಿಂಗಪಸಾಯಿತವೆನುವ
ಹೆಸರನು ಪಡೆದ ಕಠಾರಿಯ ಕಟ್ಟಿ
ಆನಂದಬಾಷ್ಪವು ತುಳುಕುತಲುದುರೆ
ಮೈಯು ರೋಮಾಂಚ ಸಮ್ಮಿಳಿತದಲಲರೆ
"ಭಕ್ತರ ಪಾದುಕಾಪ್ರತತಿಗಳೆಮಗೆ
ಕಂಡವೆ"ನ್ನುತಲಡಿಗಡಿಗೆ ನಮಿಸುತ-
ಲೊಡೆಯರಿಗಡಿಗಳ ತೋರಲು ಹೆದರಿ
ಮಡಿಸಿ ಹಿಂದಕೆ ನೂಕಿ ಮಹಿಗಪ್ಪಳಿಸುತ
ತೊಡೆಗಳ ಮೊಳಕೈಯಲೂರಿ ಕೈಮುಗಿದು
ಏಳದಲೊಂದಿಷ್ಟು ಬಾಗಿಯುಪ್ಪೊಂಗಿ

ತನ್ನ ಮುನ್ನಿನ ಭಾವವನು ತಳೆದಂತೆ
ಅನಿಮಿಷನಾಗಿ ಕಣ್ಣಾರೆ ನೋಡುತ್ತ
ಭಕ್ತಿಶೃಂಗಾರವೇರ್ಪಡೆ ಸೂರೆಗೊಂಡ
ಭಕ್ತಿಕಳಾರ್ಣವ ಬಸವನ ನೋಡಿ
"ಇಂಥ ಧನ್ಯನು ನಾನಾದೆನು ಈಗ"ಲೆನುತ
ದಿಟ್ಟನು ಬಲದೇವದಂಡನಾಯಕನು
ತನ್ನ ಮಗಳು ಕಾಮಿನೀಜನತಿಲಕೆ-
ಯನುಪಮಶೃಂಗಾರವನಧಿ ಗಂಗಾಂಬೆ-
ಯನು ಕರೆತಂದು ಭಕ್ತರಿಗೆ ಮೊಕ್ಕಿಸುತ-
ಲೈತರೆ ಶುಭ ಶಕುನಗಳೆದುರಾಗೆ

ಶಿವಭಕ್ತಿಸತಿಯರು ಸೇನೆಯನಿಡಲು
ಶಿವಬಲವಗ್ಗಳಿಸಿದ ಮುಹೂರ್ತದಲಿ
ವೇದೋಕ್ತಶಿವಧರ್ಮವಿಧಿಯಿಂ ಬಸವಗೆ
ಪ್ರೇಮಸುತೆಯನಿತ್ತು ಮದುವೆ ಮಾಡಿದನು.
"ಇಂತಿಹುದಲ್ಲವೇನಾದಿಯ ತಿಳಿವು
ಇದು ಅದುಯೆನ್ನಲಾಗದುಯಿದೆ ಪಥವು
ಹರಭಕ್ತರ ಬಲವಿರಲು ಇಲ್ಲದಿರೆ

ಹರಿವಿರಿಂಚಿಗಳಿರುವರು ನಾಶವಹರು
ಎನೆ ಮಿಕ್ಕ ಗ್ರಹಚಂದ್ರತಾರಾಬಲಗಳ
ಹೆಚ್ಚು ಕಡಿಮೆಗಳ ಹೇಳುವುದೇನು?

ಕರುಣೆಯ ನೋಟವೆ ಲಗ್ನಗೈಯುವುದು
ವರಮುಹೂರ್ತವೆಯಾಶೀರ್ವಾದದ ಬಲವು
ಎನಲುಭಕ್ತರಕೃಪೆಯಿಹುದು ಬಸವಗೆ,
ಕೇಳರಿಯೆವು ಇಂಥ ಮದುವೆಯನೆಂದು"
ಎನಲು ಲೋಕವದೆಲ್ಲವಾಶ್ಚರ್ಯದಿಂದ
ವಿನುತಿಸಿ ಬಂದರು ಅವರಿವರೆನದೆ.

**ಕಪ್ಪಡಿಯ ಸಂಗಮಕ್ಕೆ**

ಎಲ್ಲ ಭಕ್ತಾಳಿಗೆ ಅಭಿಮತಾರ್ಥಗಳ
ಸಂತುಷ್ಟಿಯೆನೆ ಪರಿಚರ್ಯೆಯಗೈದು
ಸಾಷ್ಟಾಂಗದಲಿ ಬುವಿಗೆರಗುತ ಮೊಕ್ಕಿ
ಶಿಷ್ಟಭಕ್ತಾಳಿಗೆ ಕೈಗಳ ಮುಗಿದು

"ಮುಂದೆ ಕಪ್ಪಡಿಸಂಗಮೇಶ್ವರದಲ್ಲಿ
ಒಪ್ಪುವೆನ್ನಯ ಗುರುದೇವ ತಾನಿಹನು.
ಹೋಗುವೆನವನ ಶ್ರೀಚರಣವೋಲೈಸೆ
ಮಾಗುವೆನಧಿಕದಿ ನಿಮ್ಮ ಕೃಪೆಯಲಿ"
ಎನುತ ಸೋದರಿ ಮತ್ತೆ ಹೆಂಡತಿಯೊಡನೆ
ನಡೆದನಾಬಲದೇವ ಕಳಿಸೆ ವೇಗದಲಿ.
ಬಸವನಾ ಪುರವನು ದೂರದಿಂ ಕಂಡು
ತಪ್ಪದೆ ಗುರುಪದಧ್ಯಾನಾತ್ಮನಾಗಿ
ಗುರುವಿದ್ದ ಪುರ ದೃಷ್ಟಿಗೋಚರವಾಗೆ
ಧರೆಗೆ ಕೆಡೆದು ಮೊಕ್ಕುತಾಗಲ್ಲಿ ನಡೆದ.

ಕಣ್ಣಳತೆಯಲಿರೆ ನಡೆವಷ್ಟು ದೂರ–
ವಿಂತು ಯೋಜನಮಾತ್ರವೊಸೆದು ಮೊಕ್ಕುತ್ತ
'ಕುದುರಿತಲ್ಲವೆ ಮುನ್ನ ಗುರುಭಕ್ತಿ ಶಿವನಿ–
ಗಿದು ಎಂಥ ಹಿರಿದೀತನನ್ನು ವೀಕ್ಷಿಸಲು'
ಎಂದೆಲ್ಲರರ್ಥಿಯಿಂ ಕೀರ್ತಿಸುತಿರಲು
ನಡೆತಂದ ಪುರಕೆ ಗುರುಸ್ತವದೊಡನೆ;
ಆ ಪುರಮಹಿಮೆಯದೆಂತಹುದೆನುತ

ಬಣ್ಣಿಸೆ ಸಾಧ್ಯವೇ ಶೇಷಗು ಕೂಡ:
ಪುರದ ನದಿಗಳೆಲ್ಲ ಪುಣ್ಯತೀರ್ಥಗಳು
ಗುಹೆಗಳು ತಾವೆಲ್ಲ ಹರನಿವಾಸಗಳು

ಗಿರಿಗಳೆಲ್ಲವು ಹೇಮಗಿರಿಗಳಾರಯ್ಯೆ
ತರುಗಳಲ್ಲೆಲ್ಲ ರುದ್ರಾಕ್ಷ ತರುಗಳು
ವನಗಳೆಲ್ಲವು ಪುಷ್ಪವಾಟಿಗಳಲ್ಲಿ
ಕಣಿಗಳೆಲ್ಲವು ಭೂತಿಕಣಿಗಳೆ ಅಲ್ಲಿ
ಕೊಳಗಳೆಲ್ಲವು ಒಪ್ಪೆ ಜಲಜಾಕರಗಳು
ಇರುವ ಗೋವುಗಳೆಲ್ಲ ಕಾಮಧೇನುಗಳು
ಕರುಗಳೆಲ್ಲವು ನಂದಿಕರುಗಳಾ ಪುರದಿ
ಕೇರಿಗಳವು ರಂಗವಲ್ಲಿ ವೇದಿಕೆಯು
ನರರೆಲ್ಲ ಭಕ್ತರು ಚಿರಜೀವರೆಲ್ಲ
ಪರಿಕಿಸೆ ಕಾರಣ ಪುರುಷರೂಪಿಗಳು

ಸ್ತ್ರೀಯರೆಲ್ಲರು ಪರಮಪತಿವ್ರತೆಯರು
ನೆಲವೆಲ್ಲವವಿಮುಕ್ತನಿಧಿಯ ಸಮಾನ
ನುಡಿಗೆಳೆಲ್ಲವು ತತ್ವಭಾಷೆಯೆ, ಜನರ
ಉಲಿಯೆಲ್ಲ ಗೀತವಾದ್ಯೋತ್ಸವರವವು
ದುಷ್ಟನು ಪತಿತನು ಖಳನು ದುರ್ಜನನು
ಭ್ರಷ್ಟನು ಕ್ರೂರನು ಭಕ್ತಿವಿಹೀನ
ವಿಕಲನು ಕೊಂಡೆಯನಿವರನರಸಲು
ಔಷಧಕಾದರಿಲ್ಲೊಬ್ಬನೂರಲ್ಲಿ.
ಅಸಮಾನಲೀಲೆಯಿಂದಿಂತು ಪ್ರಸ್ತುತಿಸಿ
ಮೆರೆವ ಕಪ್ಪಡಿಸಂಗಮೇಶ್ವರಕೈದು

ಎಸೆಯುವ ಕೂಡಲಸಂಗಮೇಶ್ವರನ
ಗುಡಿಗೈದು ತನ್ನ ಭಕ್ತರೆದುರ್ಗೊಳುತಿರೆ
ಗುಡಿಯ ಮುಂದೆಯೆ ನಿಂತು ಗುರುಲಿಂಗಮೂರ್ತಿ-
ಯಡಿಗಳಿಗಾಗ ಸಾಷ್ಟಾಂಗದಿಂ ನಮಿಸಿ
ವೇದಪುರಾಣಾರ್ಥವಿಮಲಸೂಕ್ತಿಗಳ
ನಾದವ ಪೂರಿಸಿ ಪ್ರಸ್ತುತಿಸುತಿರೆ

## ಸಂಗಯ್ಯ ಪ್ರತ್ಯಕ್ಷನಾದದ್ದು

ಮುನ್ನಿನ ವೇಷದಿಂದಲಿ ಬಂದು ಸ್ಫಟಿಕ-
ಸ್ಪಷ್ಟದಿಂದಲಿ ಸಂಗಮಯದೇವ ದೇವ

ಗುಡಿಯ ಹೊರಗೆ ಕಾಣೆ ಗುರುಲಿಂಗಮೂರ್ತಿ-
ಯನು ಕಂಡು ಸಂಭ್ರಮದಿಂದ ಬಸವನು

ಹಿರಿದಹ ಪ್ರಮದವು ಭೀತಿಯು ಭಕ್ತಿ-
ಗಳು ತಾವು ತನ್ನಲ್ಲಿ ಘನವಾಗುತಿರಲು
ಮತ್ತಡಿಗಡಿಗೆ ಸಾಷ್ಟಾಂಗದಿ ನಮಿಸಿ
ಹೊಸಭಕ್ತಿ ವ್ಯಾಪಿಸುತಿರಲಾ ಗುರುವಿನ
ಪದಗಳನಾನಂದಜಲದಲಿ ತೊಳೆದು
ಗುರುಪೂಜೆಯಲಿ ತನ್ನನರ್ಪಿಸಿಕೊಂಡು
ಬಿದ್ದಿರಲತಿದಯಾಭಾವಾಮೃತವಹ
ಕಡೆಗಣ್ಣಿಂದೆರಗಿದ ಮಗನ ಮೇಲೆತ್ತಿ
ಅಡಿಗಡಿಗೊಲವಿಂದಲಪ್ಪಿಕೊಳುತಿರೆ
ಮುಂದಕೆ ನಮಿಸುತ ಮುಗಿದ ಕೈಗಳಲಿ

ನೆಲೆಗೊಂಡ ತತ್ಸ್ವರನೇತ್ರಾಂಗವಿಕ್ರಿ-
ಯಗಳೆ ಭೂಷಣವಾಗೆ ಪ್ರೇಮದಿಂದಿರಲು
ಬಸವಕುಮಾರನ ಭಕ್ತಿಗೆ ಮೆಚ್ಚಿ
ನಿಜ ಪ್ರಸಾದವನಾಗಲೊಸಗಿಯಿಂತೆಂದ:
"ಬಂದು ಹೋಗುವ ಜನರಿಂದೆಲ್ಲ ನಿನ್ನ
ಸಚ್ಚರಿತವ ಕೇಳಿ ಸಂತಸಗೊಂಡೆ
ಗತಕಾಲವರ್ತನೆಯಂತೆ ಸದ್ಭಕ್ತಿ
ಮಿತಿದಪ್ಪಿ ನಡೆಯದಿರ್ರೈ ಬಸವಣ್ಣ
ಶೂಲಭಕ್ತಾಳಿ ದುಶ್ಶೀಲ ಗಣಿಸದೆ
ಮೇಲೆಂದ ಬಗೆಯುತಿರ್ರೈ ಬಸವಣ್ಣ

ಶತ್ರುಗಳೆನೆ ಲಿಂಗಸಹಿತರಾಗಿರಲು
ಮಿತ್ರರಂತೆಯೆ ಕಾಣ್ಯೆ ನೀ ಬಸವಣ್ಣ
ಹಿಡಿದ ವ್ರತಗಳನು ಪ್ರಾಣದ ಮೇಲೆ
ಮೆಟ್ಟದರೂ ಬಿಡದಿರು ಬಸವಣ್ಣ
ಬೇರೆ ಭಕ್ತರ ಜಾತಿಯನರಸದಿಹುದು
ಮೀರಿದ ಪಥವು ಕೇಳೈ ಬಸವಣ್ಣ
ಚಿತ್ತಜಾಂತಕ ಭಕ್ತಿಯನು ಕೆಡೆ ನುಡಿವ
ಖಳರನು ಕೆಡೆ ಹೊಡೆಯೈ ಬಸವಣ್ಣ

ವೇದಶಾಸ್ತ್ರಾರ್ಥಸಂಪಾದಿತ ಭಕ್ತಿ-
ಯನ್ನಿಳೆಯಲಿ ಬೆಳಗಿಸು ಬಸವಣ್ಣ

ಬೈದರೂ, ಭಕ್ತರು ಹೊಡೆದರು, ಕಾಲ-
ಲೊದೆದರು, ಶರಣೆನ್ನುತಿರು ಬಸವಣ್ಣ
ತಪ್ಪ ಕಾಣೆದಿರಿದರಲಿ ಪರಸ್ತ್ರೀಯ
ಮೇಲೆ ಕಣ್ಣನು ಹಾಕದಿರು ಬಸವಣ್ಣ
ಸಾಧ್ಯದ ಭಕ್ತಪ್ರಸಾದೇತರವನ-
ಮೇಧ್ಯದಂತೆಯೆ ಕಾಣುತಿರು ಬಸವಣ್ಣ
ನಿಶ್ಚಯ ಭಕ್ತಿಗೆ ನಿರ್ವಂಚಕತೆಯೆ
ಅತಿಶಯ ಗುಣವು ಕಾಣೈ ಬಸವಣ್ಣ
ಎಂದೆಂದು ಜಂಗಮವಾನೆಂದು ಕಾಣು-
ವುದು ಪ್ರಸಾದವ ಕೊಳ್ಳುವುದು ಬಸವಣ್ಣ

ನಾಲಿಗೆಗಿಂಪಾಗಿ ಶೂಲಿಭಕ್ತರನು
ಮೇಲಾಗಿ ನುತಿಯಿಸುತಿರು ಬಸವಣ್ಣ
ಏನು ಬೇಕಾದರೂ ಎಡರಾಗೆ ನೆನೆದು
ನೀನೆಮ್ಮ ಮರೆಯದಿರೈ ಬಸವಣ್ಣ
ಮೋಸಗೈವ ಶಿವನ ಭಾಷೆ ಮರೆಯದೆ
ಸತ್ಯವ ನೀ ಬಿಡದಿರು ಬಸವಣ್ಣ!"
ಎನೆ ಮೃದುಮಧುರಾಂಚಿತಾಲಾಪಗಳನು
ತಾನು ಪ್ರಬೋಧಿಸಿಯವನಪ್ಪಿಕೊಂಡು
ಮಗನಿಂದ ನಮಿಸಿಕೊಳ್ಳುತ ಗುರುಮೂರ್ತಿ
ಗುಡಿಸೇರಿ ಮುನ್ನಿನಂತಿರಲು ಮುನ್ನಿನೆಡೆ

ಯೆಲ್ಲರು ಅತಿವಿಸ್ಮಯಾಕ್ರಾಂತರಾಗಿ
ಇಂದುಮೌಳಿಯೆ ತಾನು ಮರ್ತ್ಯನೇ ಇವನು?
ಹಿಂದೆಯೀ ಗುಡಿಯಲ್ಲಿ ಈ ತಪಸ್ವೀಂದ್ರ-
ನನು ಕಂಡರಾರಾದರಿಹರೇನು? ಮುನ್ನ
ಬಸವನು ತನಗೆಷ್ಟು ಭಕ್ತನೋ ಏನೋ
ಎಸಕದಿಂದಲಿ ಸಂಗಮೇಶನು ತಾನೆ
ಬಂದು ತಾಪಸಿಕ್ರಿಯೆಯನ್ನು ಬೋಧಿಸುತ
ಸೇರಿಯೂ ಗುಡಿಯಲಿ ತಾನಡಗಿದನು.

ಅತಿ ಕೃತಕೃತ್ಯರಾದೆವು ಇಂತು ನಾವು
ಸ್ತುತಿಯಿಸೆ ಕಾಣಲು ಸಿಗುವನೇ ಇಂದು

“ಭಾಪುರೇ, ಎಮ್ಮಣ್ಣ, ಬಸವಕುಮಾರ
ಭಾಪುರೇ ಎಮ್ಮಯ್ಯ ಭಕ್ತಿವರ್ಧನನೆ
ಒಳ್ಳಿತ್ತೈ ಬಸವಣ್ಣ ನಂದೀಶಮೂರ್ತಿ
ಒಳ್ಳಿತ್ತೈ ಬಸವಯ್ಯ ಮೂಲೋಕವಂದ್ಯ
ಇಂತಿರಬೇಕಯ್ಯ ಹುಟ್ಟಿದ ಫಲವು
ಎಂತೆಯೊ ಇರುವೆಮ್ಮಿಂದೇನುಪಯೋಗ?
ತನಯನನೊಪ್ಪಿಸಿ ವಸ್ತ್ರವನಿತ್ತು
ಸತಿಯ ನಿಯೋಗಿಸಿ ಜನಕನ ಕೊಂದು
ಪಡೆದರಾದ್ಯರು ಮುನ್ನ ಬಸವನಿಂತಿಂದು
ಪಡಯನೆ ಶಿವಕೃಪೆ ಬಟ್ಟಬಯಲಲಿ”

ಎಂದೆಲ್ಲ ಜನಗಳು ಕೀರ್ತಿಸುತಿರಲು
ಅನುರಾಗ ಚಿತ್ತದಿಂದಾ ಬಸವಯ್ಯ
ಕೂಡಲಿ ಸಂಗಯ್ಯ ಗುಡಿಮಂಟಪದಲಿ
ಕೂಡಿ ಭಕ್ತಾವಳಿಗೋಲಗವೀಯೆ
ಸಾರಾಂಚಿತೋಕ್ತಿಗಳಿಂದ ಸ್ತುತಿಸುತ
ಪೂರಿತದಲಿ ನಾದಪೂಜೆಗೈಯುತ್ತ
ಮೂರು ಸಂಧ್ಯೆಯು ಗುರುಮೂರ್ತಿಯ ಭಜಿಸಿ
ಒಪ್ಪುತ ಕಾಲವ ಕಳೆಯುತಲಿದ್ದ.
ಬಸವಪುರಾಣಾರ್ಥಪರಿಚಯಸ್ಫೀತ
ಬಸವಪುರಾಣಾರ್ಥಪರಿಮಳಾಘ್ರಾತ

ಬಸವನಾಮಾವಳಿ ಪರಮಾನುರಕ್ತ
ಬಸವನಾಮಾವಳಿ ಪಾಠಕಾಸಕ್ತ
ಬಸವಪಾದಾಂಭೋಜ ಪರಿಮಳಭೃಂಗ
ಬಸವಪಾದಾಂಭೋಜ ಭರಿತೋತ್ತಮಾಂಗ
ಬಸವಕಾರುಣ್ಯ ಸೌಭಾಗ್ಯೈಕಪತಗ್ರ
ಬಸವಕಾರುಣ್ಯ ಸಂಪತ್ಕಳಾಪಾತ್ರ
ಬಸವಸನ್ನಿಹಿತ ಸದ್ಭಕ್ತಾತ್ಮಸಖ್ಯ
ಬಸವಸನ್ನಿಹಿತ ಸದ್ಭಾವಸಂಗಾಖ್ಯ

ಇದುವಸಂಖ್ಯಾತ ಮಾಹೇಶ್ವರದಿವ್ಯ
ಪದಪದ್ಮಸೌರಭ ಭ್ರಮರಾಯಮಾಣ ೧೨೬೦

ಜಂಗಮಲಿಂಗ ಪ್ರಸಾದೋಪಭೋಗ
ಸಂಗತ ಸುಖಸುಧಾಶರಧಿನಿಮಗ್ನ
ಸುಕೃತಾತ್ಮ ಪಾಲಕುರಿಕಿ ಸೋಮನಾಥ
ಸುಕವಿಪ್ರಣೀತವಾಗಧಿಕ ಶೋಭಿಸುವ
ಚರಲಿಂಗಘನ ಕರಸ್ಥಲಿ ವಿಶ್ವನಾಥ
ವರಕೃಪಾಂಚಿತಕವಿತ್ವಸ್ಫೂರ್ತಿಯಿಂದ
ಮೆರೆವ ಬಸವಪುರಾಣದ ಕಥೆಯಲ್ಲಿ
ಅನುಪಮದಲಿ ಪ್ರಥಮಾಶ್ವಾಸವಾಯ್ತು ೧೨೬೮

## ದ್ವಿತೀಯಾಶ್ವಾಸ

ಶ್ರೀಲಿಂಗ ಮಥನವಿಲೋಲ ಕೇಲೀ ವಿ–
ಶಾಲಸೌಖ್ಯಾನಂದ, ಸಂಗಯಾಮಾತ್ಯ!
ತಾನಲ್ಲಿ ಆಗ ಕಲ್ಯಾಣನಗರದ–
ಲತಿಶಯ ಶಿವಭಕ್ತಿಯೆಲ್ಲೆಯಂತಿರುವ
ಭಂಡಾರಿ ಬಲದೇವ ದಂಡನಾಯಕನು
ದಂಡಿ ಬಸವನಿಗೆ ತನಯೆಯನೀಯೆ
ಪ್ರಮಥರೆಲ್ಲರು ಮೆಚ್ಚಿ ಕರೆಕಳಿಸಿದೊಲು
ಕ್ರಮದಲಿ ಪ್ರಮಥಲೋಕಕ್ಕೆ ತಾನೆಯ್ದೆ
ಬಲದೇವ ಮಂತ್ರಿಯಾಪ್ತರ ಬಂಧು ಜನರ
ಹೇಳಿ ಕಳುಹಿಸಿಯಾ ಬಿಜ್ಜಳನೆಂದ:

**ಬಸವನಿಗೆ ದಂಡನಾಯಕ ಪದವಿ**

"ಈತನ ವಂಶದ ಯಾರಾದರೂನು
ಇವನ ನಿಯೋಗವನುಳಿಸುವನಿಹನೆ?"
ಎನ್ನಲು "ಇಹನು ಮಹಾರಾಜ, ಅವನ
ತನಯೆಯ ಪ್ರಾಣೇಶ ವಿನಯೋಕ್ತಿಪರನು
ಈ ರಾಜ್ಯವೆಲ್ಲವ ನಿಲ್ಲಿಸಬಲ್ಲ
ದೂರೀಕೃತಾಘನು ದೋರ್ಬಲಾಧಿಕನು
ಕೇಳಖಿಲಕಳಾಪ್ರವೀಣನೆಂತೆನಲು
ಜನರೆಲ್ಲವರಿಯಲು ಸಂಗಮೇಶ್ವರನ
ಸುಪ್ರಸನ್ನತೆ ಪಡದವನಾಗಿ ತಾನು
ನಿನ್ನ ಪ್ರಧಾನಿಯಾಗಲು ತಕ್ಕ"ವನೆನ–

ಲೀ ಜಗವೆಲ್ಲವು ಕೈಸೇರಿದಂತೆ
ಬಿಜ್ಜಳನಧಿಕದಿ ಪ್ರೀತಾತ್ಮನಾಗಿ
ತನ್ನಯ ಹಿರಿಯ ಪ್ರಧಾನರ ಹಿತರ
ತನ್ನೊಂದು ಭದ್ರೇಭವನ್ನಮಾತ್ಯರನು

ಬಸವನ ಕರೆತರೆ ಕಳುಹಿಸಲವರು
ಎಸಕದಿಂದಲಿ ಸಂಗಮೇಶ್ವರಕೈದು
ಅಲ್ಲಿ ಬಸವನಸಮಾನನ ಕಂಡು
ನೆಲದಿ ಕೆಡೆದು ಮೊಕ್ಕಿ ತಾವೆಂದರಿಂತು:
"ನಾಕೋಪಭೋಗ ಪುನರ್ಭವಾದಿಗಳು
ನಿನಗೊಂದು ಲೆಕ್ಕವೇ ತಾನದಲ್ಲದಲೆ

ಶಿವಭಕ್ತಿಸಾರಾನುಭವಭವ್ಯಸುಖಿಗೆ
ಅವಶಗಳಾಗದ ರುಚ್ಯಗಳೇನು?
ಆದರೂ ಲೋಕಹಿತಾರ್ಥನು ನೀನು
ನಮ್ಮ ಪ್ರಾರ್ಥನೆಯನು ಕೈಗೊಳ್ಳಬೇಕು.
ಬಿಜ್ಜಳಕ್ಷೋಣೀಶ ಪ್ರಿಯವ ಸಲ್ಲಿಸಲು
ಈ ಜಗತೀತಲವಾಳನೆ ಹೇಳು
ಮಂತ್ರಿಯ ಪಟ್ಟಕೆ, ಮಂಡಲಗಳಿಗೆ
ತಂತ್ರಗಳಿಗೆ, ನಿಜಾಪ್ತಜನಕೆ, ಮೂಲ
ಭಂಡಾರವದಕೆ ಭೂಪತಿಯ ರಾಜ್ಯಕ್ಕೆ
ಇನ್ನೇನು ನೀನಲ್ಲದೊಡೆಯರಿರುವರೆ?

ಆತನು ಇಡುವನ್ನಕರ್ಹನೆ ಹೊರತು
ಕ್ಷಿತಿಗೆಲ್ಲ ನೀನೆಯೆ ಪತಿಯು ನಿಶ್ಚಯದಿ
ಬಿಜಯಗೈ"ಯೆಂದಿಂತು ಬಿನ್ನಹಗೈಯ-
ಲಲ್ಲಿ ತಾ ಭಕ್ತಿಹಿತಾರ್ಥವ ನೆನೆದು
ಎಲ್ಲರೋಲೈಸಲು "ಅಂತಾಗ"ಲೆನುತ
ಕಂದರ್ಪಹರಭಕ್ತಗಣಗಳನೆಲ್ಲ
ನಮಿಸಿ ತತ್ಕಾರುಣ್ಯಜಲದಿ ತೇಲಾಡಿ-
ಯಲರುತ ಹೊರವಂಟನನಿತರಲಿಲ್ಲಿ

## ಕಲ್ಯಾಣಕ್ಕೆ ಬಂದುದು

'ಅದೊ ಬಂದನಿದೊ ಬಂದ'ನೆನೆ ಕೇಳಿ ಮುದಿತ
ಹೃದಯದಿಂ ಬಿಜ್ಜಳಸೆದುರ್ಗೊಳಲೆಂದು

ಅಳವಡಲೀರಾರುಯೋಜನವಾದ
ಉನ್ನತ ಕಲ್ಯಾಣಕಟಕವೆಲ್ಲವನು
ಶ್ರೀ ರಮ್ಯವೆನಲಲಂಕಾರಿಸೆ ವಿಧಿಸಿ
ಭೂರಮಣನು ತಾ ಶೃಂಗಾರವಗೈದು

ಮಂಡಲಾಧೀಶ ಸಾಮಂತ ಪ್ರಧಾನ
ದಂಡಾಧಿನಾಥ ಮಾತಂಗತುರಂಗ
ಪರಿವಾರಸಹಿತದಿ ಪರಮಹರ್ಷದಲಿ
ಬರೆ ಪದಹತಿಯಿಂದ ಧರಣಿ ಗ್ರಕ್ಕದಿರೆ
ವಿವಿಧವಾದ್ಯಧ್ವನಿ ದಿವಿಯನು ತೀವೆ
ಅವನೀತಲೇಶ್ವರನಂತಾಗ ಕಂಡ

ಬಸವಕುಮಾರ ಸದ್ಭಕ್ತಿಶೃಂಗಾರ-
ನಸದೃಶಾಕಾರ ತತ್ವಾರ್ಥವಿಚಾರ-
ನೇಕಾಂಗವೀರ ದೇಹೇಂದ್ರಿಯದೂರ
ಲೋಕನಿಸ್ತಾರನಲೋಕಾನುಸಾರ
ಜಂಗಮವ್ಯಾಪಾರ ಸಜ್ಜನಾಧಾರ
ಲಿಂಗ ಗಂಭೀರ ಗತಾಂಗವಿಕಾರ
ವಿಮಲಶಿವಾಚಾರ ತ್ರಿಮಲಧಿಕ್ಕಾರ .
ಅಮಿತ ಮಹಾಚಾರನಚಲಿತ ವೀರ
ವಿರಹಿತಸಂಸಾರ ವೀರಾವತಾರ
ಪರಿಹೃತಾಹಂಕಾರ ಭಕ್ತಿವಿಹಾರ

ಶಿವ ಭಕ್ತಿಸಾರ ವಿಶಿಷ್ಟಪ್ರಕಾರ
ಅವಿನಾಶ ಸಂಸ್ಕಾರನತುಲಿತ ಶೂರ
ವಿಪುಲಕ್ಷಮಾಗಾರ ವಿನಯಪ್ರಚಾರ
ಸುಪಥೈಕವಿಸ್ತಾರ ಶುದ್ಧಶರೀರ
ಕುಜನವಿದಾರ ಸದ್ಗುಣಮಣಿಹಾರ
ವೃಜಿನತರುಕುಠಾರ ವಿಹಿತೋಪಕಾರ
ಅತಿಶಯಾಲಂಕಾರನಘಸಮುತ್ಸಾರ
ಹಿತಹೃದ್ಗತೋಂಕಾರ ನತಸಮುದ್ಧಾರ
ಶ್ರುತಪರಿಚಾರ ನಿರ್ಮೋಹಾಂಧಕಾರ
ಕೃತರಿಪುಸಂಹಾರ ಧೃತನಯಾಚಾರ

ಚಾರು ನಿರ್ಮಲಕೀರ್ತಿ ಸತ್ಯಪ್ರಮೂರ್ತಿ
ಸಾರಸದ್ಗುಣವರ್ತಿ ಶಾಶ್ವತಮೂರ್ತಿ-
ಯನು ಕಂಡು ಪಾದಚಾರಿಯ ರೀತಿ ಬಂದು
ಘನತರ ಪ್ರಿಯಪೂರ್ವಕವೆನಲು ಆಗ
ಸಮುಚಿತಸತ್ಕಾರ ಸಂತುಷ್ಟಿಗೈದು
ಸಮದಾಂಧಗಂಧಗಜಂಗಳೇಳ್ನೂರು

ಹನ್ನೆರಡಹ ಲಕ್ಷ ಬಲವತ್ಪದಾತಿ
ವೀರ ಭಂಡಾರಿಗಳೀರಾರು ಜನರ
ಮೇಟಿತನವನಿಚ್ಛೆಯಿಂದಿತ್ತು ತನ್ನ

ಅಖಿಲರಾಜ್ಯಕ್ಕೆಲ್ಲವರ್ಹನ ಮಾಡಿ
ಸುಖಲೀಲೆಯಿಂ ಬಿಜ್ಜಳಕ್ಷೋಣೀಶ್ವರನು
ಒಡಗೊಂಡು ಬಸವಣ್ಣ ದಂಡನಾಯಕನ–
ನಾ ನಿಯೋಗವು ಓಲೈಸುತ್ತ ಬರುತಿರೆ
ಪುಣ್ಯಪಣ್ಯಾಂಗನೆಯರು ಬೀದಿಗಳಲಿ
ಪುಣ್ಯಾತ್ಮ ಬಸವ ಪ್ರಭುವ ನೋಡಲೆಂದು
'ನೋಡಲು ಬರುವೆನು ಸುದತಿನಾ'ನೆನುತ
'ಕೌತುಕ ಕೆಡಿಸದೆ ಬೇಗ ಬಾರೆ'ನುತ
'ಗಾಳಿಯ ತೊಂದರೆ! ಮರಳು ನೀ'ನೆನುತ
'ಯಾಕಮ್ಮ, ಬಂದರೆ ನಿನಗೇನು' ಎನುತ

'ಯೋಚಿಸಲೊಬ್ಬಳೆ ಹೋಗು ನೀ'ನೆನುತ
'ನಿನ್ನ ಕಾಲಲಿ ನಡೆವೆನೆ ಕಾಂತೆ'ಯೆನುತ
'ಪತಿ ಕಾಣೆ ಸಹಿಸುವನೇ ಸತಿ'ಯೆನುತ
'ಪತಿಯು ಕಂಡರೆ ಕೋಪಿಸುವನು ತಾ'ನೆನುತ
'ಬಸವನ ನೋಡದೆ ಸತಿ ಹೋಗೆ'ನೆನುತ
'ಮುಸುಕಿಟ್ಟು ಬೇಗ ಬಾರೆಮ್ಮೊಡ'ನೆನುತ
'ಜೊತೆ ಕರೆದೊಯ್ದರೇ ದೋಷವೆ'ಯೆನುತ
'ಗುಂಪಲಿ ಸೇರಿಯೆ ಮುಗ್ಧೆ ನೀನೆ'ನುತ
'ದಿಕ್ಕನು ನೋಡದೆ ಬೇಗ ಬಾ'ರೆನುತ
'ಎಲ್ಲಿ ತೊಂದರೆಯಮ್ಮ ಸತಿನಿನ'ಗೆನುತ

'ಮಾನಿನಿ, ಬಸವನ ಮಹಿಮೆಯಿದೆ'ನುತ
'ಮಾಣದೆ ಭಕ್ತರ ಮತ್ತೆ ನೋಡೆ'ನುತ
'ಇಂಥ ಸಂದಣಿಯುಂಟೆ ಎಂದಾದ'ರೆನುತ
'ದಟ್ಟಾಡದಲೆ ಬೇಗ ತರುಣಿ ಬಾ'ರೆನುತ
'ಕಂಡೆಯಾ ಬಸವನ ತರಳಾಯತಾಕ್ಷಿ'
'ಕಂಡನೇ ಮೋಕ್ಷವ ಕಂಡಂತೆ'ಯೆನುತ
'ಕಂಡೆಯಾ, ಹೋಗೋಣ ಸುಕುಮಾರಿ'ಯೆನುತ
'ನೋಡದೆ ಹೋಗೆ ಸೊಗಸುವುದೆ'ಯೆನುತ

ಬರುವವರನು ನೋಡುವವರನು ಕಟ್ಟ-
ನೀಯುವವರ ನೋಡಿ ಹೋಗುತಿರುವವರು

ಹೊರೆ ಹೊರೆ ತಂದು ವಿಭೂತಿವೀಳ್ಯಗಳ-
ನಧಿಕದಿ ಬಸವಯ್ಯಗರ್ಪಿಸುವವರು
ಸತಿಯರು ವಿವಿಧಪುಷ್ಪಾಂಜಲಿಯಿತ್ತು
ಮಂಗಳಾರತಿಯೆತ್ತಿ ಮಹಿಯಲ್ಲಿ ಮೊಕ್ಕಿ
'ಸ್ವಸ್ತಿ ದೀರ್ಘಾಯುವು ಶಂಕರ'ಯೆನುತ
ಪ್ರಸ್ತುತಿ ಹರಕೆಯ ಪಸರಿಸುವವರು
ಹೃದ್ಯದಿಂದಲಿ ಗೀತಗದ್ಯಪದ್ಯಗಳ
ಚೋದ್ಯತರವೆನಲು ಸ್ತುತಿಯಿಸುವವರು
ಬಾರಿಬಾರಿಗೆ ಕೈವಾರಗಳನು ಗೈಯು-
ವವರಲ್ಲಿ ನಲವಿಂದ ತಾರಾಡುವವರು

ಕಲಕಲದಿಂದ ದೂರಾಗಿ ಹರ್ಮ್ಯಾಗ್ರ-
ಗಳ ಮೇಲೆ ತಾವೇರಿ ದರ್ಶಿಸುವವರು
ಆಗೊಂದೆಡೆಗೆ ವಿಮುಗ್ಧಾಂಗನೆ ಬಳಿಯ
ಸುಂದರಿಯರಿಗಿಂತೆಂದಳು ಸನ್ನೆಮಾಡಿ:
"ಸೂಚಿಸೆ ವಿವಿಧವಾದ್ಯಂಗಳು ತಮ್ಮ-
ಟೆಗಳವು ನಿಸ್ಸಹಣಂಗಳು ಮೊರೆಯ-
ಲಾಗಾಗ ಚಾಗು ಭಲಾಯೆಂದು ನಡೆವ
ನಂದಿಕೋಲವರ ಮುಂದಣ ಗುಂಗಿನ ಜನ-
ಗಳಿಗೆಲ್ಲ ಸಾಗರವೇ ಎಲ್ಲೆಯಾಯ್ತು.
ಕಪ್ಪು ಹಯಾರೂಢವಹ ವೀರಗಣವು

ಒಪ್ಪದಿಂದಾ ಸಂದಣಿಯ ನಟ್ಟನಡುವೆ
ವಿವಿಧವಿಧಂಗಳಲಕ್ಕಜವೆನಿಸೆ
ಕೂಡಲಿ ತ್ರಿಪುರಾಂತಕನನೋಲೈಸುವರು
ಭರದಿಂದ ಕೋಲಾಟವಾಡುವ ಜನರು
ಜೊತೆಗೂಡಿ ಹೊನ್ನಗಿರ್ಗಿಟೆ ಕೇಳಿಕೆಗಳ-
ನಾಡುವ ಸೊನ್ನಲಿಗೆಯ ಪುರದವರು
ಸನಿಹದಲಾಡುವ ಪೇರಣಿವಿಧವು
ಸೌರಾಷ್ಟ್ರನಾಯಕಸಂಪ್ರದಾಯದಲಿ
ಭರದಲಿ ಪ್ರತಿಜೋಕೆಯಾಡುವ ಜನರು
ಕೂಡಲಿ ಸಂಗಯ್ಯಗೊಲಿವ ನರ್ತಕರು

ಹಾಡುತ್ತ ಮನೆ ಮೇಲೆ ಗೆಜ್ಜೆಗತಿಗಳ-
ನಾಡುವವರು ರಾಯನೋಲೈಸುವವರು
ಜೊತೆಗೂಡಿ ನಡೆವ ತುರಂಗಸಂಘಗಳ
ಹಿಂಗಡೆ ಬಿಜ್ಜಳ ಮುಂಗಡೆಯೊಪ್ಪೆ
ವರಗಜಾರೂಢರಾಗುತಲೈದುತಿರುವ
ಪರಮ ಮಾಹೇಶ್ವರಪ್ರಕರದ ನಡುವೆ
ಶಿವಭಕ್ತಜನರ ಮೇಲಿನ ದೃಷ್ಟಿಯಲದೆ
ಸವಿನಯಸಂಭ್ರಮಸಕ್ತಿಯಿಂ ನಮಿಸು-
ವಲಘುಸನ್ಮಣಿಕಲಾಪಾಂಶುಗಳಿಂದ
ಹೊಳೆವ ಮೌಕ್ತಿಕ ಛತ್ರದಡಿಯ ನೆರಳಲಿ

ನತಮಂತ್ರಿಜನ ಶಿರೋನಾಯಕರತ್ನ
ವಿತತಿಗೂಡಿದ ಪದಾನ್ವಿತನಖಗಳನು
ನೆಲದಿ ತಳಿರ್ದ ಭದ್ರೇಭಗಳೇರಿ
ಶೋಭಿಸುತಿದ್ಧಂತಹಾ ಮಹಾಮಹನ
ಕಾರುಣ್ಯಮೂರ್ತಿ ವಿಕ್ರಮ ಚಕ್ರವರ್ತಿ
ಚಾರುನಿರ್ಮಲಕೀರ್ತಿ ಸತ್ಯಪ್ರಪೂರ್ತಿ
ಕಲಿಯುಗರುದ್ರ ಸತ್ಕರುಣಾಸಮುದ್ರ
ವಿಲಸನಭದ್ರ ಸದ್ವಿನಯನಿರ್ಣಿದ್ರ
ಧೀರ ಸದ್ಭಕ್ತಿ ಶೃಂಗಾರನೇಕಾಂಗ
ವೀರ ಬಸವಕುಮಾರನನು ನೋಡಿದಿರೆ

ಎನಲೆಲ್ಲರೂ ಕಂಡು ತಾವಂತು ನಮಿಸಿ
ವನಿತೆಗಿನ್ನೊಬ್ಬ ವನಿತೆಯೆಂದಳಿಂತು :
"ನಳಿನಾಕ್ಷಿಯಾತನೇ ನಂದೀಶಮೂರ್ತಿ
ಯುವತಿ, ತಾನೀತ ತ್ರಿಭುವನಪಾವನನು
ವನಿತೆಯೀತನೆ ಬಾಗೆವಾಡಿ ಮಾದವ್ವೆ
ತಾ ನೋಂತು ಪಡೆದಿಹ ಅಣುಗಿನ ಪುತ್ರ
ಸುದತಿ, ಈತನೆ ನಮ್ಮ ಬಲದೇವಮಂತ್ರಿ
ಕಡುಗೂರ್ತುಯಿತ್ತಿಹ ಕನ್ಯೆಯ ಗಂಡ
ಸನ್ನುತಾಂಗಿಯೆ, ಈತ ಸಂಗಯ್ಯದೇವ-
ನನು ಮೊನ್ನೆ ನುಡಿಸಿದ ಮೂಲೋಕನುತನು.

ಮಡದಿ, ಈತನೆ ನಮ್ಮ ಮನುಜೇಶನಿಂದ
ಕಡುವೊಪ್ಪೆ ಮನ್ನಣೆಯನು ಪಡೆದವನು

ಕಣ್ಣಿಗೆ ಹಬ್ಬವೀತನನು ನೋಡಿದರೆ
ಭರದಿ ಜಿಹ್ವೆಗಳ ಹಬ್ಬವು ಹೊಗಳಿದರೆ
ಇಂತಹ ಧನ್ಯರಾದೆವೆ ನಾವು ಇಂದು
ಹುಟ್ಟಿದ ಸಫಲತೆಯಾಯ್ತೆಮಗೀಗ"
ಎಂದಿಂತು ಹೇಳುತ್ತ ಕೇಳುತ್ತ ಜನರು
ವಿನುತಿಸುತಿರೆ ಪುರಿಯನು ಹೊಗುವೆಡೆಗೆ
ಜಗತೀತಲೇಶನು ನಗರೋಪಕಂಠ-
ದಲ್ಲಿಯೂ ಬಸವಯ್ಯನನು ಜೊತೆಗೊಂಡು

ಪರಿಮಿತಭಟಮಂತ್ರಿಪರಿವೃತನಾಗಿ
ಐತಂದು ಭವನಾಶ್ರಯಾಭ್ಯಂತರದಲಿ
ಮುನ್ನಿದ್ದ ಮಂತ್ರಿಗಳೀರಾರು ಜನಕೆ
ಮುಖ್ಯನಾಗಿಸಿ ದೊಡ್ಡ ಗದ್ದುಗೆಯಿರಿಸಿ
ವರವಸ್ತ್ರಭೂಷಣೋತ್ಕರಗಳನಿತ್ತು
ಬೆರಗೊಂದೆ ಬಸವಯ್ಯಗಾತನಿಂತೆಂದ :
"ಸಕಲಸಾಮ್ರಾಜ್ಯ ಪೂಜ್ಯ ಸ್ಥಿತಿಗೆಲ್ಲ
ಪ್ರಕಟವೆನಲು ನೀನೆ ಪತಿಯು ಅಲ್ಲದೆಯೆ
ಎನ್ನರ್ಥಪ್ರಾಣಗಳಿಗೆ ಪತಿ ನೀನು
ಹೆಚ್ಚು ಮಾತೇಕೆ? ನೀನೇ ನಾನು ಬಸವ

ನಿನ್ನ ನಂಬಿದೆ" ನೆಂದು ಸ್ನೇಹವು ಹೊಮ್ಮೆ
ಮನ್ನಣೆಯಿಂ ಬಿಜ್ಜಳಕ್ಷ್ಮಾಧೀಶನೆನೆ
"ಸಕಲಲೋಕೈಕರಕ್ಷಕನಾದ ಶಿವಗೆ
ನಿನ್ನೊಬ್ಬನನು ರಕ್ಷಿಸುವುದೇನು ಹಿರಿದು
ಅದರಿಂದೆಮ್ಮಯ ಲಿಂಗದೇವಭಕ್ತರಿಗೆ
ಎಂದೆಂದು ಭಯದಿಂದಲಿರುತಿರು ಸಾಕು.
ನಿನ್ನ ರಾಜ್ಯವ ರಕ್ಷಿಸುವುದೇನು ಹಿರಿದು
ನೀರಧಿ ಮೇರೆಯಾಗದನು ಹಬ್ಬಿಸುವೆ"
ಎಂದಾಶ್ವಾಸಿಸೆ ಬಸವಣದಂಡನಾಥ-
ನನುಕೂಲದಿಂ ಹೇಳಲಾಗ ಬಿಜ್ಜಳನು

ಮತ್ತುಡುಗೊರೆಯಿತ್ತು ಮಹನೀಯಲೀಲೆ-
ಯಿಂದ ಸ್ನೇಹದಲಿ ಬೀಳ್ಕೊಟ್ಟ; ಬೀಳ್ಕೊಡಲು
ಆ ಬಸವನು ಭಕ್ತಗಣಗಳ ಜೊತೆಗೆ
ಆ ಬಲದೇವನಾಯಕನರಮನೆಯೆ

ತನಗೆ ನಿಜಾಲಯಸ್ಥಾನವಾಗಿರಲು
ತನ್ನ ನಿಯೋಗವೋಲೈಸೆ ತಾ ಬಂದು
ಲಾಲಿತಲಿಂಗ ಕೇಳೀಲಸನ್ಮತಿಯಿಂ
ಲೀಲಾನುಕೂಲ ಸಚ್ಛೀಲಸಂಪದಗ-
ಳನುದಿನವರ್ಧಮಾನೈಶ್ವರ್ಯನಾಗಿ
ಜನಪತಿ ರಾಜ್ಯವ ಸುಖದಿಂದಲಿರಿಸಿ

ದೆಸೆಗೆಲ್ಲ ಸತ್ಕೀರ್ತಿ ಪಸರಿಸುತಿರಲು
ಬಸವನು ಕೈಕೊಂಡ ಭಾಷೆಯೆಂತೆನಲು :

ಬಸವನ ಭಾಷೆ

ಶಿವರಾತ್ರಿಯನು ನಿತ್ಯ ಮಾಡುವ ಭಾಷೆ
ಶಿವಭಕ್ತರೆಲ್ಲರು ಶಿವನೆಂಬ ಭಾಷೆ
ಭಕ್ತರ ದೋಷವ ಹಿಡಿಯದ ಭಾಷೆ
ಭಕ್ತರ ಕುಲವೆತ್ತಿ ನುಡಿಯದ ಭಾಷೆ
ಮೃಡನನಾದರು ಒಮ್ಮೆ ಬೇಡದ ಭಾಷೆ
ಬೇಡಲು ಅರ್ಥವಿಲ್ಲೆನ್ನದ ಭಾಷೆ
ಚೀಮೆಯನಿತು ವಂಚಿಸೆನು ಎಂಬ ಭಾಷೆ
ಏನ ಕೇಳಿದರರಡಿಯಿಡದೀವ ಭಾಷೆ

ನುಡಿದುದ ನಡೆಯಲ್ಲು ಪಾಲಿಪ ಭಾಷೆ
ಮನದಲಿದ್ದಂತೆಯೆ ನುಡಿಯುವ ಭಾಷೆ
ನುಡಿದು ಬೊಂಕದ ಭಾಷೆಯುಡುಗದ ಭಾಷೆ
ಚಲವಡಗದ ಭಾಷೆ ಸಲಿಸುವ ಭಾಷೆ
ತಪ್ಪು ಮೆಟ್ಟದ ಭಾಷೆ ಹೋಗದ ಭಾಷೆ
ಎಂದೆಂದು ಭೃತ್ಯತ್ವವಡಗದ ಭಾಷೆ
ಕನಸಲ್ಲು ಶಿವನನು ಗೆಲಿಸದ ಭಾಷೆ
ಗೆಲವ ಭಕ್ತರಿಗಿತ್ತು ನಮಿಸುವ ಭಾಷೆ
ಪರಸತಿಯೆಡೆ ದೃಷ್ಟಿಹರಿಸದ ಭಾಷೆ
ಪರಧನಗಳಿಗಾಸೆಗೈಯದ ಭಾಷೆ

ಪರನಿಂದೆಯನ್ನೆಲ್ಲು ಮಾಡದ ಭಾಷೆ
ಪರಮರ್ಮಕರ್ಮಗಳಾಡದ ಭಾಷೆ
ಪರಸಮಯಗಳ ಪರಿಹರಿಪ ಭಾಷೆ
ಪರವಾದಿಗಳನಿಕ್ಕಿ ಭಂಜಿಪ ಭಾಷೆ

ಹರದೂಷಣೆಗೆ ಕಿವಿಯಾನದ ಭಾಷೆ
ಹರಗಣಾನರ್ಪಿತವಂಟದ ಭಾಷೆ
ಹರಗಣ ಪರತಂತ್ರನಾಗಿಹ ಭಾಷೆ
ಹರಭಕ್ತರೆಂದಂತೆ ತಾನೆಂಬ ಭಾಷೆ
ಜಂಗಮ ಪ್ರಾಣಲಿಂಗವೆಯೆಂಬ ಭಾಷೆ
ಮೂಢಮನುಜರನು ಬೇಡದ ಭಾಷೆ

ಭವಿಗೆ ಮೊಕ್ಕದ ಭಾಷೆಯೀಯದ ಭಾಷೆ
ಭವಬಾಧೆಗಳಿಗೊಳಗಾಗದ ಭಾಷೆ
ವಿಷಯೇಂದ್ರಿಯಗಳಿಗೆ ಬಾಗದ ಭಾಷೆ
ವಿಷಮಷಡ್ವರ್ಗವ ಮುರಿಯುವ ಭಾಷೆ
ವೇದೋಕ್ತ ಭಕ್ತಿಯ ಗಳಿಸುವ ಭಾಷೆ
ಆದಿಶಿವಾಚಾರವಲರಿಪ ಭಾಷೆ
ಶಿರವಟ್ಟೆ ಕಡಿದರು ಶರಣೆಂಬ ಭಾಷೆ
ಶಿರಕಟ್ಟೆ ತೊಡೆದರು ನಮಿಸದ ಭಾಷೆ
ಮುಟ್ಟಿದ ಎಡೆಯಿಂ ಹಿಮ್ಮೆಟ್ಟದ ಭಾಷೆ
ಇಂತಿವೆಲ್ಲವ ತುದಿಗೊಳಿಸುವ ಭಾಷೆ

ಬಸವನ ಚರಿತೆಯ ಬಸವನೇ ಅರಿವ
ವಶವೆ ಮತ್ತಾರಿಗು ಹೇಳಲು ಅರಿಯೆ?
ಧೈರ್ಯದ ರಾಶಿ ಗಂಭೀರವಾರಾಶಿ
ಸಾರಾರ್ಥಗಳ ಮೊತ್ತ ಜ್ಞಾನಾಗ್ನಿ ಪ್ರಭೆಯು
ನುಡಿಗಳ ಗುಡ್ಡ ವಿಶ್ರುತಭಕ್ತಿಯೊಡ್ಡು
ವ್ರತಗಳ ಬೆಳೆಯು ವೈರಾಗ್ಯದ ಹೊಳೆಯು
ಸತ್ಯದಾಗರವು ಪ್ರಸಾದಸಾಗರವು
ಕೃತ್ಯಗಳೊಪ್ಪ ಅಕೃತ್ಯಾಬ್ಧಿ ತೆಪ್ಪ
ವೇದಾಂತಗಳ ಪಾಟಿ ವಿದ್ಯೆಯ ಕೋಟಿ
ನಾದದ ಕೊರಲು ಸಮ್ಮೋದದ ಕೀಲು

ಶಾಂತತೆಯಾ ನೆಲವೀಶ್ವರ ಬಲವು
ನಿಗ್ರಹದ ನಿಧಿ ನಿತ್ಯತ್ವದಂಬುಧಿಯು
ವಿನಯದ ಮೂಟೆ ವಿವೇಕದ ಕೋಟೆ
ಅನುರಕ್ತಿಯ ಮನೆಯುದಾತ್ತತೆಯ ಕೊನೆ
ತತ್ವದ ಹಂಬು ಮಹತ್ವಗಳಿಂಬು
ಸತ್ವದಿ ಚೆನ್ನವಾಸ್ಥಾನದಿ ಚೆನ್ನ

ಬಸವನು ಕೇವಲ ಭಕ್ತನೇಯೆನುತ
ಕೂಗಿ ಲೋಕಗಳೆಲ್ಲ ವರ್ಣನೆಗೈಯ-
ಲೊಂದೊಂದು ನಿಯಮವು ನಿಶ್ಚಯವಾಗೆ
ಚಕ್ಕನೆ ದರ್ಶಿಸಲೆಂದು ಬಂದವರು

ಕೈಗೊಂಡ ವ್ರತಗಳ ಸಲ್ಲಿಸುವವರು
ಪ್ರಾಕಟ ವ್ರತಬುದ್ಧಿಯಲಿ ಬರುವವರು
'ಖ್ಯಾತನೋ ಭಕ್ತಿಸಮೇತನೋ ಅರಸಿ
ನೋಡೋಣ'ವೆನುತಲಿ ಐತರುವವರು.
'ಬಸವನಿಂ ಪೂಜೆಯ ಪಡೆಯುವೆ'ವೆಂದು
ಎಸಕವನೆಸೆಯುತ್ತಲೈತರುವವರು
'ಅವನ ನೋಡಲು ಸಾಕು ಅಭವನಭಕ್ತಿ
ಅತಿಶಯವಹು'ದೆಂದು ತಾ ಬರುವವರು
ಬಸವತೀರ್ಥಕೆ ಹೋಹ ಪರಿಷೆಯೆಂಬಂತೆ
ಉತ್ಸಾಹದಲಿ ಕಿಕ್ಕಿರಿದು ಬರುವವರು

ಕರಿತುರಗಾಂದೋಳ ವಿರಚಿತಾನೇಕ
ವರರಥಾರೂಢರಾಗುತ ಬರುವವರು
ಪ್ರಕಟ ರುದ್ರಾಕ್ಷಸನ್ಮಕುಟವರ್ಧನರು
ಸಕಲಾಂಗ ಭಸಿತಾದಿ ಶಾಸನಧರರು
ವಿರಚಿತವಸ್ತ್ರೋಪವೇಷ್ಟಿತಮಕುಟ-
ರುರುಜಟಾಜೂಟವಿಸ್ಫುರಿತಶಾಸನರು
ಕಕ್ಷಕರಸ್ಥಲಕಂಠೋತ್ತಮಾಂಗ
ವಕ್ಷಸ್ಥಲಾಧಿಕವರಲಿಂಗಧರರು
ನುತಸಂಯಮೀಶ್ವರರತುಲವ್ರತಸ್ಥ-
ರತಿಶೀಲರಿತರ ಪಾಕಾದಿವರ್ಜಿತರು

ಸಂಭಾವಿತರು ಭವಿಜನಸಮಾದರಣ
ಸಂಭಾಷಣಾದಿ ಸಂಸರ್ಗವರ್ಜಿತರು
ಪರಶಿವಧ್ಯಾನೈಕ ಪರತಂತ್ರವ್ರತರು
ನಿರವಧಿಲಿಂಗೈಕ್ಯ ನಿಷ್ಠಿತೇಂದ್ರಿಯರು
ಸ್ವಚ್ಛಲಿಂಗಾನುಭವೇಚ್ಛಾತ್ಮಸುಖರು
ಪ್ರಚ್ಛನ್ನ ಲಾಂಛನರಪ್ರಕಟಲಾಂಛನರು
ನಟರು ಗಾಯಕರಲ್ಲಿ ನವರಸಾತ್ಮಕರು
ಪಟುಕಲಾವೇದಿಗಳ್ ಬಹುಶಾಸ್ತ್ರಶ್ರುತರು

ವಾದಿ ತಾರ್ಕಿಕ ವರಕವಿಗಳು ತತ್ವ-
ವೇದಿ ವೇದಾರ್ಥವಾದಿಗಳಾದಿಯಾಗಿ

ಎಡೆಗೆಡೆಗೀ ರೀತಿಯೊಡಗೂಡಿ ನಡೆಯೆ
ಪೊಡವಿಯೊಂದೆಡೆಯೇರು ಪೇರಾಯಿತೆನಲು
ಖಂಡೇಂದುಧರಭಕ್ತಗಣಗಳೀ ರೀತಿ
ತಂಡತಂಡಗಳಾಗಿ ತಾವೈದುತಿರಲು
ವಿಲಸಿತಮೃಗಮದಕಲಿತ ಮಾರ್ಗಗಳ
ಹೊಳೆವ ಮುಕ್ತಾಫಲಗಳ ರಂಗೋಲಿಗಳ
ಮುಕುರಪಲ್ಲವಮಣಿಮುಕ್ತಾಫಲಾದಿ
ಮಕರತೋರಣಗಳ ನಿಕರಗಳಲರೆ
ಖ್ಯಾತಿಯಿಂ ವೃಷಭಸಮೇತವಾಗೆಸೆವ
ಕೇತನಾನೀಕವು ಕಿಕ್ಕಿರಿದಿರಲು

ಆತತವ್ಯಾಸಹಸ್ತಾಕೃತಿಯಾದ
ವಾತಪೂರಣಗಳು ರಭಸದಿಂದಲುಗೆ
ಉಡುವೀಥಿಯನು ಕವಿದಿಹ ಸಮುನ್ನತದ
ನಡೆಹಂದರಗಳು ಬೆಳ್ಗೊಡೆಗಳು ತುಂಬಿ
ತತವಿತತಾದಿವಾದ್ಯಂಗಳು ಮೊರೆಯ-
ಲತಿಶಯದಿಂ ಧ್ವನಿಯೆಲ್ಲೆಡೆ ತೀವೆ
ಬಿಡದಂತೆ 'ಚಾಂಗು ಭಲಾ'ಯೆಂಬ ಶಬ್ದ-
ವಾಯತಿಯಿಂದಾಗಸದಲಿ ಘೂರ್ಣಿಸಲು
ಪ್ರತಿದಿನದಲು ಭಕ್ತಭಂಡಾರಿ ಬಸವ-
ನತಿಭಕ್ತಿರತಿಮತಿಯಂಕುರಿಸುತಿರೆ

ಶಾಶ್ವತಘನಲಿಂಗ ಸಂಪದವೆಸೆಯ-
ಲೀಶ್ವರಭಕ್ತರನಿಂತೆದುರ್ಗೊಳುತ

**ಬಸವೇಶ್ವರನ ಶಿವಾಚಾರನಿರತಿ**

ಮಂಗಳಹರ್ಷೋದಿತಾಂಗವಿಕ್ರಿಯೆಗ-
ಳಿಂದಲಿ ಆತ್ಮವುಪ್ಪೊಂಗಿಯುಪ್ಪೊಂಗಿ
ಭಯಭಕ್ತಿಯಿಂದ ತದ್ಭಕ್ತಾಂಘ್ರಿಚಯದ
ಮೇಲೆ ಮೈಚಾಚಿ ಬೀಳುತ ಮೊಕ್ಕಿ ಮೊಕ್ಕಿ
ಪಟುತರಸದ್ಭಕ್ತಿಪಾದಾಬ್ಜರೇಣು
ಪಟಲಪರ್ಯಂಕದಲಿ ಹೊರಳಿ ಹೊರಳಿ

ಹರಭಕ್ತನಿಕರದಯಾಮೃತವೃಷ್ಟಿ
ರಭಸದಿ ಸುರಿಯೆ ತೊಪ್ಪನೆ ತೊಯ್ದು ತೊಯ್ದು

ಒಡೆಯರ ದಿವ್ಯಪಾದೋದಕವಾರ್ಧಿ–
ಯಲಿ ಮಧ್ಯೆ ಸಂತಸದಿಂ ತೇಲಿ ತೇಲಿ
ವರಭಕ್ತಸಂದೋಹ ಪರಿತೋಷಿತಾರ್ಥ
ಪರಮ ಪೂಜಾಸಂಪದದಿ ವಾಲಿ ವಾಲಿ
ಮತಿಲಿಂಗಜಂಗಮೋಚಿತ ಪರತತ್ವ
ಸತತಶಿವಾರ್ಚನಾರತಿಯಿಂದ ಬಾಗಿ
ಶರಣನಿರ್ಮಲ ನಿತ್ಯ ಸತ್ಯಪ್ರಸಾದ
ವರಸೇವನಕ್ರೀಡೆಯಿಂ ಬೀಗಿ ಬೀಗಿ
ಚಾರುವಚೋವಿಲಾಸಗಳಿಂದ ಮೆರೆದು
ಬಾಯಾರಲವರ ಸನ್ನುತಿಗೈದು ಗೈದು

ಅವರ ಮನೋಲತೆಯನು ಸುತ್ತಿ ಸುತ್ತಿ
ಸಾರಗಾಂಧರ್ವರಸದ ಸವಿಸವಿದು
ದರಹಸಿತಾಸ್ಯ ವಿಸ್ಫುರಣದಿಂದಧಿಕ
ಹರಗಣಾಸ್ಥಾನದಲಂದಾಡಿಯಾಡಿ
ನಿಶ್ಚಯ ಭಕ್ತಿಗೆ ನಿಜದಲಿ ತಾನು

ಸೇರಿಯಧಿಕಭಕ್ತಿಯಿಂ ಸೊಕ್ಕಿ ಸೊಕ್ಕಿ
ಸತತದಲೀಪ್ಸಿತಾರ್ಥರಿಗರ್ತಿಯಿಂದ
ತನುಮನೋಧನಗಳರ್ಪಣೆಗೈದು ಗೈದು
ಆಗಾಗ ಪರಮತತ್ವಾನುಭವಾರ್ಥಿ–
ಗಳ ತತ್ವಸೌಖ್ಯಜಲಧಿಯಲ್ಲದ್ದದ್ದಿ

ಪ್ರವಿಮಲಭಕ್ತಿ ಸಂಪತ್ಸುಖಾರ್ಥಿಗಳ
ಪ್ರವಿಮಲಭಕ್ತಿಸಂಪದದಿ ತೇಲಿಸುತ–
ಲಾರಯ್ಯೆ ಕಾಮಸುಖಾಪೇಕ್ಷಿತರನು
ಸ್ತ್ರೀರತ್ನರಾಜಿಯಿಂ ಪೂಜೆಗೈಯುತ್ತ
ವರರತ್ನ ಭೂಷಣೋತ್ಕರಧನಾರ್ಥಿಗಳ
ವರರತ್ನ ಭೂಷಣಾವಳಿಯಿಂದ ತಣಿಸಿ
ರಾಜವದುಪಚಾರಪೂಜನಾರ್ಥಿಗಳ
ರಾಜವದುಪಚಾರ ರತಿಯಿಂದಲೊಲಿಸಿ
ಅಷ್ಟಾಂಗ ಭಕ್ತಿಕ್ರಿಯಾಸುಖಾರ್ಥಿಗಳ–
ನಷ್ಟಾಂಗ ಭಕ್ತಿಕ್ರಿಯೆಗಳಿಂದ ಭಜಿಸಿ

ಶೀಲಸಂಬಂಧರ ಶೀಲಗಳರಿತು
ಶೀಲಸಂಬಂಧಸುಸ್ಥಿತಿಗಳಲಿರಿಸಿ
ನಿಯಮವ್ರತಾಚಾರ ನಿಷ್ಠಿತಾತ್ಮಕರ
ಪ್ರಿಯವಸ್ತುಸಮಿತಿಯನರ್ಪಿಸರ್ಚಿಸುತ
ಬಸವನೀ ಕ್ರಮದಿಂದ ಭಕ್ತಿಸಾಮ್ರಾಜ್ಯ-
ವೆಸಕದಿಂ ಮಾಡುತಿರೆ ಲಸತ್ಪ್ರೀತಿಯಲಿ
"ಮೂರು ಹೊತ್ತೋಗರಗಳ ಪದಾರ್ಥಗಳ
ತಪ್ಪದೆ ಬಯಸಲು ಸತತದಿ ಕಳಿಸಿ
ವಿವಿಧ ವೇಶ್ಯಾಗೃಹಗಳಲಿ ಭೋಗಿಸುವ
ಮಿಂಡಜಂಗಮರು ಹನ್ನೆರಡು ಸಾವಿರವೆ-

ನಲಿರುವ ಜಂಗಮ ಸಂಖ್ಯೆಯ ಮುನ್ನ
ಎಣಿಸಲು ಶಕ್ಯವೇನೀಶಗು ಕೂಡ"
ಎಂದು ಭಕ್ತಾನೀಕವಚ್ಚರಿಗೊಳಲು
ಸತತದಿ ಭೂತಿಶಾಸನರಾದಿಯಾದ
ಎಲ್ಲ ಭಕ್ತಾವಳಿಗೀಪ್ಸಿತಾರ್ಥಗಳ
ಸಲ್ಲಿಸುತಲಿ ಭಕ್ತಿಗೈವುತ್ತಲಿರಲು:

**ಚೆನ್ನಬಸವನ ಮಹಿಮೆ**

ಪರಮೇಶ ಭಕ್ತಿಯೆ ಪ್ರಾಣವಾಗಿರುವ
ತರುಣಿ ನಾಗಾಂಬೆಯ ವರತನೂಭವನು
ಪ್ರಸ್ತುತಿಯೊಪ್ಪುವ ಬಸವ ಕಾರುಣ್ಯ
ಹಸ್ತಸಂಭೂತ ಪ್ರಶಸ್ತಶರೀರ-

ನಸದೃಶ ಭಕ್ತಿಯೋಗಾತ್ಮನು ಚೆನ್ನ-
ಬಸವನು ಗುರುಭಕ್ತಿ ಪಾತ್ರೋತ್ತಮನೆನೆ
ಸರ್ವಾಂಗಲಿಂಗಿ ಸಂಸಾರ ನಿಸ್ಸಂಗಿ
ಗರ್ವಾಪಹಾರಿ ಪ್ರಾಕ್ತನ ಶಿವಾಚಾರಿ
ಸಾರಗುಣಾನ್ವೇಷಿ ಸರಸ ಸಂಭಾಷಿ
ಕಾರುಣ್ಯರಾಶಿ ಲಿಂಗಮನಃಪ್ರವೇಶಿ
ಅಗಣಿತ ಸುಖಶೀಲನತಿದಯಾಶಾಲಿ
ನಿಗಮಾರ್ಥ ಸಂವೇದಿ ನಿಚಿತಪ್ರಮೋದಿ
ವಿರಹಿತೋಭಯಕರ್ಮಿ ವರಲಿಂಗಧರ್ಮಿ
ಅರಿವರ್ಗಸಂಹಾರಿಯತ್ಯೋಪಕಾರಿ

ಲಿಂಗಾಭಿಮಾನಿಯಭಂಗುರ ಜ್ಞಾನಿ
ಸಾಂಗತ್ಯಸುವಿಧಾನಿ ಸತತಾವಧಾನಿ
ಪರಮಾನುರಾಗ ಸದ್ಭಕ್ತಿಸಂಭೋಗಿ
ವಿರಸಭವತ್ಯಾಗಿ ವಿಮಲಾತ್ಮಯೋಗಿ
ಸತ್ಯಸಲ್ಲಾಪಿ ಪ್ರಸನ್ನಸ್ವರೂಪಿ
ನಿತ್ಯಪ್ರತಾಪಿ ವಿನಿರ್ಗತಪಾಪಿ
ಈಶ್ವರಮೂರ್ತಿಯತೀಂದ್ರಿಯವರ್ತಿ
ಶಾಶ್ವತಕೀರ್ತಿ ಪ್ರಸಾದಪ್ರಪೂರ್ತಿ
ಎನಲಿಂತು ಶೋಭಿಸುವತುಲಿತಮಹಿಮ-
ನನುದಿನ ವರ್ಧಮಾನಾಂಗನಾಗಿರಲು

"ಬಸವನ ಶ್ರೀ ಪಾದ ಬಿಸರುಹಗಳಿಗೆ
ಅತಿಶಯದಲಿ ನಿತ್ಯವರ್ಚನೆಗೈದು
ಮಿಗಿಲಾದ ಭಕ್ತಿಯಿಂ ಮೈಯ ರೋಮಾಂಚ-
ಕಂಚುಕವಧಿಕಸಮಂಚಿತನಾಗಿ
ಗದ್ಗದಕಂಠದಿಂ ಕಣ್ಣಲಿ ಸುಖಸ-
ಮುದ್ಗತಾಶ್ರುವೊಗೆಯಲುತ್ಸುಕನಾಗಿ
ಸಪ್ರಾಣಲಿಂಗ ಲಿಂಗಪ್ರಾಣಮಥನ
ಸುಪ್ರಸನ್ನಾನುಭವಪ್ರಾಪ್ತಿಯೊಂದಿ
ನಲವಿಂದ ಮರ್ಕಟನ್ಯಾಯದಲಂದು
ಫಲವನು ಹೊಂದಿ ಸೋಪಾನಗಳಿಳಿದು

ಅಧಿಕದಿಂ ಪಡೆದ ವಾಯಸಫಲನ್ಯಾಯ-
ವತಿಶಯವೆನೆ ಚರಿತಾರ್ಥತವನೊಂದಿ
ಗುರುಭಕ್ತಿಫಲಸಾರ ಗುಹ್ಯಪ್ರಸಾದ
ವರಸೇವನಾಸುಖಪರವಶನಾಗಿ
ಕಮನೀಯವೆನಿಸುವ ಲಿಂಗವೆ ಪ್ರಾಣ
ರಮಣಪ್ರಸಾದಪೂರವೆನಿಪ ದೇಹ
ಸ್ಥಿರವಾದ ಶುದ್ಧಭಕ್ತಿಯೆ ಮಾನಸವೆನೆ
ಹರಗಣಾನುಭವಸೌಖ್ಯವದುವೆ ಧನವು
ಇಂತು ಕೂಡಿಯಿವೆಲ್ಲವೊಂದಾಗಿ ತಾವು
ಪಟುತರದಲಿ ಚೆನ್ನಬಸವನೆಂದಾಯ್ತು.

ನವ್ಯ ಪ್ರಸಾದಕ್ಕೆ ರುಚಿ ಸೇರಿದಂತೆ
ಭವ್ಯಲಿಂಗಕೆ ಪ್ರಾಣ ಕೂಡಿ ಬಂದಂತೆ

ಜಂಗಮ ಭಕ್ತಿಗಾಶ್ರಯ ಪದವಾಗಿ
ಮಂಗಳ ಪ್ರಾಪ್ತಿಗೆ ಮಂದಿರವಾಗಿ
ಗುರಿಯಾಗಿ ವಾಙ್ಮನೋಗೋಚರನಾಗಿ
ಮೆರೆಯುವ ಶಿವತತ್ವವಲ್ಲಭ ಮಹಿಮೆ-
ಯನು ನೆನಪುಗಳೆಲ್ಲ ವರ್ತಿಸುತಿರಲು
ಹೊರಬರೆ ತಮ್ಮಯ ತೊದಲು ಮಾತಿನಲಿ
ವಿನುತಿಗೈಯಲು ಸಾಧ್ಯವೆನಿಸುವುದೇನು?
ದೃಢಗೊಂಡ ಆ ಚೆನ್ನಬಸವನ ನೆಲೆಯ-

ನದರಿಂದ ಬಸವನೇ ಗುರುತಿಸಬಲ್ಲ.
ಭಾವಿಸಲಾ ಚೆನ್ನಬಸವನ ಮಹಿಮೆ
ಬಸವನ ಮಹಿಮೆಯ ರೀತಿಯಿಂ ಚೆನ್ನ
ಬಸವನರಿವನು ಪೆಂಪೆಸೆಯೆ ಕೀರ್ತಿಸಲು"
ಎಂದು ಭಕ್ತಾನೀಕವಚ್ಚರಿಯೊಂದೆ
ಸಂಚಿತ ಭಕ್ತಿಸಮಗ್ರತೆ ಮೆರೆದು.

**ಚೆನ್ನಬಸವನು ಬಸವನನ್ನು ಸ್ತುತಿಸಿದುದು**

"ಶಾಶ್ವತ ಸರ್ವಜ್ಞ ಶಶ್ವದ್ಗುಣಾಂಕ
ವಿಶ್ವೇಶ ಶ್ರೀ ಗುರುವೇ ನಮೋ"ಯೆನುತ
"ಸದ್ಯಃ ಪ್ರಸನ್ನಾನವದ್ಯವೇದಾಂತ
ವೇದ್ಯಾತ್ಮ ಶ್ರೀಗುರುವೇ ನಮೋ"ಯೆನುತ

"ದತ್ತಕೈವಲ್ಯ ಉದಾತ್ತಸದ್ಭಕ್ತಿ
ವಿತ್ತೇಶ ಶ್ರೀ ಗುರುವೇ ನಮೋ"ಯೆನುತ
"ಅಮಿತಪರಂಜ್ಯೋತಿರಾಕಾರ ದಿವ್ಯ
ವಿಮಲಾಂಗ ಶ್ರೀ ಗುರುವೇ ನಮೋ"ಯೆನುತ
"ಸ್ಥಿರತರಸೃಷ್ಟಿಸ್ಥಿತಿಲಯ ಪ್ರಪಂಚ
ವಿರಹಿತ ಶ್ರೀ ಗುರುವೇ ನಮೋ"ಯೆನುತ
ಸಕಳ ನಿಷ್ಕಳ ಚರಾಚರರೂಪವಿಗತ
ವಿಕೃತಾಂಗ ಶ್ರೀ ಗುರುವೇ ನಮೋ"ಯೆನುತ
"ಆದ್ಯಂತರಹಿತನಿತ್ಯಾಮಲ ತೇಜ
ವಿದ್ಯಾತ್ಮ ಶ್ರೀ ಗುರುವೇ ನಮೋ"ಯೆನುತ

"ಅಧ್ವಷಟ್ಕಾತೀತ ಅತಿಪಾತಕೌಘ
ವಿಧ್ವಂಸ ಶ್ರೀ ಗುರುವೇ ನಮೋ"ಯೆನುತ

"ಮೋಕ್ಷಾರ್ಥಿ ರಕ್ಷಣ ದಕ್ಷಕಟಾಕ್ಷ
ವೀಕ್ಷಣ ಶ್ರೀ ಗುರುವೇ ನಮೋ"ಯೆನುತ
"ಅಜ್ಞಾನ ತಿಮಿರಸಂಹಾರಾರ್ಥದತ್ತ
ವಿಜ್ಞಾನ ಶ್ರೀ ಗುರುವೇ ನಮೋ"ಯೆನುತ
"ಧನ್ಯಾತ್ಮ ಶಿಷ್ಯಮಸ್ತಕ ಕೃಪಾಹಸ್ತ
ವಿನ್ಯಾಸ ಶ್ರೀ ಗುರುವೇ ನಮೋ"ಯೆನುತ
"ಅಘಹರಣಾರ್ಥ ಶಿಷ್ಯಜನೋಪಭುಕ್ತ
ವಿಘನಸ ಶ್ರೀ ಗುರುವೇ ನಮೋ"ಯೆನುತ

"ಅಶ್ರಾಂತ ಭಕ್ತಜನಾತ್ಮಾಂಬುಜಾತ
ವಿಶ್ರಾಂತ ಶ್ರೀ ಗುರುವೇ ನಮೋ"ಯೆನುತ
"ಅನಘ ಗುರುಪ್ರಸಾದಾಮೃತ ಹೃದಯ
ವಿನಿವಾಸ ಶ್ರೀ ಗುರುವೇ ನಮೋ"ಯೆನುತ
ಶೋಭಿಸಲಾ ಚೆನ್ನಬಸವನಾ ಬಸವ
ರಾಜನ ಗುರುವನು ಪ್ರಸ್ತುತಿಗೈಯೆ

**ಅಲ್ಲಮನ ಆಗಮನ**

ಆಗಲಲ್ಲಮಪ್ರಭುವೆನೆ ಸಂಯಮೀಶ–
ನಂತಕಾಂತಕಮೂರ್ತಿಯತುಲಿತ ಕೀರ್ತಿ
ನಿರ್ಮೂಲಿತೋದ್ರಿಕ್ತದುರ್ಮಲನುಭಯ
ಕರ್ಮನಿಕೃಂತನ ಕರ್ಮ ಕರ್ಮಠನು

ವೈರಾಗ್ಯ ಸಂಸಾರವರ್ಜಿತಾತ್ಮಕನು
ದೂರದೃಷ್ಟಾದೃಷ್ಟಚಾರುಚರ್ಯನವ–
ದಾನಪ್ರತಿಗ್ರಹಹೀನ ವರ್ತನನು
ಮಾನಾವಮಾನಸಮಾನಕೀರ್ತನನು
ಸಮಲೋಷ್ಟಕಾಂಚನ ಸಮಸುಖದುಃಖ
ಸಮಮಿತ್ರಶಾತ್ರವ ಸದ್ಭಾವದವನು
ಸಪ್ತಧಾತುಮದಾದಿ ಸರ್ವಾಂಗ ಗುಣವಿ–
ಲುಪ್ತಚಿತ್ತನವ ಸಂಸುಪ್ತಿದೂರನವ
ಕಾಲಸಂಕಲ್ಪ ವಿಕಲ್ಪಮಹೇಂದ್ರ
ಜಾಲಪ್ರಪಂಚ ನಿರ್ಮೂಲನಶಾಲಿ

ಪರಮಶಿವಾನಂದ ಪರವಶೀಭೂತ–
ನುರುಮುಕ್ತಕೇಶಯುತೋತ್ತಮಾಂಗನವ

ದಿವ್ಯಾನಿಮಿಷಸುಧಾದೃಷ್ಟಿಗೋಚರನು
ಭವ್ಯನು ಗಾಂಧರ್ವಪಂಡಿತೋತ್ತಮನು
ಅಂತರಯಾಗನಿರಂತರಯೋಗ–
ವಂತನನಂತ ವೇದಾಂತವೇದ್ಯನವ
ನಿಶ್ಶರೀರಿ ಶರೀರಿ ನಿರ್ನಾಮಿ ನಾಮಿ
ನಿಶ್ಶಬ್ದಿ ಶಬ್ದಿ ವಿನಿರ್ಭಾವಿ ಭಾವಿ
ದ್ವೈತಯೋಗ ಕ್ರಿಯಾದ್ವೈತಯೋಗಕ್ರಿ–
ಯಾತೀತ ಯೋಗಕ್ರಿಯಾನ್ವಿತನೆನಲು

ಮೂಲೋಕಗಳಲಿ ವಿನಿರ್ಮಲ ಭಕ್ತಿ–
ಯೆಲ್ಲಕು ಸ್ವೇಚ್ಛಾವಿಹೀನ ಕೃತ್ಯದಲಿ
ಲೀಲ ಕರಸ್ಥಲಲಿಂಗವಿನ್ಯಸ್ತ
ಲೋಲೇಕ್ಷಣಾನಂದಕೇಳಿಯೊಳ್ ಮರೆತು
ಇದು ನದಿ ಬಯಲಿದು ಇದು ಮರ ಕಾಂಡ–
ವಿದು ದಾರಿಯಡವಿಯೆಂಬರಿವದು ಅಳಿಯೆ
ಬರುತಿರಲೆಲ್ಲವು ಪಕ್ಕಕೆ ಸರಿದು
ತೆರವೀಯೆ ನರರೆಲ್ಲರರಿದೆಂದು ಹೊಗಳೆ
ಬಸವಣ್ಣನಸಮ ವಿಭ್ರಾಜಿತ ಭಕ್ತಿ
ರಸವಾರ್ಧಿಯದು ಮೇರೆವರಿದುಬ್ಬರಿಸಲು

ಬಂದನಾ ವೀಚಿಪ್ರವರ್ತಿತನಾಗಿ
ಬರುವ ಬಹಿತ್ರದ ರೀತಿಯ ಹೋಲೆ.
ನಿತ್ಯ ರತ್ನಪರೀಕ್ಷೆಯರಿದು ಕೈಗೊಳುವ
ವೈಶ್ಯನ ಹೋಲುತಾ ಬಸವಯ್ಯ ಪ್ರಭುವು
ಭಾವನು ಸಂಗಯ್ಯ ದೇವನೆ ಎಂಬ
ಭಾವನೆಯಿಂದಲಿ ಭಕ್ತಿಯಿಂ ನಮಿಸೆ
ರುಚಿರ ರತ್ನ ಪ್ರಭಾನಿಚಿತವಾಗಿದ್ದ
ಅಚಲಿತ ಸ್ವರ್ಣ ಸಿಂಹಾಸನವೇರಿ
ಪ್ರಭುವಿರಲಂಗ ಪ್ರಭಾಪಟಲಗಳು
ಅಭಿನುತಿಯೊಂದೆ ದಿಶಾಂತರಾಳದಲಿ

ಒಡಲಲಿ ಜೀವವಿದ್ದರು ಇಲ್ಲದವನ
ನಡೆಯಿದ್ದರೂ ವರ್ತನವು ಇಲ್ಲದವನ
ಕಂಗಳ ಕರುಳುಗಳಾಗಿಯುಳ್ಳವನ
ಮುನ್ನ ಲಿಂಗವೆ ಪ್ರಾಣವಾಗಿರುವವನ

ಖ್ಯಾತಿಯಲ್ಲದೆ ತಾನು ನುತಿಗೆ ಸಂದವನ
ನುಡಿಗಳ ಮೀರಿದ ಭಾಷೆಗಳವನ
ನೆನಹುಗಳನು ದಾಟಿದಾ ತತ್ವದವನ
ಗುಣಹೀನನಾದರೂ ಗುಣವೀಯುವವನ
ಪ್ರಣವಾತ್ಮನಾಗಿಯೂ ರೂಪಿರುವವನ

ಕಾಣುತ ನಮಿಸಿ ಗದ್ಗದಕಂಠನಾಗಿ
ಕಣ್ಣಲಿ ಹರ್ಷಾಶ್ರುಕಣಗಳು ಸುರಿಯೆ
ಬಸವನಲ್ಲಯ್ಯಗೆ ಪ್ರಣಮಿತನಾಗಿ
ಭರದಿಂದ ಸಮುಚಿತಾಭ್ಯರ್ಚನೆಗೈದು
ಲಿಂಗತೂರ್ಯಗಳು ಮೊಳಗಲು ಉಪ್ಪೊಂಗಿ
ಮಂಗಳಾರತಿಯೆತ್ತಿ ಆ ಕ್ಷಣದಲ್ಲಿ

**ಅಲ್ಲಮನಿಗೆ ಬೋನವಿಟ್ಟದ್ದು**

ಹರಿವಾಣದಲಿ ಪಂಚಭಕ್ಷಾನ್ನಗಳನು
ಎಲ್ಲ ಪದಾರ್ಥಗಳನು ತುಂಬುವಂತೆ
ಬಡಿಸಿಯಾ ಬಸವಣ್ಣನರ್ಥಿಯಿಂ ದೊಡ್ಡ
ದೊಡ್ಡ ತುತ್ತುಗಳ ಮಾಡುತ್ತಲಿ ಹಿಡಿದು

ಹರನಿಗೆ ಹಿಂದೆಯಾ ಸುರಗಿಚೌಡರಸ
ಕರಮರ್ಥಿಯಿಂದಿತ್ತ ಬಗೆಯನು ಹೋಲೆ
ಅಂದೀಯುತಿರಲತಿಪ್ರೀತಿಯಿಂ ಪ್ರಭುವು
ಕೈಗೊಳ್ಳುತಾ ಪ್ರಭುವಾರೋಗಿಸುತಿರೆ
ಲಕ್ಷ ಮೇಲೆಂಬತ್ತು ಸಾವಿರ ಜಂಗ-
ಮಗಳಿಗೆನುತಲಿ ಸಮಗ್ರತೆಯಿಂದ-
ಲಾಮುನ್ನ ಸಿದ್ಧಗೈದಿಹ ಪದಾರ್ಥಗಳ-
ದೊಮ್ಮೆಗೆ ಸವೆಯಲು ಹೇಗೆಂತೊಯೆನದೆ
ನಾನೆ ನಿಮ್ಮೋಗರವೀಗಲೆಂದೆನುತ
ಪೂಣುತೊಡ್ಡಲು ತನ್ನ ಪ್ರಭು ಮೆಚ್ಚಿಯಾಗ

'ಕೋ' ಯೆಂದು ಭಕ್ತನಿಕಾಯವು ಹೊಗಳೆ
'ಹೋ' ಯೆಂದು ಸತ್ಕೃಪಾಯುಕ್ತಿಯು ತುಂಬೆ
"ಭಾಪುರೇ ಬಸವ ಸದ್ಭಕ್ತಸಂತ್ರಾಣ
ಭಾಪುರೇ ಬಸವ ಸದೌಕ್ತಿಧುರೀಣ

ನಲ್ಲದೈ ಬಸವ ಅನಶ್ವರಕೀರ್ತಿ
ನಲ್ಲದೈ ಬಸವಣ್ಣ ನಂದೀಶಮೂರ್ತಿ
ಅಮೃತದೊಳಗೆ ದಿವ್ಯತೆಯು ಸೇರಿದಂತೆ
ವಿಮಲಮಾಣಿಕ್ಯ ಗರ್ಭದೊಳಗೆ ದೀಪ
ಕಬ್ಬಲಿ ಹಣ್ಣು ಚಿನ್ನದಿ ಸುವಾಸನೆಯು
ಕೊರೆಯಾದ ಮಲಯಜಕುಜದಲಿ ಹೂವು

ಚಿತ್ರದ ಗೊಂಬೆಗೆ ಜೀವವು ಹೊನ್ನ
ಪುತ್ಥಳಿಯೊಳಗೆ ಪ್ರಾಣವು ನಿಶ್ಚಯದಲಿ
ಹುಟ್ಟಿದ ಬಗೆಯಲಿ ಹುಟ್ಟಿದೆ ಮಗನೆ!
ನೆಟ್ಟನೆ ಭಕ್ತಿಗೆ ನಿಲುಗಡೆಯಾಗಿ
ನಾದ ಬಸವ ದಂಡನಾಯಕ ಬಸವ
ಆದಿ ಬಸವನಸಂಖ್ಯಾತರ ಬಸವ
ಮುಕ್ತೀಶ ಬಸವನಾ ಮುದ್ದಿನ ಬಸವ
ಸಂಗನ ಬಸವ ಪ್ರಸಾದದ ಬಸವ
ಜಂಗಮದ ಬಸವ ಸತ್ಯದ ಬಸವ

ಪಂಡಿತ ಬಸವ ಸತ್ಪಾತ್ರದ ಬಸವ
ಭಂಡಾರಿ ಬಸವ ಸೌಭಾಗ್ಯದ ಬಸವ
ತತ್ವದ ಬಸವ ಮಹತ್ವದ ಬಸವ
ಸತ್ವದ ಬಸವ ನಿತ್ಯತ್ವದ ಬಸವ
ವೃಷಭದ ಬಸವ ಸಂವಿಜ್ಯೋತಿ ಬಸವ
ವಿಷಕಂಠ ಬಸವ ವಿವೇಕದ ಬಸವ
ತಜ್ಞರ ಬಸವ ತತ್ವಜ್ಞರ ಬಸವ
ಪ್ರಾಜ್ಞರ ಬಸವ ಸರ್ವಜ್ಞರ ಬಸವ
ಸಿದ್ಧರ ಬಸವ ಪ್ರಸಿದ್ಧರ ಬಸವ
ಶುದ್ಧರ ಬಸವ ಪ್ರಬುದ್ಧರ ಬಸವ

ಬಸವಯ್ಯ ಬಸವಣ್ಣ ಬಸವಕುಮಾರ
ಬಸವ ಬಸವರಾಜ ಬಸವಲಿಂಗದಲಿ
ಬಿದ್ದು ಹರಿವಜಲಕೊಡಲೆಲ್ಲ ಕಾಲು
ಬಿದ್ದು ಸುಟ್ಟುರುಹಲು ಒಡಲೆಲ್ಲ ಬಾಯಿ
ಬಿದ್ದು ಬೀಸುವ ಗಾಳಿಗೊಡಲೆಲ್ಲ ತಲೆಯು
ಮಾಡುವ ಬಸವ ನಿನ್ನೊಡಲೆಲ್ಲ ಭಕ್ತಿ

ಬಸವನೆಂಬುದ ಕೇಳೆ ಸಂದೇಹವೇಕೆ
ಪಶುಗಳಿಗೂ ಪ್ರಬಲಿಸದೇನು ಭಕ್ತಿ?
ಬಸವನೆಂಬುದ ಕೇಳೆ ಸಂದೇಹವೇಕೆ
ಹಾಲುಕಂದಮ್ಮಗು ಬರದೇನು ಭಕ್ತಿ?

ಬಸವನೆಂಬುದ ಕೇಳೆ ಸಂದೇಹವೇಕೆ
ಅಸಮಾಕ್ಷಗಾದರೂ ಅಲರದೆ ಭಕ್ತಿ?
ಬಸವನೆಂಬುದ ಕೇಳೆ ಸಂದೇಹವೇಕೆ
ಹಾರುಹಕ್ಕಿಗಳಲ್ಲಿ ತುಂಬದೆ ಭಕ್ತಿ?
ಬಸವನೆಂಬುದು ಕೇಳೆ ಸಂದೇಹವೇಕೆ
ಕೀಳುಜಂತುಗಳಲುಂಟಾಗದೆ ಭಕ್ತಿ?
ಬಸವನೆಂದರೆ ಸಾಕು ಸಂದೇಹವೇಕೆ
ಕಡುವಿಷವಾದರೂ ಅಮೃತವೆನಿಸದೆ?
ಬಸವನೆಂದರೆ ಸಾಕು ಸಂದೇಹವೇಕೆ
ಕಠಿಣದ ಕುಲಿಶವು ಕುಸುಮವೆನಿಸದೆ?

ಬಸವನೆಂದರೆ ಸಾಕು ಸಂದೇಹವೇಕೆ
ಜಗದ ಶತ್ರುಗಳೆಲ್ಲ ಮಿತ್ರರೆನಿಸರೆ?
ಬಸವನೆಂದರೆ ಸಾಕು ಸಂದೇಹವೇಕೆ
ಉರಿವ ಕಾಳ್ಗಿಚ್ಚು ಬೆಳ್ದಿಂಗಳೆನಿಸದೆ?
ಲಿಂಗೈಕ್ಯ ಸೌಖ್ಯಕೇಳೀಲೋಲಭಕ್ತಿ
ಜಂಗಮಪ್ರಾಣಾನುಸಂಧಾನ ಶಕ್ತಿ
ಉಭಯ ಪ್ರಸಾದ ಸಂಯೋಗೋಪಭುಕ್ತಿ
ತ್ರಿಭುವನಗಳಲಿರುವುದೆ ಇತರರಿಗೆ"
ಎಂದು ನಾನಾ ರೀತಿಯಲಿ ಹೊಗಳುತಿರ-
ಲನುಷಕ್ತಿಯಿಂದಲಾ ಬಸವಕುಮಾರ-

ನತಿಶಯ ಸದ್ಭಕ್ತಿಪೂರದಿಂ ತುಂಬಿ
ನಮಿಸಿಯಡಿಗಡಿಗೆ ಕೈಗಳ ಮುಗಿದು
"ಭಕ್ತವತ್ಸಲ ಪರಾಪರ ಪರಮಾತ್ಮ
ಮುಕ್ತಿವಲ್ಲಭ ದಿವ್ಯಮೂರ್ತಿ ಸರ್ವಜ್ಞ
ಪ್ರಭುವೆ ಜಂಗಮಲಿಂಗ ಪ್ರಮಥಾಗ್ರಗಣ್ಯ
ಪ್ರಭುವೆ ಸಂಗಯದೇವ ಪರಮಾನುರಾಗ
ಕಾರುಣ್ಯನಿಧಿ ಸಮಗ್ರತೆ ತೋರಿ ನಿನಗೆ
ಆರೋಗಿಸಲಿಡುವಂತಹ ಭಕ್ತ ನಾನೆ?

### ಪಾರ್ವತಿಯು ಪ್ರಮಥರಿಗೆ ಬೋನವಿಟ್ಟ ಕಥೆ

ಕೈಲಾಸದಲಿ ಮುನ್ನ ಕರಕಂಠಗೊಲಿದ
ಶೈಲೇಂದ್ರ ಕನ್ಯಕೆಯೆಯ್ತಂದೆಡೆಯಲಿ

ಮಾರಾರಿಯಂತೆ ಪ್ರಮಥವರ್ಗವೆಲ್ಲ-
ವಾರಯ್ಯೆ ಸಾರೂಪ್ಯಧಾರಿಗಳಾಗೆ
ಪರಮೇಶನಾರೊ ಪ್ರಮಥವರ್ಗವಾರೊ
ಎಂಬುದನರಿಯದಲಂಬಿಕೆ ನಿಲಲು
ಗಿರಿಜೆಯ ಸಂದೇಹಭಾವವನರಿತು
ಪಾರ್ವತೀಶನು ಬಿಡೆ ಪ್ರಮಥರಾಕ್ಷಣವೆ
ತಮ್ಮ ಹಿಂದಿನ ರೂಪಗಳ ಹೋಗಗೊಟ್ಟು
ರಮಣನೊಂದೊಂದು ರೂಪಗಳನು ತಳೆಯೆ
ಗೋಮೇಷವಾನರಕುಕ್ಕುಟಮುಖರು
ಸಾಮಜ ಶರಭೋಷ್ಟ್ರ ಶಾರ್ದೂಲಮುಖರು

ಮಹಿಷಾಶ್ವಸಾರಂಗಮಾರ್ಜಾಲಮುಖರು
ಅಹಿಕೇಸರಿವರಾಹವಿಹಗಾದಿಮುಖರು
ದ್ವಿಮುಖಚತುರ್ಮುಖ ತ್ರಿಮುಖೈಕಮುಖರು
ಅಮುಖ ಪಂಚಮುಖ ಸಹಸ್ರಾದಿಮುಖರು
ಲಂಬೋಷ್ಠಲಂಬಾಕ್ಷಲಂಬನಾಸಿಕರು
ಲಂಬೋದರರು ಅತಿಲಂಬಕರ್ಣರೆನೆ
ಗಜಕರ್ಣರಜಕರ್ಣರಜಿತಕರ್ಣರೆನೆ
ವಿಜಯಘಂಟಾಕರ್ಣವೀರಕರ್ಣರೆನೆ
ಬಾಹೂರುಮುಖರು ಬಾಹೂರುತನುಗಳು
ಬಾಹೂರುಪಾದರು ಬಾಹುವಕ್ತ್ರರೆನೆ

ಬಹುಬಾಹು ಬಹುಪಾದ ಬಹುತಾಲುಜಿಹ್ವ
ಬಹುವರ್ಣ ಬಹುಕರ್ಣ ಬಹುರೂಪಧರರು
ಆಗಿದ್ದ ಪ್ರಮಥಗಣಾನೇಕಕೋಟಿ-
ಯನು ತಾಯಿ ಕಂಡದ್ಭುತಾಕ್ರಾಂತಳಾಗಿ
ಅತುಲಿತ ನಿಜಸಹಜಾಕೃತಿ ಪಡೆದ
ಪತಿಗೆ ನಮಿಸುತ ಸಂಸ್ತುತಿಪೂರ್ವಕದಲಿ
“ಕೇಳು ಪ್ರಮಥಪತಿ ಈ ವೀರರೆಲ್ಲ
ನಿಜಮನೋಧರ್ಮವ ತಾವಿಂತು ತಿಳಿದು

ಕಾಮರೂಗಳನು ತಳೆದಿಹರೊಪ್ಪಿ
ಈ ಮಹಾಗಣಗಳಿಗೆಲ್ಲಕೀಕ್ಷಣವೆ

ಇಡುವೆ ಬೋನವನು ಸಂಪ್ರೀತಿಯಿಂ ಭಕ್ತಿ
ಹುಟ್ಟಿತೆನ್ನುತಲಿ ವಿಭೂತಿಯ ಕೊಡಿಸಿ
ಹೋಗಿ ಮಹಾಕಾಶವೆಂಬ ಬಯಲಿನ
ಮೇಲೆ ತತ್ವಗಳಿಂದ ಹಂದರವಿಕ್ಕಿ
ಅವಿಕಲಜಾಂಡಗಳೆಂಬ ಭಾಂಡದಲಿ
ವಿವಿಧಪಕ್ವಾನ್ನಾದಿವಿತತಿಯನಟ್ಟು
ಭವ್ಯಕಲ್ಪದ್ರುಮಫಲಪಲ್ಲವಗಳ
ದಿವ್ಯಾಮೃತದಲಿ ಒಗ್ಗರಣೆಯನಿಕ್ಕಿ
ಕ್ಷೀರೇಕ್ಷುರಸದಧಿಘೃತವಾರ್ಧಿಗಳಲಿ
ಕ್ಷೀರೇಕ್ಷುರಸದಧಿಘೃತಗಳ ಸುರಿದು

ಅಕಲಂಕರಸರಸಾಯನಗಳ ಮಾಡಿ
ಸಕಲದೀರ್ಘಿಕೆಯ ವಾಸನೆಗೈದು ಕಲೆಸಿ
ಮತ್ತೆ ಚಿಂತಾಮಣಿ ಮಂದಿರಭಿತ್ತಿ-
ಗಳ ಮೇಲೆ ಪಡಿಪದಾರ್ಥಗಳ ಚಿತ್ರಿಸುತ
ಸುರಭಿಸಹಸ್ರಸುಸ್ಥಿರಜನ್ಮದೇಶ
ವರದಿವ್ಯಲೋಚನವಲಯ ವಸ್ತುಗಳ-
ನೆಲ್ಲವ ಸಿದ್ಧಪಡಿಸುತಿರೆ ಪ್ರಮಥ
ಮಂಡಲಿ ಪ್ರಮಥಕುಮಾರನೊಬ್ಬನನು
"ನೋಡಯ್ಯ ವೇಳೆಯಾಗಿಲ್ಲವೇನಿನ್ನು
ಗಿರಿಜಾಲಯಕೆ ಹೋಗಿ ಕೇಳು ನೀ"ನೆನಲು

"ಆಗಲೆ"ನ್ನುತ ಬಂದು ತಾಯಿಯ ಕಂಡು
"ವೇಳೆಯೆ ತಾಯೆ"ಂದು ಕೇಳಿದ ತಡವೆ
"ಪ್ರಮಥರನಿರುವಂತೆ ಕರೆದು ತಾರಯ್ಯ
ಪ್ರಮಥಕುಮಾರ ನೀ ಬೇಗ ಹೋಗೆ"ನಲು
"ಒಂದಿಷ್ಟು ಬಡಿಸಲಾರೋಗಿಸಿ ಬೇಗ
ಗಕ್ಕನೆ ಕರೆತಹೆ ಗಣಗಳನೆಲ್ಲ
ಹೋಗಲು ಬಲು ಹಸಿವಾಗಿದೆ"ಯೆನಲು
ಸರಸರ ಲಿಂಗಾವಸರವ ಮಾಡಿಸುತ
ಕೈತುಂಬ ಗಿರಿಜೆಯು ಬಡ್ಡಿಸುತಿರಲು
ಘನವಾದೋಗರಗಳ ಪಡಿಪದಾರ್ಥಗಳ

ಕುಲಪರ್ವತಗಳಷ್ಟು ತುತ್ತನು ಮಾಡಿ
ನಲಿದಾರೋಗಿಸಲಿದ್ದ ಪಡಿಪದಾರ್ಥಗಳು
ಓಗರಗಳು ಸಮೆಯಲು ಬೆರಗೊಂದಿ-
ಯಾಗೌರಿಯತ್ಯದ್ಭುತಾಕ್ರಾಂತೆಯಾಗಿ
"ಭರದಿಂದ ಪ್ರಮಥರೆಲ್ಲರಿಗೆಂದು ಮಾಡಿ
ಇಟ್ಟ ಪದಾರ್ಥಗಳೋಗರಗಳನು
ಮಾಣದೆ ಪ್ರಮಥಕುಮಾರನೊಬ್ಬನೆಯೆ
ತಾನಾರೋಗಿಸಿದ ವಿಚಿತ್ರ ವಿಚಿತ್ರ
ಇನ್ನೇನ ಮಾಡಲೆಂ"ದೀಶ್ವರನೆಡೆಗೆ
ಹೈಮಾವತೀದೇವಿಯೈತಂದು ನಮಿಸಿ

ತಲೆಬಾಗಿ ನಿಲ್ಲಲು ದರಹಾಸದೀಪ್ತಿ
ಬೆಳಗಲು ಪ್ರಮಥರ ವಿನುತಿಗೈಯುತ್ತ
"ಗೌರಿ, ಇಂತಹ ಕಿರಿಗಣವಿಂತಹವನು
ಹಿರಿಯಹ ಗಣಗಳಗೌರವವೆಂಥ-
ಹದು 'ಅಸಂಖ್ಯಾತಾಸ್ಸಹಪ್ರಾಣಿ'ಯೆನುತ
ಭುವಿ'ಗೇತಬೋಧನ್ನಿ ರೋಧತೆ'ಯೆನುತ
ತೊಡಗಿ ವೇದಗಳು ಸಂಸ್ತುತಿಮಾಡಹೋಗಿ
ಗಡಗಡಗಡವೆಂದು ನಡುಗಿದವಂದು
ಅದರಿಂದ ಪ್ರಮಥರಕ್ಷಯರನಪಾಯ-
ರಾವಿರ್ಭವನ್ಮಹಿಮಾಢ್ಯರದ್ವಿಜರು

ಅವ್ಯಯರನುಪಮರಮರರಕ್ಷರರು
ದಿವ್ಯರು ಭವ್ಯರು ತ್ರಿಭುವನಸ್ತುತರು
ಸುಭಗರು ಸುಗುಣರು ಸುಮತರು ಶೂರ-
ರಭವರಪ್ರತಿಮರತ್ಯಾನಂದಯುತರು
ವೇದಾಂತವೇದ್ಯರು ವಿಶ್ವೈಕನುತರು
ಆದಿಕಾರಣರಣಿಮಾದಿಸದ್ಗುಣರು
ಲಿಂಗಾಂಶರುಗಳಾದಿಲಿಂಗಸಂಭವರು
ಲಿಂಗಮೂರ್ತಿಗಳು ಲಿಂಗೈಕತನುಗಳು
ಲಿಂಗಾಶ್ರಯರು ಪ್ರಾಣಲಿಂಗಸಂಗತರು
ಲಿಂಗಸದರ್ಥರು ಲಿಂಗಾನುಭವರು

ಲಿಂಗಗಂಭೀರರು ಲಿಂಗಕಾರಣರು
ಲಿಂಗವ್ರತಸ್ಥರು ಲಿಂಗಚೇತನರು

ಲಿಂಗವಿನೋದರು ಲಿಂಗಸಂಚಯರು
ಲಿಂಗಾವಧಾನರು ಲಿಂಗಾತ್ಮಸುಖಿರು
ಲಿಂಗಾಭಿಮಾನರು ಲಿಂಗಶಾಸನರು
ಲಿಂಗಸತ್ಪ್ರಾಣರು ಲಿಂಗತತ್ಪರರು
ಸರ್ವಶುಭೋದಯ ಸರ್ವಪತಿಗಳು
ಸರ್ವಸಂಪೂರ್ಣರು ಸರ್ವಕಾರಣರು
ಹೆಚ್ಚೇನು? ಪ್ರಮಥರು ಕಾಯವು ನಮಗೆ
ಕಾಯವಲ್ಲದೆ ಮತ್ತೆ ಕಾಯವದಿಹುದೆ?

ಇಂದೊಬ್ಬ ಪ್ರಮಥನಿಚ್ಛೆಯಲಿ ಅಜಾಂಡ
ಸಂದೋಹ ಕೆಡುವುದು ಜನಿಸುಗು ನಿಲುಗು
ಅಲ್ಲದೆ ಹರಿವಿರಿಂಚಾದಿ ದೇವರನು
ಕೆಡಹುವರೆನಲಿದು ಎಂತಹ ಹಿರಿದು?
ತಪ್ಪದಿಂದೊಬ್ಬನು ರೆಪ್ಪೆಹಾಕಿದರೆ
ಆಗಲೆ ಸರ್ವಸಂಹಾರವಹುದೆನೆ
ಅದರಿಂದ ವರ್ಣನೆಗದು ಅಗೋಚರವು
ಭಾವಿಸಿ ನೋಡಲು ಪ್ರಮಥರ ಮಹಿಮೆ"
ಎಂದು ಪ್ರಶಂಸಿಸಲಂಬಿಕಾದೇವಿ
ಸಂಚಿತಮಾನಸಾಶ್ಚರ್ಯೆಯಾಗಿರಲು;

ಅಂಥ ಪಾರ್ವತಿಯು ಮುನ್ನಾರೋಗಣೆಗಿಡೆ
ಸಾಧ್ಯವಾಗದು ಚಿಕ್ಕಬಾಲಕಗೆನಲು
ದೇವ ದೇವಸ್ತುತ್ಯ ದಿವ್ಯಲಿಂಗಾಂಗ
ಭಾವನಾತೀತ ಸದ್ಭಾವಸನ್ನಿಹಿತ
ಶಂಕರ ದುರಿತಭಯಂಕರ ಶೌರಿ
ಪಂಕಜ ಪ್ರಭವಾದಿಕಿಂಕರೋಲ್ಲಸಿತ
ಶುಭಕರ ಚಿನ್ಮಯಜ್ಯೋತಿಸ್ವರೂಪ
ಪ್ರಭುವೆ ಪರಾಪರ ಭಕ್ತವತ್ಸಲನೆ
ಸರ್ವಕಲ್ಯಾಣ ಸಂಸಾರವಿದೂರ
ಸರ್ವಜ್ಞಜೀಯ ಸಾಕ್ಷಾತ್ಸಂಗಮೇಶ

ನೆಟ್ಟನೆ ನಿಷ್ಠೆಯಿಂ ನಿನಗಾರೋಗಣೆಗೆ
ನೀಡೆ ನಾ ಶಕ್ಯನೆ ಪೃಥುದಯಾ ಭಾವ?"

## ಬಸವನಿಗೆ ವರವಿತ್ತದ್ದು

ಎಂದು ಪ್ರಶಂಸಿಸಲಲ್ಲಮ ಮೆಚ್ಚಿ
ವಿನುತದಯಾಮೃತವನಧಿಯಲದ್ದಿ
“ಸುರಭಿ ಚಿಂತಾಮಣಿ ಸುರಭೂರುಹಗಳು
ದಾಸರಾಗಿರುವಂತೆ ವರವೀವುದೆಷ್ಟು.
ಹಿರಿದೆನ”ಗೆಂದು ಸಂಪ್ರೀತಚಿತ್ತದಲಿ
ಅಲ್ಲಿ ಸೇರಿರೆ ಪ್ರಸಾದವ ಕೃಪೆಗೈದು
ನೆನೆಯಲು ಪಡಿಪದಾರ್ಥಗಳು ಕೈಗೂಡ–
ಬೇಕೆಂದ ವಸ್ತುಗಳಿಂತು ತಾವಿರಲು

ಆಡಿದ ಭಾಷೆಯು ಪಾಟಿಯಾಗಿರಲು
ಮೆಟ್ಟಿದ ಮಾರ್ಗವು ನಿಲುಗಡೆಯಾಗೆ
ಮುಟ್ಟಿದ ಬೂದಿಯೆ ಹೊನ್ನಾಗಿ ಹೊಳೆಯೆ
ಮುಟ್ಟಿದ ಬಯಲದು ಮೂರ್ತಿಯಾಗಿರಲು
ತೊಡರಲು ಶಿವನಾಗೆ ಹೆದರದೆ ಗೆಲಲು
ಕವಿದ ಜಂಗಮದಟ್ಟಣೆಯು ಬೇಡಿದಾಗ–
ಲೀಯುವಕ್ಷಯಲಿಂಗ ಸಂಪದವಿತ್ತು
ಲೀಲೆಯಿಂ ತತ್ವಾರ್ಥ ಸಮ್ಮೇಳನದಲಿ
ಮೋಹಮಾಯಾದಿ ತಮೋರಾಶಿ ಹರಿದು
ದೇಹೇಂದ್ರಿಯಾದಿವಿದ್ವೇಷವಡಗಿಸಿ

ಮುನ್ನ ತತ್ವಸ್ಥಿತಿಯಿಂದ ತನ್ನರಿದು
ತನ್ನಲಿ ಸತ್ಕ್ರಿಯೋದಾತ್ತತೆಯಿರಿಸಿ
ಲೀನವಾಗುತ ಪ್ರಾಣಲಿಂಗಗಳಿರಲು
ಆ ನಾಥನಾ ಪ್ರಾಣದಲಿ ಲೀನವಾಗೆ
ಆ ನಿರಂತರಪರಮಾನಂದ ಸುಖವ
ಕೂಡಿದ ಶಿವಭಕ್ತಿಯುಕ್ತಿ ಮಾರ್ಗದಲಿ–
ರುತ 'ದಿವಾರಾತ್ರೌಚ ಮರ್ಜಯೇ'ತ್ತೆನಲು
ತಾ ಸದಾಂತರ್ಯೋಗವನ್ನು ಕೈಗೊಳಿಸಿ
ಘನಬಹಿರಂಗ ಶೃಂಗಾರಾಂತರಂಗ
ವಿನುತ ಪ್ರಮಥನ ಸಂವಿತ್ಸುಖದಿಂದ

ದಿವ್ಯಾನುಭವವಾರ್ಧಿಯಲಿ ತೇಲಿ ಬಸವ_
ನವ್ಯಯ ಶಿವತತ್ವದನುವನು ತಿಳಿದು

ಉಪ್ಪುಗಡ್ಡೆಯನು ನೀರಿನಲದ್ದಿದಂತೆ
ಕರ್ಪೂರವನು ಬೆಂಕಿ ಹೊದ್ದುಕೊಂಡಂತೆ
ಆಲಿಕಲ್ಲಿನ ಮಳೆ ವಾರಾಶಿಯಲ್ಲಿ
ಸುರಿದಂತೆ ತಾನಿರದೊಲು ವರ್ತಿಸಿದ್ದ
ಪ್ರಭುವಿನ ಚರಿತೆಯ ಭಕ್ತಿಯಿಂ ಭಕ್ತ
ಸಭೆಯಲೋದಲು ಪ್ರೀತಿಯಿಂದ ಕೇಳಿದರೆ
ಸರಸಸಮಂಚಿತ ಸಚ್ಚಿದಾನಂದ
ಸುರುಚಿರಲಿಂಗೈಕ್ಯಸುಖ ವರ್ಧಿಸುವುದು

## ಬದನೆಕಾಯಿ ಲಿಂಗವಾದದ್ದು

ಮತ್ತೊಂದು ದಿವಸದಿ ದಂಡನಾಯಕನು
ಖಂಡಿತ ಭಕ್ತಿವಿಕಸ್ವರದಿಂದ
ಜಂಗಮಾರ್ಚನೆಯ ಮಾಡುವ ಸಮಯದಲಿ
ಕಳ್ಳರು ಬಂದಿವಿಡಿಯೆಲೆಂದು ಬಗೆದು
ಲಿಂಗವಂತರು ತಾವಲ್ಲದ ಲೆಂಗರವನ
ಅಂಗಣಾಂತರಕೆ ಹೋಗಲು ಬಾರದೆನುತ
ಬದನೆಕಾಯ್ಗಳ ಕಟ್ಟಿ ಸೆರಗನು ಹೊದ್ದು
ಲಿಂಗಸನ್ನಿಹಿತರ ರೀತಿ ವರ್ತಿಸುತ-
ಲೈತರಲಾ ಬಸವಣದಂಡನಾಥ
ಕಂಡು ಭಯದಿ ಮೊಕ್ಕೆ ಕಣ್ಣಲ್ಲಿ ನಕ್ಕು

"ಲಿಂಗವಂತರು ತಾವಲ್ಲದ ಲೆಂಗರೀಶ್ವ-
ರಾಂಗಣದಲ್ಲೆಂತು ಕಾಲಿಡಬಹುದು
ಇವರು ಭಕ್ತರು ತಾನೆ, ಈಶ್ವರಾರ್ಚನೆಯ
ಕೊಂಕದೆ ಮಾಡಿರಿ ಕುಳ್ಳಿರೆಂ"ದೆನಲು
ಎದೆ ನಡುಗುತಿರಲೊಬ್ಬೊಬ್ಬರ ನೋಡಿ
ಝಲ್ಲೆಂದು ಗುಂಡಿಗೆ ದಿಗಿಲೆನೆ ನವೆಯೆ
ಯೋಚಿಸಿ "ನಾವೆಂತು ಬಂದಿ ಸಿಕ್ಕಿದೆವು
ದೇವರಿದ್ದರೆ ನಮ್ಮ ಸಾವು ತಪ್ಪುವುದು
ನಮಗಿನ್ನು ಸುಖವಾಗಿ ಹೋಗಲಸಾಧ್ಯ"-
ವೆನೆ ಕೃತನಿಶ್ಚಯರಾಗಿ ಕುಳ್ಳಿರ್ದು

ಸರಸರನೆನೆ ಲಿಂಗಸಹಿತರ ಹೋಲೆ
ಕರಗಳ ಚಾಚೆ ಕಟ್ಟಿ ಸೆರಗಿನಲಿ

ಬದನೆಯ ಕಾಯ್ಗಳಾ ಬಸವನ ಭಾವ
ಸಂಗದಿಂದಲಿ ಪ್ರಾಣಲಿಂಗಗಳಾಯ್ತು

## ಬಿಲ್ಲೇಶ ಮಲ್ಲಯ್ಯನ ಕಥೆ

ಅಂತಿದಲ್ಲದೆ ಮುನ್ನ ವ್ಯವಹಾರಕೆಂದು
ಹೋದೆಡೆಯಲಿ ಲಿಂಗಾಲಯವಿರದಿರಲು
"ಸಂತತಲಿಂಗ ಸಂಸ್ಪರ್ಶನ ನಿಯಮ
ಕೆಟ್ಟಾಗ ಸತ್ತಂತೆಯೇ ಸೆಟ್ಟಿ"ಯೆನುತ
ಕುಂಚಿತಮತಿಯಿಂವ ಹುಲುಗುಡಿ ಕಟ್ಟಿ
ಬಳ್ಳವ ಬೆಟ್ಟದಾವರೆಯಿಂದರ್ಚಿಸುತ

"ಕರಕಂಠಗುಡಿಯನು ಕಂಡೆವಾ"ವೆನುತ
ಕುಟಿಲಸೆಟ್ಟಿಗಳವನ ಕರೆದು ತೋರೆ
ಕಡುಭಕ್ತಿಯಿಂದ 'ಶಿವಾಯ ನಮೋ ನ-
ಮೋ'ಯೆಂದಡಿಗಡಿಗೆ ನಮಿಸಿ ಮೂಬಾರಿ
ಬಲಗೊಂಡು ಮನೆಗೆಯ್ದಾರೋಗಣೆಗೈಯೆ
"ಲಿಂಗವಿದೆನುತಲೋಹೋ ಮಲ್ಲಭಾವ
ಬಳ್ಳಕೆ ನಮಿಸುಂಡ ಹೊಟ್ಟೆ ಬಿರಿವೊಲು
ಬಳ್ಳವ ತನ್ನಿರಿ ಅಳೆಯಲುಬೇಕು
ಹಸಿವಿಗಾಪತ್ತಿಗೆ ಬರುವುದೆ ದೈವ
ಬೆಳಗಾಗ ಬಳ್ಳವು ಮತ್ತೆಯು ಬೇಕು"

ಎನುತಲಾ ಶಿವದೇವನಪಹಾಸ್ಯಗೈಯೆ
'ಕೇಳಕೂಡದೆ'ನುತ ಕಿವಿಗಳ ಮುಚ್ಚಿ
"ಛೀ ನಾಯಿಗಳಿರಾ, ಸಾಕ್ಷಾಲ್ಲಿಂಗಮೂರ್ತಿ-
ಯಲ್ಲದೆ ಬಳ್ಳವೆ ತಿಳಿಯದೆ ಬೊಗಳ-
ದಿರಿ ನಂಬದಿರೆ ಬನ್ನಿ ಶಿವನ ತೋರಿಸುವೆ-
ನೀಗಲೆ"ನ್ನುತ ಬರೆ ಮುನ್ನಿನಯೆಡೆಗೆ
ಪ್ರಾಕಾರವದು ಮುಖಭದ್ರಮಂಟಪವು
ಶ್ರೀಕರವಹ ಸ್ವರ್ಣಶಿಖರದ ಗುಡಿಯು
ವಿರಚಿತವಾಗೊಪ್ಪೆ ವೃಷಭೇಂದ್ರನೆದುರು
ನೋಡೆ ಬಳ್ಳವು ಲಿಂಗವಾಗಿರಲವನು

ಎಲ್ಲಲೋಕಗಳಲಿ ಬಳ್ಳೇಶದೇವ
ಮಲ್ಲಯ್ಯನೆಂದೊಪ್ಪಿದನು ಅದಲ್ಲದೆಯೆ

## ಕಾಟಕೋಟನ ಕಥೆ

ಕಾಟಕೋಟನೆನುವ ಗೊಲ್ಲನು ಒಬ್ಬ
ಆಡಿನ ಹಿಕ್ಕೆಯನೀಶ್ವರನೆನುತ
ಹಾಲೆಲ್ಲವನು ಹಿಕ್ಕೆಗೆರೆಯಲು ತಂದೆ
ಗೇಲಿ ಮಾಡುತ ಬಂದು ಕಾಲಿಂದಲೊದೆಯೆ
ಖ್ಯಾತಸದ್ಭಕ್ತಿಯಿಂದಲಿ ಕಾಟಕೋಟ–
ನಾತಗೆ ಮುಳಿಯುತ ಕೈಗೊಡಲಿಯಲಿ
ಭೂತಲದಲಿ ಬಿದ್ದು ಅತ್ತಿತ್ತ ಹೊರಳೆ
ದುಷ್ಟನ ಹಿಂದುಮುಂದಿನಿತಿಲ್ಲದಂತ

ತಲೆ ತೆಗೆದೆಸೆದನು, ತಾ ಶಿವನಂದು
ಹುಲಿದಲೆ ತೆಗೆದೆಸೆದುದ ಹೋಲುತಿರಲು
ಈ ಕಡೆಯಿವನು ತಾನಿಂತು ಹಾಕುತ್ತ –
ಲಿರಲತ್ತ ಕೈಲಾಸಹರ್ಮ್ಯಕವಾಟ
ಜಾಲಗಳೊಡನೆ ಜರ್ಜರಿತದಿ ಬೀಳೆ
ಕೀಲಲ್ಲವೇ ಕೊಡಲಿಯು ಕೈಲಾಸಕ್ಕೆ
ಕಡುಚೋದ್ಯವೆಂದೆಲ್ಲ ಸಡಗರಗೊಳಲು
ಆಗ ಹಿಕ್ಕೆಯು ಲಿಂಗವಾಯ್ತನಿತರಲಿ
ಅಧಿಕದ ಬಾಪೂರಬ್ರಹ್ಮಯ್ಯ ಭಾವ
ನಂಬಿರಲಾಗದೆ ಜೋಳವೆ ಲಿಂಗ–

ವದರಿಂದ ಭಕ್ತರಭಾವವು ಲಿಂಗ
ದೇವನಿಗೂ ಜನ್ಮದೇಶವೆನಿಸದೆ?
ಬಸವನ ಭಕ್ತಿಸೌಭಾಗ್ಯ ಪ್ರಭಾತಿ–
ಯೆಸಕದಿ ತಲೆಹೋದುದರಲೇನು ಹಿರಿದು?
ಚಪಲರು ಶಿವನ ಲಾಂಛನಪರರಾಗಿ
ಅಪವರ್ಗಕಾರಣರಾದರೆಂತೆನಲು
ಏಣಾಂಕಧರಭಕ್ತಿಗಧಿಕ'ವನಾದ–
ರೇಣ ಶಾಠ್ಯೇನ'ಯೆನ್ನಲು ತಲೆಹೋಯಿ–
ತೆನುತ ಭಕ್ತಾನೀಕವಚ್ಚರಿಗೊಳಲು
ಅನುಷಕ್ತಿಯಿಂ ಕಳ್ಳರನು ಬಸವಯ್ಯ

ಕರುಣೆಯಿಂದಲಿ ನೋಡಿಯಭಿಮತಾರ್ಥಗಳ–
ನಿತ್ತು ಭಕ್ತರಗೈದನೀಜಗವರಿಯೆ

## ಜೋಳವು ಮುತ್ತಾದ ಕಥೆ

ಮತ್ತೊಮ್ಮೆ ಜಂಗಮನೊಬ್ಬನು ಬಂದು
ಸಡಗರದಿಂದಭ್ಯಂಜನಕಾಲದಲ್ಲಿ
“ನಿತ್ಯನಿಯಮವಿದು ರಂಗೋಲಿಗಿಂದು
ಮುತ್ತಿನಪುಡಿಯದು ಮೂಬಳ್ಳ ಬೇಕು
ಕದಲದೆ ಚರಿಸದೀಕ್ಷಣಮಾತ್ರದಲ್ಲಿ
ಹತ್ತು ಖಂಡುಗ ಮುತ್ತ ಬಸವ ನೀಡೆ”ನಲು
ಸರಸರ ಲಿಂಗಪಸಾಯಿತಶಸ್ತ್ರ
ಕರತಲನಾಗಿ ನೋಡಲು ದೃಷ್ಟಿಯಿಂದ

ಜೋಳದ ರಾಶಿ ವಿಶುದ್ಧಮುಕ್ತಾಫ-
ಲೋನ್ನತರಾಶಿಯಾಗಿರಲು ನಗುತ್ತ
“ಸನ್ನುತ, ಹತ್ತು ಖಂಡುಗವೆಂಬುದೇಕೆ?
ನಿಮಗೆ ಬೇಕಾದಷ್ಟು ಕೈಕೊಳ್ಳಿ”ರೆನಲು
ಅಂತಾಗಲೆನುತಲಿ ಮುತ್ತುಗಳಷ್ಟ-
ನ್ನೂ ಮೂಟೆಗಳಲಿ ಕೊಂಡೊಯ್ದನು ತಾನು.

## ಮೊರಟದ ಬಂಕಯ್ಯನ ಕಥೆ

ಮೊರಟದ ಬಂಕಯ್ಯ ಮುನ್ನೊಂದು ದಿವಸ
ಕರಕಂಠಭಕ್ತನೋರ್ವನು ಅರ್ಧರಾತ್ರಿ-
ಯಲಿ ಬರೆ ಕಂಡವನಡಿಗಳಿಗೆರಗಿ
ಸರಸೋಚಿತಕ್ರಿಯೆಯಿಂದ ತಣಿಸಲು;

“ನಮ್ಮ ಲಿಂಗಕೆ ನೇಮವದು ಗೊಡ್ಡಾಕಳಿನ
ಹಾಲಿನ ಜೊತೆ ಬಿಲ್ವ ಪತ್ರೆಯು ಬೇಕು
ಇಷ್ಟಾಗದವಸರವಳವಡದೆಮಗೆ
ಇಲ್ಲದು ಸಲ್ಲುವುದೆಂದು ಬಂದಿಹೆವು
ತಡವಾಗಬಾರದನ್ನೀಕ್ಷಣದಲ್ಲಿ
ಪಡೆಯದಿದ್ದರೆ ಕಾರ್ಯವಾಗದು ತಾನು
ಹರಭಕ್ತರೊಬ್ಬರೂರಲಿಯಿಲ್ಲ ಬೇಡೆ
ನೆರೆಯೂರಿಗೀವೇಳೆ ಹೋಗಲಸಾಧ್ಯ
ಇನ್ನು ಹೇಗೆ” ನಲಾತ್ಮದಲ್ಲಿಷ್ಟು ಕೂಡ
ಕೊಂಕದೆ ಬಂಕಯ್ಯ ಗೊಡ್ಡನಾಕ್ಷಣವೆ

ಹಿಡಿತಂದು ಕೊರಡಿನ ಗೂಟಕೆ ಕಟ್ಟಿ
ಮನಸಿಜಹರಭಕ್ತಗಣವನು ನೆನೆದು
"ಈ ಕೊರಡಲಿ ಪತ್ರೆಯೀ ಗೊಡ್ಡಿನಿಂದ
ಪ್ರಾಕಟದಲಿ ಹಾಲ ಪಡೆಯುವೆ"ನೆನುತ
ಗಡಿಗೆಯ ಬೇಗ ತೊಳೆದು ತಂದು ಹಿಂಡೆ
ಗಡಿಗೆ ತುಂಬಲು ಹಾಲ ಸುರಿಸಿತು ಗೊಡ್ಡು
ಕೊರಡಲಿ ಪತ್ರೆಯಂಕುರಿಸಿ ಹರಡಲು
ಭರದಲಾ ಮೊರಟದ ಬಂಕಯ್ಯ ಕೊಯ್ದು
ತಂದು ಆ ಭಕ್ತನಿಗಿತ್ತು ನೇಮವನು
ಬೇಗ ಸಲ್ಲಿಸಿದನು ಹೇಳೆ ವಿಚಿತ್ರ-

ವೆನಲು ಕೇಳಿದೆವಂದಾದ್ಯೋಕ್ತಿಗಳಿಂದ
ಅದ ಕಂಡೆನೀಗಲು ಈ ಕಟಕದಲಿ
ಬಸವನ ದೃಷ್ಟಿ ಸಂಸ್ಪರ್ಶನದಿಂದ
ಎಸೆಂಪೆ ಜೋಳದರಾಶಿಯೆಲ್ಲರು ನೋಡ-
ಲಾಯಿತು ಮುತ್ತಿನರಾಶಿಯದಾಗಿ
ಎಂದು ಭಕ್ತರ ತಂಡ ವಿನುತಿಸುತಿರಲು

**ಸಂಗಮೇಶನು ಬಸವನ ಮೂರನೇ ಕಣ್ಣು ಕೇಳಿದ್ದು**

ಮತ್ತೆ ಚೆಚ್ಚರದಲೀಪ್ಸಿತಸ್ತುವಿತತಿ-
ಯಧಿಕದಿಬಸವನಿಂತೀವುದ ನೋಡಿ
'ಆಸೆಯಹುದೆನಗೆ ಬೇಡಲು' ಎನುತ
ರೂಢಿಯಿಂ ಜಂಗಮರೂಪವ ತಳೆದು

ಚಕ್ಕನೆ ಸಂಗಮೇಶ್ವರನಾಗ ಬಂದು
ಗಕ್ಕನೆ ಮೂರನೆ ಕಣ್ಣು ಬೇಡಿದಡೆ
ಆಯತಲಿಂಗಪಸಾಯಿತಹಸ್ತ-
ನಾಗಿ "ನಿನ್ನಯ ಮಾಯೆಯರಿಯೆನೇ"ಯೆನುತ
ಮುಕುರವ ತೋರಿಸಿ "ಮುಕ್ಕಣ್ಣು ನಿನಗೆ
ಅಕಳಂಕ, ಸಹಜವಾಗಿದೆ ನೋಡು" ಎನಲು
ಕನ್ನಡಿಯಲ್ಲಿ ಫಾಲಾಕ್ಷವ ಕಂಡು
ಆ ದೇವದೇವನು ನಾಚಿ ನೀರಾಗಿ
ಆಗಲಲ್ಲಿಯೆ ನಿರಾಕಾರನಾಗುತ್ತ
ಜಾರುವುದನು ಕಂಡು "ಛೀ, ಹಂದೆ ಹಂದೆ

ಓಡದಿರೋಡದಿರೋಹೋಹೋ ಸಂಗ
ಓಡದಿರೋಡದಿರೇನನು ಒಲ್ಲೆ-
ನರಿಯೆಯ ಸತ್ಯಮಾಹೇಶ್ವರನಿಲಯ-
ಗಳ ನೆರೆಯಂಕನಾದೆನ್ನ ನಿಜಗತಿ
ದಾಸಯ್ಯನೊಲು ನಿನ್ನ ತವನಿಧಿ ಬೇಡೆ
ಸಿರಿಯಾಳನಂತಾತ್ಮಜನನ ನಾ ಬೇಡೆ
ಕನಕವೃಷ್ಟಿಯ ಕೇಳೆ ಕರಿಕಾಲನಂತೆ
ವನಿತೆಗೆ ಎಡೆಯಾಡಿಸೆನು ನಂಬಿಯಂತೆ
ಮತ್ತೆಯು ಕುಂಬಾರಗುಂಡಯ್ಯಗಿತ್ತ
ಮಿಂಡಪ್ರಾಯನನು ನಾ ಕಾಮಿಸಲೊಲ್ಲೆ

ಸ್ವರ್ಗಾಪವರ್ಗಾದಿ ಸೌಖ್ಯಗಳೊಲ್ಲೆ
ಭರ್ಗ ನೀ ಪ್ರಮಥರ ಭಕ್ತರ ಮನೆಗ-
ಳಲ್ಲಲರಿರಿಸಿದ ಆ ಪ್ರಸಾದವಿದೆ
ಭೋಗಿಸಲೆನಗೆ ಇರುವ ಕಾಲವೆಲ್ಲ.
ಸರ್ವಭಕ್ತಾತ್ಮ ನಿನ್ನ ಜಳಕದವನು
ಗುರುವಾಗೆಮ್ಮಯ ಕಾಟಕೋಟಯ್ಯನವರು
ಹರ, ನಿಮ್ಮೂರಿನ ಹೂವಾಡಿಗ ಪುಷ್ಪದಂತ-
ನರಿದು ಪೂಜಾರಿ ಕಣ್ಣಪ್ಪದೇವಯ್ಯ
ಇಂಡೆಗಟ್ಟುವ ನಮ್ಮ ಇಂಡೆರೇಕವ್ವೆ
ಖಂಡದೀಪದವನು ಆ ನಮಿನಂದಿ

ನೆಟ್ಟನೆ ತುಂಬು ನಿನಗೆ ವಿಭೂತಿ-
ಯಿಡುವವನೆಮ್ಮಯ ಪಿಳ್ಳನೈನಾರು
ಅನುಷಕ್ತಿಯಿಂ ಗಂಧವರ್ಪಿಸುವವನು
ಮನಸಿಜಸಂಹರ, ನಮ್ಮಣುಮೂರ್ತಿ
ವರದ, ನಿಮ್ಮಯ ಧೂಪದವನು ಮಾಚಯ್ಯ
ವರಕೀರ್ತಿ, ನಿಮ್ಮ ಗಂಟೆಯವನೋಹಿಲನು
ಮಂಗಳಾರತಿಗಳ ಧರೆಯಲೆತ್ತುವನು
ವರದ, ಸೋಮಯ್ಯನು ಶರಣವತ್ಸಲನು
ಅಡುಗಬ್ಬವನು ತರುವವನು ಮಾಚಯ್ಯ
ಮಲಗಿರೆ ಕರಿಕಾಲ ಪಡಿಯಿಡುವವನು

ಕರಕಂಠ, ಬಾಣಸಿ ಚಿರುತೊಂಡನಂಬಿ
ಜೊತೆಯ ಬಾಣಸಿಗಳೆಮ್ಮಯ ಚಂಗಳವ್ವೆ

ಕರಿಕಾಲಚೋಳ ತಳಿಗೆಯಿಡುವವನು
ಗಡಿಗೆಯಡ್ಡೆಯ ಹೊರುವವನು ಹೊನ್ನಯ್ಯ
ರಮಣೀಯವಾದೋಗರಗಳ ಪಡಿಸಣ-
ದವನೆಮ್ಮ ಚೆನ್ನಯ್ಯ, ವಿಮಲದೇಹಿಕನೆ
ಆರೋಗಿಸುತಿರಲು ತಾ ನೀಡುವವಳು
ವೀರಬೋಳವ್ವೆಯು, ವಿಶ್ವೈಕವಿನುತ
ಅಡಪದವನು ರೇಚಯ್ಯನು ವ್ರತತೊಟ್ಟ
ಆ ಪ್ರಸಾದಿಯು ನಮ್ಮ ಬಿಬ್ಬಿ ಬಾಚಯ್ಯ

ಮೃಡ, ಎಮ್ಮ ನಾಟ್ಯನಮಿತ್ತಂಡಿ ವೈದ್ಯ-
ನಡರಲು ಕಲ್ಲಿದೇವಯ್ಯ ಬೊಂಬೆಯವ
ಮಲಹರ ಸಾಮವೇದಿಯೆ ಪುರೋಹಿತನು
ಎಸೆವ ಪೌರಾಣಿಕನೀ ಮಾಯಿಭಟ್ಟ
ನಿಮ್ಮಯ ಪರಿಹಾಸಕರು ಕಳಿಯಂಬ-
ನೆನಲು ವಾಗೀಶನೈನಾರು ಪಾಠಕನು
ಶ್ರೀಪತಿಪಂಡಿತ ಶಿವನೆ ನಿಮ್ಮ ಕವಿ
ಆ ಪಂಡಿತಯ್ಯನು ಮುಖ್ಯ ಪಂಡಿತನು
ಆದಿವೈಣಿಕನೆನೆ ಮಾದಿರಾಜಯ್ಯ-
ನಾದ ರಸಜ್ಞನು ಘನ ಶಂಕರಯ್ಯ

ಕರಣಿಕ, ಕರ್ಮಸಂಹರ, ಕೇಶಿರಾಜ
ಆ ಜಗದೇವನೆ ದಂಡನಾಯಕನು
ಗಣನಾಥ, ಶಿಶಮೌಳಿ, ನಿಮ್ಮ ಪ್ರಧಾನಿ
ನುತಿಸಿ ನೋಡಲು ನಮ್ಮ ಪ್ರಭು ನಿಮ್ಮ ಪ್ರಭುವು
ಇರಿಭಕ್ತನು ಗಜಸಾಹಣೆಯಶ್ವಸಾಹಿ
ಸ್ಥೈರ್ಯದ ಚೇರಮ ಯೋಗಿಯೊಡೆಯನು
ಅನಘನೆ, ರಾಮಯ್ಯನೇಕಾಂತದವನು
ಎಸೆವ ಬಲ್ಲಳನೆ ಕುಂಟಣಿ, ಸಖಿ ನಂಬಿ
ಶಂಕರ, ನಿನ ಬಂಟ ಶಂಕರದಾಸಿ
ನಿಮ್ಮಂಕಕಾರನು ಏಣಾಧಿನಾಥ

ಲೆಂಕಿ ತಾ ಮಂಚಯ್ಯ ನಿಮ್ಮ ನಗರದ
ಸುಂಕಿಗ ಸುಂಕದ ಬಂಕಯ್ಯ ತಾನು
ಸುರಗಿ ಹಿಡಿಯುವವ ಸುರಗಿಚೌಡಯ್ಯ
ಆ ಕುಲಚ್ಚರಿಯಾರು ಕಥಕನಾಗಿರಲು

ಬೆಜ್ಜಮಹಾದೇವಿ, ಹರ, ನಿನ್ನ ದಾದಿ
ಆ ರುದ್ರ ಪಶುಪತಿಯೇ ಮಂತ್ರವಾದಿ
ಸುವಿಧಾನಿ ಚಿಕ್ಕಯ್ಯ, ತಳವಾರ ನಿನ್ನ
ಶಿವರಾತ್ರಿ ಸಂಗಯ್ಯ, ಕೆಳೆ ಭೋಗತಂದೆ
ದೇವರದಾಸಯ್ಯನೇ, ದೇವ, ದಾಸ
ಕಿನ್ನರ ಬ್ರಹ್ಮಯ್ಯ ನಿನ್ನ ಭಂಡಾರಿ

ಮಡಿವಾಳ ಮಡಿವಾಳಮಾಚಿದೇವಯ್ಯ
ಕಡಮಲ ನಂಬಿಯೆ ದೀವಿಗೆಯವನು
ಬೆಳ್ಳಗೆ ಗೋಡೆಗಳನು ತಿದ್ದುವವನು
ಸಲ್ಲೀಲ ಗೋಡೆಯಮಲ್ಲಯ್ಯ ತಾನು
ಕುಂಬಾರ ಕುಂಬಾಠ ಗುಂಡಯ್ಯ ತಾನು
ಜೊಮ್ಮಯ್ಯ ಬೇಟೆಗಾರನು ಮಹಿಯಲ್ಲಿ
ಕಮ್ಮಾರರವನೆನೆ ಘನವಿಳೆಹಾಳ
ಬೊಮ್ಮಯ್ಯ, ಕೀಲಾರಿಯಧಿಕ ಚಂಡೇಶ
ಮಾಯಾವಿ, ಬಳ್ಳೇಶ ಮಲ್ಲಯ್ಯ ಕೊಟ್ಟಿ–
ಗೆಯವನು, ಬಾಚಯ್ಯನುಗ್ರಾಣದವನು

ಹಾಲಕರೆಯುವವ ಭಕ್ತ ಬಂಕಯ್ಯ
ಹಾಲ ಕಾಸಿಡುವವಳಾ ಕೊಡಗೂಸು;
ಅದರಿಂದ ನಿನ್ನ ಸಕಲನಿಯೋಗದಲಿ
ನಮ್ಮವರಿರುವರು, ಮನ್ಮನೋರಮಣ!
ಏನಿದೆ ಕೊರತೆಯು, ನನಗೇನು ಕಡಿಮೆ
ಏನನೆ ಕೇಳು ನಾನೀವೆನು ನಿನಗೆ
ವಿಶ್ವಾಸವದಿರಲು ಮನ ತಲ್ಲಣಿಸಲು
ಮಾಣದೆ ಪ್ರಮಥರ ನಿನ್ನ ಮೇಲಾಣೆ!
ಕಾಲಕೂಟವು ಕುತ್ತಿಗೆಗೆ ಬಹ ಮುನ್ನ
ತೇಲುವ ಪುರಗಳು ಉರಿಯದ ಮುನ್ನ

ಗೌರಿವಿವಾಹವು ನಡೆಯದ ಮುನ್ನ
ತುಂಬು ಬ್ರಹ್ಮಾಂಡಗಳಲರದ ಮುನ್ನ
ಭರದಿ ಮೂರ್ತಿಗಳೆಂಟು ಜನರಿಹ ಮುನ್ನ
ಹರಿಬ್ರಹ್ಮರುಗಳೆಲ್ಲ ಹುಟ್ಟದ ಮುನ್ನ
ಆ ಮುನ್ನವಾಮುನ್ನವಾಮುನ್ನ ಮುನ್ನ
ನೀನೆನ್ನ ಸ್ವಾಮಿಯು ನೀನೆನ್ನ ಬಂಟ

ಕರಕಂಠ, ಏಕೆ ನೀ ಕಳವಳಪಡುವೆ
ನನ್ನಿಂದ ತಪ್ಪಿಸಿಕೊಂಬೆಯ"ಯೆನುತ-
ಲಸಮಾಕ್ಷನೊಡನೆ ಮಾರಂಕದಿ ಗೆಲಿದ
ಬಸವನುದ್ಯದ್ಭಕ್ತಿಭಾತಿಯಿಂದಿಂತು.

**ಗೊಲ್ಲತಿಯ ಪವಾಡ**

ಮತ್ತೆಯು ನಿರ್ಮಲಾಖಂಡಿತ ಕೀರ್ತಿ
ದಂಡನಾಥಾಗ್ರಗಣ್ಯನು ಪುಣ್ಯವಂತ
ಸಜ್ಜನನುತನು ಬಸವನೊಂದು ದಿವಸ
ಬಿಜ್ಜಳನೋಲಗದಲ್ಲಿ ಪ್ರೀತಿಯಲಿ
'ಓಡದಿರೆ'ನುತೊಂದು ಹರವಿಯನೆತ್ತು-
ವಂದಿದ ಬಾಹುಯುಗ್ಮವ ಚಾಚಿದಾಗ
"ಮರಳಷ್ಟು ಬೂದಿಯ ನೊಸಲಲಿ ಪೂಸಿ-
ದನೀತ ಬೆಟ್ಟದಂತಹ ಮರುಳನಿದು
ಸ್ಪಷ್ಟ"ವೆನ್ನುತ ರಾಜ ಮೆಲ್ಲನೆ ನಗುತ
"ಅಕ್ಕಟಾ ! ಬಸವಯ್ಯ ಶಿವನ ಮರುಳನೆ

ಭ್ರಮಿಸಿದೆಯಾ ಭಕ್ತಿರಸ ತಲೆಗೇರಿ
ಕುಮತಿಯಾಗುತ ತುಂಬಿದೋಲಗದಲ್ಲಿ
'ಓಹೋ'ಯೆನುತ 'ಓಡದಿರು ನೀನು' ಎನುತ
ಬಾಹುಯುಗ್ಮವ ಚಾಚಿ ಹಿಡಿದುದೇ"ನೆನಲು
'ಸ್ವಗುಣ ಸಂಕೀರ್ತನಗೈವುದು ಸಲ್ಲ,
ಸಲ್ಲದೆಂದಿರೆ ಸಭೆ ನಗುವುದು' ಯೆನುತ
"ತ್ರಿಪುರಾರಿ ಗುಡಿಯ ಮೂಡಣದಿಕ್ಕಿನಲ್ಲಿ
ಕಪಿಲೇಶ್ವರನು ಎಂಬ ತಾಪಸಿಯೊಬ್ಬ
ನಿತ್ಯವಾ ಲಿಂಗಕ್ಕೆ ಖಂಡುಗವಾರು
ಹಾಲ ಮಜ್ಜನಗೈಯೆ ಕಾಲುವೆ ತೋಡಿ

ಬೀದಿ ಬೀದಿಗಳ ಮೇಲ್ವರಿಯಲಾನೆಗಳ
ಪಾದಘಟ್ಟನೆಯಿಂದಲಾದ ಕೆಸರಲಿ
ಆ ಬೀದಿಯಲಿ ಮಾರಲೆಂದು ಮಜ್ಜಿಗೆಯ
ಹೋಗುತ್ತ ಕಾಳವ್ವೆ ಕಷ್ಟಪಡುತ್ತ
ಕಗ್ಗೆಸರಲಿ ಜಾರೆ ಮಜ್ಜಿಗೆಗಡಿಗೆ
ಬೀಳಲು ಗೊಲ್ಲತಿ "ಬಸವ ಓ"ಯೆನಲು

ಹಿಡಿದೆ ನಾನಲ್ಲಿ ಬೀಳದ ರೀತಿ ಗಡಿಗೆ-
ಯನು ಚಟ್ಟನೇ ಕೈಗಳನು ಚಾಚಿ"ಯೆನುತ
ಗೊಲ್ಲತಿಯಾ ರೂಪ ಗೊಲ್ಲತಿಯ ಮನೆ
ಗೊಲ್ಲತಿಯಿದ್ದ ಜಾಗವ ಹೇಳಿದಾಗ ೧೦೫೦

ಕರೆಸಿ ಗೊಲ್ಲತಿಯನು ರಾಜ ತಾ ಕೇಳೆ
ತಪ್ಪದೆ ಬಸವಯ್ಯನೆಂದ ರೀತಿಯಲಿ
ಹೇಳಿ ತಾನೂರಿದ್ದ ಕೈಯಿನ ಕೆಸರ-
ನಾಗಲ್ಲಿ ಜಾರಲು ಅಂಟಿದ್ದ ಕಾಲ
ಕೆಸರ ತೋರಿಸಿಯರಿಯಿರೆ ನೀವು ಇವನ
ಪೆಂಪಿಗಿದಾವುದು ಹಿರಿದೆಂದು ಮುನ್ನ

**ತಿರುಚಿಟ್ಟಂಬಲನ ಕಥೆ**

ಪ್ರವಿಮಲಭಕ್ತಿ ವಿಭ್ರಾಜಿತಲೀಲೆ-
ಯಲ್ಲರುವತ್ತು ಮೂವರು ಭಕ್ತರಲ್ಲಿ
ಶ್ರೀನಿಲಯನು ಚಿರುಚಿಟ್ಟಂಬಲನೆನು-
ವೊಬ್ಬನು ಭಕ್ತನನಶ್ವರಕೀರ್ತಿ ೧೦೬೦

ಕರಮರ್ಥಿಯಿಂದ ವರ್ಷಾಕಾಲದಲ್ಲಿ
ಹರಪೂಜನಾರ್ಥದಿಂದಂದೊಂದು ದಿವಸ
ಬಂದು ಹೂಗಳ ಕೊಯ್ದು ತರುವೆಡೆಯಲ್ಲಿ
ವನನಿಧಿತೀರದಲವ ಕಾಲುಜಾರಿ
ಬಿದ್ದರೂ ಹೂಗಳ ಬೀಳದಂತವನು
ಹಿಡಿಯುತ 'ಚಿಟ್ಟಂಬಲಾಧೀಶ' ನೆನಲು
ಪರಮನು ಭಕ್ತನ ಬೀಳದಂತೆತ್ತಿ
ಹಿಡಿದಂತೆನ್ನನು ಹಿಡಿದ ಬಸವಲಿಂಗ
ನಾ ಬೀಳಲಲ್ಲದೆ ವಸುಧೇಶ, ಕೇಳು
ಪೊಡವಿಯಲಾ ಸೊನ್ನಲಿಗೆ ಪುರವರಕೆ ೧೦೭೦

ಹೋಗಿರಲಾನು ತತ್ಪುರಿ ಸುಖಗೋಷ್ಠಿ-
ಯಾಯತಭಕ್ತಸಭಾಭ್ಯಂತರದಲಿ
ಸಿದ್ಧರಾಮನು ಕಂಡು ಶಿವಭಕ್ತವಿತತಿ
"ಸಿದ್ಧನೆ, ಲೋಕಪ್ರಸಿದ್ಧವಾಗಿರುವ
ಅಭಿನವ ಶ್ರೀಗಿರಿಯೆನಿಸಿದೀ ಪುರದ-
ಲಭಿನವಲೀಲೆಗಳಿಂದಲಿ ರಚಿಸಿ-

ದಾಪರ್ವತದ ಮಲ್ಲಿಕಾರ್ಜುನದೇವ–
ನನ್ನಧಿಕದಿ ಕರೆತಂದಿಲ್ಲಿ ನಿಲಿಸೆ
ಧ್ರುವವಾಗಿ ಲಕ್ಷತೊಂಬತ್ತು ಸಹಸ್ರ
ಶಿವಲಿಂಗಗಳ ಚೆಚ್ಚರದಿ ಪ್ರತಿಷ್ಠಿಸುತ

ಅದಕೆ ತಕ್ಕಂತೆ ಮರ್ತ್ಯದಲನ್ನಪಾನ–
ಗಳನು ಮುಟ್ಟದಲೆ ಭಕ್ತಿಯ ಪೆಂಪಿನಿಂದ
ಸಹಜಮಕುಟವು ನೊಸಲ ಕಣ್ಣು ಮೆರೆಯೆ
ಮಹಿತಯೋಗಾನಂದ ಮಹನೀಯನಾಗಿ
ಮೈಯನೆರಳು ಬುವಿಯನು ಮೆಟ್ಟುವಾಗ
ಹೆಜ್ಜೆಗಳವು ಕಾಣದಂತೆ ಸಂಚರಿಸು–
ತಮಿತಸಮಾಧಿಯೋಗಾಂತರದಲ್ಲಿ
ಪ್ರಮಥಲೋಕಕ್ಕಾತ ಸಿದ್ಧನಾಗೆಯ್ದು
ಅಲ್ಲಿನ ತತ್ವರಹಸ್ಯಸದ್ಗೋಷ್ಠಿ–
ಯಲಿ ಪ್ರೀತಿಯಿಂ ಸೇರಿ ಮರಳಿ ಬಂದಿಹಿರಿ ;

ಪ್ರಖ್ಯಾತವಿದೆಮಗೆ ಪ್ರಮಥಲೋಕದಲಿ
ಆಖ್ಯಾತಸತ್ಕೀರ್ತಿಯಹ ಬಸವಾಖ್ಯ–
ನನು ಕಂಡಿರೇ ಭಕ್ತಭೂರಿಸದ್ಗೋಷ್ಠಿ–
ಯಲ್ಲೊಪ್ಪುವನು ಇಲ್ಲಿಯಲ್ಲಿಯೂ ಇರುವ–
ನಾತನಿಹುದ ಕೇಳ್ದೆವಖಿಲಲೋಕದಲಿ
ಸತತಸಾನ್ನಿಧ್ಯಾನುಷಕ್ತಿಯಿಂ" ದೆನಲು
ಶಿವಭಕ್ತರನು ಕಂಡು ಸಿದ್ಧರಾಮಯ್ಯ
"ಪ್ರವಿಮಲಗತಿಯುಲಿ ಪ್ರಮಥಲೋಕದಲಿ
ಅರಸಿ ಬರುವೆ"ನೆಂದು ಆ ಕ್ಷಣದಲ್ಲಿ
ಹೊರಟು ಕೈಲಾಸನಗಾಗ್ರಹರ್ಮ್ಯದಲಿ

## ಸಿದ್ಧರಾಮನು ಕೈಲಾಸಕ್ಕೆ ಹೋದದ್ದು

ಅಜಕಾಲ ಬುದ್ಧಕ್ಷಯಾಂತರಜ್ಯೋತಿ
ನಿಜಬಲಪ್ರಿಯ ಯಾಮ್ಯನೀಲ ರುದ್ರೇಶ್ವ–
ರೇಶಾನ ಶರ್ವ ಸರ್ವೇಶ ಭರ್ಗಪ್ರ–
ಕಾಶ ಸುರಾಧೀಶ ಗೌರೀಶ ಧನ್ಯ
ವಾಮದೇವ ಭವೋದ್ಭವ ಪ್ರಚಂಡಧರ
ವಾಮದೇಹೋಗ್ರಸಂವಾಹ ಪಿನಾಕಿ

ಧಾತೃವಿಧಾತೃ ಹುನಾಶನ ಶಿವ ಮ-
ಹಾತೇಜ ಸೂಕ್ಷ್ಮಲಯ ಕ್ರೂರದಂಷ್ಟ್ರ
ಕ್ಷೇಮೇಶ ವಿಕರಣಾರ್ಚಿಷ್ಮಂತ ದಮನ
ಭೀಮಾಭಿದಾನೋಗ್ರ ಪಿಂಗಾಕ್ಷ ಕರ್ತೃ

ವಿಷಧರಾನಂತ ನಿವೃತ್ತಿ ನಿಧೀಶ
ವೃಷಭಗಣಾಧ್ಯಕ್ಷ ವಿಭು ವಾಯುವೇಗ
ಹರ ರತ್ನಕರ ಬಭ್ರು ಹಂತಾಗ್ನಿ ದುಃಖ
ಕರ ಸುಖಕರ ಸುದುಂಬರ ಕಾಲರುದ್ರ
ಹರಿಹರಬ್ರಹ್ಮಸೌಮ್ಯ ಸ್ವಾಮಿ ಮೃತ್ಯು-
ಹರ ಭಯಾನಕ ಹಲಹಲ ಪರಂಧಾಮ
ವಜ್ರದೇಹಾವ್ಯಯ ವಟ ರುದ್ರ ದೀರ್ಘ
ವಜ್ರದಂತ ವಿಯೋಕ್ತೃ ವಟವಿರೂಪಾಕ್ಷ
ಸಹನೇಶ ಶಂಭು ಪಂಚಶಿಖ ನಿಯೋಕ್ತೃ
ಗುಹ ರುದ್ರ ಬಾಧಕ ಗೋಪತೀಶಾನ

ಪಿಂಗಳಾಸಾಧ್ಯ ಮಾತಂಗ ರೋಹಿತ ಸು-
ರಂಗ ಕಪಾಲಧರ ಸ್ಥೂಲರುದ್ರ
ಶಾಶ್ವತೇಶೋರ್ಧ್ವಕೇಶ ತ್ರಿದಶೇಶ
ವಿಶ್ವೇಶ ಚಂಡೇಶ ವಿತ್ತೇಶ ವೃಷಧ-
ರಾಕ್ಷಯರುದ್ರ ಕಾಲಾಗ್ನಿರುದ್ರ ತ್ರಿ-
ಯಕ್ಷ ಫಣೀಂದ್ರ ವಿಚಕ್ಷಣಾದಿಯಹ
ರುದ್ರಚಿಹ್ನೆಗಳಿಹ ರುದ್ರಾತ್ಮರಾದ
ರುದ್ರಗಣಾಧೀಶ್ವರನ್ನರ್ಚಿಸುತಿಹ
ಶ್ರೀನಂದಿ ನಂದಿನಾಥಾನಂದ ವೃಷಭ
ಸಾನಂದ ಗೋಮುಖ ಹಯಮುಖಾಭಂಗ

ದಂಡಪಾಣೀಶಾನ ಚಂಡೀಶ ರುದ್ರ
ರುಂಡಾಂಭರಣ ರುದ್ರ ಪುಂಡರೀಕೇಶ
ಪರ್ವತಾಭರಣ ದರ್ಪ ಸುಭದ್ರ ಶರ್ವ
ಸರ್ವಜ್ಞ ಸರ್ವಾತ್ಮ ಸರ್ವಸಂಹರಣ
ದಾರುಕ ರೇಣುಕ ಧವಳಾಕ್ಷ ವೀರ
ವೀರಕ ವೀರಭದ್ರಾರೂಢ ಭದ್ರ
ತ್ರಿಜಟಿ ಧೂರ್ಜಟಿ ಲೋಕ ವಿಜಯಾಟ್ಟಹಾಸ
ನಿಜಬಲ ವಿಷಬಲ ನೀಲ ನಿಶ್ಶಂಕ

ನೀಲಲೋಹಿತ ನಿತ್ಯ ನಿಷ್ಕಳ ಶಾಂತ
ಕಾಲ ಮಹಾಕಾಲ ಕಾಲ ಕಾಲೋಗ್ರ

ರೂಪ ನಿರೂಪ ವಿರೂಪಾಕ್ಷ ವಿಶ್ವ
ರೂಪ ಪುಷ್ಕಳ ಶಾಂತರೂಪ ವೃಷಾಂಕ
ಉಗ್ರಾಕ್ಷಭರ್ಗಾಸಿತಗ್ರೀವ ಪಿಂಗ–
ಳೋಗ್ರಕಾಯಾತಿ ಕಾಯೋತ್ತುಂಗ ವಿಮುಖ
ಕರಿಮುಖ ನರಮುಖ ಕಪಿಮುಖ ದ್ವಿಮುಖ
ಶರಭಮುಖಾಮುಖೋಷ್ಟ್ರಮುಖ ಶಾರ್ದೂಲ
ಮುಖ ಚತುರ್ಮುಖ ಪಂಚಮುಖ ಸುಮುಖಾಷ್ಟ
ಮುಖ ನವರ್ಮುಖ ದಶಮುಖಷಣ್ಮುಖೈಕ
ಮುಖ ಸಹಸ್ರಮುಖ ದುರ್ಮುಖ ವಿಕಟಾಕ್ಷ
ಮುಖಹರ ವಿಷಹರ ಮಲಕರ ಮೃತ್ಯು

ಹರ ಯಮಹರ ಗಜಾಸುರಹರ ಸಕಲ
ಸುರಪರಾಸುರಹರ ಪುರಹರ ಭೃಂಗಿ
ಗಜಕರ್ಣ ಶಾರ್ದೂಲಕರ್ಣಾಶ್ವಕರ್ಣ
ವಿಜಯ ಘಂಟಾಕರ್ಣ ವೀರಗೋಕರ್ಣ–
ರಾದಿಯಾಗೆಲ್ಲ ಸದೈಶ್ವರ್ಯಶೀಲೆ–
ಯಾದಿ ಪ್ರಮಥಗಣೇಂದ್ರಾವಳಿಗೊಲಿವ
ಸನಕ ಸನಂದನ ಸನ್ಮುನೀಶ್ವರರು
ತಮ್ಮಯ ಹೃದಯಾಬ್ಜಗಳನೆ ಅರ್ಪಿಸುವ
ಉಪಮನ್ಯು ವಾಮದೇವ ಪವಿತ್ರವಾಣಿ
ಕಪಿಲ ಕಣ್ವಾಗಸ್ತ್ಯ ಕೌಶಿಕ ಸುಬಲ

ಶ್ವೇತ ದಧೀಚಿ ವಸಿಷ್ಠ ಕಣ್ವಾತ್ರಿ
ಗೌತಮ ಕಶ್ಯಪ ಸೂತಾನಿಲಾತ್ಮ
ಮಾಂಡವ್ಯ ಹರಿತ ಮಾರ್ಕಂಡೇಯ ಪುಲಹ
ಶಾಂಡಿಲ್ಯ ವತ್ಸಕುತ್ಸಪುಲಸ್ತಿ ಶಕ್ತಿ
ಬಾದರಾಯಣ ಭೃಗು ಬಕದಾಲ್ಭರುರುಶಿ–
ಲಾದ ಮೌದ್ಗಲ್ಯ ಪರ್ಣಾದ ಶಾಕಲ್ಯ
ಗರ್ಗ ಶೌನಕ ಚತುಷ್ಕರ್ಣಮೃಕಂಡು
ಭಾರ್ಗವಾಂಗಿರಸ ವಿಭಾಂಡಕ ಶುನಕ
ಮೃತ್ರೇಯಿ ಬಲ್ಲಕಿ ಮಂಕಣ ಚ್ಯವನ
ಮಿತ್ರಾವರುಣ ನಾರದಾತ್ರಿ ಸೌವರ್ಣ

ಪೈಲ ಸುಮಂತ ಸುಬ್ರಹ್ಮಣ್ಯ ಮಂದ-
ಪಾಲ ಸುಮಿತ್ರ ರೈಭ್ಯಕ ಸತ್ಯ ಸುಮಹ
ಪರ್ವತ ಜೈಮಿನಿ ಪೌಲಸ್ತ್ಯ ಗಾರ್ಗ್ಯ
ದೂರ್ವಾಸ ಮೊದಲಾದ ಸರ್ವಮುನಿಗಳು
ಮೆರೆಯಲಾಶೀರ್ವಾದ ವೇದನಾದಗಳ-
ನಲರಿಸಿಯಡಿಗಡಿಗನುಕೀರ್ತಿಗೈಯೆ
ಸುರ ನರ ದನುಜ ಖೇಚರ ಸಿದ್ಧ ಸಾಧ್ಯ
ಗರುಡ ಗಂಧರ್ವೋರಗಪ್ರಕರಗಳು
ದ್ವಾದಶಾದಿತ್ಯರೇಕಾದಶರುದ್ರ-
ರಾದಿ ನವಬ್ರಹ್ಮರಷ್ಟವಸುಗಳು

ಸುರಪಾಗ್ನಿಯಮದೈತ್ಯವರುಣಗಂಧವಹ
ನರವಾಹ ಹರದಿಶಾನಾಥಯೂಥಗಳು
ಶ್ರೀವಾಗ್ವಧೂನಾಥ ಜಿಷ್ಣರು ಅವಿಕ-
ಲಾವರಣಸ್ಥರಾಗಭಯವ ಬೇಡೆ
ತುಂಬುರುನಾರದಾದಿಗಳು ಗೀತಾಮೃ-
ತದಲಿ ಸ್ನೇಹರಸದಲೋಲಾಡಿಸುತಿರ-
ಲಂಬಿಕಾಸಹಿತನಾಗಾಸ್ಥಾನ ಮಂಟ-
ಪದೊಳಗೆ ಪೇರೋಲಗದಿ ಮೆರೆದಿದ್ದ
ಶಿವದೇವನನು ಕಂಡು ಸಿದ್ಧರಾಮಯ್ಯ-
ನವಿರಳಭಕ್ತಿಯಿಂ ಸಾಷ್ಟಾಂಗ ನಮಿಸಿ

"ಬಿನ್ನಹವವಧಾರು ವಿಶ್ವಲೋಕೈಕ
ಸನ್ನುತ, ಮರ್ತ್ಯದ ಸದ್ಭಕ್ತಜನರು
'ಪ್ರಮಥಲೋಕದೊಳಗೆ ಬಸವಣ್ಣನಿಹನೆ
ಪ್ರಮಥೇಶಗೊಲಿವಾಗ ಪರಿಕಿಸೆ'ಂದಿಹರು
ಬಸವಸಂಸ್ತುತ್ಯ, ಸದ್ಭಕ್ತೈಕದೇಹ
ಅಧಿಕದಲಿಹ ರೂಪವನ್ನು ತೋರೆ"ನಲು
"ಆ ಲೋಕವೀಲೋಕವೆನಲೇಕೆ ಬಸವ-
ನಾವಲೋಕದಲಿಲ್ಲ, ಎಲ್ಲೆಡೆಯಿರುವ
ಪ್ರಮಥರಲ್ಲಿಹ ತಾನು ಸದ್ಭಕ್ತರಲ್ಲಿ
ಮೆರೆವನೆನ್ನಯ ಹೃದಯಾಬ್ಜಕರ್ಣಿಕದಿ

ಸತತದಿ ಗುರುಲಿಂಗಚರಲಿಂಗದಲ್ಲಿ
ಅತಿಮುದದಿಂದಿಹನಾದಿ ಬಸವನು

ಅಷ್ಟೇಕೆ ಇಲ್ಲಿ ನೋಡೆ"ನ್ನುತ ಶಂಭು
ಸಂತಸದಲಿ ತನ್ನ ಹೃದಯವ ತೆರೆಯೆ
ಸಂಗತವಹ ಕರಸ್ಥಲದ ಲಿಂಗವದು
ಜಂಗಮಾವಳಿಗೆಲ್ಲ ಶರಣೆಂಬ ಕರವು
ಅನಿಮಿಷನಾಗಿ ಹರನ ಕಾಂಬ ದೃಷ್ಟಿ
ಕಣ್ಣಲಿ ಹರ್ಷಾಶ್ರುಕಣವಿತಾನಗಳು
ದರಹಸಿತಾಸ್ಯವಿಸ್ಫುರಣದಲಧಿಕ
ಪರಮಶಿವಧ್ಯಾನ ಪಾರವಶ್ಯದಲಿ

ಪದ್ಮಾಸನವ ಹಾಕಿ ಪರಮೇಶ ಹೃದಯ
ಪದ್ಮದಲ್ಲಿದ್ದ ಬಸವನನು ಕಂಡು
ಪ್ರಮಥರು ಹರ್ಷಿಸಲಮರರು ನಮಿಸೆ
ಪಾರ್ವತಿಯತ್ಯದ್ಭುತೋಪೇತಳಾಗೆ
ಆ ಮೂರ್ತಿಯನು ನೋಡಿ ಸಿದ್ಧರಾಮಯ್ಯ-
ನುದ್ಗತಾನಂದ ಪೂರ್ಣಾತ್ಮದೊಳಿರಲು
ಹರನು ಪಾರ್ವತಿಯನು ಕುಡಿನೋಟದಿಂದ
ನೋಡಿಯಡಿಗಡಿಗೆ "ಪೂರ್ಣೇಂದುವದನೆ
ಕಂಡೆಯ ಬಸವನ ಸುರುಚಿರ ಮಹಿಮೆ
ಈ ಚೆಲುವೀಸ್ಥೈರ್ಯ ಬೇರಾರಿಗುಂಟು?

ಶೋಭಿಸಲಾದಿಯ ವೃಷಭೇಂದ್ರನೆನಲು
ನಾನೇ ಎರಡು ಮೂರ್ತಿಗಳ ಧರಿಸಿದೆನು,
ಕೇಳ್ 'ತವಪುತ್ರೋಭವಿಷ್ಯಾಮಿ'ಯೆನುತ
ನೆನೆಯೆ ಶಿಲಾದನಿಗಾನೆ ಹುಟ್ಟಿದೆನು,
ಅತಿಶಯ ಭಕ್ತಹಿತಾರ್ಥದಿಂದಾನು
ಬುವಿಯಲಿ ಜನಿಸಿದೆ ಬಸವನೆನಿಸುತ-
ಲೆಸೆಯಲೀ ರೀತಿಯಲೀಶನೂ ನಾನೆ
ಬಸವನ ಹೆಸರಿನ ಸದ್ಭಕ್ತ ನಾನೆ
ಮುನ್ನವು ನಮ್ಮಯ ಬಸವನ ಗುಣಮ-
ಹೋನ್ನತಿಯರಿಯೆಯಾ ಅಂತುಮಲ್ಲದೆಯೆ

ಲೋಕಾಧಿಪತಿಯಾನು ಲೋಲಾಯತಾಕ್ಷಿ
ಪ್ರಾಕಟದಲಿ ಲೋಕಪಾವನನೀತ
ಕಾರಣಲೋಕ ಸಂಹಾರಕ ನಾನು
ಕಾರಣಲೋಕೋಪಕಾರಿ ತಾನೀತ

ಭಕ್ತವತ್ಸಲನಾನು ಪರ್ವತಪುತ್ರಿ
ಭಕ್ತರತ್ನಗಳಿಗೆ ಭಂಡಾರಿಯೀತ
ಭಕ್ತೈಕದೇಹಿಯಾಲೋಚಿಸಲಾನು
ಭಕ್ತಜನ ಪ್ರಾಣಿ ಬಸವನೀಕ್ಷಿಸಲು
ಮುಕ್ತಿಗೆ ರಾಜ ನೋಡು, ಸುದತಿ ನಾನು
ಭಕ್ತಿಗೆ ರಾಜನು ಬಸವನೀಕ್ಷಿಸಲು

ಪಸರಿಸಲಾನು ಲಿಂಗಸುಪಟ್ಟಬದ್ಧ
ಬಸವನು ಸದ್ಭಕ್ತಿಯ ಸುಪಟ್ಟಬದ್ಧ
ಅಚರಲಿಂಗವು ನಾನು, ಅಚಲೇಂದ್ರತನೆಯೆ
ಸಚರಾಚರಕ್ಷೋಣಿ ಚರಲಿಂಗವೀತ
ಶಂಭುವೆನ್ನುವ ಹೆಸರಾದಿಯಿಂದೆನಗೆ
ಎಸೆಯೆ ದ್ವಿತೀಯಶಂಭುವಿವನ ಹೆಸರು
ಸ್ಥಿರಭಕ್ತಿಯೆಮ್ಮನರ್ಚಿಸದೆ ದೊರಕದು
ಇವನನು ನೆನೆಯಲಷ್ಟಕೆ ಮುಕ್ತಿಯಹುದು
ಅಲರಿಸೆ ಪ್ರಾಣದೇಹಾರ್ಥಗಳೆನಗೆ
ಇಂತೀವರಖಿಲಭಕ್ತರು ತಾವೊಂದೆಡೆಗೆ

ನಚ್ಚಿನಿಂ ಪ್ರಾಣದೇಹಾರ್ಥವ ಬಸವ-
ನೀವುತ್ತಲಿರುವನು ಸಕಲಭಕ್ತರಿಗೆ
ಆಯತಮತಿ ಬಸವಾಯೆನೆ ಬಹುದು
ಈಯಕ್ಷರತ್ರಯವನ್ನಿಂತು ಒಮ್ಮೆ
ಉಸುರುವಾತನ ಮುಖಸದನಲ್ಲೆಂದು
ಕದಲದಿರುವೆವೆಮ್ಮ ಗಣಗಳು ನಾವು
ಹೆಚ್ಚಿರಲಾವನ ಉದಿತಸದ್ಭಕ್ತಿ-
ಯದುವೆ ಬಸವನ ಮಹತ್ವದಿಂ ತಾನೆ?
ಪರಕಿಸಲಾವನೂ ಪಡೆವ ಪ್ರಸಾದ
ವರಮುಕ್ತಿ ಬಸವನ ಕೃಪೆಯಲ್ಲವೇನು?

ಮನದಲಾರಾದರೂ ನನ್ನನು ನೆನೆಯ-
ಲದು ಬಸವನ ಅಂಶವಲ್ಲದಿನ್ನೇನು?
ಪ್ರಸರಿಸಲಾವನು ಜಂಗಮಭಕ್ತಿ
ವಸುಧೆಯಲದು ಬಸವನ ವೃತ್ತಿ ತಾನೆ?
ಭಕ್ತಿಪಟ್ಟವನೊಂದೆ ಬಸವನಲ್ಲದೆಯೆ
ಶಕ್ತಿಸಮೇತರು ಜಗದಲಿರುವರೆ?

ಅಲ್ಲದೀತನು ನನ್ನಲಿರುವಂತೆ ಭಕ್ತ
ಹೃದಯಸ್ಥನಾಗಿರುತಿರುವನು ನೋಡೆ"
ಎನ್ನುತ ಮತ್ತೆ ಪ್ರಸ್ತುತಿಸುತ ಶಂಭು-
ವಂಚಿತಮತಿಯಿಂದ ಬಸವಯ್ಯಗೆಂದ:

"ಬಸವ ಮರ್ತ್ಯದೊಳಗೆ ಭಕ್ತರಿರುವರೆ ?
ಎಸಕದ ಸಂಸಾರವಿಷ್ಟವೇ ನಿನಗೆ ?"
ಎಂದಾಣತಿಯನೀಯಲಾ ದೇವ ಹೃದಯ
ವನಜಸ್ಥನಹ ಬಸವಣ್ಣನಿಂತೆಂದ :
"ಔಷಧಕಾದರೂ ಮರ್ತ್ಯಲೋಕದಲಿ
ಇಂದುಶೇಖರಭಕ್ತನೆಲ್ಲಿಯೂ ಇಲ್ಲ.
ಭಕ್ತನು ನಾನೊಬ್ಬನೀ ಭಕ್ತರೆಲ್ಲ
ಭಕ್ತಾತ್ಮ, ನಿನ್ನ ಸ್ವರೂಪರಾಗಿರಲು.
ಮತ್ತೆಯು ಇಹುದೊಂದು ಬಿನ್ನಹ ಕೇಳು
ಚಂಡೇಶವರದ, ಪ್ರಸನ್ನತೆಯಿಂದ

ಜಂಗಮಲಿಂಗಪ್ರಸಾದೋಪಭೋಗ
ಸಂಗತಸುಖಸುಧಾಶರಧಿಯಲಿರುವ
ಇಂತಹ ಭವಗಳೆಷ್ಟಾದರೂ ಸುಖವೆ
ಈಯಪವರ್ಗಮಹಿಪ್ಪತೆಗಿಂತ.
ಅದರಿಂದ ಶುನಕಸೂಕರಕ್ರಿಮಿಕೀಟ-
ವಾಗಿಹ ಜನ್ಮಗಳಾದರೂ ನೀಡು.
ಸುಪ್ರಸಿದ್ಧದ ಜಂಗಮ ಪ್ರಸಾದವನು
ಯಾವೊತ್ತು ಭೋಗಿಪುದೆಂತು ಸಿಕ್ಕಿದರು
ಸಾಕಯ್ಯ, ಭವಕೋಟಿಶತಸಂಖ್ಯೆಯಲ್ಲಿ
ಸತತದಿ ಹುಟ್ಟಿಸು, ಮುಕ್ತಿಯನೊಲ್ಲೆ-"

ನೆನ್ನಲು ಗೌರೀಶನತಿದಯಾದೃಷ್ಟಿ-
ಯಲಿ ನೋಡಿ ಸಿದ್ಧರಾಮನಿಗೆ ತೋರಿಸಲು
ಶಿವನಿಗೆ ನಮಿಸುತ ಸಿದ್ಧರಾಮಯ್ಯ
ಭುವಿಗೆ ತಾನೈತಂದು ಅದ್ಭುತವೆನಿಸೆ
ಭಕ್ತಸಮೂಹಕೆ ಬಸವನ ಮಹಿಮೆ
ವ್ಯಕ್ತವಾಗಲು ಹೇಳಿ "ನಾನಂತು ತಿಳಿದೆ-"
ನೆಂದಾಗ ಬಿಜ್ಜಳ "ನಂತಾಗಲಿದುವು
ಜನರಿಗೆಲ್ಲರಿಗೀಗ ದೃಷ್ಟವಾಗಿಹುದು"

ಎನ್ನುತ ಮೂಲ್ಯವಸ್ತ್ರಾಭರಣಗಳ–
ನೆಸೆಯಲು ಕಾಳವ್ವೆಗೊಲ್ಲತಿಗಿತ್ತು

"ಅವಿಕಲಾಜಾಂಡತತ್ವಾತ್ಮಕನಾದ
ಶಿವನು ಕರಸ್ಥಲಾಸೀನನಾಗಿರಲು
ಸರ್ವಗತನೆ ಆದ ಶಂಭುಭಕ್ತನಿಗೆ
ಸರ್ವಗತತ್ವವು ಸಹಜವೆನಿಸದೆ?
ಸರ್ವಮಯನೆ ಆದ ಶಂಭುಭಕ್ತನಿಗೆ
ಸರ್ವಮಯತ್ವವು ಸಹಜವಾಗಿರದೆ?
ದೂರೇಕ್ಷಣವು ಮತ್ತೆ ದೂರಶ್ರವಣವು
ಅಣಿಮಾದಿಸಿದ್ಧಿಗಳಭವಭಕ್ತನಿಗೆ
ಗಣಿಸಲು ತಾನೆಷ್ಟು ಶ್ಲಾಘ್ಯವೆಂ"ದೆನುತ

ಸಕಲಮಾನವರು ಮಸ್ತಕತಟನ್ಯಸ್ತ
ಮುಕುಳಿತಹಸ್ತರಾಗೆರಗುತ್ತಲಿರಲು
'ಭೇಷಯ್ಯ'ಯೆನುತ ಭೂವಲ್ಲಭನತುಲಿ–
ತೋಲ್ಲಾಸಚಿತ್ತನಾಗೆಲ್ಲ ವಸ್ತುಗಳ
ವೀರನು ಬಸವಣ್ಣ ದಂಡನಾಯಕನಿ–
ಗಿತ್ತನುಡುಗೊರೆಯ ಸಂಪ್ರೀತಿಯಿಂದ.
ಗುರುಭಕ್ತಿ ಶೃಂಗಾರ, ಗುಣಗಣಾಧಾರ
ವರದಯಾಲಂಕಾರ, ಸುರುಚಿರಾಕಾರ
ಖ್ಯಾತಗಂಭೀರ, ದುಷ್ಕರ್ಮವಿದೂರ
ಗೀತಮಹೋದಾರ, ಧೂತಸಂಸಾರ.

ಅಕುಟಿಲಚಿತ್ತ, ಶಿವಾಚಾರವೇತ್ತ
ಪ್ರಕಟತತ್ವಾಯತ್ತ, ಪ್ರವಿಮಲ ವೃತ್ತ
ಅಜ್ಞಾನ ಚೇತ್ರ, ಉದಾತ್ತಚರಿತ್ರ
ವಿಜ್ಞಾನ ಪಾತ್ರ, ಸಂವಿತ್ಸುಖಾಮಾತ್ರ
ರೂಢವ್ರತೋತ್ತುಂಗ, ರುಚಿರಾಂತರಂಗ
ಗೂಢಪ್ರಸಾದಾಂಗ, ಗೊಬ್ಬೂರಸಂಗ!
ಇದುವಸಂಖ್ಯಾತ ಮಾಹೇಶ್ವರದಿವ್ಯ
ಪದ್ಮಪದ್ಮಸೌರಭಭ್ರಮರಾಯಮಾಣ
ಜಂಗಮಲಿಂಗಪ್ರಸಾದೋಪಭೋಗ
ಸಂಗತಸುಖಸುಧಾಶರದಿನಿಮಗ್ನ

ಸುಕೃತಾತ್ಮ ಪಾಲುಕುರಿಕಿ ಸೋಮನಾಥ
ಸುಕವಿಪ್ರಣೀತವಾಗಧಿಕ ಶೋಭಿಸುವ
ಚರಲಿಂಗ ಘನಕರಸ್ಥಲಿ ವಿಶ್ವನಾಥ
ವರಕೃಪಾಂಚಿತಕವಿತ್ವಸ್ಫೂರ್ತಿಯಿಂದ
ಮೆರೆವ ಬಸವಪುರಾಣದ ಕಥೆಯಲ್ಲಿ
ಅನುಪಮದಲಿ ದ್ವಿತೀಯಾಶ್ವಾಸವಾಯ್ತು. ೧೩೩೬

# ತೃತೀಯಾಶ್ವಾಸ

ಶ್ರೀರುದ್ರಭಕ್ತಾಂಘ್ರಿಶೇಖರ, ಶುದ್ಧ
ವೀರಮಾಹೇಶ್ವರಾಚಾರ, ಸಂಗಾಖ್ಯ!
ದೃಢವಾಗಿ ಮತ್ತೊಬ್ಬ ಮಿಂಡಜಂಗಮನು
ಮತೊಮ್ಮೆ ಬಸವಣ್ಣ ದಂಡನಾಯಕನು
ಮಂತ್ರಿಗಳೊಡನೆ ತಾ ರಾಜಾಜ್ಞೆಯಂತೆ
ತಂತ್ರಗಳಿಗೆ ಸಂಬಳವನೀಯುವೆಡೆಗೆ
ಬಂದು "ಈಯರ್ಥವು ಬೇಕು ಇಷ್ಟನ್ನು
ನೀಡದಿರೇನನು ಒಲ್ಲೆನಾ"ನೆನುತ
ಧಟ್ಟಿಸಿ ಕೇಳಲು ಪೆಟ್ಟಿಗೆಗಳನು
ಚಿನ್ನವಿದ್ದಂತೆಯಾಯಯ್ಯಗೆ ನೀಡೆ

ತಂತ್ರಸಮೇತದಿ ಧರಣೀಶನೆಡೆಗೆ
ಮಂತ್ರಿವರ್ಗವು ಹೋಗಿ ಮತ್ತೆಂದರಿಂತು:
"ಹೇಳಲು ಕೊಂಡೆಯವಹುದು, ಹೇಳದಿರೆ
ತಪ್ಪಹುದದರಿಂದ ಹೇಳಬೇಕಿಹುದು.
ಕೆಲಸಮಾಡಲು ಭಯ ಬಸವಯ್ಯನೊಡನೆ
ಧನವೆಲ್ಲವೊಬ್ಬ ಮಿಂಡನಿಗಿತ್ತ"ನೆನುತ
ಕೊಂಡೆಯವನು ಹೇಳೆ ಕೋಪಿಸಿ ರಾಜ
ಭಂಡಾರಿ ಬಸವಣ್ಣ ದಂಡನಾಯಕನ
ಕರೆಯಿಸಿ "ನಮ್ಮರ್ಥವೊಪ್ಪಿಸಿ ಹೋಗು
ತಪ್ಪೇನು? ಸಾಕು ಪ್ರಧಾನಿಯ ಪಟ್ಟ

ದಂಡಿಸಲಾಗದೆಂಬುದನರಿದಿಂತು
ಭಂಡಾರವೆಲ್ಲವ ಹಾಳು ಮಾಡಿರುವೆ
ಪರಧನವಪಹರಿಸದ ಭಾಷೆಯಂತೆ
ಪರಧನವನ್ನೆಂತು, ಬಸವ, ಕೈಕೊಂಡೆ!
ಹೆಚ್ಚು ಮಾತುಗಳೇಕೆ ಹೆದರಿದೆ ನಿನಗೆ
ನಮ್ಮರ್ಥವೊಪ್ಪಿಸಿ ನಿನ್ನ ಮಟ್ಟಿಗಿರು"

ಎಂದಾಗ ಕಿಂಚಿತ್ಪ್ರಹಸಿತಾಸ್ಯನಾಗಿ
ಜನನಾಥನಿಗೆ ಬಸವಣ್ಣನಿಂತೆಂದ :
"ಪರಮೇಶ ಭಕ್ತಿಯೆಂಬ ಸುರತರುವಿರೆ
ಹರಭಕ್ತಿಯೆನ್ನುವ ಕನಕಾಚಲವಿರೆ

ಕಾಮಾರಿಭಕ್ತಿಚಿಂತಾಮಣಿಯಿರಲು
ಸೋಮಾರ್ಧಧರಭಕ್ತಿ ಸುರಧೇನುವಿರಲು
ಭಕ್ತನಾಶಿಸುವನೆ ಪರಧನಕೆಂದು
ಸಿಂಹವೆಂದಾದರೂ ಹುಲ್ಲು ಮೇಯುವುದೆ?
ಕ್ಷೀರಾಬ್ಧಿಯಲ್ಲಿ ತಾ ಕ್ರೀಡಿಪ ಹಂಸ
ಗುಂಡಿಯ ನೀರನು ಕುಡಿಯಲಾಶಿಪುದೆ?
ಚೂತಫಲಗಳನು ಚುಂಬಿಪ ಗಿಣಿಯು
ಭ್ರಾಂತಿಯಿಂ ಬೂರುಗ ಫಲಕಾಶಿಸುವುದೆ?
ರಾಕಾಮಲಜ್ಯೋತ್ಸ್ನೆ ಕುಡಿವ ಚಕೋರ
ಆಕಾಂಕ್ಷೆಗೈವುದೆ ಕುಡಿಯೆ ಕತ್ತಲೆಯ?

ಹೂಪರಿಮಳದಲಿ ವಿಹರಿಪ ದುಂಬಿ
ಹರಿದೋಡಿ ಸುಳಿವುದೆ ಬೊಬ್ಬುಳಿ ಸುತ್ತ?
ಅರಿಯೆಯ ದಿಗ್ಗಜೇಂದ್ರದ ಮರಿಯಿಂತು
ಹಂದಿಮೊಲೆಯ ಸೀಪುವುದೆ? ಅರಿಯದಿರೆ
ಅರಿದಹ ಲಿಂಗಸದರ್ಥರಮನೆಯ
ದಾಸನಾದೆನಗೊಂದು ಸರಕೆ ನಿನ್ನರ್ಥ?
ಮೊಡವೀಶ, ನಿನ್ನ ಧನಕ್ಕೆ ಕೈಚಾಚೆ
ಒಡೆಯರಿಗಿತ್ತೆನು ಒಡೆಯರ ಧನವ
ಕಾಣಿ ಕಡಿಮೆಯಾಗೆ ಭಕ್ತನಾನಲ್ಲ
ಬೇಕೆನೆ ಹಣದ ಲೆಕ್ಕವ ನೋಡು" ಎಂದು

ಧಟ್ಟಿಸಿ ಬಸವಣ್ಣದಂಡನಾಯಕನು
ಪೆಟ್ಟಿಗೆಗಳನು ಮುಂದಿಟ್ಟು ಬೀಗಗಳ
ತೆಗೆಯಲು ಹೊನ್ನುಗಳುಕ್ಕುತ ನೋಡ-
ಲಚ್ಚರಿಯೆನೆ ಲೆಕ್ಕಕಗ್ಗಳವೆನಿಸೆ

## ನರಿಗಳು ಕುದುರೆಗಳಾದ ಕಥೆ

"ಮಧುರ ಪಾಂಡ್ಯನು ತನ್ನ ಮಂತ್ರಿಗೀ ರೀತಿ-
ಯಧಿಕದರ್ಥವನಿತ್ತು ಹಯಗಳ ಬಿಲಿಯೆ

ಕಳುಹಿಸಲಾಗ ಸದ್ಭಕ್ತಿ ಹೆಚ್ಚಳದಿ
ಹೋಗುತ್ತ ಜಂಗಮಾರ್ಚನೆ ಮಾಡಿ ಮಾಡಿ
ಹಣವೆಲ್ಲ ವ್ಯಯವಾಗೆ ಹಯಗಳ ಬಿಲಿಯ–
ಲರ್ಥವಿಲ್ಲದಿರಲು ಚಿಂತೆಯನುಡುಗಿ

ಹೊಲದ ನರಿಗಳನು ಹಿಡಿದು ತರಿಸುತ–
ಲಾ ಪಾಂಡ್ಯಭೂನಾಥಗವನೆ ತೋರಿಸಲು
ಚೊಕ್ಕನೈನಾರರ ಮಿಕ್ಕದ ಕರುಣೆ–
ಯಿಂದಲಕ್ಕಜವೆನೆ ನರಿಗಳವೆಲ್ಲ
ಕಂಕಣ ತೇಜಿಗಳೆನಿಸವೆಯಾಗ ;
ಮಲಹರ ಭಕ್ತರ ಮಹಿಮೆಯನರಿಯ–
ಲಿದು ಚೋದ್ಯವೇ" ಯೆಂದು ಎಲ್ಲ ಬಕುತರು
ಸದಮಲಚಿತ್ತದಿಂ ಸಂತಸವೊಂದ–
ಲತಿ ವಿಸ್ಮಯಕ್ರಾಂತನಾಗಿ ಬಿಜ್ಜಳನು
'ಈತನೀಶ್ವರನಲ್ಲದಲ್ಲ'ನೆನುತ್ತ

ವರವಸ್ತ್ರ ಭೂಷಣಾವಳಿಗಳನಿತ್ತು
ಪರಮಾನುರಾಗದಿಂ ನರರೆಲ್ಲ ಕೇಳೆ
"ಈ ಭಂಡಾರಿಯ ಮೇಲೆ ಯಾರಾದರಿನ್ನು
ಕೊಂಡೆಯ ನುಡಿದರಾ ಚಂಡಿ ನಾಯಿಗಳ
ನಾಲಗೆ ಸೀಳಿಸಿ ಸುಣ್ಣವನಿಟ್ಟು
ಹುರಿದಿಹ ಮರಳನು ಸುರಿಸುವೆ ಬಾಯ್ಗೆ"
ಎನುತ ಬಸವಸಿಂಹವನು ಬೀಳುಕೊಂಡು
ನಗರಕೈತಂದನು ಜನಗಳು ನುತಿಸೆ.

**ಬಸವನು ಹೆಂಡತಿಯ ಸೀರೆಯನ್ನು ಜಂಗಮಗಿತ್ತದ್ದು**

ಮತ್ತೆವೊಬ್ಬಯ್ಯನು ವೇಶ್ಯಾಲಯದಲಿ
ಇದ್ದು ದಾಸಿಯ ಕೂಗಿ 'ಭಂಡಾರಿಯ ಮನೆ

ಯಲಿ ನಿತ್ಯಪಡಿ ಬೇಡಿಕೊಂಡು ಬಾ ಬೇಗ'–
ನೆನ್ನಲು 'ಅಂತಾಗಲೆ'ನುತಲ್ಲಿ ಹೋಗಿ
ಆ ಹೆಣ್ಣು ಬಸವನ ಪಟ್ಟದರಸಿಯ
ಎಡೆಗೈದು ಅವರುಟ್ಟ ಸೀರೆಯ ಕಂಡು
ಆಶ್ಚರ್ಯದಿಂ ಪಡಿಬೇಡಲಾರದೆಯೆ
ಭರದ ದಾಸಿಯು ಮರಳುತ ತನ್ನೊಡತಿಗೆ

'ಅಕ್ಕ ನಾನೇನೆನ್ನಲೀಗ ನಿನ್ನಾಣೆ-
ಯೊಂದು ಚೋದ್ಯವ ಕಂಡೆನಲ್ಲಿಗೆ ಹೋಗಿ ;
ಅಂಥ ದಿವ್ಯಾಂಬರವಖಿಲಲೋಕದಲೆ
ಕಾಣದು, ಬಸವನ ಪಟ್ಟದ ರಾಣಿ-

ಯುಟ್ಟಿದ್ದ ಪಟ್ಟಾವಳಿಯ ಸೀರೆ ಕಂಡು
ನೆಟ್ಟಗೆ ಬಂದೆ ನಾ ನಿನಗದನರುಹೆ.
ಭಾವ ಕೇಳಲು ಸಾಕು ಬಸವನೀಗಳೆಯೆ
ಆ ವಸ್ತ್ರವೀವನು ಸಂದೇಹ ಪಡದೆ
ಹೋಹ ಮಹಾದೇವ ಭಕ್ತರ ಕೂಡ-
ಲರಿದರಿದೆನಲು ಗಣಾರಾಧನೆಗಳ
ಪಡೆತಂದು ಜಂಗಮಕೋಟಿಗೆ ಸ್ನೇಹ-
ದಿಂದಲಿತ್ತಂತಹಮೂಲ್ಯ ವಸ್ತ್ರಗಳು
ಪೆಂಜಾವಳಿಯು ಜಯರಂಜಿಯು ಮಂಜು
ಮಂಜವು ಮಣಿಪಟ್ಟೆ ಭೂತಿಲಕಗಳು

ಶ್ರೀವನ್ನಿಯವು ಮಹಾಚೀನಿ ಚೀನಿಗಳ
ಭಾವಜತಿಲಕವು ಪಚ್ಚೆಯ ಪಟ್ಟೆ
ರಾಯಶೇಖರವನು ರಾಜವಲ್ಲಭವ
ವಾಯುಮೇಘವು ಗಜವಾಳವು ಗಂಡ-
ವಸನವು ಕಾವಿಯ ಸರಿಪಟ್ಟೆ ಹಂಸ
ಪಟ್ಟೆ ವೀಣಾವಳಿ ಬಲ್ಲಾಳದಟ್ಟಿ
ವಾರಣಾಸಿಯು ಚೀಕು ವಾಯುಕೆಂದೊಗರು
ಗೌರಿಗನಯವನು ಕ್ಷೀರೋದಕಗಳ
ಪಟ್ಟೆಯ ಮರಕತ ಪಟ್ಟೆ ಹೊಂಬಟ್ಟೆ

ಕೆಂಬಟ್ಟೆ ಬಿಳಿಬಟ್ಟೆ ನೇತ್ರವಟ್ಟೆಗಳ
ಅಲ್ಲದೆ ತವರಾಜ ಮಾಂದೋಳಿರವಿಯು
ಚಂದ್ರಾತಪಗಳನು ಸಾಂಧ್ಯರಾಗವನು
ಇಂದ್ರನೀಲಗಳ ಮಹೇಂದ್ರಭೂಷಣವು
ಸಣ್ಣವಡಂಜಿಯು ಶರಧಿಯು ಮೇಘ-
ವರ್ಣೆಯು ರುದ್ರಾಕ್ಷಿವರ್ಣೆ ಕಾಂಭೋಜಿ
ಹುಲಿಯುಗುರಿನ ಪಟ್ಟೆ ಭೂಪತಿ ರುದ್ರ
ತಿಲಕವ ಸರಿಪಟ್ಟೆ ಮಲಯಜಸಿರಿಯು

ದಟ್ಟ ಮೇಘವು ಗಜಾವಳಿ ಹಯಾವಳಿಯು
ಮಗುಟವು ಸರಿಕಂಬಿ ಬಿಳಿಯ ದಿವ್ಯಾಂಬ-

ರಗಳವು ಉದಯರಾಗಗಳು ದೇವಾಂಬ-
ರಗಳು ಪೊತ್ತಿಯ ಗುಜ್ಜ ರಾಷ್ಟ್ರಪಟ್ಟೆಗಳು
ಮೊದಲಾದ ನಮಗರಿಯದ ತರತರದ
ಹಿಂದೆ ನಮ್ಮವರೆಲ್ಲ ಪಡೆದ ತರಹದ
ಮಾನಿತ ವಸ್ತ್ರವಿತಾನಗಳುಂಟು
ಆದರೀ ವಸ್ತ್ರಸಮಾನವಾಗಿರವು
ತಥ್ಯವಿಂತಿದು"ಯೆಂದು ದಾಸಿಯು ಹೇಳೆ
ಮಿಥ್ಯಗೈಯದೆ ವೇಶ್ಯೆ ಮಿಂಡನ ನೋಡಿ
ಸರಸದಿ "ನಿಮಗೆನ್ನ ಮೇಗಡೆಯೊಲವು
ಇದ್ದರೆ ಬಸವನ ಕಾಂತೆ ಗಂಗಾಂಬೆ-

ಯುಟ್ಟಿಹ ಸೀರೆಯ ತಕ್ಷಣ ತಂದು
ನೆಟ್ಟನೆ ನನಗಿತ್ತು ಒಲವ ತೋರಿಸಿರಿ"
ಎನ್ನಲು ಅಂತಾಗಲೆನುತಲಾ ಮಿಂಡ
ತಾ ಬಂದು "ಬಸವ ನಿನ್ನಸತಿ ಗಂಗಾಂಬೆ
ಯುಟ್ಟ ಪಟ್ಟಾವಳಿ ಸೀರೆಯನೆಮಗೆ
ಈಗಿಂದೀಗಲೆ ನೀನು ಕೊಡಿಸಲೆ ಬೇಕು"
ಎನೆ ತನ್ನ ಸತಿಯನಾಸ್ಥಾನಸದನಕೆ
ಬರಹೇಳಿ ಕರೆಸಿ, ಹೆಂಡತಿ ಬಳಿ ಬರಲು
"ಹುಟ್ಟು ಸಾವುಗಳರಿಯದಿಹ ಮಹಾತ್ಮ-
ನಿಂತಧಿಕ ನಿನ್ನ ಸೀರೆ ಬೇಡಿದನು,

ಕೊಡು ಸೀರೆಯನು, ನೀನು ಸೀರೆಯನೀಯೆ
ಹುಟ್ಟಿಲ್ಲವೆಮ"ಗೆಂದು ತಾನೆಲ್ಲ ವಿಧದಿ
ಲಜ್ಜೆಸಿಗ್ಗುಗಳ ತಾನರಿಯದ ಬಸವ-
ನಾ ಜಲಜಾಕ್ಷಿಯ ಸೀರೆಯ ಹಿಡಿದು
ಸಡಗರದಿಂದೆಳೆಯುತ್ತಿರೆ ವಸ್ತ್ರ
ದಳಿತಾಂಬುಜಾನನೆಯುಡಿಯಿಂದ ಬಾರ-
ದಿರೆ ಕಂಡು ಅದ್ಭುತಾಕ್ರಾಂತಾತ್ಮರಾದ
ಜನರನು ನೋಡುತ್ತ ಜಂಗಮನೆಂದ
"ಗಹನವೆ ನೋಡೆ ಜಗದ್ಧಿತಸೂತ್ರ
ಸಹಜವಾಹನರಾದ ಶಂಭುಭಕ್ತರಿಗೆ

ಇಡುಗುಡಿ ನಾಯನಾರೆಂಬೊಬ್ಬ ಭಕ್ತ
ಸತಿಯ ಸೀರೆಯ ಬಿಚ್ಚಿ ಕೊಡನೆ ಭಕ್ತರಿಗೆ?
ಹನ್ನೆರಡು ವರುಷ ಬಿಡದಲೆ ನೆಯ್ದ
ಹನ್ನೆರಡುಮೊಳದ ಹೊನ್ನಸೀರೆಯನು
ವಿಪರೀತ ಮತಿಯಿಂದ ತನ್ನ ಕೇಳ್ದೊಬ್ಬ
ತಪಸಿಗೆ ಜೇಡರದಾಸಯ್ಯ ಕೊಡನೆ?
ಅಲ್ಲದೆ ಬಲ್ಲಾಳನಖಿಲರು ಅರಿಯೆ
ಸದಮಲಚಿತ್ತದಿಂ ಸತಿಯ ಮುಂಕೊಡನೆ?
ವಂಚನೆಯಿಲ್ಲದೆ ಕೇಳಿದಾಕ್ಷಣವೆ
ಮೊನ್ನೆಯಧರನು ಮಾಣಿಕ್ಯವ ಕೊಡನೆ?

ಧೈರ್ಯದಿಂ ಮೊನ್ನಯಧರನಿಮ್ಮಡಿಸುತ
ಮಿಂಡಭಕ್ತನಿಗರ್ಥಿಯಿಂದರ್ಥ ಕೊಡನೆ?
ಇಡುಗುಡಿಯಲ್ಲಿ ಪೆರ್ಮಾಡಿಯೆಂಬ ಗಣ
ಗಹನವೆನಿಸಿದ ದುರ್ಭಿಕ್ಷಕಾಲದಲಿ
ಸಾರಿಸಿ ಸಕಲಸಂಪದಗಳ ಚಂದ್ರ
ಜೂಟ ಭಕ್ತರಿಗಿಂತು ಸೂರೆಮಾಡಿಸನೆ?
ಮಗಳ ಲಗ್ನವಗೈವ ತತ್ಪ್ರಸ್ತಾವದಲಿ
ಒಬ್ಬ ತಪೋಧನನೈತಂದು ಬೇಡೆ
ಕಾಂತೆಯ ಕೂದಲನಾಗಲೆ ಕೊಯ್ದು
ತಕ್ಷಣ ಮಾನಕಂಜರನೀಯದಿಹನೆ?

ಎನುತಲಿ ನೆನಪಿಸಿಕೊಳ್ಳುತ ಮಿಂಡ
ತಳುವಲು ವೇಶ್ಯೆಯು ಮುನಿಯುವಳೆನುತ
ಬಸವನ ತಡೆದು ವಸುಧೆಯ ಮೇಲಿದ್ದ
ಹೊನ್ನಸೆರಗುಗಳ ಪಟ್ಟೆವಸ್ತ್ರಗಳ
ಗಂಟನು ಕಟ್ಟಿ ಮೂಟೆಯನು ತಾ ಹೊತ್ತು
ಸಂಭ್ರಮದಲಿ ತಂದು ಆ ಸೂಳೆಗಿತ್ತ;
'ನಿಶ್ಚಯ ಬಸವನ ನಿಜಭಕ್ತಿಮಹಿಮೆ-
ಯಿಂದ ಕುಂದಿಹುದು ತರುಣಿಯ ಮಾನ-
ವೆಂದು ಭಕ್ತರಗುಂಪು ಹೊಗಳುತ್ತಲಿರಲು
ವನಿತೆಯಂತರ್ವಾಸದೊಳಗೈದಳಾಗ.

ಬಸವನ ಭಕ್ತಿಪ್ರಭಾಪಟಲವದು
ಬುವಿಯ ದಿಕ್ಕುಗೆಳಲಿ ತಾ ತುಂಬುತಿರಲು

ದಿನಕರನಾತ್ಮೀಯತೇಜವು ಕುಗ್ಗ-
ಲವನು ಮನದ ಲಜ್ಜೆಯಿಂದಪರಾಬ್ಧಿ-
ಯಲಿ ಬಿದ್ದನೋಯೆನಲರ್ಕ ಮುಳುಗಿದ :
ಮಿತ್ರ ಸರಿಯೆ ರಾಜೀವಗಳು ಮುಚ್ಚಿದವು,
ಭೇರಿಶಂಖಗಳು ಭೋರೆನೆ ಮೊಳಗಿದವು,
ಮಾರಸಂಹಾರ ನಾಗಾರಾಂತರದಲಿ
ಅಲರುತ ಪಂಚಮಹಾಶಬ್ದರಾವ-
ವಾಗಲು ಭಕ್ತ ಸಮೂಹಾಲಯಗಳ

ಘನಧೂಪಧೂಮ ಸಂಜನಿತ ಮೇಘಗಳು
ಸೆಣಸಿ ಕವಿದೊಲು ಕತ್ತಲೆಪಸರಿಸಿತು.
ವರಮುಕ್ತಿಸತಿ ಬಸವನಿಗಾರತಿಗಳ
ಭರದಲೆತ್ತುತಿಹ ದೀಪಗಳಿವೋಯೆನಲು
ನಕ್ಷತ್ರಚಯವಂತರಿಕ್ಷವ ತುಂಬಿ-
ಯಕ್ಷೀಣಕಾಂತಿಯಿಂದಲಿ ಬೆಳಗಿದವು.
ಚಂದ್ರನ ಕೇಡು ದೈತ್ಯೇಂದ್ರನ ಪಾಡು
ಇಂದ್ರನ ಭಂಗವ ತಾನರಿತರಿತು
ಕುರಿಯ ಕಳ್ಳತನ ಶೂದ್ರಕನೆಂಬ ರಾಜ
ಕಡಿಯೆ ಬಿದ್ದುದ ಮುನ್ನವರಿತು ತಾನರಿತು

ಜಾರಚೋರರ ವರ್ಣಿಸುವ ಕವಿಜನರ
ಭೂರಿವಿವೇಕವ ಹೊಗಳುವುದೆಂತು?
ಎನುವ ಸಂಧ್ಯಾವೇಳೆಯಲ್ಲಿ ಸದ್ಭಕ್ತ
ಜನರು ಲಿಂಗಾರ್ಚನೆಯನು ಮಾಡುವಾಗ
ಮಿಂಡಜಂಗಮಕೋಟಿಯನ್ನು ಭಕ್ತಿಯಲಿ
ದಂಡನಾಯಕನು ಕಳಿಸಲು ತಂಡದಲಿ
ಘನಸಾರ ತಂಬೂಲ ಗಂಧಪ್ರಸೂನ
ವಿನುತಾಭರಣವಸ್ತ್ರವಿತತಿಯ ಕೊಂಡು
ಕರಮರ್ಥಿಯಲಿ ಸೂಳೆಗೈಯಬೇಕೆಂದು
ಹೋಗಲೆಲ್ಲರು ತಾವು ಅನುರಕ್ತಿಯಿಂದ-

### ಮುಗ್ಧಸಂಗಯ್ಯನ ಕಥೆ

ಲಿಂಗಸರ್ವೇಂದ್ರಿಯಲೀನನು ಮುಗ್ಧ
ಸಂಗಯ್ಯನೆಂಬೊಬ್ಬ ಶರಣನು ಕಂಡು

ಭಕ್ತಿಯಿಂ ಕಳಿಸಲು ಬಸವ ಭಂಡಾರಿ
ವ್ಯಕ್ತದಿಂ ಹೋಗುತಿರುವರು ಜಂಗಮರು
ಕೊಂಡೊಯ್ಯುವರು ಗಂಧಕುಸುಮಕರ್ಪೂರ
ವಿನುತ ತಾಂಬೂಲಾದಿವಿತತಿಯನಿಂತು
ಹೋಗುವುದಿದು ಲಿಂಗಾವಸರವೇಳೆಯಲಿ
ಕೆಲಸಕ್ಕೆ ಹೋಗುವ ವಿಧವಲ್ಲವೆನುತ
ಅದು ಕೂಡ ಒಂದು ಲಿಂಗಾರ್ಚನೆಯೆಂದು
ಮನದಿ ನಿಶ್ಚೈಸಿ ಸಮ್ಮುದ ತುಳುಕಾಡೆ

ಕನಸಲ್ಲು ಸೂಳೆಗೈಯುವುದೆಂಬ ಮಾತ-
ನರಿಯದೆ ಬಸವಯ್ಯನನು ತಾನು ನೊಡಿ
"ನಾ ಕೂಡ ಹೋಗಲೇ ಈಯಯ್ಯನವರ
ಜೊತೆಯಲಿ ಸೂಳೆಗೈಯಲು ಸಂಭ್ರಮದಲಿ?"
ಎನ್ನಲು ಕಿಂಚಿತ್ಪ್ರಹಸಿತಾಸ್ಯನಾಗಿ
"ನಡೆಯಯ್ಯ, ಓ ಮುಗ್ಧಸಂಗಯ್ಯ ದೇವ"
ಎಂದಾದರಿಸುತಲಾ ಅಯ್ಯನಿಗಾಗ
ಪ್ರೀತಿಯಿಂ ಸಹಜಶೃಂಗಾರವ ಮಾಡಿ
ಪರಿಚಾರಕರ ಕೂಗಿ ಪಟುಭಕ್ತಿಯಿರುವ
ತರುಣಿಯ ಮನೆಗಟ್ಟೆ ಸತಿಯನು ಕಂಡು

'ಭಾವಿಸೆ ಪ್ರಮಥಲೋಕದ ಕನ್ಯೆಯಿವಳೊ?
ಗಣಿಕೆ ಸಾಕ್ಷಾದ್ರುದ್ರಗಣಿಕೆಯೊ ತಿಳಿಯೆ
ಚಿತ್ರದ ರೂಪವೊ ಚೆಲುವೆಯೋ ಹೊನ್ನ
ಪುತ್ಥಳಿಯೋ'ಯೆನೆ ಯುವತಿಯೈತಂದು
ಮುಗ್ಧಮಿಂಡನ ಪಾದಗಳ ಮೇಲೆರಗಿ ವಿ-
ದಗ್ಧ ಮಿಂಡಿಯು ಸಮುದ್ಯದ್ಭಕ್ತಿ ಮೆರೆದು
ಪಡಿಗವನಿರಿಸಿ ಪಾದಗಳನು ತೊಳೆದು
ಕಡುಭಕ್ತಿಯಿಂ ಪಾದೋದಕವ ಸೇವಿಸುತ
ಪ್ರೀತಿಯಲರಲು ವಿಭೂತಿವೀಳೆಯವ-
ನಾ ತನ್ವಿ ದಾನ ಸಮರ್ಪಣೆ ಗೈದು

ಕಳಿಸಬಂದವರು ಹಿಂತಿರುಗೆ ಮಿಂಡನಿಗೆ
ತನ್ನ ಹಸ್ತವನಿತ್ತು ಕರೆದೊಯ್ಯುತಿರಲು
ಸ್ಫಾಟಿಕ ಸೋಪಾನ ಪಂಕ್ತಿಯೊಪ್ಪಿರುವ
ಹಾಟಕಕುಟ್ಟಿಮಹರ್ಮ್ಯಸ್ಥಲದಲಿ

ಹಾಕಿದ್ದ ಕಸ್ತೂರಿ ಚಳೆಯದ ಮೇಲೆ
ಹೊಳೆವ ಮುಕ್ತಾಫಲಗಳ ರಂಗೋಲಿಯಿರೆ
ಕಂಭಕಟ್ಟುಗಳು ಮೇಲ್‌ಕಟ್ಟುಗಳಿರುವ
ಗಂಭೀರಪುಷ್ಪಕಾಗಾರದ ಒಳಗೆ
ಮಹಿತಲಂಬಿತ ರತ್ನಮಾಲಿಕಾನಿಚಯ
ಬಹುಮಣಿದೀಪವಿಭ್ರಮಕಾಂತಿ ಹರಡೆ

ಮಿಂಚಿ ಹೊಳೆವ ಪಟ್ಟೆಮಂಚವು ಪುಷ್ಪ
ಸಂಚಿತವಾದಂಡಜದ ಮಂಚವದುವೆ
ವಿವಿಧಸೌರಭಸುಖಾನ್ವಿತವಾದ ಮಂದ
ಪವನವು ಜಾಳಿಗೆ ಪಂಕ್ತಿಯಿಂ ಬೀಸೆ
ಶ್ರೀರುದ್ರವರದಿವ್ಯ ಸಿಂಹಾಸನವಿದೊ?
ಗೌರೀ ಮನೋಹರಚಾರು ಪುಷ್ಪಕವೊ?
ಗಂಗಾವತಂಸನ ಶೃಂಗಾರ ಗೃಹವೊ?
ಅಂಗವಿಜಯನ ಅಣುಗುಮಂಟಪವೊ?
ಎನಲತಿ ರಮಣೀಯವೆನೆ ಸಜ್ಜಾದುದನು
ಮಿಂಡನು ಕಂಡದ್ಭುತಾಕ್ರಾಂತನಾಗಿ

ಅದು ಕೂಡ ಆಕೆ ಲಿಂಗಾರ್ಚನೆಗೈವ
ಸದನವೆನ್ನುತ ತನ್ನ ಮನದಲ್ಲಿ ತಿಳಿದು
ಉತ್ತುಂಗ ಸಿಂಹಾಸನೋಪಮವಾದ
ತನ್ನಿಯ ಚಾರುಪರ್ಯಂಕದ ಕೆಳಗೆ
ನೆಲದಲಿ ಕಂಬಳಿಯಾಸನದಲ್ಲಿ
ಶಿವಸಮಾರಾಧನೆಗೈಯಲು ಕೂತು
ಭೂತಿ ಸರ್ವಾಂಗದಿ ಪೂಸುತ್ತಲಾತ
'ಭೂತಿ ಪೂಸೆಯದೇಕೆ ಯುವತಿ ನೀನೆ'ನಲು
'ನಿತ್ಯ ಪಾರ್ವತಿ ಪೂಸುವಾ ಪಚ್ಚಭೂತಿ-
ಯಿತ್ತನೊಬ್ಬಯ್ಯನೆನಗದನು ರಾತ್ರಿ

ಪೂಸಿದೆ ಸರ್ವಾಂಗಗಳ ನೋಡು'ಯೆನುತ
ಭಾಸುರವಹ ಮೈಯಿನರಿಸಿನ ತೋರೆ,
ಇಷ್ಟದಿಂ ರುದ್ರಾಕ್ಷಗಳ ಧರಿಸುತ್ತ
'ಲಲನೆ, ರುದ್ರಾಕ್ಷವ ಧರಿಸೆಯೇ'ನೆನಲು
'ಕಡು ಕಂದು ಲವಣಸಾಗರತೀರದಲ್ಲಿ
ಹುಟ್ಟಿದ ರುದ್ರಾಕ್ಷವ ಸಹಿಸೆನೆಂದು

ಬಿಳಿಯಾದ ಕ್ಷೀರಾಬ್ಧಿತೀರದಲ್ಲಿದ್ದ
ಬಿಳಿಯ ರುದ್ರಾಕ್ಷವ ತಂದನೊಬ್ಬಯ್ಯ-
ನಿದ ಸದಾ ಧರಿಸಿರು ನೀನೆಂದೆಂ'ದೆಂದು
ಯುವತಿಯು ಮುತ್ತಿನ ಹಾರವ ತೋರೆ

ಅಕ್ಕಜಗೊಂಡು ಮುತ್ತಿನ ಸೂಸಕವನು
ಮೂಗಲ್ಲಿ ಧರಿಸಿದ ಮೂಗುತಿ ಕಂಡು
'ಉತ್ತಮಾಂಗದ ಮೇಲೆ, ಸುದತಿ, ರುದ್ರಾಕ್ಷ-
ವುತ್ತಮವಹುದು ಹೋಗೆಮಗಿದು ಹೊಸತು
ಎಲ್ಲಿಯು ಕೇಳದ ರೀತಿ ರುದ್ರಾಕ್ಷ
ಮೂಗಲಿ ಧರಿಪ ವಿಶೇಷವೇ'ನೆನಲು
'ದೇವ, ಏನೆನ್ನಲಿ, ದೇವನೇ ಬಲ್ಲ
ಆ ವಿಶೇಷವು ವೇದಾತೀತ ತಾ'ನೆನಲು
ಉರುಜಟಾವಳಿ ಬಿಚ್ಚಿಯೊತ್ತಿ ಸುತ್ತುತ್ತ
'ತರಳಾಕ್ಷಿ, ಜಡೆಯೇಕೆ ಹಾಕೆ ನೀ'ನೆನಲು

'ಅರ್ಧ ಪ್ರಸಾದ ಪುಷ್ಪಗಳಿಗೆಂದುಳಿಸಿ
ಅರ್ಧವ ಹಾಕಿದೆ ಸಣ್ಣಹ ಜಡೆಯ
ಸನ್ನುತ ತದ್ಭಸ್ಮ ಸಮ್ಮಿಶ್ರವಾಗಿ
ಬೆನ್ನಿನಲಿದೆ ನೋಡು ದೀರ್ಘವಾ'ಗೆನುತ
ಪಟುಗಳಾಭರಣಸಂಘಟಿತವಾಗಿದ್ದ
ಪಟವಳಿ ಕುಚ್ಚನು ತರಳೆ ತೋರಿಸಲು
'ಬುವಿಯಲಿಂತಹ ಭಕ್ತೆಯಾಗಿಹೆ, ಕಚ್ಚ-
ಡವನೇಕೆ, ಸುದತಿ, ನೀ ಧರಿಸೆ'ಯೆಂದೆನಲು
'ಲಿಂಗವಂತರ ಬಿಟ್ಟು ಭವಿಗಳ ದೃಷ್ಟ
ವಕ್ರದಲೆನ್ನ ಮೇಗಡೆ ಸುಳಿಯದೊಲು

ಕಟ್ಟಿದೆ ಸರ್ವಾಂಗಕಚ್ಚಡವೆನುತ
ಕಟ್ಟಿದ ಸಮಕಟ್ಟ ಕಾಂತೆ ತೋರಿಸಲು
ವನಿತೆಯು ಪೂರ್ವಲಾಂಛನಧಾರಿಯೆಂದು
ಮನದಿ ಯೋಚಿಸಿ ನೆಲದಲಿ ಬಿದ್ದು ನಮಿಸಿ
"ಇಂಥ ಲಾಂಛನವಿದಕಾರು ಆಚಾರ್ಯ?
ಎಂತಹ ನಿಯಮಗಳೆಂತಹ ಚರ್ಯೆ?
ತರುಣಿ, ಈ ಗುರುಸಂಪ್ರದಾಯದ ಜನರು
ಧರಣಿಯ ಮೇಲೆಲ್ಲಿ ತಪವ ಮಾಡುವರು?

ಸಂತತವಾರ ಸದ್ಗೋಷ್ಠಿಯಲ್ಲಿರುವ-
ರಿದನಿಲ್ಲ ನನಗೀಗ ತಿಳಿಯಹೇ"ಳೆನಲು

"ಆಗಮನಿಗಮೋಕ್ತಿಯಲಿ ವಾಮದೇವ
ಯೋಗಿಯಿಂ ಶಿವದೀಕ್ಷೆಯೊಪ್ಪಲು ಪಡೆದು
ಕೈಲಾಸದಲಿ ತಪಗೈದು ಮೆಚ್ಚಿಸುತ
ಶೂಲಿಯಿಂ ಮುನ್ನೀಲಾಂಛನವ ಪಡೆದಳು
ಆ ಕಾರಣದಲಿ ಪೂರ್ವಾಚಾರ್ಯೆಯಹಳು
ಸದಮಲಾತ್ಮಕ ಹಿಮಶೈಲತನೂಜೆ.
ಶ್ರೀನಂದನನು ಗೆಲ್ದು ಶಿವನ ಮೆಚ್ಚಿಸುತ
ಮೈಯಲರ್ಧವ ಕೊಂಡವನಿತೆಯವರ್ಗ;
ಜಗವೆಲ್ಲ ತನ್ನ ಶಕ್ತಿಯಲಿ ಪಾಲಿಸುವ
ಜಗದೇಕಸುಂದರಿಸಂತತಿ ನಾವು

ಶಿವರಹಸ್ಯಾದಿಪ್ರಸಿದ್ಧಶಾಸ್ತ್ರಗಳ
ಶಿವನಿಂದ ಪಡೆದಿಹ ಚೆಲುವೆಶಿಷ್ಯೆಯರು
ಆಕಾಂಕ್ಷೆಯಿಂದ ಜನ್ನಿಗೆಗಳ ಹಾಲ
ಕೈಕೊಂಡು ಅಷ್ಟಾವಶೇಷವಗೈದು
ಕಬ್ಬು ಕಟ್ಟಿಗೆ ಮಡಿ ಸೇರೆಯ ಚೆಲ್ಲಿ
ಅದನಿಷ್ಟಲಿಂಗ ಸಮರ್ಪಣೆಗೈದು
ತಪ್ಪದೆಯೀ ಪ್ರಸಾದವ ಸೇವಿಸುವೆವು,
ಎಂದೆಂದು ಕನಸಲ್ಲು ಅರಿಯೆವೋಗರವ
ಮತ್ತೆಯು ದೊರೆತರೆ ಕಂದಮೂಲಾದಿ
ಫಲಪತ್ರಶಾಕವ ಭಕ್ತರಿತ್ತುದನು

ಸ್ವಾಮಿಗರ್ಪಿಸಿ ಪ್ರಸಾದವನು ಕೊಳ್ಳುವೆವು
ಏನೆಂದು ಹೇಳುವುದೀ ತಪಶ್ಚರಣ?
ತನುಮನಧನಗಳ ವ್ಯಾಮೋಹ ತೊರೆದು
ಜೀವಿಸಿ ರಸಿಕ ಮಗ್ನತೆಯಿಂದ ಗೋಷ್ಠಿ-
ಯಲ್ಲಿ ಸೇರಿರುವಂಥ ತಜ್ಜಂಗಮಾನು-
ಭವದಲ್ಲನವರತ ತಪ್ಪದೆಯಿಹೆವು.
ಅನಘ, ತ್ರಿಕಾಲಲಿಂಗಾರ್ಚನೆ ಹೊರತು
ತಕ್ಕ ಕೆಲಸವಿಲ್ಲ ಹಗಲು ರಾತ್ರಿಯಲಿ.
ಗತಿಯೆಮಗಿಹುದೆ ಬೇರೊಂದು, ಜಂಗಮವೆ
ಗತಿ ಮನೋವಾಕ್ಕಾಯಕರ್ಮಗಳಲ್ಲಿ

ಇಂತಿದು ಗುರುಮಾರ್ಗವಿದು ನಿಜವ್ರತವು
ಇಂತಿದು ಚಾರಿತ್ರವಿದುವೆ ಲಾಂಭನವು
ನಮ್ಮ ಸದ್ಗುರು ಸಂಪ್ರದಾಯದ ಜನರು
ಇಹರು ಶ್ರೀಗಿರಿಯಾದಿಯಾಗೆಲ್ಲ ಸ್ಥಳದ-
ಲಧಿಪ, ಸಾಕ್ಷಾಜ್ಜಗಂದಂಬಾಸಮಾನ-
ರಧಿಕರಿರುವರು ದಕ್ಷಾರಾಮದಲ್ಲಿ"
ಎನೆ ಸಮಂಚಿತ ವಿದಗ್ಧಾಲಾಪಗಳನು
ಕೇಳಿಸಲಾಯಯ್ಯ ವಿಸ್ಮಿತನಾಗಿ
ಚೆಲುವು ಪರ್ಯಂಕವೆ ಸಿಂಹಾಸನವೆನೆ
ತಿಳಿದು ಗಂಧದ್ರವ್ಯತಾಂಬೂಲವಿತತಿ-

ಯೊಡಬಡಲೆಲ್ಲವೊಂದೊಂದು ಶೋಧಿಸುತ
'ಸತಿಯರ್ಘ್ಯಪಣ್ಯಗಳನು ಹಿಡಿ'ಯೆನುತ
'ಅಧಿಕದೀಯಯ್ಯನ ಮನವು ಬಂದಂತೆ
ನಡೆವುದೆ ತನಗೆ ತಿಳಿವಳಿಕೆ'ಯೆನುತ
ಹಸನವು ಶೋಭಿಸಲರ್ಘ್ಯಪಣ್ಯಗಳ
ಹೊನ್ನ ಬಿಂದಿಗೆಗಳ ಪಡಿಗವನಿಟ್ಟು
ಗಕ್ಕನೆ ಸಕಲೋಪಕರಣಗಳೋಳಿ-
ಯನ್ನಿಟ್ಟು ಆ ಮುಗ್ಧಸಂಗಯ್ಯಗೊಸೆದು
ಕರವೊಪ್ಪೆ ಗಂಟೆಯ ಕಾಂಸ್ಯತಾಳಗಳ-
ನರಿದೆನೆ ಮೊಳಗಿ ಧೂಪಾನಂತರದಲಿ

ವನಿತೆಯುಂಚಿತ ದೃಗ್ದೀಧಿತಿಗಳ
ಕೊರಳಹಾರಗಳುಗುವಂಶುಜಾಲಗಳ-
ನೊಪ್ಪುವ ಕಂಕಣಸ್ಫುರಿತ ರೋಚಿಗಳ-
ನೊಡಗೊಂಡು ಕಂಗಳು ಹೊಳೆವುತ್ತಲಿರಲು
ಹೊಳೆವ ನೀರಾಜನಗಳ ತಳಿಗೆಗಳ-
ನಲರಲಂದಿತ್ತಳು ಆಯವಸರದಿ.
'ಮಲಸಂಹರನು ಜಟಾಮುಕುಟದ ಮೇಲೆ
ನಿಂತರು ನನ್ನ ಕಪ್ಪದು ಹೋಗಲಿಲ್ಲ
ಭಕ್ತರ ಪಾದಸಂಸ್ಪರ್ಶನದಿಂದ
ವ್ಯಕ್ತಿಯಾಗುತ ನಿರ್ಮಲತ್ವವೊಂದುವೆನು'

ಎಂದು ತಾ ಯೋಚಿಸಿ ಬರುವ ರೀತಿಯಲಿ
ವನಜಾರಿಪ್ರಾಙ್ಮುಖನಂದುದಯಿಸಿದ.

ಬಸವನ ಸಿತಕೀರ್ತಿ ಹಬ್ಬಿತು, ಶಿವನ
ಭಸಿತಾಂಗರಾಗಪ್ರಭೆಯು ಹಬ್ಬಿತೆನಲು
ಆ ರುದ್ರನಟ್ಟಹಾಸಾಂಶುಗಳೊಪ್ಪಿ-
ತೆನೆ, ರಜತಾಚಲಚಾರುದೀಧಿತಿಯು
ವಿಲಸಿಸಿತೆನೆ, ನಭೋವೀಧಿಯಲೆಲ್ಲ
ನೆಲೆಗೊಂಡು ಅಚ್ಚತಿಂಗಳು ಪ್ರವಹಿಸಿತು.
ಆ ಕಾಂತೆ ಮುಗ್ಧಸಂಗಯ್ಯಗೆ ಪ್ರೀತಿ
ನೆಲೆಗೊಂಡಾತ್ಮದಲಿ ನಿರ್ವರ್ತಿಸಿತೆನಲು

ಸತತದಿ ಲಿಂಗಪೂಜನೆಯನು ಗೈವ
ತನ್ನ ವಿಲಾಸಿನೀಜನರನು ಕರೆಸಿ
'ಅಕ್ಕಮಹಾದೇವಿ, ಮದ್ದಲೆಗಳನು
ತಂದಿಟ್ಟು ಬೇಗದಿ ಸಂಧಿಸಿಕೊಳಿರಿ
ಸ್ವರಮಾನತಳ, ಬಸವಪ್ರಮಥವ್ವ !
ಕರಮರ್ಥಿಯಿಂದಿಡಿ ಕಾಹಳೆಯೋಲಿ;
ಸಕಳವ್ವೆ, ಸಂಗಳವ್ವೆಯ ಜೊತೆ ನೀನು
ನಿಲ್ಲೊಂದು ರೀತಿಗೆ ಸುಕರವೆನಿಸಲು;
ಬಾಲರುದ್ರವೆ, ಒತ್ತಿಹಿಡಿಯದೆ ಪಿಳ್ಳ-
ಗೋವಿಯನೂದು ನೀ; ಗುಡ್ಡವ್ವೆ , ನೀನು

ಚಿಕ್ಕತಾಳವ ಹಿಡಿ; ಶಿವದೇವಿ ನೀನು
ಚಟ್ಟನೆ ನರ್ತಿಸು ಸರಸವನರಿತು;
ಚಂಗುದಾವಸೆ, ಮಹೇಶ್ವರಿ, ವೀರಭದ್ರ
ಲಿಂಗವ್ವ , ನೀವೆಲ್ಲ ಕೇಳಿಕೆಯಾಡಿ;
ರಮಣದುಕೂಲಾಂಬರಗಳ ಕಂಚುಕವ-
ನಮರಿಸಿಕೊಂಡು ಚಲ್ಲಣವ ಬಿಗಿಸುತ-
ಲೈತರು ನೀನು ಪುರಾತಮ್ಮ ಬೇಗ-
ನಾತತದಲಿ ನೃತ್ಯಗೈಯಬೇಕೀಗ
ತಾಳವ ಹಿಡಿದು ತಾಳವ ಹಾಕಬೇಕು
ಆಳತಿವೇಳೆ ನೀವೆಲ್ಲರುಯೆನುತ-

ಲವಿರಳವಾಗೆಲ್ಲಕಾರ್ಭಟಿಸುತ್ತ
ಜವನಿಕೆಯ ತರಿಸಿ ಸರಸದಿ ನಿಲಿಸಿ-
ಯೊಪ್ಪುವ ಮುಖರಸಸೌಷ್ಠವಗಳಲಿ
ಉಗುವ ಭಾವಗಳು ಧೂಕಳಿಯು ಝುಂಕಳಿಯು

ಮತ್ತೆ ಠೀವಿಯು ವಿಭ್ರಮವನು ರೇಖೆಯನು
ತೋರಿಸುತೀ ರೀತಿ ನೃತ್ಯವ ಸಲಿಸೆ
ಲಿಂಗಾರ್ಚನೆಯನು ಸಲ್ಲೀಲೇಯಿಂ ಮಾಡಿ
ಮಂಗಳಾರವಗಳು ಸಂಗಡವುಲಿಯೆ
ಬೆಳಗಿನವರೆಗೆ ಚಿತ್ತೋಲ್ಲಾಸವಮರೆ
ಸಲ್ಲೀಲೆಯಿಂ ಮುಗ್ಧಸಂಗಯ್ಯಗಿಂತು

ಅಂಗನೆ ಪರಿಚರ್ಯೆಯಾಚರಿಸುತಿರೆ
'ಲಿಂಗಾವಸರವನು ಸಲಿಸಿದ ಬಳಿಕ-
ಲಾ ಮನೋಹರನ ಪಾದೋದಕಸೇವೆ-
ಯಗಣಿತಲೀಲೆಯಿಂ ದಿವ್ಯಾಂಗನಾದೆ-
ನಖಿಲಮಾಹೇಶಸಮಗ್ರಪ್ರಸಾದ
ಸುಖಸೇವೆಯೆನಗಿನು ಉಂಟಾದ ಮೇಲೆ
ನಿಂತ ಕಾಲಲಿ ನಿಲ್ಲದಂತೆ ತಿರುಗುವ
ಚಿಂತೆಯು ಹಾಳಾದು'ದೆಂದು ಯೋಚಿಸುತ
ಬಂದ ರೀತಿಯಲಿ ದಿವಾಕರನಾಗ
ಚಚ್ಚರದುದಯಾದ್ರಿಶಿಖರವೇರಿದನು.

ಬಸವನಾತ್ಮಕ್ಕಿಂಪೆಸೆಯಲೆಂದಾ ಮಿಂಡ
ಭರದಲೈತಂದು ತಾ ಮತ್ತೆಯಿಂತೆಂದ:
"ಬಸವ, ಏನೆನಲಿ ನಾ, ಭರ್ಗನೆಯರಿವ-
ನೀ ರಾತ್ರಿನಾ ಸೂಳೆಗೆಯ್ದರೀತಿಯನು.
ನೀನೆಮ್ಮ ಜೊತೆಯಲಿ ಬಾರದೆ ಹೋದೆ
ಬೆಳಗುವರೆಗೆ ಒಂದೆ ವಿಧವಾದ ಸುಖವು
ಆದರೂ, ನಾನಲ್ಲಿ ಸೂಳೆಗೈಯುವೆಡೆ
ನಿನ್ನನು ನೆನೆದೆನು ಜುಮ್ಮನೆ, ಬಸವ!
ಹುಟ್ಟಿದ ದಿನದಿಂದ ಮುನ್ನಿಂಥ ಸುಖದ
ಸೂಳೆಗೈವುದನೆಂದು ನಾಬಲ್ಲೆನಿಲ್ಲ.

ಮಲಹರಕೃಪೆಯಿರದಿಹ ಕಾಮುಕರಿಗೆ
ಸಿಗುವುದೆ ಸೂಳೆಗೈವುದನಿಂತು ಮಾಡೆ
ಹಗಲು ರಾತ್ರಿಗಳೆಡೆಬಿಡದಲೆ ಸೂಳೆ-
ಗೈವುದನೆಷ್ಟುಯುಗಗಳಿಂತು ಗೈದು
ಪಡೆದಿಹೆ ಹೇಳು ನೀ ಪರಮೇಶನಿಂದ.
ಕಡುವೊಪ್ಪೆ ಲಿಂಗಜಂಗಮಸಂಪದಗಳ-

ನರ್ಚಿಪ ಶಿವಭಕ್ತಿಸೌಭಾಗ್ಯಮಹಿಮೆ–
ಯೊಡಗೂಡುವುದೆ ಬೇರೆಯೊಂದು ಮಾರ್ಗದಲಿ;
ನಿನ್ನ ಕಾರಣದಿಂದಲೆನಗಿಂದು ರಾತ್ರಿ
ದೊರೆಕಿತೀ ಬಗೆ ಸೂಳೆಗೈಯುವ ಭಾಗ್ಯ.

ಭಂಡಾರಿ, ನಿನ್ನಾಣೆ ಹಸುಗೂಸಾಗಿದ್ದ
ದಿನದಿಂದ ಶ್ರೀಗಿರಿಯಲ್ಲಿದ್ದೆನಲ್ಲಿ
ಅನುಪಮಕದಳೀವನಾಂತರ ಬಿಲ್ವ
ವನಗಳಲೇಕಾಂತವಾಸಗಳಲ್ಲಿ
ಒಪ್ಪುವ ಅಂಗಾಲಕಣ್ಣನು ನೊಸಲ–
ಗಣ್ಣರು ಪಡೆದ ಮಹಾಗಣವಿಹುದ
ನೋಡಿದೆವೇ ವಿನಾ ಎಲ್ಲಿಯು ಇಂಥ
ಭೂತಿಶಾಸನಧಾರಿಗಳ ಕಾಣಲಿಲ್ಲ.
ಶೋಭಿಪ ಹಳದಿ ವಿಭೂತಿದಾರಿಯಹ
ಬಿಳಿಯಾದ ರುದ್ರಾಕ್ಷಗಳು ಕೆಂಪುಜಡೆಯು

ಎಲ್ಲಕು ತಕ್ಕ ಸರ್ವಾಂಗ ಕಚ್ಚಡವು
ಹೊಸತಾಗಿರುವುದಿಂತೀ ವೇಷವಿದೆಮಗೆ
ಇಂಥ ಲಾಂಛನಧಾರಿಯಿಂಥ ವಿರಾಗಿ–
ಯಿಂಥ ನಿಷ್ಠಾಶಾಲಿಯೇನನಬೇಕು?
ಇಂತೊಬ್ಬಳೇ ಹೇಳಲೇನು ತತ್ಸತಿಗೆ
ಸಂತತದಲಿ ಪರಿಚರ್ಯೆಯಗೈವ
ಲಲನೆಯರೆಲ್ಲರಂತಹಲಾಂಛನಧರ–
ರಾ ಚೆಲುವೆಯರ ಮಹಿಮೆ ಶಿವನರಿವ"
ಎಂದು ತತ್ಸತಿಯರ ಲಾಂಛನಗಳನು
ತನ್ನಮಿಂಡತನವ ತಪ್ಪದೆ ಹೇಳೆ

ಹಲಬಾರಿ ಕೇಳುತ್ತಲಿಲ್ಲ ಜಂಗಮರು
ನಲಿದೊಬ್ಬರೊಬ್ಬರು ಕೈತಟ್ಟಿ ನಗಲು
ಬಸವನು ಮುಸಿಮುಸಿನಗುತಲಿ ಚೆನ್ನ–
ಬಸವನ ಕಡೆನೋಡಿ ನುಡಿಯತೊಡಗಿದ:
"ಇಂಥ ನೆಟ್ಟನೆ ಭಕ್ತಿಯಿಂಥಮುಗ್ಧತ್ವ–
ವಿಂಥ ಮಹತ್ವವು ಎಂದಾದರುಂಟೆ?
ಸತತವೀಶ್ವರನನ್ನು ಬಿಟ್ಟು ತಿಳಿಯದ
ಮುಕ್ಕಣಭಕ್ತರು ಮುಗ್ಧರೆನಿಸರೆ?"

ಎಂದು ಪ್ರಶಂಸಿಸಲಾ ಚೆನ್ನಬಸವ–
ನನುರುಕ್ತಿಯಿಂದ ಕೈಜೋಡಿಸಿ ನಮಿಸಿ

“ಎಸೆಯುವೀ ನೂತನ ಪ್ರಾಕ್ತನಭಕ್ತ
ವರಗಣಗಳಲೆಲ್ಲ ಹೇಳಿ ತೋರಿಸಲು
ಇಂತಹೀ ಭಕ್ತರು ಇರುವರೇ”ನೆನುತ
ತಾನಿಂತು ಮನದುಂಬಿ ಬಿನ್ನಹಗೈಯೆ
ಪರಮಾನುರಾಗಸಂಪದದಲ್ಲಿ ಮುಳುಗಿ
ಅರ್ಥಿಯಿಂದಿತರ ಮುಗ್ಧರ ಕಥೆಗಳನು
ಹೇಳಲು ಬಗೆದು ಸದ್ಭಕ್ತಿ ಭಂಡಾರಿ
ಬಸವಯ್ಯನಾ ಚಿನ್ನಬಸವನಿಗೆಂದ:

## ರುದ್ರಪಶುಪತಿಯ ಕಥೆ

ವ್ಯಕ್ತದಿಂದರಿಯೆಯ ಅಯ್ಯಳಯೂರ
ಭಕ್ತನು ರುದ್ರಪಶುಪತಿಯು ಮುನ್ನ

ಪ್ರಥಿತವಾದಾದಿ ಪುರಾಣದಲಬ್ಧಿ
ಮಥನಾವಸರವ ಕಥಕನೊಬ್ಬನೋದೆ
ಕಮಲಜ ಕಮಲಾಕ್ಷರಮಿತದೈತ್ಯಾದಿ–
ಯಮರರು ಕೆಟ್ಟೋಡಿದಂದುದುಭವಿಸಿ
ಭರದಿ ಬ್ರಹ್ಮಾಂಡಗಳೆಲ್ಲವುರಿಸಿದ
ಗರಳನ ನುಂಗಿದ ಕರಕಂಠನೆನಲು
ಆ ರುದ್ರಪಶುಪತಿಯಾಲಿಸಿ ‘ಭರ್ಗ
ನಿಜದಿ ವಿಷವನಾರೋಗಿಸಿದನೆ’ಯೆನಲು
‘ಅನುಮಾನವೇಕೆ? ಕುಡಿದ ಹರ ವಿಷವ–
ನಾನಂತರದಲಾದ ಕಾರ್ಯವನರಿಯೆ’

ಎನೆ ಬೆನ್ನುಮುರಿವಂತೆ ಬಿದ್ದು ‘ಹಾ ಕೆಟ್ಟೆ’–
ನೆನುತಲಿ ಹೊರಳುತ್ತಲಕ್ಕಟಾ ನಿನ್ನ
ಮರುಳು ಮಾಡಿದರಲ್ಲ, ವಿಶ್ವೇಶ, ಎಂಥ
ಮರುಳನಾದರು ಕೂಡ ವಿಷವ ಕುಡಿವರೆ?
ಬದುಕುವರೇ ? ವಿಷ ಹಾಲಹುದೇನು?
ಇದನೆಂತು ಕೇಳಲಿ, ನಾನೇನ ಗೈವೆ!
ನಿಜವಾದ ವಿಧದಲು ನಿನ್ನ ಬಿಟ್ಟರಿಯೆ
ಮುಕ್ಕಣ್ಣ, ನನಗಿನ್ನು ದಿಕ್ಕು ಯಾರಯ್ಯ?

ನನಗಾಗಿ ನೀನು, ಪಿನಾಕಿಯೀ ವಿಷವ
ಕೈಕೊಳ್ಳದುಗುಳಯ್ಯ, ನಿನಗೆ ಮೊಕ್ಕುವೆನು

ಅಕಟಕಟಾ, ಮೈಯಲರ್ಧದಲಿದ್ದು
ಎಲ್ಲಿ ಹೋಗಿದ್ದೆ, ನೀನರಿಯೆಯಾ ಗೌರಿ?
ಪ್ರಮಥ ಗಣಂಗಳೆ, ಪರಮಾಪ್ತರುಗಳೆ
ನಶಿಸಿದ ಬಳಿಕ ಶಕ್ಯವೆ ಕಾಯೆ ನಿಮಗೆ?
ಶತರುದ್ರರುಗಳೆ, ಅಸಂಖ್ಯಾತಗಣರೆ,
ಕ್ಷಿತಿಧರಕನ್ಯಕಾಪತಿಯನುಳಿಸಿರಿ!
ಓ ವೀರಭದ್ರಯ್ಯ, ವಿಷವ ಪ್ರಾಣೇಶ-
ನಾರೋಗಿಸಿದನಿನ್ನೆಂತಹುದೊ ನಾಕಾಣೆ!
ಓ ಪುರಾತನರೆ, ನಮ್ಮೊಡೆಯನ ಬದುಕಿ-
ಸಿರಿ ಸಾಕು, ವಿಷವನ್ನು ಕುಡಿದಿಹನವನು.

ಸಾವ ತಪ್ಪಿಸಿರಯ್ಯ, ಸದ್ಗುರುನಾಥ-
ಗೌಷಧವೀಯಿರೈ, ಕಾಯಿರೈ ಶಿವನ
ತಾಯಿಲ್ಲದವರನು ಬಗೆವರೇನಿಂತು
ತಾಯಿರೆ ವಿಷವ ಕುಡಿಯಲೇಕೀಯುವಳು?
ಪರಮೇಶನೀಬಾರಿಯುಳಿದರೆ ಸಾಕು,
ಮರಣವದಿರದು ಮತ್ತೆಂದಿಗಾತನಿಗೆ!
ಎನುತ ಪ್ರಲಾಪಿಸಿ ಗೋಳಿಟ್ಟು ಇದನು
ಕೇಳಲಾರೆನು ಪ್ರಾಣಬಿಡುವೆ ನಾನೆನುತ
ತಡೆಯದೆ ಘನಜಲಾಂತರದಲಿ ಧುಮುಕಿ
ಬೀಳದಂತಾ ರುದ್ರಪಶುಪನ ಹಿಡಿದು

ಪಾರ್ವತಿಯೊಡಗೂಡಿ ಪ್ರಮಥರುದ್ರಾದಿ
ಸರ್ವಸುರಾಸುರ ಸಂಘವ್ರೋಲೈಸೆ
ಹರನು ಮೈದೋರುತ "ಕೇಳಯ್ಯ ನಿನಗೆ
ವರವೀವೆನಾವುದು ವಾಂಛಿತ"ವೆನಲು
ಕಡುಸಂಭ್ರಮದಿ ಮೃಡಪಾದಾಬ್ಜಗಳಿಗೆ
ರುದ್ರಪಶುಪತಿಭಟ್ಟಾರಕನೆರಗಿ
"ಏನನು ನಾನೊಲ್ಲೆ. ನೀನು ವಿಷವನು
ಕುಡಿದಿರಲಹುದೇನೂ ನಾ ಕೇಳಲಾರೆ
ಗಕ್ಕನೆ ಉಗುಳು ನೀ ಕಾಳಕೂಟವನು.
ನಿಶ್ಚಯವೆನಗದು ಹಿರಿಯವರ"ವೆನೆ

ದಶನಕಾಂತಿಯು ದಶದಿಶೆಗಳ ತುಂಬೆ
ಪಶುಪತಿಯಾ ರುದ್ರಪಶುಪತಿಗೆಂದ :
“ಇಂತು ಲೋಕಗಳಲಿ ಯಾವತ್ತು ನಾನು
ಅಂತು ನುಂಗುಗುಳಲು ಅದು ಯಾವ ಹಿರಿದು?
ಅಣುಮಾತ್ರ ನನ್ನ ಕಂಠದಲಿ ಸಿಕ್ಕಿಹುದು
ಗಣನೆಯಗೈಯಲಿಹುದೆ ಕಾಲಕೂಟ?
ಇಂತು ಸಂತಾಪಿಸಲೇಕೆ ನೀ”ನೆನುತ
ನಸುನಗೆಯೆಸೆವಂತೆ ಸಂತವಿಸುತಿರೆ
“ನಂಬಲಾರೆನು ನಾ ಪಿನಾಕಿ, ಈ ವಿಷವು
ಒತ್ತರಿಸೊಂದಿಷ್ಟು ಹೊಟ್ಟೆಯ ಹೊಗಲು

ದೊಡ್ಡದಾಗುವುದಯ್ಯ ಮತ್ತಿನ ವಾರ್ತೆ
ಕೊನೆಗೂ ಕೇಳದಿರೆ ನೀ ನಾ ಮುಂಚೆ ಸತ್ತು-
ಹೋಗುವೆನಲ್ಲದೆ ನೀ ಸಾಯಲೀಯೆ;
ಉಗುಳು ನೀನೀ ವಿಷವೊಂದ ಹೇಳದಿರು
ಮಿಕ್ಕ ಮಾತುಗಳನ್ನು ನಾಕೇಳೆ”ನೆನುತ
ನಿಶ್ಚಯ ಸಾಹಸನಿಷ್ಠೆಯಿಂದೆನಲು
ಉಗುಳದಿರಲು ಸಾವನೋ ಮುಗ್ಧನೆನುತ
ಪಾರ್ವತಿಯಾತ್ಮದಿ ಪರಿತಾಪಪಡಲು
‘ಉಗುಳಲು ಹಿಡಿದೆಮ್ಮ ಸುಡುವುದೋ’ಯೆನುತ
ಕಮಲಾಕ್ಷಮುಖ್ಯರು ಗಡಗಡ ನಡುಗೆ

ಪ್ರಮಥರಾತನ ಮುಗ್ಧ ಭಕ್ತಿಗೆ ಮೆಚ್ಚಿ
ಅಮಿತಮಹೋತ್ಸವದಿಂ ನೋಡುತಿರಲು
ಕಿರುನಗೆ ನಗುತಲಿ ಉಡುರಾಜಧನರನು
ಗಕ್ಕನೆಯವನೆತ್ತಿ ಆಲಂಗಿಸುತಲಿ
“ಪ್ರಮಥರಾಣೆಯು, ನಿನ್ನ ಪಾದಗಳಾಣೆ
ಸಾಯೆನೀ ವಿಷದಿಂದ, ಸತ್ಯವಿದೆನಲು
ನಂಬದಿರಲು ನನ್ನ ಬಲತೊಡೆಯೇರಿ
ನಿಂತು ನೋಡಯ್ಯ ನೀ ನೀಲಕಂಠವನು”
ಎಂದೂರುಪೀಠದಲವನ ಧರಿಸಿದ.
ಗುರಿಯು ಮುನ್ನಿರುವುದೆ ಮುಗ್ಧತನಕ್ಕೆ

‘ಅಲ್ಲದೆ ಕತ್ತಿನ ಹಾಲಾಹಲವದು
ಕದಲಲು ಸಾಕು ನಾ ಸಾಯುವೆ’ನೆನುತ

ತೆಗೆದ ಕತ್ತಿಯನೆದೆಗಾನಿಸಿಕೊಂಡು
ಕತ್ತನು ನೋಡುತ್ತ ರೆಪ್ಪೆಹಾಕದಲೆ
ಶಿವನ ತೊಡೆಯ ಮೇಲೆ ತೊಲಗದೆ ರುದ್ರ
ಪಶುಪತಿಯೆಂದೆಂದು ಸತತವಾಗಿಹನು.

## ನಕ್ಕನ್ಯೆನಾರು ಕಥೆ

ಇಳೆಯಲೊಪ್ಪುವ ಚೋಳಮಂಡಲದಲ್ಲಿ
ಮತ್ತೆಯು ನಕ್ಕನ್ಯೆನಾರೆಂಬ ಗಣವು
ಮಡದಿಯೊಡನೆ ತಾನು ಶಿವಲಿಂಗಪೂಜೆ-
ಯನುದಿನ ಪ್ರೀತಿಯಿಂ ಸಲಿಸುತ್ತಲಿರಲು

ಶಿವನ ಮೇಲೊಂದು ಜೇಡರ ಬಲೆಯಿರಲು
"ಶಿವಶಿವ ಶಿವನನು ಸುತ್ತುವು"ದೆನುತ-
ಲಾಸತಿ ಘೂಘೂಯೆಂದೂದಲು ಕಂಡು
ಕೋಪದಿಂದಾತನು ಮಡದಿಗಿಂತೆಂದ :
"ಪಾಪಿಯೇ, ಭ್ರಮಿಸಿದೌ ಪ್ರಾಣವಲ್ಲಭನ
ಮೇಲುಗುಳುವರೆ ತುಂತುರು ಬೀಳುವಂತೆ
ನಿನ್ನದೆಂತಹ ಭಕ್ತಿ, ತಿಳಿಯದೆ ನಿನಗೆ!
ತೊಲಗೆಲ್ಲಿಗಾದರೂ ನಿನ್ನ ನಾನೊಲ್ಲೆ"
ಎನಲಾಕೆ ಬಿಟ್ಟು ನಡೆಯೆ ವಿಭು ರಾತ್ರಿ
ಮೃಡನರ್ಚನೆಯ ಮಾಡುವೆಡೆ ಲಿಂಗದಲ್ಲಿ

ಆಕಾಂತೆಯುಗುಳುದ್ದ ಎಡೆಬಿಟ್ಟು ಮಿಕ್ಕ
ಕಡೆಯೆಲ್ಲ ಬೊಕ್ಕೆಗಳಿರಲಚ್ಚರಿಯಲಿ
ಬೇಗ ಸತಿಯ ಹಿಂದೆ ನಡೆದ ಪಾದಗಳಿ-
ಗತಿಭಕ್ತಿಯಿಂದ ಸಾಷ್ಟಾಂಗದಿ ನಮಿಸಿ
"ಪಾಪಿ ಹೋಗೆನ್ನುತ ನಿನ್ನನಟ್ಟಿದ್ದ
ಪಾಪವ ಸೈರಿಸು ಪಟುಭಕ್ತನಿರತೆ,
ನೀನುಗುಳಿದ ಠಾವು ಬಿಟ್ಟು ಮಿಕ್ಕೆಡೆಯ
ದೇವನ ಮೈಮೇಲೆ ಬೊಕ್ಕೆಗಳಿಹವು
ಅಯೆಡೆಯುಗುಳಿನೀನೀಸಂಕಟವನು
ಎನ್ನ ದೇವಗೆ ಮಾಣಿಸೆಯ ದಯೆತೋರಿ"

ಎಂದು ಮತ್ತೆಯು ಮೊಕ್ಕಲಂಗನೆ ಬಂದು
ಪತಿಯ ಪ್ರಾಣೇಶನ ತನುವಿನಲಿದ್ದ

ಬೊಕ್ಕೆಗಳನು ಕಂಡು ಮನದಲಿ ನೊಂದು
"ಅಕ್ಕಟಾ, ಬೊಕ್ಕೆಗಳಿನ್ನಣಗುವುವೆ?
ಗಂಡನೊದೆಯಲಿ ಕೊಂದರೆ ಕೊಲ್ಲಲಿನ್ನು
ಎನುತಲಾಗಾನು ತೂಪಿರಿಯದೆ ಹೋದೆ-
ನದರಿಂದಲಾ ತಪ್ಪಿನಿಂದಾಗಿ ಶಿವನ
ಮೈಯ ಬೊಕ್ಕೆಗಳವು ಹೆಚ್ಚಾಯಿತೀಗ.
ಹೋಗವೆ ಮುನ್ನ ತೂಪಿರಿದಿದ್ದ ಜಾಗ-
ವನ್ನುಳಿದೆಡೆಯ ಬೊಕ್ಕೆಗಳವಿನ್ನೇನು?

ಎನ್ನ ಕಾರಣದಿ ಪಿನಾಕಿಗಿಂತಾಯ್ತು
ಈ ವಿರೋಧವನಿನ್ನು ನಾನೋಡಲಾರೆ-
ನೆನುತ ಪರಿಚ್ಛೇದದಿಂದಲಾ ಭಕ್ತೆ
ತನ್ನ ಶಿರಕೆ ಕೋಪಿಸುವ ಸಮಯದಲಿ
ಸತಿಯ ಮುಗ್ಧತ್ವದ ಬೆಳ್ಳಂಬೆಳಕನು
ಮೆರೆಸಲು ನಿಶ್ಚೈಸಿ ಮೆಚ್ಚಿಯಾಕ್ಷಣವೆ
ಭವರೋಗವೈದ್ಯನು ಪಾರ್ವತಿಕಾಂತ-
ನವಿನಾಶನಜನು ಪ್ರತ್ಯಕ್ಷದಿ ನಿಂತು
ಪ್ರಮಥರು ರುದ್ರರು ಬ್ರಹ್ಮಾಚ್ಯುತೇಂದ್ರ-
ರಮರ ಸಂಘವು ಯಥಾಕ್ರಮದಲೋಲೈಸೆ

ಕರುಣಾನಿರೀಕ್ಷಣ ಸ್ಫುರಿತಸುಧಾಬ್ಧಿ-
ಯಲ್ಲಿಬ್ಬರನ್ನದ್ದಿ 'ಈಪ್ಸಿತಾರ್ಥಗಳ
ಕೇಳಿ ಕೊಡುವೆ'ನೆನೆ ಮಡದಿಯು ಪತಿಯು
ಭೂಮಿಗೆ ಸರ್ವಾಂಗಗಳ ಚಾಚಿ ನಮಿಸಿ
"ದೇವ ದೇವಾಧೀಶ ದಿವ್ಯಲಿಂಗಾಂಗ
ನೀನು ಪ್ರತ್ಯಕ್ಷವಾಗಿಯೆ ನಿಂತ ಬಳಿಕ
ಮತ್ತೆಯು ಬೇರೊಂದ ಕೇಳಲು ನಾವು
ಮತ್ತೇನು, ನಿನ್ನೊಲ್ಲದಂತಲ್ಲವೇನು?
ಅದಕೆ ನಿಮ್ಮಯ ಪಾದಕಮಲಾಂತರಂಗ
ಭಾವಸಂಪೂರ್ಣಸಂಪದವನು ನೀಡು"

ಎಂದು ಬಿನ್ನವಿಸಲಾ ಸತಿಪತಿಯರಿಗೆ
ಅನುಪಮಪರಮಪರಾನಂದಮೂರ್ತಿ
ಮುಖ್ಯಾಪವರ್ಗಸಮುದಿತೋಪಭೋಗ
ಸೌಖ್ಯವನ್ನಾಗ ಕರುಣಿಸಿದ ಶಿವನು.

## ಬೆಜ್ಜ ಮಹಾದೇವಿಯ ಕಥೆ

ಮತ್ತೆ ಕೇಳ್ ಬೆಜ್ಜಮಹಾದೇವಿಯೆಂಬ
ಕರಕಂಠಶ್ರೀಪದಕಮಲಾಂತರಂಗ–
ವೆಲ್ಲ ನಿಯೋಗವು ಬಾಂಧವರೆಲ್ಲ
ಎಲ್ಲ ಜನರು ಸೇರಲಿಂತು "ಭರ್ಗನಿಗೆ
ತಾಯಿಯಿಲ್ಲದ ರೀತಿ ತುಂಬ ವಿಚಿತ್ರ
ತಾಯಿಯಿಲ್ಲದೆ ಹೇಗೆ ತಾನುದಯಿಸಿದ?

ತಾಯಿ ಸತ್ತಳೊ ಪಾಪ ತ್ರೈಲೋಕ್ಯಪತಿಗೆ
ಅಯ್ಯಯ್ಯೊ ! ಇಂತೇನು ಮಾಡಲಾಗುವುದು?
ತಾಯಿ ಸಾಯಲು ತಾನು ಬಡವಾಗಿರುವನು
ಎಲ್ಲರಿಗೂ ದುಃಖವಿಂಥದೆ ತಾನೆ?
ತಾಯಿಯು ತಾಪಸಿಯಾಗಗೊಡುವಳೆ?
ತಾಯಿಯಿದ್ದರೆ ತಲೆ ಜಡೆಯ ಕಟ್ಟುವುದೆ?
ತಾಯಿಯಿರಲು ವಿಷ ಕುಡಿಯಲೀಯುವಳೆ?
ತಾಯಿಯಿದ್ದರೆ ಚರ್ಮವುಡಲು ಕೊಡುವಳೆ?
ತಾಯಿ ಹಾವುಗಳನ್ನು ಧರಿಸಬಿಡುವಳೆ?
ತಾಯಿ ಬೂದಿಯನೇಕೆ ಬಳಿಯಲೀಯುವಳು?

ತಾಯಿಯು ಮಗನನ್ನು ತಿರಿಯಲೀಯುವಳೆ?
ತಾಯಿ ಮಗನ ಸುಡುಗಾಡಿಗಟ್ಟುವಳೆ?
ತಾಯಿಯಿಲ್ಲದ ಮಗನಾದ ಕಾರಣದಿ
ಕಷ್ಟಕೆ ಸಿಲುಕಿಂಥ ಪಾಡನ್ನು ಪಡೆದ.
ಮೊಲೆಯಿತ್ತು ಅನುನಿತ್ಯ ಬೆಣ್ಣೆಯನಿಟ್ಟು
ಒಲವಿನಿಂದಿಷ್ಟು ಹಾಲನು ಬಾಲಗೆರೆದು
ಹಸಿವೆನಿಸಲು ಕಡು ಹರಸಿ ಹಾಲಿತ್ತು
ಸಾಕಿ ಸಲಹಿ ಬೆಳೆಸಳೆ ತಾಯಿಯಿರಲು!
ತಾನಿಷ್ಟರವನಾದ ತಾಯಿಲ್ಲದಿರಲು
ಇನ್ನೆಷ್ಟು ಬೆಳೆಯುತಿದ್ದನೊ ತಾಯಿಯಿರಲು

ಲಗ್ನ ವ್ರತಗಳಲಿ ಶೋಭನಗಳಲಿ
ಹಬ್ಬಗಳಲಿ ಹಿರಿ ಜಾತ್ರೆಗಳಲ್ಲಿ
ಆರೈಕೆ ಮಾಡುವ ತಾಯಿಯಿಲ್ಲದಿರೆ
ಶೋಕಿಸದಿಹರೆಯೆಂತಹ ಮಗನೆನಲು

ಸುಮ್ಮನುಪೇಕ್ಷಿಸಿರಲು ಸಾಧ್ಯವೇನು?
ನಾನಾದರೂ ಹರನಿಗೆ ತಾಯಿಯಾಗಿ
ಪಾಲಿಸುವೆನು, ಅರಕೆಯಿರದೆ ಪೊರೆವ
ತರುಣಿಯು ತಾನೆಂತು ತಾಯಲ್ಲ"ವೆನುತ
ಯೋಚಿಸಿ ಬೆಜ್ಜಮಹಾದೇವಿ ತಾನೆ
ತಾಯಾಗಿ ಶಿವನನು ಮಗನೆಂದು ತಿಳಿದು

ತೊಡೆಗಳ ಮೇಲಿಟ್ಟು ಲಿಂಗಮೂರುತಿಗೆ
ಅಂಗನೆಯಭ್ಯಂಜನವನೆರೆಯುತ್ತ
ಮೂಗೊತ್ತಿ ಕಣ್ಣೊತ್ತಿ ಮುಕ್ಕಣ್ಣನೊರಸಿ
ಎದೆಯೊತ್ತಿ ಪೊಡೆಯೊತ್ತಿ ಬೆನ್ನನು ನೀವಿ
ಬೆಳೆಯಬೇಕೆಂದು ತರುಣಿ ಸಡಗರದಿ
ಚರಣಕರಗಳನು ಚಾಚಿ ನೀವುವಳು,
ಗಂಧವನರೆದೊಲವಿಂದಲಿ ಹಚ್ಚಿ
ಜಲವ ಬೆನ್ನಿಗೆ ಎರೆವಳು ಮತ್ತೆ ಮತ್ತೆ
ಬೆಚ್ಚಿಬೆಗಡದಂತೆ ಬೆನ್ನಿಗೆರೆವಳು
ಮಸ್ತಕದಲಿ ನೀರನೊತ್ತಿ ಸುರಿವಳು

ಬಾಯಲ್ಲಿ ಹೊಗುವುದೊ ಉದಕವದೆನುತ
ಅದುಮಿ ತಿರುಹುತ ಬಾಯ್ಗಡ್ಡವಿಕ್ಕುವಳು,
ಅರಿಸಿನವನು ಹಚ್ಚಿ ಗೈದು ಮಜ್ಜನವ
ಕಣ್ಣುಕಿವಿಗಳಲಿ ಭರದಲೂದುವಳು,
ಅಂಗಳು ಮುಳ್ಳೊತ್ತಿ ಬೆರಳುಗಳಿಂದ
ಸುರಿವ ನೀರನು ಕೊಂಚ ನೆತ್ತಿಯಲೆರೆದು
ಸುದತಿ ಕೈನೀರಿಂದ ನೀವಾಳೆದೆಗೆದು
ಮಡದಿಯಂಗುಷ್ಠದಿ ಮಣ್ಣಿಷ್ಟ ಮೆತ್ತಿ
ಗಡಿಗೆಯಲಿಟ್ಟಿದ್ದ ಗಟ್ಟಿವಿಭೂತಿ-
ಯನ್ನು ಪುತ್ರನ ನೊಸಲಲ್ಲಿ ಪೂಸುವಳು.

ನೆತ್ತಿ ಕುಗ್ಗುವುದೆಂದು ಎತ್ತಲು ಬಯಸಿ-
ಯಾತನ್ನಿ ತನ್ನೆದೆಗೊತ್ತಿಕೊಳ್ಳುವಳು,
ಕಾಡಿಗೆಯಿಡುವೆನು ಕಂಗಳಿಗೆನುತ
ಕಾಡಿಗೆಯಿಡುವಳು ಮೂರು ಕಂಗಳಿಗೆ
ಮೊಲೆಯನೀವಲು ಪಕ್ಷಿಗಳ ಹಾಯಗೊಡಳು
ಒಂದಿಷ್ಟು ಬೆಣ್ಣೆಯನಿಡುವಳು ಮಡದಿ

ಕೆನ್ನೆಯ ಚಿವುಟುವಳಾಮಗುವಳಲು
ಒಳಲೆಯಲೊಂದಿಷ್ಟು ಹಾಲನೆರೆವಳು
ಉಂಗಿಯನೆರೆವಳು ಪ್ರಿತಿಯಿಂ ಸತಿಯು
ಕೊಂಡಾಡಿ ನಗಿಸಾಡಿ ರಮಿಸುವಳವಳು

ಮುದ್ದಾಡಿ ನಗಿಸಿ ಮುದ್ದುಗಳ ಬೇಡುವಳು
ಸದ್ದುಮಾಡದಿರಾರೊ ಬಂದರುಯೆನುತ
ತನ್ನುದರವನೆ ಹಾಸಿಗೆಯಾಗಿ ಮಾಡಿ
ಕೂಸ ಮಲಗಿಸೆ ಜೋಗುಳವ ಹಾಡುವಳು.
ಮಗನೆನುತೀರೀತಿ ಕೊಂಡಾಡುತಿರಲು
ಸತಿಯು ನಿಶ್ಚಲ ಮುಗ್ಧಭಾವಗಳನ್ನು
ಶಿವನು ತಾ ಮೆಚ್ಚಿಯಾಕೆಯುಗ್ಯೈಯುತಿದ್ದ
ಬಾಲ್ಯೋಪಚಾರಗಳನು ಕೊಳ್ಳುತಿದ್ದ.
ಶ್ರುತಿ 'ಯೇಕಯೇವಹಿ ರೂಪೇಣ'ವೆಂದು
ಸ್ಮೃತಿ 'ಸಾಧಕಸ್ಸಂಸ್ಮರೇತ್ಸದಾ'ಯೆಂದು

ಧರೆ 'ತಸ್ಯತನ್ಮಯತಾಂಯಾತಿ'ಯೆಂದು
ಹರನ ವಾಕ್ಯಗಳಿರಲೆಂತು ತಪ್ಪುವುವು?
ಭಕ್ತನು ತಾನೆಂತು ಭಾವಿಸೆ ಶಿವನು
ವ್ಯಕ್ತಿಯಾಗಾರೂಪ ಪಡೆಯುವುದರಿದೆ?
ಎಂದು ಭಕ್ತವಿತತಿ ವಿನುತಿಸೆ ಕೊಂಚ
ದಿನಗಳು ಕಳೆಯಲು ತದ್ದೇವದೇವ
ಮತ್ತೆಯಾಕೆಗೆ ಪ್ರಸನ್ನತೆ ತೋರ ಬಯಸಿ
ತೀವ್ರರೋಗವು ಬಂದ ಬಗೆಯಲಿ ಶಿವನು
ಮೊಲೆಯನುಣ್ಣದೆ, ಕೂಡಿಸಿದ ತುಟಿಗಳನು
ಬೆಣ್ಣೆಗೆ ತೆರೆದೆಯಿರಲು ಆ ಕ್ಷಣದಿ

ಮೆಟ್ಟಿ ಬೀಳುತ ತಾಯಿ ದುಃಖದಿಂದೊಡಲ
ಹಿಡಿಯಲಾರದಲೆ ಆಪದದಿ "ಎನ್ನಯ್ಯ
ಎನ್ನಪ್ಪ, ಚಿನ್ನಣ್ಣ, ಎನ್ನ ಪುಟಾಣಿ
ಚೆನ್ನಯ್ಯ, ಮರಿ, ಏಕೆ ಹಾಲನು ಕುಡಿಯೆ?
ನಿನ್ನ ಬೆವರ ನೋಡೆ ನೆತ್ತರೆನಿಪುದು
ಅಯ್ಯಯ್ಯೊ, ನಾನೆಂತಿದನು ನೋಡಲಣ್ಣ
ತಾಯಲ್ಲವೇ, ಇಷ್ಟು ಕೋರುವೆನಣ್ಣ
ಯಾವೆಡೆ ಬೇರೆಯನರಿಯೆ ಕಣಣ್ಣ

ನೀನಿಲ್ಲದಿರಲಾನು ಏಕಾಕಿಯಣ್ಣ
ಚಿಂತಿಸದೆಂತಾನು ಭರಿಸುವೆನಣ್ಣ

ನೆಲದ ಮೇಲೆನ್ನ ಕಾಲ್ಗಳು ನಿಲ್ಲವಣ್ಣ
ಏಕೆ ಮಾತಾಡೆ ಹೇಳೆಯ, ಅಣ್ಣ, ನಿನಗೆ
ಅರಿಮಿಯಾ, ಈರಿಲೊ, ಅಂಗುಳ ಮುಳ್ಳೊ
ಅರಿಯೆ ನಾನಾವ ಔಷಧವನು" ಯೆನುತ
ಅಳುತ ಹಂಬಲಿಸುತ್ತ ನೆಲದಲ್ಲಿ ಹೊರಳಿ
ಮೈ ಬಿಸಿನೋಡುತ್ತ ಕಂಕುಳಲ್ಲಿರಿಸಿ
ಹೊದಿಸಿ ತೆರೆದು ಹೊದಿಸಿ ಹೊದಿಕೆ ತೆರೆದು
ತಪ್ಪದೆ ವೀಕ್ಷಿಸಿ ತಲ್ಲಣಗೊಂಡು
ಮೊಡೆಯುಬ್ಬರಿಸಿದೆ ಮುಪ್ಪಿನಲಿ ಬೊಪ್ಪನಿಗೆ
ಅಂಗಳು ಮುಳ್ಳಾಯ್ತು ಎಂದು ಪ್ರೀತಿಯಲಿ

ಅಳುತಲಿ ಕಡುಶೋಕಜಲದಲಿ ಮುಳುಗಿ
ಸುದತಿಯಾ ಸುತನಿದ್ದ ರೀತಿಯ ನೋಡಿ
ಹೊಟ್ಟೆಯು ಬಡವಾಗೆ ನಂಬಿಯೊಡೆಯಗೆ
ಎಡೆಯಾಡುತಲ್ಲಿಯೆ, ಊಟವ ಬಿಟ್ಟು
ಕುಣಿಯುತ್ತ ಕುಂಬರ ಗುಂಡನ ವಾದ್ಯ-
ಕಾಡುತ್ತಲಲ್ಲಿಯು ತಿನ್ನದೇನನ್ನು
ಬಂದು ಚೇರಮಚಕ್ರವರ್ತಿ ನುಡಿಸಲು
ಅಚ್ಚರಿಯೆನಲಾಡಿ ಹಸಿವಾಗುತಿರಲು
'ಬರಿಯಾಟಗಳಿವೆಲ್ಲ ಭರದಲಾಡಿದರು
ಹೊಟ್ಟೆ ತುಂಬಿತೆ'ಯೆಂದು ಬೇಗನೆ ನಡೆದು

ಪಿಟ್ಟವ್ವೆಗೆನೆ ರಾಜ ಬಿಟ್ಟಿಗೆ ಹೋಗಿ
ತುಂಬ ಕಷ್ಟದಲಷ್ಟು ಹಿಟ್ಟನು ತಿಂದು
ಸಾಮವೇದಿಗಳ ಮನೆಯ ಸತ್ತ ಕರುವ
ಪ್ರೇಮದಿಂ ಬೇಯಿಸಿ ಬಡಿಸಲು ತಿಂದು
ತಣಿವಾಗದಿರೆ ಕರಿಕಾಳವ್ವೆ ಮನೆಯ
ಮಾವಿನ ಹಣ್ಣುಗಳನು ತಿಂದು ಹೋಗಿ
ಚೆನ್ನಯ್ಯನ ಮನೆಯ ಹುಳಿಯಂಬಳಕವ
ಹೀರಿ ಕೈತೆಗೆಯದೆ ಚಿರುತೊಂಡನಂಬಿ
ಮಗನ ಮಾಂಸದಲಟ್ಟ ಔತಣವುಂಡು
ಬಿಡದೆ ನಿಂಬವ್ವೆಯ ಮನೆಯಲಿ ಭುಜಿಸಿ

ಆರೋಗಿಸಲು ಸವಿಯಾದ ಚೋಳವ್ವೆ
ತಟ್ಟೆಯಲಿತ್ತುದ ಕೊಂಡಾರೋಗಿಸುತ-
ಲಾಸ್ಥೆಯಿಂ ಸುರಗಿ ಚೌಡಯನ ಕೈತುತ್ತಿ-
ಗಾಶಿಸಿ ತಿನ್ನುವ ನಿನ್ನಯ ನಡತೆ-
ಯನ್ನೆಲ್ಲವನ್ನೊಬ್ಬ ತರುಣಿ ಹೇಳಿದಳು.
ಚಿಣ್ಣ, ನಿಂದಿಸಬಹುದೇನು ನನ್ನನ್ನು
ಮಲಮಲ ಮರುಗುತಲಿಂತಾಡಲೇಕೆ
ಅಳತೆ ಮೀರಿದ ಊಟವನು ಮಾಡಲೇಕೆ
ಬದುಕಿಹುದೇನಿಂಥ ಆಮಿತದೂಟದಲಿ?
ಹೊಟ್ಟೆ ತಾನೇಕೆಯುಬ್ಬರಿಸದು ಹೇಳು?

ಮೊಲೆಯೀವೆ ಹಲಬಾರಿ ಬೆಣ್ಣೆಹಾಲುಗಳ-
ನೆಂದೆಂದು ತಪ್ಪದೆ ನಿನಗೂಟವನ್ನು
ನೀಡುವೆ ಪ್ರತಿಸಲ ಮಗನೆಯಿಂತೇಕೆ?
ಬೇಡಿಯೂಟಕೆ ಹೋದೆ ನಾಚಿಕೆಯಿರದೆ
ಇಷ್ಟು ದಿವಸಗಳು ಎಂತು ಸಾಕಾಯ್ತು?
ನಿನ್ನೆಯೇತಕೆ ತುಂಬಲಿಲ್ಲ ನಿನ್ನೊಡಲು?
ಎಲ್ಲಿಯೂ ವಂಚಿಸೆ ನಾ ಹಗಳಿರುಳು
ಕೈಯಿಂದಿಳಿಸೆನಿಂಥ ಸಿತಗ ಬೇರಿಹನೆ?
ಎಂದು ಬೇಸರದಲಿ ಅಸರೆಯಿತ್ತ
ಜನನಿಯಲ್ಲವೆಯೆಂಬ ಸಲುಗೆಯಲಾನು

ನುಡಿಯೆನು, ಸ್ಪಷ್ಟವು ಇನ್ನು ನನ್ನಂಥ
ತಾಯಿಗಳಿರುವರೆ ಈ ಮೂಲೋಕದಲಿ?
ಎಂದೆಂದು ನೀನೆನ್ನ ಪ್ರಾಣವೆಂಬಂತೆ
ಅನುರಕ್ತಿಯಿಂದ ಕಂಡೆನು ನೀನೆ ಸಾಕ್ಷಿ
ಎಲ್ಲೆಂತು ನಾವಿರಿಸಿದ್ದಂತೆಯಿದ್ದು
ಇಟ್ಟಷ್ಟು ತಿಂದಿರುತಿದ್ದರೆ ನಿನ್ನ-
ನೆಂದಾದರೂ ರೋಗವಾವರಿಸುವುದೆ?
ಬೆಂಕಿಗೆ ಗೆದ್ದಲಂಟುವುದೆ ನೀನಾಗಿ
ಮಾಡಿಕೊಳ್ಳಲು ರೋಗ ಬಂದುವೆ ಹೊರತು
ಈ ಸಂಕಟವು ನಿನಗೇಕೆ ಬಂದೀತು?

ಹೆಚ್ಚೇನು? ಮಾತಿನಿಂದಳಿವುದೆ ರೋಗ
ನಿನ್ನಂಥ ಅವಿವೇಕಿಗೇನು ಹೇಳುವುದು?

ನೋಡಲಾರೆನು ನಿನ್ನ ಸಂಕಟವಿನ್ನು
ಬಾಲನೆ, ನಿನಗಾಗಿ ಪ್ರಾಣವ ಬಿಡುವೆ-"
ನೆಂದು ತಲೆಯ ತರಿದುಕೊಳುವಷ್ಟರಲಿ
ತನ್ನ ತಾಯಿಯ ಮುಂದೆ ಪ್ರತ್ಯಕ್ಷವಾಗಿ
"ಕೇಳು ನೀಡುವೆ ನಿನ್ನಭೀಷ್ಟವ"ನೆನಲು
"ಮಗನೆ, ಯಾವ ಕೊರತೆಯಿಹುದೀಗ ನನಗೆ
ನೀನು ನಿರೋಗಿಯಾಗುತ ನಿತ್ಯನಾಗಿ
ಸುಖದಿಂದಲಿರಲೆನಗದುವೆಯೆ ಸಾಕು.

ಹೆತ್ತಮೋಹಕ್ಕಿಂತಲಗ್ಗಳವಹುದು
ಎತ್ತಾಡಿಸಿದ ಮೋಹವೆನ್ನುವರೆಂದು.
ಅದರಿಂದ ನಿನ್ನ ಕಣ್ಣಾರೆ ನೊಡುತ್ತ-
ಲಿಂತಿರುವುದೆ ನನ್ನ ಈಪ್ಸಿತ"ವೆನಲು
ಮಂದಸ್ಮಿತಮುಖಾರವಿಂದದಿ ತಾಯಿ-
ಯನ್ನಾಗಲಪ್ಪುತ ಬಿಗಿಯಾಗಿ ತಾನು
"ಮೂಲೋಕಗಳಿಗೆಲ್ಲ ಮುತ್ತವೆ, ಎನಗೆ
ಮಾತ್ರವೆ ತಾಯಲ್ಲ, ತಾಯಿ, ನಿನ್ನಂಥ
ತಾಯಿಯು ತಾನಿರಲೆನಗೆ ರೋಗಗಳು
ಎಡೆಯನೊಂದದೆ ತಾವು ಹೇಗಿರಬಹುದು?"

ಎನುತ ನಿತ್ಯತ್ವವನಾ ತಾಯಿಗೊಸೆದ-
ನನುಪಮ ಪರಮಪರಾನಂದ ಮೂರ್ತಿ
ಶಿವನಮ್ಮನಾಗಿ ಮುದ್ದಾಡಿದ್ದರಿಂದ
ಅಮ್ಮವ್ವೆಯೆಂಬುವ ಹೆಸರಾಕೆಗಾಯ್ತು.

**ಕೊಡಗೂಸಿನ ಕಥೆ**

ಶಿವದೇವನೆಂಬೊಬ್ಬ ಶಿವಭಕ್ತಿಯುತನು
ಹೆಂಡತಿಯೊಡನೆ ತಾನೂರಿಗೆ ಹೋಗ
ಬಗೆಯುತ ಕೊನೆಯ ಮಗಳ ತನ್ನ ಮನೆಗೆ
ಕಾಪಿಟ್ಟು "ಅತ್ತಿತ್ತ ಕದಲದಿರಮ್ಮ
ಹುಡುಗಿಯರೊಡನಾಡೆ ಹೋಗದಿರಮ್ಮ
ತೊಟ್ಟ ನಮ್ಮಯ ವ್ರತ ಕೆಡಿಸದಿರಮ್ಮ

ಗುಡಿಗೆಯ್ದು ನಿತ್ಯವು ಒಬ್ಬಳ್ಳ ಹಾಲ-
ನೀಶ್ವರಗಾರೋಗಿಸಲಿಡಬೇಕಮ್ಮ!

ನಂಬಿ ಹೋಗುವೆವು ಕಣಮ್ಮ, ನೀ ಮರೆಯ
ಬೇಡಮ್ಮ ನಮ್ಮಮ್ಮ, ನಮ್ಮಕ್ಕ, ನಮ್ಮ
ಪುಟ್ಟಾಣಿ, ನಿನಗೊಂದೊಳ್ಳೆಯ ಬೊಂಬೆಯನ್ನು
ಬೊಂಬೆಯುಡಿಗೆಗಳ ಹೋಗಿ ತರುವೆವು"
ಎಂದೊಪ್ಪಿಸುತಲತ್ತ ನಡೆಯಲು ಅವರ
ಮಗಳಾಗ ಕೈಕಾಲುಗಳ ತೊಳೆಯುತ್ತ
ನೆಲುವಿನ ಹಾಲ ಮರಳುವಂತೆ ಕಾಸಿ
ಬಳ್ಳದ ಬಟ್ಟಲಿನಲಳೆದು ಹಾಕಿ

ಗಿಂಡಿಯ ದಾವಣಿ ಸೆರಗಲಿ ಮುಚ್ಚಿ
ಬೇಗದಿಂದಲಿ ಶಿವಾಗಾರಕೆ ಬಂದು
ಗಿಂಡಿಯ ಮುಂದಿಟ್ಟು ಸಾಷ್ಟಾಂಗವೆರಗಿ
"ಅರೋಗಿಸೆಲೆ ದೇವ"ನೆಂದು ಬಿನ್ನವಿಸಿ
ಹಿಂಜರಿದೊಂದಿಷ್ಟು ಮರೆಯಲಿ ನಿಂತು
ಬಂದು ನೋಡಲು ಮತ್ತೆಯಿದ್ದಂತೆಯಿರಲು
ಬಾಲೆ ತಲ್ಲಣಗೊಂಡು ಭಯದಿಂದ ನಡುಗೆ
"ಹಾಲನೇತಕೆಯಾರೋಗಿಸೆ ಲಿಂಗಮೂರ್ತಿ
ಕಾಸಿದ್ದು ಸಾಲದೊ ಕಮ್ಮಿತಾಗಿರದೊ?
ಹಳೆಯದೊ ಒಡೆದುದೊ ಹುಡುಗಿ ನಾನೆಂದೊ?

ವೇಳೆಯಾದುದೊ ಇಲ್ಲ ಹೊಗೆಯು ಹತ್ತಿದುದೊ?
ಮನವಿಲ್ಲವೋ ತುಪ್ಪ ಹಾಕದಿರುವೆನೊ?
ತುಂಬ ಬಿಸಿಯೊ ನೀರು ಬೆರೆಸಿದೆಯೆಂದೊ?
ಎಡೆವಾದ್ಯಗಳಿರದೆ ನಾ ತಂದೆನೆಂದೊ?
ಸಾಲದೊ ಹಸುವಿನ ಹಾಲಲ್ಲವೆಂದೊ?
ಹಾಲ ಮೇಲೆನ್ನ ಚಿತ್ತವನಿಟ್ಟೆನೆಂದೊ?
ಗಿಂಡಿಯ ತೊಳೆಯೆನೊ ಒಬ್ಬಳ್ಳವಿರದೊ?
ಕುಡಿಯಲಿಟ್ಟುದನು ನೀ ತಿಳಿಯದಿರುವೆಯಾ?
ಸೀದು ಹೋಗಿಹುದೆಂದೊ ಕೆನೆಯಿಲ್ಲವೆಂದೊ?
ನಾ ತರುವೆಡೆ ಯಾರಾದರು ಕಂಡರೆಂದೊ?

ಸುಮ್ಮನೇತಕೆ ಹಾಲನೊಲ್ಲೆ ಕುಡಿಯದೆ
ಕಾರಣವೇನಾದರಿಹುದೇನು ಹೇಳು.
ನಿಜವಾಗಿ ಹಸಿವೆಯು ನಿನಗಿಲ್ಲದಿರಲು
ಗುಟುಕನಾದರು ಕೊಂಡು ಮಿಗಿಸಿಡು ನನಗೆ

ಕುಡಿಯುವ ವೇಳೆಯಲೇಕೆ ಸಿಡಿಮಿಡಿ
ತಿಂಬಡೆ ತರುವೆ ನಾನಟ್ಟೋಗರಗಳ
ಮನೆಯ ಡಬ್ಬರಿ ಡಬ್ಬಿ ತಪ್ಪಲೆ ಚೆಂಬು
ಬೋಗುಣಿಗಳಲಿವೆ ಕಳಿಸು, ನಾ ತರುವೆ.
ನೆಲುವಿನ ಮಡಕೆಯಲಿರುವು ತುಪ್ಪ
ಈಗಲೆ ತರುವೆನು ಇಷ್ಟವೆ ಹೇಳು?

ಗಡಿಗೆಯಲ್ಲದೆ ಹೋಗಿ ತರುವೆನು, ಕಲ್ಲು
ಸಕ್ಕರೆ ಬೇಕೇನು ಬೇಗನೆ ಹೇಳು
ತಕ್ಷಣ ಹೋಗಿ ನಮ್ಮಯ್ಯಗಳನ್ನು
ಬೇಗನೆ ಕರೆತಹೆನಾರೋಗಿಸಯ್ಯ.
ನಮ್ಮಯ ಶಿವಸೋದರಿಯ ಮಠದಲ್ಲಿ
ಪಾಯಸವಿದೆ ತಹೆ, ಕುಡಿ ಹಾಲ ಮೊದಲು.
ಷೋಡಶಪರ್ವವ ನೋಡೆ ಹೋಗೋಣ
ಜೊತೆಗೂಡಿ, ಪುರಹರ ನೀ ಹಾಲ ಕೊಳ್ಳು.
ವೀರಭದ್ರನ ಜತೆಗೆನೆ ನಿನ್ನ ಬಂಡಿ–
ಯಲ್ಲಿಯೆ ಕಳಿಸುವೆ ನೀ ಹಾಲ ಕುಡಿಯೊ

ಈ ಹಾಲಲಿರುವಂಥ ಕುಂದೇನು ಹೇಳು
ಬೇರೆ ತರುವೆನದನಾದರೂ ತಿಳಿಸು.
ಇಂತಹ ಶಿಶುವಿನ ಜೊತೆಗೇನು ಎಂಬ
ಸ್ನೇಹದಿಂದಾದರೂ ಎತ್ತಿ ನೀ ಕುಡಿಯೊ.
ಚಿಕ್ಕ ಕಿರಿಗೆಗಳು ಪುಟ್ಟಬೊಂಬೆಗಳ–
ನಿಷ್ಟು ಆಟಿಕೆಗಳನಿಷ್ಟು ಹಣ್ಣುಗಳ
ನನಗಾಗಿ ನಮ್ಮವರ್ಯೆದು ತರುವರು
ನಿನಗೀವೆನವುಗಳ, ನಿನ್ನಾಣೇ, ಕುಡಿಯೊ
ಹಾಲು ಆರುತಲಿದೆ. ಮಾತಾಡದಿರುವೆ
ನೀನೆತಕೋ ಲಿಂಗ, ಕಾಡಿಪೆ"ಯೆನುತ

ಬಾಲೆಯೀಶ್ವರನಿಗಡಿಗಡಿಗೆ ನಮಿಸಿ
ಕೋಲಿಸಿ ಭಂಗಿಸಿ ಉಗುಳುತಲರಚಿ
ಕಟಕಟನಳುತಲಿ ಕೈಗಳ ಗುದ್ದಿ
ತಟತಟ ನೆಲದಲಿ ಕಾಲ್ಗಳ ಬಡಿದು
ನೆಲದಲಿ ಬಿದ್ದು ಬಯಲನೊದ್ದು ಅತ್ತು
ಬಟ್ಟಲ ನೋಡೊಮ್ಮೆ ಶಿವನೆಡೆ ನೋಡಿ

ಲಾಲಿಸುವಳು ತಾನು ಮುದ್ದುಗರೆವಳು
ನಿರ್ಜೀವಿಯಂತಿದ್ದು ನಿಬ್ಬೆರಗಹಳು
ಅಳುವಳೊಂದೇ ಸಮ ಕೂಗಿ ಕರೆವಳು
ದೊಪ್ಪನೆ ಬಿದ್ದು ಬಟ್ಟಲನು ನೂಕುವಳು

ಭಯದಿಂದ ಮುಂದಿಟ್ಟು ಮತ್ತಡಿಗಡಿಗೆ
ಎರಗಿ ಪಾದಗಳಿಗೆ "ಕುಡಿಯೆ ನೀನೆಂತು
ಉಪವಾಸವಿದ್ದರೂ ಹಾಲೇಕೆ ಕುಡಿಯೆ?
ಮುಟ್ಟದೆ ಮೂಸದೆಯಿದ್ದರೆ ಹೀಗೆ
ನೀನಾರೋಗಿಸದುದ ಕೇಳಿ ನಮ್ಮವರು
ಸಾಯೆ ಹೊಡೆಯುವರು ಸಂಶಯವೇಕೆ!
ನನಗೆ ಸಾವೆಂದಿಗೂ ತಪ್ಪದು, ಮತ್ತೆ
ಹೋಗೆನಿಲ್ಲಿಯೆ ಸತ್ತು ಸರಿಹೋಹೆ"ನೆನುತ
ಲಿಂಗಕೆ ತಲೆಯನು ಚಚ್ಚಿಕೊಳಲೆಂದು
ಹೊಗುವನಿತರಲಿ ಚಕ್ಕನೆ ಹಿಡಿದು

ಆ ರುದ್ರನತಿದಯಾಹಸಿತಾಸ್ಯನಾಗಿ
ಬಟ್ಟಲ ಹಾಲೆತ್ತಿಕೊಂಡಾರೋಗಿಸಲು
"ನನ್ನಿಷ್ಟ ಕಾಡಿದೆ ಕಿರಿಯವಳೆಂದು
ಸುಮ್ಮನಿರೆನು ನಮ್ಮಣ್ಣನಿಗೆ ಹೇಳುವೆನು
ಆಮೇಲೆ ಇರುವುದು ಇನ್ನೇಕೆ ಮಾತು?
ಕರಕಂಠ, ಇವನೆಲ್ಲ ಮರೆಯದಿರೆ"ನುತ
ಗಿಂಡಿಯ ತಾರೆಂದೀಸಿಕೊಳುತಾ ಬಾಲೆ
ಬೇಗನೆ ಮನೆಗೆ ಮರಳಿ ಪ್ರತಿದಿನವು
ಇಂತು ಕೊಂಡೊಯ್ದು ತಾನೀಯುತ್ತಲಿರಲು
ಅಂತೆ ಶಿವನು ಹಾಲನಾರೋಗಿಸುತಿರೆ

ಊರಿಗೆ ಹೋಗಿದ್ದವರು ತಾವೆದುರಿಗೆ
ಬರುತಿರಲೀಯೆಡೆ ತಾ ಮುನ್ನಿನಂತೆ
ಮೃಡನು ಹಾಲನ್ನಾರೋಗಿಸೆ ಬಾಲೆಯಿಲ್ಲಿ
ಗಿಂಡಿಯ ಕೈಯಲಿ ಹಿಡಿದು ಬರುತಿರ-
ಲದ ಕಂಡು "ಇತ್ತೆತ್ತ ಹೋಗಿದ್ದೆ, ಇಂತು
ಬಟ್ಟಲನೆಲ್ಲಿಂದ ತರುತಿಹೆ"ಯೆನಲು
"ನೀವು ಹೇಳಿದ ರೀತಿ ಮೃಡನಿಗೆ ಹಾಲು
ಬಳ್ಳದಲಳೆದು ಬಟ್ಟಲಲಿ ಕೊಂಡೊಯ್ದು

ಅವನಾರೋಗಿಸೆ ಮೊಕ್ಕಿ ಪ್ರತಿನಿತ್ಯವಿಂತು
ಬಟ್ಟಲನೀಯೆಂದು ತರುತಿದ್ದೆ"ನೆನಲು

"ಎಂದಾದರೀಶ ಹಾಲನು ಕುಡಿಯುವನೆ?
ನೀನೆಯೆ ಕುಡಿದೆಯೊ ಇಲ್ಲವೆ ಜೊತೆಯ
ಅಡುವ ಹುಡುಗಿಯರಿಗೆ ನೀ ಸುರಿದೆಯೊ?
ಎಲ್ಲಾದರೂ ಚೆಲ್ಲಿದೆಯೊ ಮೈಯಮರೆತು
ತನ್ನ ಮಹಾಭಕ್ತಿತತಿಯುದ್ದೇಶಿಸುತ
ಭರದಿಂದ 'ಲಾರೋಗಿಸೈ ದೇವ' ಯೆಂದು
ಅತಿಭಕ್ತಿಯಿಂದ ಪ್ರಾರ್ಥಿಸಲಾರೋಗಿಪುದು
ಕ್ಷಿತಿಗೆ ದುರ್ಲಭವೆನಲಿತರರ್ಗೆ ತರವೆ?
ಎಂತು ನಂಬುವುದೆಂ"ದು ಹಿಡಿದು ಬೈಯುತ್ತ
'ಅಂತೆನೆ ನೋಡುವೆ'ವೆಂದು ಮರುದಿನ

ಮಗಳ ಕೈಯನು ತಂದೆ ಹಿಡಿದುಕೊಳುತ್ತ
ಲೀಲೆಯಿಂ ಗುಡಿಗೆಯ್ದು ಹಾಲ ಬಟ್ಟಲನು
ಹಿಂದಿನ ಕ್ರಮದಂತೆ ಮುಂದಕ್ಕೆಯಿಡಲು
ಎತ್ತಿಕೊಳ್ಳದೆಯಿದ್ದನಾ ಲಿಂಗಮೂರ್ತಿ
ಬಾಲಮುಗ್ಧತ್ವ ಪ್ರವಿಮಲ ಭಕ್ತಿಗಳ-
ನೀಲೋಕದಲಿ ಬೆಳಗಿಸಲೆಂದು ಬಗೆದು.
ಆ ಶಿವದೇವ ತಾನಾಗ ಕೋಪಿಸುತ
"ಏನೆ, ಇಂದೇಕೆ ಹಾಲೊಲ್ಲನು ಕುಡಿಯೆ
ಮುಕ್ಕಣ್ಣ ಮುಟ್ಟನು ಮೂಸನು ಹೇಳು?
ಸುಳ್ಳ ಹೇಳಿದೆಯಲ್ಲ ಅಕ್ಕಜವೆನಿಸೆ.

ಶಿವನಿಗೆಂದೇ ಮುಡುಪಿಟ್ಟ ಹಾಲನ್ನು
ಆಸೆಯಿಂ ನಿತ್ಯವು ಕುಡಿದೆ ನೀ ದ್ರೋಹಿ
ಹೊಟ್ಟಸೀಳುವೆನೆಲ್ಲಿ ಹೋಗುವೆ"ಯೆನುತ
ಕಟ್ಟುಗ್ರನಾಗಿ ತಾ ಹಿಡಿಯುವ ಮುನ್ನ
ಬಾಲೆಯರಚುತಲಿ ಬೇರೆಡೆ ತಿರುಗಿ
'ಹಾ ಲಿಂಗ, ಹಾ ಲಿಂಗ, ಹಾ ಲಿಂಗ'ವೆನುತ
ಕೈಯ ಗಿಂಡಿಗೆ ಮುನ್ನ ಕೈಯ ಚಾಚುತ್ತ-
ಲಾತನಿಂದೋಡಲೆಂದಿರುವಷ್ಟರಲ್ಲಿ
ಹರ 'ನೋಡಬೇಕೆನ್ನು'ತ ಕ್ಷಣದಲ್ಲಿ
ವರದಯಾಮತಿ ತನ್ನ ವಕ್ಷವ ತೆರೆಯೆ

ಜಗದಭಿನುತಕರನಹ ಭೋಗನಾಥ–
ನಗಣಿತ ದಿವ್ಯಲಿಂಗಾಂಗನ ಸೇರ–
ಲಾಕ್ಷಣದಲಿ ಅಹಹಾ ಹೋದಳೆನುತ
ಗಕ್ಕನೆ ತಂದೆ ಜುಟ್ಟನು ಹಿಡಿದೆಳೆಯೆ
ಹೊರಗಡೆ ಜಡೆಯ ಕೂದಲುಗಳು ಸಿಕ್ಕಿ
ಮೆರೆವ ಲಿಂಗದೊಳಗೆ ಬಾಲೆ ಸಿಕ್ಕಿದಳು;
ಇಂದಿಗೂ ಆರುತಿಂಗಳಿಗೊಂದು ಬಾರಿ
ಬೆಳೆದ ಜಡೆಯ ಕೂದಲನು ಕತ್ತರಿಸಲು
'ಅವಳ ನಿಶ್ಚಲ ಮುಗ್ಧಭಾವ ಸಂಪದಕೆ
ಈಲೋಕದಲಿ ದೃಷ್ಟವಿದು' ಎಂದು ಹೊಗಳೆ

ಕೊಡಗೂಸೆನುವ ಹೆಸರಲಿ ಮಹಾಮಹಿಮೆ–
ಯನು ಹೊಂದಿದಳು ಮುಗ್ಧೆ ಅದುವೆಯಲ್ಲದೆಯೆ

**ದೀಪದ ಕಲಿಯಾರ ಕಥೆ**

ಅತಿಶಯವೆನಿಪ ಕಾಂಚೀಪುರದಲ್ಲಿ
ದೀಪದ ಕಲಿಯೆಂಬ ದೃಢಭಕ್ತಿಯುತನು
ನೆರೆಯೂರಿಗೊಮ್ಮೆ ಹೋಗುತಲೊಂದೆಡೆಯಲಿ
ಹರನು ಜೀರ್ಣಾಲಯದಲ್ಲಿರೆ ನೋಡಿ
"ಅಕಟಕಟಾ ! ಈಶನೊಬ್ಬನೆಯಿಹನು
ಪಟುತರಾಟವಿಯಲ್ಲಿ ಹಗೆಗಳು ಹೆಚ್ಚು
ಕಚ್ಚುಟಗಳ ಕೂಡ ಗಟ್ಟಿಪ ಮುನಿಗ–
ಳನು ಬೇಗ ಮುಕ್ತರಗೈವ ದಾನವರ

ಕಣ್ಮುಚ್ಚಲೆಡೆಯಿಲ್ಲವೆನುತ ಸಂಹರಿಸಿ
ಕೊಂಡನಾ ವಾಸವಾದ್ಯನಿಮಿಷವರರ
ಸ್ಥಿರವಾಗಿ ದ್ವಾದಶಾದಿತ್ಯರನೊಂದು
ಎಡೆಯಲಿ ಹೊಗದಂತೆ ತಿರುಗಿಸಿ ಕೊಂಡ–
ನಂಗಜನನು ಸುಟ್ಟನಂಗನಗೈದ
ಹೊಳೆಯದ ಪುರಗಳ ಹೊಳೆಸಿದ ಸುಟ್ಟು
ತಳೆದು ದಾಮೋದರಗೈದ ದಾಮೋದ–
ರನ, ವಿಧಿಪಾಲು ಮಾಡಿದ ವಿಧಿ ಹಿಡಿದು
ಕರುಣಾಕರನಿವನೆಂದಾದರಿಸುತಿರ–
ಲರಿದೆನೆ ಸರ್ವಸಂಹಾರವಗೈದ

ಅದರಿಂದ ಹಗೆ ಹೆಚ್ಚು ದೇವದೇವನಿಗೆ
ಈ ವಿಪಿನದಲವನೆಂತಿರಬಹುದು
ಗುಡಿಬಾಗಿಲುಗಳೆಲ್ಲ ಕೂಲಿಹೋಗಿಹವು
ಆಧಾರ ಮಂಟಪ ಬಯಲಾಯ್ತು ಬಿದ್ದು
ಕೋಟೆಯು ಬಿದ್ದಿದೆ ಜೊತೆಗೆ ಕವಾಟ-
ಗಳು ಜೀರ್ಣವಾಗಿ ನೆಲಕ್ಕೆ ಬಿದ್ದಿಹವು.
ಒಡಲಲರ್ಧವ ಕೊಂಡ ಆ ಉಮೆ ರೂಪು
ಕಾಣದು ಶಿವನಲ್ಲಿ ಅಡಗಿದಳೇನೊ
ಭಯದಿಂದಲೊಂಟೆತ್ತು ಮೇಗಡೆ ಹುಲ್ಲು
ಕೆಡವಿಕೊಂಡದು ಕೂಡ ನರಳುತ್ತಲಿಹುದು

ಶಿವನಿಂತು ಮುನ್ನ ಹುಟ್ಟಿದ ದಿನದಿಂದ
ನಿಂತು ತಮ್ಮಡಿ ಭಜಿಸಿದ ಗುರುತಿಲ್ಲ.
ಇದುವೇಕೆ ಉಳಿಸಬೇಕಿವನನಿಲ್ಲಿರಿಸಿ
ಅದುವೆ ಪ್ರಮಾದವು ಅಸಹಾಯದೊಡನೆ.
ನಿಜದಲೀಶ್ವರನೊಬ್ಬನೆಕ್ಕಟಿವೀರ
ತಾನೊಬ್ಬನೀಯೆಡೆಯಿರುವುದರಿಂದ
ಸುಮ್ಮನೆ ಬರಿಯವಿಚಾರಗಳೆಲ್ಲ
ತಾ ರಕ್ಷೆಯಹುದೆ ಸಂಹಾರ ರುದ್ರನಿಗೆ"
ಎಂದು ನಿಶ್ಚಯಿಸಿ ತಾನಲ್ಲಿಯೆ ಉಳಿದು
ತನಗಿದ್ದ ಯಾವತ್ತು ಧನವನ್ನು ಮುನ್ನ

ಸಂಚಿತವಹವಸ್ತು ಸಮಿತಿಯ ಬೋಕಿ
ಬಿಂಚಾದಿಯೆಲ್ಲವ ಸೇರಿಸಿ ತರಿಸಿ
ಗುಡಿಯ ಮಂಟಪವನು ಹೊಸತು ಮಾಡಿಸುತ
ಕಡುವೊಪ್ಪ ಸುತ್ತಗಳನ್ನು ತೋಡಿಸುತ
ಕೋಟೆಕೊತ್ತಳಗಳನೆಲ್ಲ ಕಟ್ಟಿಸಿ ಕ-
ವಾಟಗಳನು ತಕ್ಕವಂಕದಾರಗಳ-
ಲಿಡಿಸುತ ಬಾಗುಕಟ್ಟೆಗಳನಗಳ್ತೆ
ಸುತ್ತಲು ತೋಡಿಸಿ ಅಟ್ಟಳೆಗಳಲಿ
ಒಪ್ಪುವ ಡೆಂಕಣಿಗಳ ಸಾಲುಗಳಲ್ಲಿ
ಟೆಕ್ಕೆಯಗಳ ತೋರಣಗಳನು ಕಟ್ಟಿ

ಕೊತ್ತಳಗಳ ಕೋಟೆಗಳಲಿ ಕೊಡೆಗಳ-
ನೆತ್ತಿಸಿ ಬಲುಮೆಯವರೆನಿಬರೊಯೆನೆ

ಬಾಗಿದ ದಸಿಗಳ ಬಸಿದ ದಸಿಗಳ
ಕಲ್ಲು ಗುಂಡುಗಳನು ಮರಳನು ತರಿಸಿ
ಕೋಟೆಗಳಲ್ಲಿ ತಕ್ಕೆಡೆಗೆ ಹಾಕಿಸುತ
ಕೋಟೆಯನೀಕ್ರಮದಿಂದ ವಿಸ್ತರಿಸಿ
ಆಳದಿ ನಡಬಾವಿಗಳನೊಳಗಗೆಸಿ
ಕಣಜದಿ ಧಾನ್ಯಗಳನ್ನು ಸಂಗ್ರಹಿಸಿ
ಆ ಗುಡಿ ಸುತ್ತ ಬಿಲ್ವಾಶೋಕ ಸುರಭಿ
ಗುಗ್ಗುಳ ಕ್ರಮುಕಾದಿಕುಜಗಳ ನಡಿಸಿ

ಮರುಗುವ ದವನವ ಮಾಚಿಪತ್ರೆಗಳ
ವರಸೆಯ ಬಹುಪುಷ್ಪವಾಟಿಯವರನು
ಸರದಿಯ ಮೇಲೆ ದೀವಟಿಗೆಯವರನು
ದಂಡಧಾರಿಗಳನು ಗುಡಿಪೂಜಾರಿಗಳ
ಕಲ್ಲುಕುಟಿಗರನು ಬಡಗಿಗಳನ್ನು
ಬಳಿಗೆಲಸದವರ ಪಂತದಾಳುಗಳ
ದ್ವಾರಪಾಲರ ಸುವಿಧಾನರ ಹಲಗೆ
ಕಾರ ತಳಾರರ ಬಳಗದಿ ಆಪ್ತ-
ರಾದರೊಡನೆ ತಾನವಾರಿತಶಕ್ತಿ-
ಯಿಂದಲಿ ಹಲಕಾಲ ಮೇಲ್ಕಟ್ಟ ಬಿಗಿಸಿ

ಆಯತ ಪಂಚಮಹಾವಾದ್ಯರವವು
ಒಂದೆ ಸಮನೆ ರಾತ್ರಿಹಗಲಲ್ಲಿ ಮೊಳಗೆ
ಪೋಟರೆನಿಸಿದಜಾಂಭೋಜನಾಭರಿಗೆ
ಕೋಟೆ ಸಾಧಿಸುವುದಗೋಚರವೆನಲು
ಮನುಜರಕ್ಕಜವೊಂದಿ ವಿನುತಿಸುತಿರಲು
ಘನಕೀರ್ತಿಯಿಂದಿಷ್ಟು ಕಾಲವು ಸಲಲು
ಧನವೆಲ್ಲ ತನ್ನಿವಿತ್ತದಿ ಪೂರ್ಣಸವೆಯೆ
ಮುಂಕೊಂಡು ಪರಿವಾರಕೆಲ್ಲ ಜೀವಿತವ-
ನಿಡಲಾಗದಿರಲು ಬೆಗಡದೆ ಜಗತಿಯ
ಸುತ್ತಲು ತುಂಬ ಯೋಚಿಸಿ ತಿರುಗುತ್ತ-

ಲಲ್ಲಿಲ್ಲಿ ಕೈದೀವಿಗೆಗಳ ಹೊತ್ತಿಸುತ
ಲಾಮುಂಚಿಗಿಂತ ತಾನಗ್ಗಳವೆನಿಸೆ
ನಾಲಗೆಗಂಟೆಗಳು ಮೊಳಗೆ ತಾಳ-
ಗಳುಲಿಯಲೊಡ್ಯಾಣ ಗುಬ್ಬಿಗೆಜ್ಜೆಗಳು

ಧ್ವನಿಸಲು ಹಲಗೆಯ ತಾಡನೆಗೈಯು-
ತಲಿ ತಾನು ಸುಯಿಧಾನ ಸುಯಿಧಾನವೆನುತ
ಗುಡಿಗೆ ಭಟನ ತೆನೆತೆನೆಗೆ ತಪ್ಪದಲೆ
ಆಳುವೇರಿಯ ಮೇಲೆ ಒಬ್ಬೊಬ್ಬನಂತೆ
ಸಾವಿರಮುಖಗಳ ಹಲವು ವಿಧಗಳ-
ನೆಲ್ಲ ಕಾಲಕ್ಕಲ್ಲಿ ಬಲವಗೈಯುತ್ತ-

ಲೀ ವಿಧದಲಿ ರಾತ್ರಿಯೆಲ್ಲವ ಕಳೆಯೆ
ಬಳಿಕದಲೆಣ್ಣೆಯು ದೀವಿಗೆಗಳಿಗೆ
ಇಷ್ಟಾದರು ಇರದಿರಲು ಯೋಚಿಸುತ
ಗಕ್ಕನೆ ಕಟ್ಟಿಗೆ ಪುರುಳೆಗಳನ್ನು
ಸೇರಿಸಿ ದೀವಿಗೆಗಳ ರೀತಿಯುರಿಸು-
ತವಿರಳದಿಂದಿರಿಸಂತೆ ಜಾಗರಿಪ
ಒಂದು ಕೊರಡುಕೊಂಬೆ ಮರದೊಂದು ರೆಂಬೆ
ಒಂದು ಬಿದಿರಕೋಲು ಕಡ್ಡಿಗಿಡ್ಡಿಗಳು
ಔಷಧಕಾದರೂ ಮರವೆಂಬ ಹೆಸರು
ಎಂದಿಗೂ ಇರದಂತೆ ತಾನಲ್ಲಿ ಹೋಗಿ

ಹುಲ್ಲಿನಿಂ ಹಗ್ಗವ ಕೈಯಲಿ ಹೊಸೆಯು-
ತಧಿಕದಿಂ ದೀವಿಗೆಗಳ ರೀತಿ ಹಿಡಿದು
ಬಳ್ಳಿಗಳಾ ದೀಪವೊಪ್ಪಿ ವರ್ಧಿಸಲು
ತಾ ಮನೋವೇಗದಿಂ ಜಗತಿಯ ಸುತ್ತ
ತಿರುಗುತ್ತ ಮತ್ತಿಷ್ಟು ದಿನಗಳು ಕಳೆಯೆ
ದೃಢತೆಯಿಂ ಹುಲ್ಲುಪುರಲೆಗಳ ಕಡ್ಡಿ
ಕಸವನು ಸದೆಸೊಪ್ಪುಗಳನೆಲ್ಲ ಕಡೆಯು
ಹುಡುಕಿಯು ಕಾಣದೆ ಮನದಿ ಚಿಂತಿಸುತ
ಕಚ್ಚುಟ ಮೊದಲಾದ ಬಟ್ಟೆಯನೆಲ್ಲ
ಬೇಗನೆ ಹೊಸೆಯುತ ಹಾಕಿ ಹೊತ್ತಿಸುತ

ಆಗಸದಾ ಮಿಂಚುಬಳ್ಳಿಯೋಯೆನಲು
ದೀವಿಗೆಗಳ ರೀತಿ ಕೈಯಲಿ ಹಿಡಿದು
ವೇಗದಿಂ ಮತ್ತೆಯಾ ಹಗ್ಗವು ಸವೆಯೆ
ಹಬ್ಬಲು ಕತ್ತಲೆ ಮರೆಮಾಡಿಕೊಳುತ
ಹಗೆಗಳು ಹೊಗುವರೊ ಪರಿಕಿಸಲೆನುತ
ಅರಿಯೆ ಪ್ರಮಾದವೆಂದಾತ್ಮದಿ ಬಗೆದು

ಗಕ್ಕನೆ ತಲೆಗೂದಲಲಿ ಜಡೆಹೆಣೆದು
ಚಕ್ಕನೆ ದೀಪದಿಂ ಹೊತ್ತಿಸಿ ಹಿಡಿದು
ಇಷ್ಟರಲ್ಲಹುದಿನ್ನು ಬೆಳಗು ತಾನೆನುತ
ಅತ್ಯಂತ ವೇಗದಲೆಂದಿನ ರೀತಿ

ಜಗತಿ ಸುತ್ತಲು ಸುತ್ತೆ ಜಡೆ ಗಾಳಿಯಲ್ಲಿ
ಭಗಭಗನುರಿಯೆ ದೀಪದ ಕಲಿಯಾರ
ತಲೆಯೆಲ್ಲ ಬೆಂದುಹೋಗುವ ಮುನ್ನ ಶಂಭು
ಜಲಜಾಕ್ಷ ಜಲಜಜ ಶತಮಖಾರ್ಚಿತರು
ಕಂತು ಸಂಹರನಂತಕಾಂತಕನತಿ ನಿ-
ಶಾಂತ ಸದಾನಂದನಂಬಿಕಾಧವನು
ತ್ರಿಭುವನಾರಾಧ್ಯನು ದಿವ್ಯಶರೀರ-
ನಭವನು ಶಿವನು ಪ್ರತ್ಯಕ್ಷದಿ ನಿಂತು
ಧೀರ ಮಹೋದಾರ ದೀಪದ ಕಲಿಯ-
ನಾರನ ಕಾರುಣ್ಯ ಶರಧಿಯಲದ್ದಿ

"ಇಚ್ಛೆಯಾವುದು ನಿನ್ನ ಮೆಚ್ಚಿದೆ ಬೇಡು
ಈವೆನು ನಾ" ನೆನೆ ಸಾಷ್ಟಾಂಗವೆರಗಿ
"ಸಾವಿರ ಮೆಚ್ಚುಗಳಲನೊಂದನೊಲ್ಲೆ
ನಿತ್ಯವೆನ್ನಯ ಬಿನ್ನಪವನು ನೀಕೇಳು
ಈ ವಿಪಿನದೊಳಗದೆಲ್ಲಿಯ ಬಣಗು
ದೇವರೋಯೆನಲು ಶ್ರೀ ದಿವ್ಯಲಿಂಗಾಂಗ
ಲೋಕಾಶ್ರಿತನೆ. ಭಕ್ತಲೋಕಕುಟುಂಬಿ
ಏಕಾಕಿಯಾಗಿಹುದಿದು ನೀತಿಯಲ್ಲ
ದೃಢವಾದ ರಜತಾದ್ರಿಯಂಥ ದುರ್ಗವದು
ನಮಗಿರೆ ಬೇರೆ ಮನ್ನೆಯಗಳ ಮಾಡಿ-

ಕೊಂಡರಲೇತಕೀ ವನದುರ್ಗದಲ್ಲಿ?
ನಡೆನಡೆ"ಯೆನುತ ಪುಷ್ಪಕ ವಿಮಾನದಲಿ
ಚಕ್ಕನಾ ದೇವನನೇರಿಸಿ ತಾನು
ಹತ್ತಿ ದೀಪದ ಕಲಿ ಶೋಭಿಸುತಿರಲು
ಗುಡಿಯು ಮಂಟಪವನು ಕೋಟೆಯ ಕೂಡ
ಅತ್ಯರ್ಥಿಯಿಂದೊಯ್ದು ಕೈಲಾಸಪುರಕೆ
ಪುರಹರನನೊಲಿಸಿ ದೇಹಸಮೇತ
ಹೋಹ ಭಕ್ತಿರಿಹರು ಎಲ್ಲ ಲೋಕದಲಿ

ಗುಡಿಯೊಡನೆಯೆ ಲಿಂಗವನ್ನು ಕೊಂಡೊಯ್ವ
ಭಕ್ತನಿರುವನೇನಖಿಲಲೋಕಗಳಲಿ

ಕಡುಕಡು ಚೋದ್ಯವಿದಲ್ಲವೆ ತಿಳಿಯೆ
ಬುವಿಯಲಿ ಹುಟ್ಟಿದ ಭಕ್ತಿ ಹುಟ್ಟಿದುದೆ
ನುತ ದೇವದಾನವಮಾನವಾವಳಿಯ
ಹೊಗಳಲು ವೀರಭಕ್ತ ಶಿಖಾಮಣಿಯಹ
ದೀಪದ ಕಲಿಯಾರನಿಂಥ ಮುಗ್ಧತ್ವ
ವಿಂತಚಲದಿಯೊಪ್ಪಿ ತಂತುಮಲ್ಲದೆಯೆ

## ನಾಟ್ಯನಮಿತ್ತಂಡಿಯ ಕಥೆ

ಕಡುವೊಪ್ಪೆ ಮತ್ತೆಯು ಕಂಚಿನಗರದಿ
ಮೃಡಮೂರ್ತಿ ನಾಟ್ಯನಮಿತ್ತಂಡಿಯೆನುವ
ಅನುಪಮ ಶಿವಭಕ್ತಪುಂಗವನೊಂದು
ದಿವಸ ಶ್ರೀ ಏಕಾಮ್ರನಾಥನ ಗುಡಿಗೆ

ಆಯತ ಭಕ್ತಿಯಿಂ ಬಂದು ಕೂತ್ತಾಡಿ
ನಾಯನಾರನ ಸದಾನಂದಸ್ವರೂಪಿ
ತಾಂಡವಮೂರ್ತಿಯತ್ಯದ್ಭುತಾಕಾರ
ದಂಡಿಗಜಾಸುರದಳನಾವತಾರ
ಬಾಲೇಂದುಶೇಖರ ಫಾಲಲೋಚನನ
ಕಾಲಕಂಧರ ಶೂಲಖಟ್ವಾಂಗಧರನ
ಕಂಡು ಪೂಜಾರಿಗಿಂತೆಂದ : "ಈಶ್ವರನ
ನಡುವಂತೆ ಬಾಗಿರುವುದು ತಾನೊಂದೆಸೆಗೆ :
ಓರೆಗೆ ಅಂಕುಡೊಂಕಾಗುತ ಹೋಗಿ
ಈಶನ ಕೈಗಳು ಬಾಗಿವೆಯಲ್ಲ!

ಮೂಬಾರಿ ಕೊಂಕಿಸಿ ಊರಿ ಊರದಲೆ
ಒಂದು ಪಾದವು ನೆಲದಲ್ಲಿದೆ, ಶಿವನಿ_
ಗಿರುವ ಪಾದಗಳಲಿ ಊರುಮಧ್ಯದಲಿ_
ರುವುದೆಲ್ಲ ವಕ್ರವಾಗಿಹುದೊಯೆಂಬಂತೆ;
ನಟ್ಟನೋಟದ ಶಿವನೇತ್ರತ್ರಯಗಳು
ಒಲಪಿನಿಂದೆವೆಗಳಲೊಂದಿಕೊಂಡಿಹವು.
ಮಲಹರಶಿರವು ನೇರಾಗಿ ನಿಲ್ಲದೆಯೆ
ತಾನೊಂದು ಪಕ್ಕಕೆ ಬಾಗಿಕೊಂಡಿಹುದು;

ಮೃಡನ ಕೆಂಜೆಡೆಮುಡಿ ಸಡಿಲಾಗಿರುವುದು
ಕಡು ಚೋದ್ಯವಿದಕೇನು ಕಾರಣ?" ವೆನಲು

ಆ ಶಿವಬ್ರಾಹ್ಮಣ ಮಗುಳುನಗುತ್ತ
"ಈ ಶಿವನಿಗೆ ರೋಗವಿಂತಿಹುದದುವೆ
ವಾಯುದೋಷವು, ಇದ ವಾಸಿಮಾಡದಿರೆ
ಕಾಯಜಹರನಿಗೆ ಕಡು ಪ್ರಮಾದವಿದೆ.
ತಡೆದರೆ ಒಂದ ಯೋಚಿಸಿದರೆ ಶಿವನ
ಒಡಲೆಲ್ಲ ಕೂಡವೀಗಲೆ ಕೊಂಕಾಗುವುದು.
ಇದಕೆಲ್ಲವೌಷಧವನು ಬಲ್ಲೆ ನಾನು
ಶಾಂತಿ ಮಾಡಿಸೆ ವಾಸಿಯಾಗುವು" ದೆಂದು
ಅಣಕದಿಂದಲಿ ಹೇಳಲದು ತಥ್ಯವೆಂದು
ಆ ಲಿಂಗವಂತನಂತಾತ್ಮದಿ ಬಗೆದು

ತನ್ನ ಮನೆಯ ಪದಾರ್ಥಗಳನು ಧನವ
ಮುಂಕೊಂಡು ತಾ ತಂದು ಮುಂಗಡೆಯಿಟ್ಟು
"ಬೇಡಿದರಿಷ್ಟು ಕೈಕೊಂಡು ನೀವೀಗ
ಮಾರಾರಿಯೀ ರೋಗ ವಾಸಿಮಾಡಿದರೆ
ನನ್ನ ಹೆಂಡತಿ ಮಕ್ಕಳೊಡನಾಗಿ ನಿಮಗೆ
ದಾಸನಾಗುವೆ ನಾನು ಸ್ವಯಮೇಚ್ಛೆಯಿಂದ
ಹೇಗಾದರೂ ಮಾಡಿ ಅಷ್ಟು ಪುಣ್ಯವನು
ಕಟ್ಟಿಕೊಳ್ಳಿರಿ" ಯೆನೆ ಇದ್ದೆಲ್ಲ ಧನವ
ಕೊಳ್ಳುತ "ವಾಯುತೈಲವೆನುವೌಷಧವ
ತಯ್ಯಾರು ಮಾಡಿಹೆ" ನೆನುತಲೇರಂಡ

ದೆಣ್ಣೆಯನೊಂದಿಷ್ಟು ಬೆಚ್ಚಗೆ ಮಾಡಿ
ಕೈಲಿತ್ತನವಗೆ ತತ್ಕ್ರಿಯೆಗಳ ಹೇಳಿ.
ವಾಯುತೈಲವ ಕೊಂಡು ತರುತಲಾಕ್ಷಣವೆ
ಮಾಯಾಹರನ ಮೈಗೆ ಮರ್ದನಗೈದು
ಮತ್ತೆಯು ಕರಿಲಕ್ಕಿಕುಡಿಗಳುಮ್ಮತ್ತಿ
ಕುಡಿಗಳೆಕ್ಕೆಯ ಕುಡಿಗಳನವುಡಲದ
ಕುಡಿಗಳ ಹಣ್ಣಾದ ಚಿಲ್ಲದೆಲೆಗಳ
ಜೊತೆಗೆ ಕೆಲವು ಮದ್ದುಗಳನು ಸೇರಿಸುತ್ತ
ಭರದಲಿ ದೇಹಕೆಲ್ಲಕು ಲೇಪಿಸುತ್ತ
ಅಕುಟಿಲ ಮರಳ ಪೊಟ್ಟಣವನು ಕಾಸಿ

ಮುಟ್ಟುತಲಂಗೈಲಿ ಬಿಸಿಯನು ನೋಡಿ
ನಿತ್ಯವರಿತು ಶಾಖವೀಯುತ್ತಲಿದ್ದ
ಪಥ್ಯವನಾರೋಗಿಸಲು ಬಡಿಸುತ್ತ
ತಥ್ಯದಿಂದಲಿ ಮತ್ತೆ ಶುಶ್ರೂಷೆಗೈದು
ಕೊಂಚ ದಿವಸಗಳು ಕಳೆಯೆ ತದ್ಭಕ್ತ
ನೀಲಗಳನ ಕಂಡು ದಿನಗಳಾಯ್ತಿಷ್ಟು
ನೆಮ್ಮದಿಯೆನಲೊಂದಿಷ್ಟಾದರೂ ಗುಣವು
ಕಾಣದು ಪಾರ್ವತೀಶನ ಶರೀರದಲಿ
ಎನಲೇಕೆ? ನಿಶ್ಚಯದಲ್ಲಿಂತಿದಲ್ಲ
ಮುಂದಕೆ ನಾನೆಷ್ಟು ಭ್ರಾಂತಿ ಹೊಂದಿದರು

ಆರಯ್ಯಲೀಕಾಡಿನೆಲೆಗಳು ಕಾಯಿ
ಬೇರುಗಡ್ಡೆಗಳೆಲ್ಲ ಮಾರಸಂಹರನ
ಒಡಲರೋಗವನು ಮಾಣಿಸಲಾರವೇನು
ತಳುವದೆ ಈಗ ನಾ ಮಾತ್ರವೇ ಶಿವನ
ವಾಯುದೋಷಕೆ ವೈದ್ಯನಾದೆನೆ" ನುತ್ತ-
ಲಾತನು ಕಡುನಿಶ್ಚಿತಾತ್ಮದಲಾಗ
ಇನಿತು ಚಿಂತಿಸದಲೆ ತನ್ನ ಪ್ರಾಣಕ್ಕೆ
ಮುನಿಯಲು ಪ್ರತ್ಯಕ್ಷದಲಿ ನಿಂತು ಶಿವನು
ಪಾರ್ವತೀಕಾಂತನು ಭಕ್ತವತ್ಸಲನು
ಶರ್ವನರ್ವಾಚೀನ ಸೌಮ್ಯಸ್ವರೂಪಿ

ಗೀರ್ವಾಣವಂದ್ಯನು ಆ ಸರ್ವೇಶ್ವರನು
ಸರ್ವಜ್ಞನಜಹರಿಶತಮಖಾರ್ಚಿತನು
ನಾಟ್ಯಲೋಲನು ತಾ ಪಿನಾಕಹಸ್ತನವ
ನಾಟ್ಯನಮಿತ್ತಂಡಿಯನ್ನಾಲಂಗಿಸುತ
"ಶುಭ್ರಕೀರ್ತಿಯೆ ನಿನ್ನ ಮೆಚ್ಚಿಗೆ ಬೇಡು
ಪ್ರೀತಿಯಿಂದೀವೆನಾನಭಿಮತಾರ್ಥಗಳ-"
ನೆನೆ "ಏನನೊಲ್ಲೆನಭವ, ನಿಮ್ಮ ದಿವ್ಯ
ತನುವು ಬೇರೊಂದು ರೀತಿಯಲಿಹುದದುವು
ಹಲವು ವಕ್ರತೆಯೊಂದಿ ವಿಕೃತರೂಪಾಗಿ-
ಯದರಿಂದಲೊಪ್ಪವಳಿದಿಹುದು ನೋಡು

ರೋಗವೋ ಸಹಜವೋ ಯೋಗೀಂದ್ರವಂದ್ಯ
ಈ ಗರಿಮೆಯ ತಿಳಿಸೆನಗೆ ನೀ" ನೆನಲು

"ಇದು ತಾಂಡವಾಕಾರ, ಎಂತೆಂದರದುವೆ
ಮುದದಲಿ ನಾಟ್ಯಾಭಿಮುಖನಾಗಿ ನಿಂತು
'ಹೋ' ಯೆಂದು ಡಮರುಗವನ್ನೊಮ್ಮೆ ಶಬ್ದ
ಮಾಡಿದಾಕ್ಷಣವೆ ಸರ್ವವು ಲಯವೊಂದೆ
ಚರಣಗಳವು ಗತಿಯಾಗಿ ಚಲನದಿ
ತೊಡಗಲು ನಕ್ಷತ್ರ ಪಂಕ್ತಿಗಳದುರೆ
ವಿನುತಮಹೋದ್ರೇಕ ವೀಕ್ಷಣಾಟೋಪ-
ದಿಂದಜಾಚ್ಯುತ ದೇವಮುಖ್ಯರಡಗಲು

ಗೆಜ್ಜೆಯ ಗಂಟೆಯ ನಿನದಕೆ ಹೆದರಿ
ದೇವಿಯಿರುವ ಅರ್ಧ ಧೃತಿಯಿಂದ ಸೇರೆ
ಖ್ಯಾತ ಮಹೋದ್ಧತ ಕರತಾಡನಗಳ-
ಲಾತತದಿಕ್ತತಿ ದೂರಕೆ ಸರಿಯ-
ಲುಚ್ಛ್ವಾಸನಿಶ್ವಾಸೋಪನಿಹತಿಯಿಂದ
ಬಡಬಾನಲಗಳಾರೆ ಜಡನಿಧಿಗಳಲಿ
ಗತಿಯ ಮೆಟ್ಟುವ ಪಾದಘಟ್ಟನದಿಂದ-
ಲತುಲ ಧಾತ್ರೀತಲವದು ಧೂಳಿಯಾಗ-
ಲುರವಣೆಯಲಿ ಗಿರ್ರನೆ ತಿರುಗಿ ನಿಲಲು
ದಿಕ್ಕೆಟ್ಟ ದಿಗ್ಗಜಗಳ ಶಕ್ತಿಯುಡುಗೆ

ಗಕ್ಕನೆ ಜಾರಿ ಟಂಕಾರದ ಜೊತೆಗೆ
ತುಳಿಯಲು ಕುಲಗಿರಿವಿತತಿಯ ಬಿರಿಯ-
ಲೊಂದಿಸಿ ಪಾದಾಗ್ರವೂರುತ ನಟಿಸೆ
ಕೆಳಗಿನ ಕೂರ್ಮವು ಅಜಿಬಜಿಯಾಗೆ
ಮಹಿತಜಟಾಚ್ಛಟಹತಿಯಲಜಾಂಡ
ಬಹುಳ ಕಟಾಹಗಳೊಡೆಯಲು ತಾವು
ಉರುಕಿರೀಟವಿಘಾತನೋದ್ವೃತ್ತಿಯಿಂದ-
ಲಾ ತತ್ವಸಂದೋಹಗಳು ಬಣ್ಣಗೆಡಲು
ತಾಂಡವೋದ್ಧತಿಯಿಂದ ತಾ ಧರಿಸಿರುವ
ಬಿರುಫಣೇಂದ್ರನು ಚಲಿಸಲು ಬುಸುಗುಟ್ಟಿ

ಇಂತುಸುರುವ ಫಣೀಂದ್ರನ ಸುಯ್ಯಲಿಂದ
ಸ್ಫುಟಫಾಲನೇತ್ರಾಗ್ನಿ ಭುಗಿಲೆಂದು ನೆಗೆಯೆ
ಮೇಲೆದ್ದ ನೇತ್ರವಹ್ನಿಯ ತಾಪದಿಂದ
ಜಡೆಯ ಮೇಲಿದ್ದ ಚಂದ್ರನು ಅರ್ಧ ಕರಗೆ

ಜೊತೆಗೆ ಸುಧಾಸೂತಿ ಕರಗಿದ ಕತದಿ
ತಲೆಯಿಂದಲಮೃತವು ಭರದಿಂದ ಹರಿಯೆ
ತಲೆಯಿಂದ ಹರಿತಂದ ತತ್ಸುಧಾಪೂರ–
ವಲರಿ ಮುಳುಗಿಸೆ ಜೀವಗಳು ಬಂದಾಗ–
ಲುರದಲಿ ಶಿರದಲಿ ತಾ ಗಳದಲ್ಲಿ
ಕರದಲಿ ಭೂಷಣೋತ್ಕರಗಳಂತೆಸೆದು

ಬೆರೆಯೆ ಸುರಾಸುರ ಬ್ರಹ್ಮಾಚ್ಯುತಾದಿ
ವರಕಪಾಲಾವಳಿ ಶರಣು ಬೇಡುತ್ತ
ಬೊಬ್ಬೆಯ ಹಾಕುತಾರುತ ಗದ್ದಲಿಸಲು
ಉಬ್ಬಿಯಾಳತಿಗೈಯೆ ತಾಳದ ಲಯಕೆ
ಕ್ರೀಡೆಯಾಡಲು ಜತಿಗೀತಗಳೊಡನೆ
ತಾಂಡವವಾಡುವೆ ಪ್ರಮಥರು ನೋಡೆ
ಅದರಿಂದ ತಾಂಡವಾಕಾರವನರ್ಥಿ–
ಯಿಂದಲಿ ಭಜಿಪರು ಭಕ್ತರು ನಿತ್ಯ"
ವೆನುತಲಾಣತಿಯಿತ್ತು ತದ್ದೇವದೇವ–
ನನುರಾಗಲೀಲೆಯಿಂದತುಲ ಮೌಗ್ಧ್ಯದಲಿ

ಮೆರೆವ ನಾಟ್ಯ ನಮಿತ್ತಂಡಿಯ ಮಹಿಮೆಯಲಿ
ಅಂಚಿತ ಕನಕ ದಿವ್ಯವಿಮಾನದಲ್ಲಿ
ಕೊಂಡೊಯ್ದು ಕೈಲಾಸಗಿರಿಗೆ ಸದ್ಭಕ್ತ
ಜನರು ಸಜ್ಜನರೆಲ್ಲ ವಿನುತಿಸೆ, ಮತ್ತೆ

## ಉಡುಮೂರಿ ಕಣ್ಣಪ್ಪನ ಕಥೆ

ಶ್ರೀ ಕಾಳಹಸ್ತಿಗಿರಿ ಪ್ರದೇಶದಲಿ
ಶ್ರೀಕಂಠಭಕ್ತನು ಲೋಕೈಕನುತನು
ಉಡುಮೂರಿ ಕಣ್ಣಪ್ಪನೊಂದಿನವರ್ಥಿ–
ಯಿಂದಡವಿಗೆ ಬೇಟೆಗೆಂದೆಯ್ದೊಂದೆಡೆಗೆ
ಬಂದಲ್ಲಿ ಜೊತೆ ಕಿರಾತರ ಕೂಡೆ ತೋಪಿ–
ನಲ್ಲಿರುತಲ್ಲಷ್ಟು ನಿದ್ರೆಯೊಳಗಿರ–

ಲಾಗಲ್ಲಿ ರುದ್ರ ಚಿಹ್ನೆಗಳೊಡನೀಶ
ಮೈದೋರಿ ತಾಪಸಿಯೊಲು ಒಂದು ಅವನ
ಚೌಕದಲಿರಿಸಿ ನೊಸಲ ಭೂತಿಯಿಟ್ಟು
ಶಿರ್ವತೀರ್ಥಕಲಾಶಾಭಿಷಿಕ್ತನಾಗಿಸುತ

"ಹೋಗಲು ಮುಂದಕೆ ಘನಲಿಂಗಮೂರ್ತಿ
ಕಾಂಬುದು; ಪ್ರಾಣಲಿಂಗವು ನಿನಗದುವೆ"–
ಯೆಂದುಪದೇಶಿಸಿದಂತೆ ಸ್ವಪ್ನದಲಿ
ಕಂಡು ಮೇಲೆದ್ದು ನಾಲ್ದೆಸೆಯ ವೀಕ್ಷಿಸಲು
ಮುನ್ನಿರದಿದ್ದೊಂದು ಮಾರ್ಗ ಮುಂದಿರಲು
'ಕನಸ ತೋರಿಕೆಯೀಗ ದಾರಿಯಾ'ಯ್ತೆನುತ

ಜೊತೆಯ ಕಿರಾತರನೊಂದೆಡೆಯಿರಿಸಿ
ಹೋಗಲು ಮುಂದಕೆ ಘನಲಿಂಗಮೂರ್ತಿ–
ಯಿರಲು ಸಂತೋಷಿಸಿ ಕಣ್ಣಪ್ಪದೇವ–
ನುನ್ನತ ಭಕ್ತಿ ಸಂಯುತವಾಗಿ ಮೊಕ್ಕಿ
"ಕನಸ ಕಂಡೆಡೆಗೆ ಗೋಣಿಯನು ಕೊಂಡೊಯ್ಯೆ
ಫಲಸಿದ್ಧಿಯಾದುದು ಭಾಗ್ಯವೆ ತಾನೆ?
ಆ ತಪೋಮೂರ್ತಿ ಹೇಳಿದ ಲಿಂಗವಿದುವೆ
ಪ್ರಾಣನಾಥನು ತನಗೆಂ"ದು ನಿಶ್ಚಯಿಸಿ
ಭಾಷೆಯಲ್ಲವದಿನ್ನೀ ಪ್ರಾಣಲಿಂಗವನು
ಕಡೆಗಣಿಸದಲೆನ್ನ ಹಳ್ಳಿಗೀತನನು

ಗಕ್ಕನೆ ಕೊಂಡೊಯ್ದು ಕಟ್ಟುವೆ ಗುಡಿಯ–
ನಿಲ್ಲಿರಿಸಲುಬಾರದೀ ಬಿಸಿಲಲ್ಲಿ
ಬುದ್ಧಿಯ ಹೇಳುತ ಮನವನೊಲಿಸುತ
ಕೇಳದಾದರೆ ಮೋಸಗೈದಾದರೂನು
ಬೇಕಾದ ವಸ್ತುಗಳೆಲ್ಲ ತಂದಿತ್ತು
ರಮಿಸಿ ಕೊಂಡೊಯ್ಯಬೇಕೆನ್ನುತ ಬಗೆದು
ಪರಮಹರ್ಷದಲಿ ವಿಸ್ಫಾರಾಂಗನಾಗಿ
ವರಮುಗ್ಧಭಾವದಿ ಹರನಿಗಿಂತೆಂದ :
"ಅಕ್ಕಟಾ, ಏನಿದು ಹರನೆ ಒಬ್ಬಂಟಿ
ಯಾಗಿಲ್ಲಿ ನೀನಿರಲೇನು ಕಾರಣವು?

ತಲೆದೋರದಾವೂರ ತಮ್ಮಡಿಗಳಲಿ
ಮುನಿದು ಬಂದಿಹೆ ಹೇಳು ಮುನಿಸ ತೀರಿಸುವೆ.
ಗೊರವರುಮ್ಮತ್ತಿಪತ್ರೆಯ ಪೂಜೆಗೈಯೆ
ಮರುಳಾಗಿ ಬಂದೆಯ ಉರುತರಾಟವಿಗೆ?
ಪರಿಷೆಯ ಗಜಿಬಿಜಿ ಸಹಿಸದ ನೀನು
ಸಿರಿಗಿರಿಯಿಂದ ಪರಾರಿಯಾಗಿಹೆಯೊ?

ಜಡೆಗಳೊಡಲಿಗೆ ಸವತಿಯರು ಹೋರೆ
ತಡೆಯಲಾರದೆ ಬಂದೀಯಡವಿ ಹೊಕ್ಕಿಹೆಯೊ?
ಚೆನ್ನಯ್ಯನನು ಕೂಡೆ ಕುಲಕೆಟ್ಟಿತೆನುತ
ಲೋಕವೆಲ್ಲವು ನಿನ್ನ ತೆರೆಯೆ ಬಂದಿಹೆಯೊ?

ಹಲಬಾರಿ ನಂಬಿಗೆ ಬಳಿಗೆಲಸವನು
ಮಾಡಲಾರದೆ ಬಂದೆಯೇನಿಲ್ಲಿ ಅಡಗೆ?
ಅಂದಿನ ಬ್ರಹ್ಮನಿಂದಾಯ ತಪ್ಪಿರಲು
ಬೇಟೆಗೆ ಬಂದೆಯೊ ? ಹೆಚ್ಚು ಮಾತೇಕೆ
ನನ್ನ ಮೇಲಣ ಮೋಹದಿಂದೆನ್ನ ಸಲಹೆ
ಬಂದೆಯೊ ಬೇಡಿಕೆ ಸಲಿಸಲೀಯಡೆಗೆ?
ಎಂತಿದ್ದೆಯೇಗ್ಯೆದೆ ಬದುಕೆಂತು ನಿನ್ನ?
ಇಲ್ಲಿಗೆ ಬಂದಿಹೆಯೆಂದಿಷ್ಟು ಕಾಲ?
ನೀನು ಏರುವ ಎತ್ತು ನಿನ್ನಿಲ್ಲಿ ಹಾಕಿ
ಎಲ್ಲಿ ಹೋಯಿತು, ಏನು ಮಾಡಲಿ ಹೇಳು?

ಒಡಲಲರ್ಧವ ಕೊಂಡ ಉಮೆಯು ತಾನೆಲ್ಲಿ?
ಎಡರಾಗೆ ನಗದಿರುವರೆ ನೋಡಿದವರು?
ಕಟ್ಟಿದ್ದ ಗೋಸಿಯನೆಲ್ಲಿ ಬೀಳಿಸಿದೆ?
ಸುಮ್ಮನೊಬ್ಬನೆಯೇಕೆ ಬಂದೆಯಡವಿಗೆ?
ಕಂಕುಳ ಬೊಂಕಣವದು ಸಡಿಲಿಹುದು
ಶಂಕಿಸದೊಂದಿಷ್ಟು ಸರಿಪಡಿಸಯ್ಯ
ಬೆಟ್ಟಗಳಲ್ಲಿ ನೀನೊಬ್ಬನೆಯಿಂತು
ಇರೆ ಭಯವೆನಿಸದೆ ಖಂಡೇಂದುಮೌಳಿ?
ಮೃಗವುರಗಗಳಿಗೆ ಮಿತಿ ಮೇರೆಯಿಲ್ಲ
ಪರಿಹಾಸವಲ್ಲವಿಲ್ಲಿರಲು ಪ್ರಮಾದ

ಬೇರೆ ಬೇಡರು ನಿನ್ನ ನೋಡಲೇಡಿಪರು
ಕರಕಂಠ, ನಮ್ಮ ಹಳ್ಳಿಯಲಿದೆ ಸುಖವು
ಅಡವಿಯ ಚಿಗರೆಯ ಕಡುವೊಳ್ಳೆ ಹಾಲು
ಬಿದಿರಕ್ಕಿ ಪಾಯಸವುಡುವಿನ ತುಪ್ಪ
ಇಪ್ಪೆಯ ಹೂ ಜೇನು ಎಲ್ಲ ಫಲಾದಿ–
ಯೊಪ್ಪುವ ಬಿದಿರಕ್ಕಿಯೋಗರಗಳನು
ಮತ್ತಿಷ್ಟಲ್ಲದೆ ಮನವಾದರೆ ನಿನಗೆ
ಮಾಂಸಸುಂಟಿಗೆಗಳು ಎಷ್ಟಾದರಿಹವು

ಬಾರಯ್ಯ, ಮೊಕ್ಕುವೆನೋ ದೇವ ದೇವ
ಕರುಳು ಬೇಯಲು ಸಾವು ತಪ್ಪುವುದೇನು?"

ಎಂದು ಪಾದಾಕ್ರಾಂತನಾಗಲೀಶ್ವರನು
ತನ್ನ ಜೊತೆಗೆ ಮಾತಾಡದಿರಲು ಮನದಿ
"ಇಷ್ಟು ಸಮಯದಿಂದ ಉಣಲಿಲ್ಲವೇನೊ
ಕುಂತುನಿರ್ದಳನು ಹಸಿವೆಯಿಂದುಸುರನು
ಕಿವಿ ತೂತುಬೀಳ್ವಂತೆ ಚೀರಲೇತಕ್ಕೆ?
ಶಿವನಿಗೇನಾದರೂ ತಂದೀವೆ"ನೆನುತೆ
ನಡೆದು ತಾ ಕಂದಮೂಲಾದಿ ಶಾಕಗಳ
ಮೃಗಗಳ ದೃಷ್ಟಿಮಾತ್ರದಿ ಪರೀಕ್ಷಿಸುವ
ಮುಂಚೆ ಕೊಂಡದಕೆ ಮನ್ನವೆ ಧರಿತ್ರಿಯಲಿ
ಸಂದ ಜೀಮೂತವಾಹನನನು ಶಿಬಿಯು

ಕೀರ್ತಿಮುಖನು ತಾನು ಕೀರ್ತಿಸಲಾದಿ
ಕರ್ತನಿಗರ್ಪಿಸಲರಿಯದ ರೀತಿ
ತಮ್ಮ ದೇಹಗಳನು ಕ್ರಮದಲ್ಲಿ ಸವೆಸಿ
ಅಮಿತ ಸಾಹಸವಂತರೆನಿಸೀ ಬುವಿಯಲಿ
ಸವಿಶೇಷಕೀರ್ತಿಭಾಜನರಾದರಷ್ಟೆ.
ಪ್ರವಿಮಲಮತಿ ಲಿಂಗಭಾಜನರಾಗ-
ರೆಂದು ಸೌಂದರ್ಯ ಮಹಾಕಾಯರೆನಿಸಿ
ದನುಜೇಶರತಿಘೋರ ತಪವನಾಚರಿಸ-
ಲತ್ಯಂತ ಪರಿತೋಷಹೃದಯದಿ ಭರ್ಗ-
ನಾ ದೈತ್ಯರಿಗೆ ಪ್ರತ್ಯಕ್ಷದಲಾಗ ನಿಂತು

"ಆಯಧೋಕ್ಷಜ ಕಮಲಾಸನವಾಸ
ಆಯತಸ್ವರ್ಗಮೋಕ್ಷಾದಿ ಭೋಗಗಳ
ಬೇಡಿಕೊಳ್ಳಿರಿ ನೀವು ನೀಡುವೆ"ವೆಂದು
ಹೇಳಲು ಸಾಷ್ಟಾಂಗವೆರಗಿ ದಾನವರು
"ನಮ್ಮ ಜಲಂಧರನಭಿಮಾನ ಕೊಂಡ
ಆ ಜನಾರ್ದನ ಪದವೇತಕ್ಕೆ ನಮಗೆ?
ನಮ್ಮ ಗಜಾಸುರನಿಂದಲೆ ಮಡಿದ
ವಾಗೀಶ್ವರತ್ವವ ಬೇಡೋಣವೇನು?
ನಮ್ಮ ತಾರಕನಿಂದಲಪಮಾನಗೊಂಡ
ಆತನ ಇಂದ್ರತ್ವವೆಮಗೇಕೆ ಹೇಳು?

ಅಲ್ಲದೆ ವ್ಯಾಘ್ರಾಂಧಕಾದಿ ದಾನವರು
ನಿಟಿಲಾಕ್ಷನನು ಹಗೆಗೊಂಡು ನಿನ್ನಿಂದ
ಮುಂಚೆ ಪಡೆದ ಮೋಕ್ಷ ಭಕ್ತಿಯಿಂ ತಾಗಿ
ಪಡೆವುದಸಾಧ್ಯವೇ ಸಂದೇಹವೇಕೆ?
ದೇವ, ನಿತ್ಯಾನಂದದಿವ್ಯಲಿಂಗಾಂಗ
ದೇವ, ಮಹಾದೇವ ದೇವಾಧಿದೇವ
ಎಲ್ಲ ದೈವತ್ವಗಳೆಲ್ಲ ಭೋಗಗಳ–
ನೆಲ್ಲವ ಬಲ್ಲೆವು, ಬಲ್ಲೆವೆಲ್ಲವನು
ರಮ್ಯವಾಗಿರುವೆಮ್ಮ ಈ ಶರೀರಗಳು
ನಿಮ್ಮಾರೋಗಣೆಗೆಯಾಹಾರವಾಗುವೊಲು

ಕರುಣಿಸು"ಯೆನಲು ಶ್ರೀಕಂಠನಿಂತೆಂದ :
"ಕಾಳಹಸ್ತಿಯ ಭೂಧರದ ಸಮೀಪದಲಿ
ಮೃಗಜನ್ಮ ತಳೆಯಿರಿ, ನಿಮ್ಮನು ವಧಿಸಿ
ಭಕ್ತನೊಬ್ಬನು ಪರಿಪಕ್ವವ ಮಾಡಿ–
ಯರ್ಪಿಸಬಲ್ಲ ಕಣ್ಣಪ್ಪನೆಂಬುವನು
ಅರ್ಪಿಸೆ ನಾ ನಿಮ್ಮನಾರೋಗಿಸುವೆನು"
ಎಂದಾಣತಿಯನೀಯಲಸುರರಾಕ್ಷಣವೆ
ಹೊರಡುತ್ತ ಪ್ರಜೆಗಳು ವನಿತೆಯರೊಡನೆ
ಮೃಗಗಳಾಗುತ ಲಿಂಗದ ಸಮೀಪದಲ್ಲಿ
ಸಂತೋಷದಲಿ ಹುಟ್ಟಿ ಪ್ರೀತಿಯಿಂ ತಮ್ಮ–

ನಿತರರು ಕಾಣದಂತಿರೆ ವರ್ತಿಸುತ್ತ
ವರಮೃಗಾವಳಿ ಸಮೀಪಕೆ ಬರಲುಬ್ಬಿ–
ಯೊಂದೊಂದು ಕೋಲಿಂದಲೊಂದೊಂದು ಮೃಗಗ–
ಳುಕ್ಕಡಗಿಸುತಲಿ ಉತ್ಸವವಲರೆ
ಬೇಗನೆ ಕೋಲುಗಳನು ತಂದಾಕ್ಷಣದಿ
ಉಜ್ಜಿ ಮೆಲ್ಲಗೆ ಬೆಂಕಿಯನು ಹೊತ್ತಿಸುತ್ತ
ಒಳ್ಳೆ ಮಾಂಸವನು ಶೋಧಿಸಿ ಶೋಧಿಸುತ್ತ
ಹಂಚುವ ರೀತಿ ಖಂಡಿಸಿ ಖಂಡಿಸುತ್ತ
ಕಾಯಿಸಿ ಪಕ್ವವಾಗಲು ಹೊರಳಿಸುತ
ಬೇಯಿಸಿ ಮತ್ತೆ ಮಾಂಸವ ಚುಚ್ಚಿ ಚುಚ್ಚಿ

ಹದವಾಗಿ ಖಂಡಿಸಿ ತಾ ಸವಿನೋಡಿ
ಸವಿಯಾದ ಒಳ್ಳೆ ಮಾಂಸವ ಬೇರೆಯಿಟ್ಟು

ಕಿರಿದಾಗಿ ಕಠಿಣವೆನಿಸಿ ಚೂರು ಗಟ್ಟಿ-
ಯಾಗದೆ ಸುರುಟಾಗದಂತೆ ತಾ ನೋಡಿ
ಇಂಪಾದ ನುಣುಪಾದ ಕಂಪುಸೊಂಪಾದ
ಪೆಂಪಾದ ಬಲುವೊಪ್ಪುವಾ ಬಿಲ್ವಪತ್ರೆ-
ಯನು ಕೊಯ್ದು ನಲವಿಂದ ತಲೆಸಜ್ಜೆಮಾಡಿ-
ಯಲರೆ ಗುಂಗುರುಕೂದಲುಗಳ ಮೇಲಿಟ್ಟು
ಬೇಗನೆ ನದಿಯ ಸದಮಲೋದಕವನು
ಅಕ್ಕಜದಿಂ ದವಡೆಗಳಲಿ ತುಂಬಿ

ಕೊಂಡೆಡಗೈಯಲಿ ಚಾಪಶರಗಳ
ಬಲಗೈಯಲಧಿಕದಲೀ ಮಾಂಸವಿದ್ದ
ದೊನ್ನೆಯ ಹಿಡಿದು ಕಣ್ಣಪ್ಪನೈತಂದು
ಕೆರದ ಕಾಲಲಿ ಮುನ್ನ ಶಿವನ ಮೇಲಿದ್ದ
ಪೂಜೆಯ ನೂಕಿ ದವಡೆಗಳ ನೀರ
ಪ್ರೀತಿಯಿಂ ಶಿವನಿಗೆ ಮಜ್ಜನಕೆರೆದು
ಶಿಲೆಯ ಕೂದಲ ಮೇಲೆ ಪತ್ರೆಗಳಿಟ್ಟು
ದೊನ್ನೆಯಲಿಟ್ಟಿದ್ದ ಮಾಂಸವರ್ಪಿಸುತ-
ಲನುದಿನವಂತೆಯೆ ಕಣ್ಣಪ್ಪದೇವ-
ನನುರಾಗದಿಂದರ್ಚಿಸತಿರಲು ಮುನ್ನ

ಪೂಜಿಪ ತಪಸಿ ಬಂದಾ ಪರಮೇಶ್ವ-
ರನ ಮುಂದೆ ಈ ರೀತಿಯಿದ್ದದ ಕಂಡು
ಎಲ್ಲಿಯ ಮ್ಲೇಚ್ಛನೋ ಎಂತಹ ಪೂಜೆ-
ಯಿಂದಿಲ್ಲಿಯನ್ಯಾಯವನ್ನಿಲ್ಲಿಗೈದ-
ನೇನಮಾಡಲಿಯೆಂದು ಏವಯಿಸುತ್ತ-
ಲಾ ಮಾಂಸ ಖಂಡನಗಳನು ಪಕ್ಕಸರಿಸಿ
ಅಪವಿತ್ರವಾಯ್ತು ಶಿವಾಗಾರವೆನುತ
ತಪಸಿ ಪಂಚಾಮೃತತಸ್ನಪನವಗೈದು
ಪಾದೋದಕಗಳನು ತತ್ಪ್ರಾಂತವಲ್ಲಿ
ವೇದೋಕ್ತದಿಂ ಚೆಲ್ಲಿ ಮತ್ತೆ ಪೂಜಿಸುತ

ಹಿಂದಿದ್ದಾತನ ರೀತಿಯನ್ನು ತಾನರಿಯೆ
ಬೆಳಗಾಗ ತಪಸಿಯುದ್ವೃತ್ತಿಯಿಂ ಬಂದು
'ಅಕ್ಕಟಾ, ಎಂಜಲು ಜೊತೆಗೆ ಮಾಂಸವದು
ದವಡೆಯ ನೀರದು ಪೂಜ್ಯವೇ ಪೂಜೆ;

ಕೆರಹುಗಾಲಲೊದೆವ ಶಿವಭಕ್ತಿಯಿಹುದೆ?
ಎಲ್ಲಿಯೂ ಕೇಳೆನು ಎಂತು ಸೈರಿಸಲಿ?
ಧರೆಯಲವನು ಮೃಗಾದನು, ನಾನು ತಪಸಿ-
ಯಸಮಾನವಿಗ್ರಹದೊಲು ಬಂದನೆಂತು?
ಇಲ್ಲಿ ಮೊದಲು ತಾನೊಂದಾನೆಯ ಜೊತೆಗೆ
ಚೆಚ್ಚರ ಹೋರಿತು ಜೇಡವೆಂತೆನಲು

ಹರ ಬಿಸಿಲಲ್ಲೊಣಗಿದನೆಂದಾ ಜೇಡ
ಕ್ರಮದಿ ತನ್ನಯ ನೂಲ ತೆರೆಬಟ್ಟೆಯಂತೆ
ಸುತ್ತಲ ತೃಣಲತೆವೃಕ್ಷಗುಲ್ಮಗಳ
ಹೆಣೆಯುತ್ತ ಮೇಲೆ ಕಪೋತವ ರಚಿಸಿ
ಕಳುವ ಪ್ರತಿಷ್ಠಿಸಿ ಗಂಟೆ ವೇದಿಗಳ
ವಿರಚಿಸಿ ಶಿಖರವ ಕರವೊಪ್ಪೆ ನಿಲಿಸಿ
ದ್ವಾರಬಂಧಗಳನು ತಕ್ಕ ಬಾಗಿಲನು
ಆರಯ್ಯೆ ಗರ್ಭಗೃಹಾದಿಯ ರಚಿಸಿ
ಅಕಳಂಕ ಕರವೀರ ಮುಕುಳ ಪ್ರಭೆಯನು
ಪ್ರಕಟಿಸಿ ದೇಹಾಳೀಬಂಧಗಳಲ್ಲಿ

ರಮಣೀಯ ಶತಸಹಸ್ರದಳಾಬ್ಜಪಂಕ್ತಿ-
ಗಳಲಿ ಪೂಜಾಪ್ರಬಂಧಾನೇಕರಚನೆ-
ಗಳಗೈದು ಸೆಲದಿ ತ್ರಿಕಾಲದ ಭಕ್ತಿ
ಭಾವನೆಯಿಂದಲಿ ಶಿವನ ಪೂಜಿಸಲು
ಹರನ ಮೇಗಡೆ ಜೇಡ ಕಟ್ಟಿದ್ದ ನೂಲ
ಕರಿಯಲ್ಲಿಗೈತಂದು ನೋಡಿ ಕೋಪಿಸುತ
"ಶಿವನ ಮೇಗಡೆ ತನ್ನ ನೂಲನು ಸುತ್ತಿ
ಹೋಗಿದೆಯಿದು ಯಾವ ಕೀಟವೊ"ಯೆನುತ
ಘನಕರ್ಣ ಚಲಿತ ಸಂಗತ ಮಾರುತದಲಿ
ಹಬ್ಬಿದ್ದ ಜೇಡರಬಲೆಯನು ಕಿತ್ತು

ನಂತರ ತುಂಡಾಂತರದ ತುಂಬ ತಾನು
ತಂದಿದ್ದ ಸರಸಿನ ನಿರ್ಮಲೋದಕವ-
ನಂಬಿಕಾಧವನಿಗೆ ಅಭಿಷೇಕ ಮಾಡಿ
ಇಂಬಾಗಿ ಕುಂಭಸ್ಥಲದಮೇಲೆ ತಾನು
ತಂದಿದ್ದ ನೈದಿಲೆಯಚ್ಚತಾವರೆಯ
ನಿತ್ಯವೂ ಪೂಜಿಸಿ ನೀಲಲೋಚನನ

ಆನೆಯು ಇಂತು ತ್ರಿಕಾಲದಿ ಭಜಿಸ-
ಲಲ್ಲಿಗೆ ಬಂದ ಜೇಡವು ಆಗ್ರಹದಲಿ
"ಕಮನೀಯವಾದ ನಾ ಕಟ್ಟಿದ ಗುಡಿಯ
ಜೊತೆಗೆ ಮದೀಯ ನಿತ್ಯಾರ್ಚನಾವಳಿಯ-

ನೆಂಥ ಕರ್ಮಿಯಾ ಹಾಳುಗೆಡವಿಹುದಿನ್ನು
ಇಂಥ ಶಿವದ್ರೋಹವೆಂತು ಸೈರಿಸುವೆ"-
ನೆನುತಲೊಂದೆಡೆ ಹೊಂಚಿಕೊಂಡಿರೆ ಗಜವು
ಎಯ್ತಂದು ಕೋಪಿಸುತಿಹ ಬಗೆ ಕಂಡು
ಅಂತರಾಂತರದಿ ತಾನಿಷ್ಟು ಯೋಚಿಸದ-
ಲಾಗ ಪರಿಚ್ಛೇದಿಯಾಗುಪಾಯದಲಿ
ತುಂಡಾಗ್ರದಲಿ ಸೇರಿ ಕೊರೆಯುತ್ತ ಸೆಲದಿ
ಯಾ ಮದೇಭಧ ತಲೆಗೇರಿ ಸಾಯಿಸಿತು;
ಅಂತೆಯಿಲ್ಲೀ ಮಾರ್ಗ ಹಿಡಿದಿಹ ಧೀರ
ಮಾನಸನೆಂಥವನಾದರಾಗಿರಲಿ

ಅಂತೆಯೆ ತಾನಿಂದು ಬರಲಿಲ್ಲ ನಾನು
ಎಂತಾದರೂ ಸಾಯಿಸದೆ ಹೋಗೆ"ನೆನುತ
ಹಿಂಬದಿಯಲಿ ಹೊಂಚಿಕೊಂಡಿದ್ದು ಬಳಿಯೆ
ಕಾಣದೊಲಾ ತಪಸಿಯು ಅಡಗಿರಲು
ಕಣ್ಣಪ್ಪದೇವನ ಘನಮುಗ್ಧತೆಯನು
ಸನ್ನುತಭಕ್ತಿಯ ಸಂಸ್ಪೃಹತ್ವವನು
ತಪಸಿಗೆ ತೋರಿಸಬೇಕೆಂದು ಶಿವನು
ವಿಪರೀತಗತಿ ತ್ರಿನೇತ್ರಪರೀತವಾದ
ವದನವ ಧರಿಯಿಸಿ ಬಲದಕಣ್ಣಿಂದ-
ಲುದಕವು ಸುರಿಯುತ್ತಲಿರುವಷ್ಟರಲ್ಲಿ

ಎಯ್ತಂದ ಮುನ್ನಿನಂತಂದು ಕಣ್ಣಪ್ಪ
ನಡೆತಂದು ನಿಂದು ಹರನ ಕಣ್ಣ ನೀರು
ಸುರಿಯಲು ಗಾಬರಿಯಲಿ ಭಯಭ್ರಾಂತಿ-
ಯಿಂದಲಚ್ಚರಿಯಲಿ ಮೊದಲ ಪೂಜೆಯನು
ತನ್ನಯ ಚಪ್ಪಲಿಗಾಲಿಂದ ನೂಕಿ
ದವಡೆಯ ನೀರನು ಬಾಯಿಂದಲುಗಿದು
ತಲೆವಾಗಿ ಪತ್ರೆಯ ಸುರಿದು ಮಾಂಸವನು
ತಾನರ್ಪಿಸುತ್ತಿಹ ತದವಸರದಲಿ

ಆ ನೇತ್ರಜಲ ಪರಿಹಾರಾರ್ಥವಾಗಿ
ತಾನೀಶ್ವರನಿಗಂತರ್ಧಾರೆಯನೆತ್ತು–

ವಂತಿರೆ ಜಲವು ಪತ್ರೆಯ ತುಂಬ ತುಂಬೆ
ಮಂಗಳವಾಗೊಪ್ಪೆ ಮತ್ತಂತಲ್ಲದೆಯೆ
ತಲೆಗಂಗೆಯವನ ಪಾದಹತಿಗೆ ತುಳುಕಿ
ಹರಿದು ಪಾದೋದಕವಾಗಿ ಮೇಲ್ಪರಿಯೆ
ಮುಗ್ಧ ಕಣ್ಣಪ್ಪನ ಬುಗ್ಗಿಯ ನೀರು
ಬರೆ ಪ್ರಸಾದೋದಕವಾಗುತ್ತಲಾಗ–
ಲಾ ಲಿಂಗಮೂರ್ತಿಯಪಾಂಗೋದಕವನು
ಹೋಲೆ ಲಿಂಗೋದಕಪೂರವಾಗುತ್ತ
ತ್ರಿವಿಧೋದಕಗಳು ತ್ರಿಣಯನ ದೇಹದಲಿ
ಪ್ರವಿಮಲವಾಗಿಂತು ಭ್ರಾಜಿಸುತಿರಲು

ಆದಿ ಪ್ರಸಾದಿಗೆ ತ್ರಿವಿಧೋದಕಗಳು
ಪ್ರವಿಮಲಮತಿಯೊಂದೆ ತಕ್ಕವೆಂಬಂತೆ
ಸರ್ವಾಂಗಗಳ ಕೂಡೆ ಜಲಗಳು ಹರಿಯೆ
ಸರ್ವೇಶ ಭಕ್ತನಾಶ್ಚರ್ಯವನೊಂದಿ
ಅಗ್ಗಳವಾಯ್ತಪಾಂಗಾಶ್ರುಗಳೆನುತ
ಭಯದಿ ಕಣ್ಣನು ಹತ್ತಿರದಿಂದ ನೋಡಿ
“ಅಕ್ಕಟಾ, ಯಾವ ಕಾರಣದಿಂದಿದಾಯ್ತು
ನಿಟಿಲಾಕ್ಷ, ನಿನ್ನ ಕಣ್ಣಲಿ ನೀರು ಬಂತು,
ನಿನ್ನ ನಿಂದೆಯ ಕೇಳಿ ಗೌರಿ ಬೆಂದ ದಿನ
ನಿನ್ನ ಕಣ್ಣಲಿ ನೀರು ಬರಲಿಲ್ಲವಿನಿತು;

ತಂದೆಯಿಂದಲಿ ಮಗ ಛಿದ್ರಗೊಂಡಾಗ
ಕನಿಕರದಲಿ ಕಣ್ಣ ನೀರುಕ್ಕಲಿಲ್ಲ;
ಸೀರೆಯ ಹರಿದು ವಿಪ್ರರು ಕಾಡುತಿರಲು
ದುಃಖದಿ ಕಂಬನಿ ಕಾಣಿಸಲಿಲ್ಲ;
ಕಲ್ಲನೆಸೆಯಲು ರೊಯ್ಯನೆ ತಾಕೆ ನೊಂದು
ಸುರಿಸಲಿಲ್ಲವು ಅಂದು ಕಣ್ಣನೀರನ್ನು;
ಪರಸತಿ ಕೈಹಿಡಿವಲ್ಲಿ ಭಂಗಿಸಲು
ಅಂದು ಸುರಿಯಲಿಲ್ಲ ಕಣ್ಣಲಿ ತೋಯ;
ಬಿಟ್ಟಿಗೆಯ್ಯುತ ಬುಟ್ಟಿ ಹಿಡಿದೆತ್ತುವಾಗ
ಹೊರಹೊಮ್ಮಲಿಲ್ಲವಪಾಂಗೋದಕಗಳು;

ನಿನ್ನಯ ಕಡೆಗಣ್ಣಿನಿಂದಿಂದು ನೀರು
ನಿರ್ನಿಮಿತ್ತದಲಿ ತಾ ಸುರಿಯುವುದೇಕೆ?
ಸತಿಸುತರನು ಬಿಟ್ಟು ಅಡವಿ ಗಿರಿಗಳ
ಪಾಲಾದೆನೆಂದು ದುಃಖಿಸಿ ಅಳುತಿಹೆಯೊ?
ಏಕಾಕಿಯಾದೆನಿನ್ನಾವ ರೀತಿಯಲಿ
ಜಗವ ಸಲಹಲೆಂದು ಧೃತಿಗೆಟ್ಟಳುವೆಯೊ?
ಹೊಟ್ಟೆಯು ಬೇಯಲು ಹಸಿವೆ ತಾಳದೆಯೆ
ತಡವಾಯ್ತು ಬಾರನಾಳೆಂದಳುತಿಹೆಯೊ?
ದಂಡಿಮೃಗಾಳಿಯಲಲ್ಲಿ ನಾನಿಂದು
ಸಿಕ್ಕಿದ್ದನೂಹಿಸಿಯಿಲ್ಲಳುತಿಹೆಯೊ?

ಕೆಲಸಕಾರ್ಯಗಳನು ತೊರೆದೊಬ್ಬನನ್ನೆ
ಬಿಟ್ಟು ಹಳ್ಳಿಗೆ ಹೋದನೆಂದಳುತಿಹೆಯೊ?
ದುಂಬಿಯು ಹೂವುಗಳನ್ನಾಘ್ರಾಣಿಸಲು
ಕಂಡು ಪ್ರಾಣಕೆ ಭಯಗೊಂಡಳುತಿಹೆಯೊ?
ಕಾರಣವೇನಯ್ಯ? ಕಣ್ಣಿನ ತುಂಬ
ನೀರು ಕಾರುತ್ತಳುತಿಹೆಯೇನು ಬೇಕು?
ಹೇಳೆಯ ನನಗೆಂ"ದು ಬಿಗಿದು ಅಪ್ಪುತಲಿ
ಅಪ್ಪಳಿಸುತಲಿ "ನನ್ನಂಥ ಮಗನಿರೆ
ಕಣ್ಣೀರಲೇತಕೆ ತೋಯಬೇಕೆ"ನುತ
ಪ್ರೀತಿಯಿಂ ಕಣ್ಣನೀರನು ಬಿಡದೊರೆಸಿ

'ಬಿಟ್ಟರೂ ಬಿಡದೀ ವ್ಯಾಸಂಗವೆ'ನುತಲಿ
ಸರಿದೇವರುಗಳು ನಿನ್ನನು ಕಂಡು ನಗರೆ?
ಸುಮ್ಮನಿರಣ್ಣಯ್ಯ, ಸುಮ್ಮನಿರಪ್ಪ
ನನ್ನ ಸ್ವಾಮಿಯೆ ಸುಮ್ಮನಿರು, ಸುಮ್ಮನೇಕೆ
ಉಮ್ಮಳ ಸರಿಯಲ್ಲ ಮಾಣೆಯ'ಯೆನುತ
ಎದೆಯ ಮೇಲ್ಬಿದ್ದ ಕಣ್ಣೀರನೊತ್ತುವನು
'ಎಸೆವೆನ್ನ ಮುಗ್ಧತೆಗೀ ಕಣ್ಣಲ್ಲಿರುವ
ಕಸವ ಹೋ'ಗೆಂಬಂತೆ ಕಣ್ಣೊರೆಸುವನು
ಕರತಳಾಂಗುಳಿಯಿಂದ ರೆಪ್ಪೆಗಳೆತ್ತಿ
'ಧೂಳಿದೆ'ಯೆಂದು ನಿಷ್ಠೆಯಲುರುಬುವನು

ನಾಲಗೆಯನ್ನು ಗುಡ್ಡಿನ ಮೇಲ್ತಿರುಗಿಸಿ
ಒರೆಯುತೊರೆಯುತೊಯ್ಯನೇ ತಾ ನೋಡುವನು

ಸೀರೆಯಾವಿಯ ಕಣ್ಣಿಗೊತ್ತುತ ಬಿಸುಪ-
ನೀಯೆ ಸೀರೆಯು ನೆನೆಯಲು ದುಃಖಪಟ್ಟು
ಈ ಕಡೆಗಣ್ಣನು ಬೆರಳಿನಿಂದೊತ್ತ-
ಲಾ ಕಡೆಗಣ್ಣಲಿ ಧಾರೆಯು ಸುರಿಯ-
ಲಾ ಕಡೆಗಣ್ಣಲಿ ಬೆರಳಿನಲದುಮ-
ಲೀ ಕಡೆಗಣ್ಣಲಿ ನೀರೊಗುತ್ತಿರಲು
ಕಣ್ಣಕುಣಿಕೆಗಳ ಬೆರಳಿನಿಂದದುಮೆ
ಕಣ್ಣೆಲ್ಲ ಕುಣಿಕೆಗಳಾಗಿ ನೀರ್ಸುರಿಯ-

ಲಾ ಕಣ್ಣ ಕುಣಿಕೆಯ ಕೈಯಿಂದ ಮುಚ್ಚೆ
ಪಕ್ಕದಿ ಚಿಮ್ಮುತ ಸುರಿಯಲು ತೊಡಗೆ
ಎಂತೆಯು ಕಣ್ಣೀರು ಎಡೆವಿಡದಿರಲು
ಬಹುವಾಗಿ ದುಃಖಿಸಿ ಬಾಯಿಬಿಟ್ಟೊರಲಿ
ಅಡಿಗೆ ಬೀಳುತ ಮೊಕ್ಕಿ ಕೈಮುಗಿಯುವನು
ಮೇಲೆದ್ದು ಬಿದ್ದು ಮತ್ತದ್ದು ನೋಡುವನು
'ಅಕ್ಕಟಾ'ಯೆನುತ ಲಿಂಗವ ಸುತ್ತಿ ಸುತ್ತಿ-
ಯತ್ತಿತ್ತ ಹೋಗುತ ತನ್ನಲಿ ತಾನು
'ಆನಂದ ಬಾಷ್ಪಗಳೆಂದು ಭಾವಿಸಲು
ಆನನದಲಿ ತೋರದಾನಂದಚಿಹ್ನೆ'

ಸಾರಕಟಾಕ್ಷವೀಕ್ಷಣಜಾಲವಾದ
ಕಾರುಣ್ಯಜಲವೆನಲುಷ್ಣವಾಗಿಹುದು
ಘರ್ಮಜಲದ ರೀತಿಯಿರುವುದೆಂದೆನಲು
ಘರ್ಮಜಲವು ತಾನು ಕಣ್ಣಲಿ ಬಹುದೆ?
ಯಾವುದೋ ದುಃಖವಿದೆಂದು ಭಾವಿಸಲು
ಎರಡು ಕಣ್ಣುಗಳಲಿ ಸುರಿಯದೆ ನೀರು?
ತಾನೊಂದು ಕಣ್ಣಲಿ ಧಾರೆಯು ಸುರಿಯೆ
ಕಾಣೆನಿದಕ್ಷಿರೋಗವೊ ಏನೊ ಎಂದು
ಹೇಳೆ ವಿಚಿತ್ರ, ಕಣ್‌ರೆಪ್ಪೆಯೂದಿದೆಯೆ?
ಕಣ್ಣಬೇನೆಯೊಯಿದು? ಅಳಿಗಣ್ಣವಿಧವೊ?

ಶೂಲೆಯೊ ಪೊರೆಗವಿದುದೊ? ಮದರುಜೆಯೊ?
ಹೂ ಹುಟ್ಟಲಾ ಕಣ್ಣ ಹೂವಿನ ನೋವೊ?
ಕತ್ತಲೆ ಕವಿದುದೊ ದುರ್ಮಾಂಸದೋಷ-
ವಿದೊ? ಅರಿಯೋ ಮತ್ತೆ ಅಕ್ಷಿರೋಗವಿದೊ?

ಕಾಣೆನು ಇದಕನುಮಾನವೆಯಿಲ್ಲ
ಇದಕೆ ಮದ್ದೇನೊ ಎನಗರಿಯದಲ್ಲ
ಎನ್ನಯ್ಯ ಎನ್ನಣ್ಣ ಎನ್ನಿಷ್ಟ ಸಖನೆ
ಎನ್ನಪ್ಪ ಎನ್ನ ಜೀಯನೆ ಪ್ರಾಣನಾಥ
ಸರ್ವಾಂಗಸುಂದರ ಶಂಕರ ಈ ವಿ
ಗುರ್ವಣವೆಂತು ಉಂಟಾಯಿತ್ತೈ ನಿನಗೆ?

ಮುಕ್ಕಣ್ಣನವನೆಂದು ಮೂಲೋಕಗಳಲಿ
ಎಲ್ಲರಂಜುವರಯ್ಯ ನಿಟಿಲಲೋಚನನೆ
ಯಾವೊತ್ತು ನಿನಗೊಂದು ಬನ್ನವಿದ್ದಿಲ್ಲ
ಕಣ್ಣ ಕಂಡರು ಸುಮ್ಮನಿದ್ದರೆ ಸುರರು
ಕಣ್ಣಕಿಚ್ಚಿನ ಮುಂದೆ ಸುಟ್ಟುಹೋದವರು
ಕಣ್ಣಿನ ವಾರ್ತೆಗೆ ಕನಲರೇ ಮತ್ತೆ
ಕೇಳೆಷ್ಟು ಕಣ್ಣು ಕಾಣದ ಪ್ರೀತಿಯಿರಲಿ
ವನಿತೆಯರಂಗಹೀನನಿಗೆ ಸಿಕ್ಕುವರೆ?
ರೂಪಿಸಲಿನಿತು ಕುರೂಪಿಯಾಗಿರಲು
ಅತಿಶಯ ಭಕ್ತ 'ರಿಹೀ' ಯೆಂದು ನಗರೆ

ಇಂದೆಲ್ಲಿ ಹೋಯಿತೊ ನೇತ್ರವ ಹರಿಗೆ
ಆದಿನವಿತ್ತಂಥನಶ್ವರಮಹಿಮೆ?
ಹೊಲದಲಿ ಎತ್ತನು ಹುಲಿಕೊಂದ ರೀತಿ
ಯಾಯತಿಂದು, ನಾನೆಂತು ನಿಲಬಲ್ಲೆನಯ್ಯ ?
ಯಾರಿಗೆ ಹೇಳಲಿ, ಎಂತು ಸಹಿಸಲಿ,
ನಾನೆಲ್ಲಿ ಹೋಗಲಿ, ನಾ ಮಾಡಲೇನು?
ಹೇಳಲೇನೊಂದಿಲ್ಲ ಮಾಡಲೊಂದಿಲ್ಲ
ಈಯವಸ್ಥೆಯ ಕಂಡು ನಾನಿರಲಾರೆ–
ನೆನ್ನ ಕಣ್ಣಲ್ಲಿ ಹುಟ್ಟಿದ ದಿನದಿಂದ
ಶ್ರೀಕಂಠನಿಗೆ ರೋಗ ಬರದಿಹುದೆಂದು

ಒಪ್ಪುವ ಕಂಗಳಿಂದಿರುವಾಗಲೇನೆ
ಕವಿಯುವೆನೆನ್ನ ಒಳ್ಳೆಯ ಕಣ್ಣ ನಿನಗೆ
ನನ್ನ ಕಣ್ಣೇ ಮದ್ದು ನಿನ್ನದಕೆನುತ
ಕೈಕೊಂಡು ಶರದಿಂದ ಛೇದಿಸಿ ತೆಗೆದು
ಶಿವನ ಕಣ್ಣಿನ ಮೇಲೆ ಕಣ್ಣಪ್ಪದೇವ
ಸಂಭ್ರಮದಲಿ ತನ್ನ ಕಣ್ಣನರ್ಪಿಸಲು

ಆ ಕಣ್ಣಲಿ ಸುರಿವ ಧಾರಾಳಿಯಡಗಿ
ಗಕ್ಕನೆ ಎಡಗಣ್ಣಿನಲ್ಲಿ ನೀರೊಗಲು
ಕಿಂಚಿತ್ಪ್ರಹಾಸಸಂಕೀಲಿತಾನನಸ-
ಮಂಚಿತಾಬೋಜನು ತನ್ನಯ ನೇತ್ರ

ಕಮಲವ ಶಿವನೇತ್ರಕಮಲವಾಗಿರಿಸಿ-
ಯಮಿತಮಹೋತ್ಸಾಹವಾತ್ಮದಿ ತುಳುಕೆ
ಕುಡಿಗಣ್ಣಿನಲಿ ಲಿಂಗದೆಡಗಣ್ಣ ನೋಡಿ
ಈ ಕಣ್ಣಿಗೂ ಮದ್ದು ತನ್ನ ಕಣ್ಣೆಂದು
ಅನುಮಾನವಿನ್ನೇಕೆಯೆಂದು ತನ್ನೇತ್ರ
ಜನಿತವಿನಿರ್ಮಲ ಜಲಧಾರೆ ಸುರಿಯೆ
ಗುರುತಿಗೆ ತನ್ನ ಚಪ್ಪಲಿಗಾಲುಂಗುಟವ-
ನೊಂದಿಸಿ ಎಡಗಣ್ಣ ತೆಗೆಯಲು ತೊಡಗ-
ಲಷ್ಟರೊಳಗೆ ತಾ ಪ್ರತ್ಯಕ್ಷನಾಗುತ್ತ-
ಲಂತಕಸಂಹಾರನನುರಾಗದಿಂದ

ಕಣ್ಣಪ್ಪದೇವನ ಕರಯುಗಗ್ರಹಣ-
ಸನ್ನುತಹಸ್ತನಾಗುತಲಲ್ಲಿ ನಿಲ್ಲೆ
ಕಲಿತಸಮಾವಲೋಕನ ಮಾತ್ರದಿಂದ-
ಲಲರಿತು ಕಣ್ಣಪ್ಪನಾ ಬಲಗಣ್ಣು
ಅವನಿಂದ ಪಡೆದ ಕಣ್ಣನವನಿಗಿತ್ತ-
ನೋ ತನ್ನ ಕಣ್ಣಿತ್ತನೋ ಶಿವನೆನಲು
ಅದರಿಂದ ಮುನ್ನವಾಮಾಂಬಕಜನಿತ
ಸಂತತ ಘನಬಾಷ್ಪಜಲಧಾರೆಯುಡುಗೆ
ಕಣ್ಣಪ್ಪದೇವನ ಕಂಗಳು ಶಿವನ
ಕಂಗಳೊಳಗೆ ಒಂದಾಗಿದ್ದ ರೀತಿಯಲಿ

ಕಣ್ಣಪ್ಪದೇವನ ಕಂಗಳಲಾಗ
ಸನ್ನುತಾನಂದಬಾಷ್ಪಗಳು ಸುರಿದವು
ಹರನ ಕಣ್ಣಲ್ಲಂದು ತ್ರಿಪುರ ವೀಕ್ಷಣದಿ
ಸುರಿದಿದ್ದ ಜಲಗಳು ತೊಡವಾದುವೆನಲು
ಕರುಣಾನಿರೀಕ್ಷಣಸ್ಫುರಿತಾಂಬುಧಾರ
ವಿರಚಿಸಲಾನಂದಕರವಾದುದರಿದೆ?
ಅನಿತರಲಖಿಲಸುರಾಸುರ ಪ್ರಮುಖ-
ರಲ್ಲಲ್ಲಿ ಮೊಕ್ಕುತಲಭಯವ ಬೇಡೆ

ಮಸ್ತಕವಿನ್ಯಸ್ತಹಸ್ತ ಮುನಿಗಳು
ಪ್ರಸ್ತುತವೆರಗುತ್ತ ಪ್ರಸ್ತುತಿಗೈಯೆ

ಶಿವದುಂದುಭಿಗಳು ಮೊರೆಯೆ ಪುಷ್ಪವೃಷ್ಟಿ
ಬುವಿಗೆ ಪ್ರವಿಮಲರು ಪ್ರಮಥರು ಸುರಿಯೆ
ಕಣ್ಣಪ್ಪ ಶುದ್ಧಮುಗ್ಧತೆಯನು ಗುಣಮ–
ಹೋನ್ನತಿಯನು ಭಕ್ತಿಯೋಗಸಂಪದವ–
ನಾ ಪರಾಪರನು ಪ್ರತ್ಯಕ್ಷವಾದುದನು;
ಕೋಪಿಸಿ ಮುನ್ನಡಗಿದ್ದ ತಪಸಿಯು
ಇದನೋಡಿ ಸಂಭ್ರಮಾಕ್ರಾಂತಾತ್ಮನಾಗಿ
ಹೊರಬಂದು ಬುವಿಯಲಿ ಮೈಚೆಲ್ಲಿ ಮೊಕ್ಕಿ
"ನಿನ್ನಯ ಸಹಜ ಮುಗ್ಧತ್ವವರಿಯದೆ.
ನೆನೆದೆನು ನಿನಗಹಿತವಗೈಯಲೆಂದು

ತಪ್ಪ ಸೈರಿಸು ನೀ ಕಣ್ಣಪ್ಪ ದಯಾತ್ಮ
ಹೇಳಲೇನಿದೆ ನೀನು ಶಿವನೆ ತಾನಾದೆ,
ಇಂತಹ ಮುಗ್ಧತ್ವವಿಂಥ ವೀರತ್ವ–
ವಿಂಥ ಮಹತ್ವವು ಎಂದಾದರಿಹುದೆ?
ಕೇಳೆವು ಅವಿಕಲವೇದಶಾಸ್ತ್ರಗಳ–
ಲರಿಯೆವು ಮೂರುಲೋಕಗಳಲಿ ಮುನ್ನ
ಭಾಪುರೇ ಕಣ್ಣಪ್ಪ ಪರಮಲಿಂಗಯ್ಯ
ಭಾಪುರೇ ಕಣ್ಣಪ್ಪ ಪರಮವಿಲಾಸ
ಭೇಷಯ್ಯ ಕಣ್ಣಪ್ಪ, ಓ ಲಿಂಗಮುಗ್ಧ
ಭೇಷಯ್ಯ ಕಣ್ಣಪ್ಪ ಶ್ರೇಷ್ಠನೈನಾರ"

ಎಂದಿಂತು ಆ ತಪೋಧನನತಿ ಭಕ್ತಿ–
ಯಿಂದ ನುತಿಸಲುವೆ ವಿಸ್ಮಯವೊಂದೆ
ಕಣ್ಣಪ್ಪ ಶಿವನಾಕಾಂಕ್ಷೆಯಲಿ ತಮ್ಮಗಳ
ಕಂಗಳ ನೋಡುತ್ತಲಿರುವಷ್ಟರಲ್ಲಿ
ಭರದಿಯೊಂದೊಂದಕ್ಕೆ ತಕ್ಕವೆಂದಂಟಿ
ಉಕ್ಕಿಯೊಂದೊಂದಕ್ಕೆ ಸ್ನೇಹದಿ ಬೆರೆದು
ನೋಟಗಳವು ನೋಟಗಳೊಳಗೆ ಹೊಕ್ಕು
ಅತಿಶಯದಿಂದೇಕವಾಗುತ್ತಲೊಪ್ಪಿ
ಕಣ್ಣಪ್ಪದೇವನ ಕಂಗಳ ಸಖರೊ
ಆ ನೀಲಕಂಠನ ಕಂಗಳ ಕವಲೊ

ಆ ಕಣ್ಣಪ್ಪನ ಕಣ್ಣ ದರ್ಪಣದ್ವಯವೊ
ಭವನ ನಯನಗಳ ಪ್ರತಿಬಿಂಬಯುಗವೊ
ಕಣ್ಣನ ಸ್ನೇಹನೇತ್ರಗಳಿಂದ ಹೊರಟ
ಲತೆಗಳೊ? ಶಿವನೇತ್ರಗುಪ್ತಾಂಕುರಗಳೊ?
ರಮಣಕಣ್ಣಪ್ಪನ ಕಣ್ಣ ಬೀಜಗಳೊ
ಅಮೃತಾಂಶುಶೇಖರನಕ್ಷಿಫಲಗಳೊ
ಎನಲು ಕಣ್ಣಪ್ಪದೇವನ ಲೋಚನಗಳು
ಕಂತುಹರನ ಲೋಚನಗಳಾಯ್ತೀ ರೀತಿ
ಶಿವನ ಕಂಗಳು ಕಣ್ಣಪ್ಪನ ಕಂಗಳಾಯ್ತು
ಸನ್ನುತಿಯಲಿ ಸಮುನ್ನತಸ್ಫುರಣವಹ

ನಾಲ್ಕು ಕಣ್ಣಪ್ಪನೈನಾರ ನೇತ್ರಗಳೊ
ನಾಲ್ಕು ಈಶ್ವರನಯನಂಗಳೊಯೆನಲು
ಮೃಡನ ಮೂರನೆ ಕಣ್ಣ ಕೆಳಗೆ ನಿರ್ಗಡಲ-
ನಡರಲೆರಡು ಎರಡಾಗುತ ಹೊಳೆದು
ನೋಟವ ನೋಡಿ ತದ್ರೂಪವ ಪಡೆದು
ಅಧಿಕದಿ ತ್ರಿವಿಧದಲೇಕವಾಗಿದ್ದು
ತಮ್ಮ ನೇತ್ರಗಳಲ್ಲೆ ತಮ್ಮನೀಕ್ಷಿಸುವ
ಕ್ರಮವಾಯ್ತು ಶಿವನಿಗೆ ಕಣ್ಣಪ್ಪನಿಗೆಯು;
ನೆರೆ ನಾಲ್ಕು ಕಂಗಳ ನಿಜದೀಪ್ತಿಯಿಂದ
ಪೊರೆಗವಿದಂತಿತ್ತು ಫಾಲಲೋಚನವು

ಇನ್ನುರಿವುದೆ ನಿನ್ನೀ ಕಣ್ಣ ತೆರೆದರು
ಆ ಪುರತ್ರಯಗಳು ಈಗಿದಿರಾಗೆ?
ಇನ್ನುರಿವನೆ ನಿನ್ನೀ ಕಣ್ಣತೆರೆದರು
ಆ ಲಕ್ಷ್ಮೀನಂದನನಂಗವ ಪಡೆಯೆ?
ಇನ್ನುರಿವನೆ ನಿನ್ನೀ ಕಣ್ಣ ತೆರೆದರು
ಕಾಲನು ಮುಂದೆಯು ಕ್ರಮವ ತಪ್ಪಿದರೆ?
ಇನ್ನುರಿವುದೆ ನಿನ್ನೀ ಕಣ್ಣ ತೆರೆದರು
ಯಾವುದೆ ಲೋಕವಿನ್ನಂತ್ಯಕಾಲದಲಿ?
ಕಣ್ಣಪ್ಪನ ದಯಾಂಬಕವು ಮುನ್ನ ಶಿವನಿ-
ಗಿದ್ದಿದ್ದರವನನುಗ್ರಾಕ್ಷನೆನ್ನುವರೆ?

ಆ ದಿನ ಕಣ್ಣಪ್ಪನ ನಯನವಿರಲು
ಬೇಡುತಿದ್ದನೆ ಸಿರಿಯಾಳನೌತಣವ?

ಆ ದಿನ ಕಣ್ಣಪ್ಪನ ನಯನವಿರಲು
ಸಹಿಸುತಿದ್ದನೆ ತಾನು ಭ್ರೂಣಹತ್ಯೆಯನು
ಈ ಚಾರುನೇತ್ರಾಬ್ಜವೀಶನಿಗಿರಲು
ನೋಡುತಿದ್ದನೆ ನಿಂಬವ್ವೆಯ ಸುತ ಸಾಯೆ?
ಅಧಿಕದೀಯಮೃತಾಂಬಕವಿರಲು ಶಿವನು
ನಂಬಿಯ ಕಂಗಳ ಕೆಡಿಸಿನೋಡುವನೆ?
ನಿನ್ನ ನೇತ್ರವಿರೆ ಮುನ್ನೀಶ ಬಾಲಕನ
ಕೈಯಿಡಗೊಡುವನೆ ಹಾವಹುತ್ತದಲಿ?

ಇವನ ನೇತ್ರಗಳರಲಿಷ್ಟೆಲ್ಲವೇಕೆ?
ಅತಿದಯಾಪರನೆಂಬ ನುತಿಯ ಪಡೆಯನೆ?
ಈತನು ಕಣ್ಣು ಮುನ್ನೀಶನಿಗಿರಲು
ಅತಿಭೂಮಿಸೌಂದರ್ಯನೆನಿಸನೆ ಜಗದಿ?
ಇಂಥ ನೇತ್ರಗಳು ಮುನ್ನಾವಾಗಲಿರಲು
ಎಂಥ ಕಾಂತೆಯರನೊಲಿವನೆ ಹರ"ನೆನೆ
ಕಣ್ಣಪ್ಪನಾ ಕಣ್ಣ ಕತದಿಂದಲೀಶ-
ನೆಂದೆಂದು ಸರ್ವಸಂಪನ್ನತೆವಡೆದ
ಕಣ್ಣಪ್ಪ ಪಾದರಕ್ಷಾಸ್ಪರ್ಶ ಶಿವನು
ಸನ್ನುತ ಭಕ್ತವತ್ಸಲನಾಗಿಬಿಟ್ಟ;

ನಿನ್ನ ಚಪ್ಪಲಿಯಂದು ತನ್ನಿಷ್ಟು ಸೋಕ-
ಲಾ ಚಂದ್ರನಭಿವಂದ್ಯನಾದ ಲೋಕದಲಿ
ನಿನ್ನ ಚಪ್ಪಲಿಯಂದು ತನ್ನಿಷ್ಟು ಸೋಕೆ
ಪುಣ್ಯತೀರ್ಥವೆನಿಸಿ ಮೆರೆದಳು ಗಂಗೆ
ಈ ಚಪ್ಪಲಿಯೆ ತಾನಾಗಲು ಪದ್ಮಭವನು
ಕಾರದಿರುವನೇನೀಶ್ವರನ ಮಸ್ತಕವ
ಶ್ರೀಪತಿ ಕಾಣದ ಶ್ರೀಮಹಾದೇವ
ಶ್ರೀಪಾದಭಕ್ತರ ಶ್ರೀಪಾದರಕ್ಷೆ
ಪರಮೇಷ್ಠಿ ಕಾಣದ ಉರುಲಿಂಗಮೂರ್ತಿ
ಶಿರದಲಿ ಮೆರೆವ ವಿಶಿಷ್ಟಭೂಷಣವು

ಹೇಳುವುದೇನು? ಕಣ್ಣಪ್ಪನ ಪಾದ-
ರಕ್ಷೆಯ ಮಹತಿಯ ಹೇಳೆ ವಿಚಿತ್ರ
ಇವನ ಪಾದೋದಕಾಯತಸಿದ್ಧಿಯಿಂದ-
ಲಲ್ಲವೆ ಶಶಿಮೌಳಿ ಪಡೆದ ಪ್ರಸಿದ್ಧ?

ಇವನನಿರ್ಮಾಲ್ಯಸಂಗತಿಯಿಂದ ತಾನೆ
ರತಿಪತಿಹರನು ನಿರ್ಮಲದೇಹಿಯಾದ?
ಇವನ ಗಂಡೂಷಾಂಬುಸೇವೆಯಿಂ ತಾನೆ
ಜಿತಪುರತ್ರಯದೈತ್ಯನತಿಲೋಕನಾದ?
ಇವನ ಪ್ರಸಾದವಿಹಿತಭುಕ್ತಿಯಿಂದ
ಕ್ಷಿತಿಧರಕನ್ಯಕಾಪತಿ ನಿತ್ಯನಾದ

ಈ ದೇವನಿವನ ಪ್ರಸಾದವ ಕೊಂಡು
ವೇದಶಾಸ್ತ್ರಗಳ ವಿವೇಕವ ಪಡೆದ
ಶಿವನು ಕಣ್ಣಪ್ಪನುಚ್ಛಿಷ್ಟವ ಕೊಂಡು
ಅವಿಕಲವಿಧಿನಿಷೇಧಾತೀತನಾದ
ಲಿಂಗವು ಕಣ್ಣಪ್ಪನೆಂಜಲಿನಿಂದ
ಎಲ್ಲ ಅಂಗಗಳುತ್ತಮಾಂಗವಾಯ್ತೊಪ್ಪಿ
ಗಣನಾಥನಿಂದ ಲಿಂಗಸಮೇತನಾದ
ಭಾವಿಸೆ ನಂಬಿಯಿಂ ಘನಭಕ್ತನಾದ
ಸನ್ನುತಿಯಿಂದೆಮ್ಮ ಕಣ್ಣಪ್ಪನಿಂದ
ಸನ್ನುತಸರ್ವಪ್ರಸಾದಾಂಗನಾದ–

ನೆನುತ ಭಕ್ತಾನೀಕವಸಮಲೀಲೆಯಲಿ
ವಿನುತಿಸೆ ಜಗಗಳು ವಿಸ್ಮಯವೊಂದೆ
ತನ್ನಗಜಾಧೀಶನಾಗಡಿಗಡಿಗೆ
ಕಣ್ಣಪ್ಪ ದೇವನನಾಲಂಗಿಸುತ್ತ
"ವಿನುತ ಚತುರ್ವರ್ಗಫಲಗಳಾದಿಯನು
ವರವೀವೆ ಕೇಳು ನೀ ವಾಂಛಿತಾರ್ಥಗಳ–
ನೆ"ಂದಾಗ ಮಂದಸ್ಮಿತಾನನನಾಗಿ
ಅನುಷಕ್ತಿ ಮುಕುಳಿತ ಹಸ್ತದಿ ಮೊಕ್ಕಿ
"ಅರಿಯೆ ಮೋಕ್ಷದ ಹೆಸರರಿಯೆ ವಾಂಛಿತವ–
ನರಿಯೆ ಬೇಡುವ ಮಾರ್ಗವರಿಯೆನೇನನ್ನು

ಅರಿಯೆನು ಅರಿಯೆನು ಅರಿಯೆನು ಮತ್ತೆ
ಮತ್ತೆಯು ಮತ್ತೆ ಮುಮ್ಮಾತಿಗೆ ನಿನ್ನ–
ನದರಿಂದ ವರಗಳು ಕಡಿಮೆಯಾಗುವುದೆ?
ದೇವ ಮೂಲಸ್ತಂಭ ದಿವ್ಯಲಿಂಗಾಂಗ
ನಿನ್ನತುಲಿತ ದಯಾನ್ವಿತದೃಷ್ಟಿಯಿಂತು
ನನ್ನಲಿ ನಾಟಿ ಕೊಂಬೆಗಳ ಪಸರಿಸ–

ಯದು ನಿನ್ನ ದೃಷ್ಟಿಯೊಳಗೆ ನಿಂತು ಹೆಚ್ಚೆ
ಲೆನ್ನಯ ಸಂಸ್ಪೃಹಾಪಾದಿತದೃಷ್ಟಿ-
ಕರುಣಿಸು ಮಿಕ್ಕಿನ ವರವೇನನೊಲ್ಲೆ
ಪರಮಾತ್ಮ"ನೆನ್ನುತ ಬಿನ್ನೈಸುತಿರಲು

ಅಭಿಮತಾರ್ಥಪ್ರದನಾದ ಕಣ್ಣಪ್ಪ-
ಗಭಿಮುಖನಾಗಿ ನಿಲ್ಲಲು ಇಬ್ಬರಾಗ
ಪ್ರೀತಿಯಿಂದನ್ಯೋನ್ಯವೀಕ್ಷಣಾನಂದ
ಕಲಿತರಾಗುತ ತಿರುಕಾಳತ್ತಿಯಲ್ಲಿ
ಕಣ್ಣಪ್ಪದೇವ ಗೌರೀಶ್ವರರುಗಳು
ಸನ್ನಿರೀಕ್ಷಣಲೀಲೆಯಿಂದಿರುತಿಹರು.
ನಿಜದಿ ಕಣ್ಣಪ್ಪನ ದವಡೆಯ ನೀರು
ಮುಕ್ಕಣ್ಣನಭಿಷೇಕಕೆಲ್ಲಕಾಲದಲಿ,
ಇಂದೂ ಕಣ್ಣಪ್ಪನ ನಿರ್ಮಾಲ್ಯದಿಂದ-
ಲೊಪ್ಪದಿಂ ಶಿವನಿಗೆ ಪೂಜೆ ಮಾಡುವರು;

ಮೃಡನು ಕಣ್ಣಪ್ಪನಿಗರ್ಪಿಸದಿರಲು
ಇಂದಿಗೂ ತಾನಾರೋಗಿಸನಿದು ಚೋದ್ಯ!
ಕಣ್ಣನರ್ಪಣೆ ಮಾಡಲೆಲ್ಲ ಲೋಕದಲಿ-
ಕಣ್ಣಪ್ಪನೆಂದು ಮಹೋನ್ನತಿಗೇರ್ದ
ನಲ್ಲಿ ತಾನಿಂದಿಗು ಕಣ್ಣಪ್ಪನ ಶಿವ-
ನಾಶ್ಚರ್ಯವೊಂದಲು ಅಂತೆಯಿರುವನು;
ಅದಕಾಗಿ ಮುನ್ನ ಮುಗ್ಧಸ್ವಭಾವರಿಗೆ
ದೇವನು ಕೃಪೆಗೈಯುವನು ತಾನಿಂ"ತೆನುತ
ಬಸವಯ್ಯ ಮುಗ್ಧಗಣಗಳ ಕಥೆಗಳ
ಪಸರಿಸಲಾ ಚನ್ನಬಸವಯ್ಯ ಕೇಳಿ

'ಪೃಥಿವಿಯಲೀ ಮುಗ್ಧರ ಕಥೆಯ ಹೇಳೆ
ಕಥೆಗಳಾ'ಯ್ತೆಂದು ಕಥೆಕಥೆಗೆ ನಗುತ್ತ-
ಲತುಲಿತಾನಂದ ಸಂಗತಿಯಿಂದ ಭಕ್ತ
ವಿತತಿಗೆ ಬಸವನು ಭಕ್ತಿಯಿಂ ಮೊಕ್ಕಿ

## ಕಲಿಯಂಬ ನಾಯರಾರ ಕಥೆ

"ಈ ಪುರಾತನರಲ್ಲಿ ಬಲ್ಲಿರಾ ಮೊದಲು
ಒಪ್ಪುತ ನಿತ್ಯವೂ ತಾನೊಬ್ಬ ಭಕ್ತ

ನಲವಿಂದ ಕಲಿಯಂಬನಯನಾರನೆಂಬ–
ನಿಂತು ನಿಮ್ಮನು ನಗಿಸುವ ನೇಮದಿಂದ–
ಲೋಲಿಸಿದ ಶಿವನನು ನೀವೊಂದು ಬಾರಿ
ನಕ್ಕರೆ ಸಾಲದೆ ಬದುಕಿಸಲೆನ್ನ"

ಎನ್ನುತ ನಗಿಸುತ್ತಲವಿರಳ ಭಕ್ತಿ
ಜನಿತಸುಖಾಮೃತವನಧಿಯಲದ್ದಿ
ಬಸವನು ಜಂಗಮಪ್ರಕರವನಿಂತು
ಅತಿಶಯವೋಲಗದಲ್ಲಿ ತಾನಿದ್ದ.

**ಸಕಲೇಶ್ವರ ಮಾದಿರಾಜಯ್ಯನ ಕಥೆ**

ಹಿರಿಯರ ಹಿರಿಯ ಮೊದಲಿಗರ ಮೊದಲ
ಬುದ್ಧಿಯ ರಾಶಿಯು ವಿಬುಧನಿಧಾನ–
ನಮಿತವಚೋರಾಶಿ ಸುಮನೋನುರಾಗ–
ನಮಲಿತ ಚಿತ್ತನುದ್ಯದ್ಗುಣಾನ್ವಿತನು
ಸಕಲವೀಣಾಪ್ರವೀಣಕಳಾವಿದನೆನೆ
ಅಕಲಂಕನಾದ ವಿದ್ಯಾಪಂಡಿತನೆನೆ

ವೇದವೇದಾಂತಸಂಪಾದಿತತತ್ವ–
ವಾದಿ, ಸಂಸಾರದುರ್ವ್ಯಾಪ್ತಿಸಂಸಾರಿ
ಯಮನಿಯಮಾದಿವ್ರತಾಚಾರವರ್ತಿ
ಶಮದಮಸದ್ಗುಣಾಶ್ರಯಚರಿತನೆನೆ
ಧೀರಮಹೋದಾರದಿಕ್ಪೂರ್ಣಕೀರ್ತಿ
ಕಾರುಣ್ಯಮೂರ್ತಿ ನಿರ್ಗತಸಕಲಾರ್ತಿ
ಮಹಿತಸಜ್ಜನಶಿಖಾಮಣಿಯೆನಿಸಿದ್ದ
ಘನಸಕಲೇಶ್ವರ ಮಾದಿರಾಜಯ್ಯ–
ನವರ ಸದ್ಭಕ್ತಿವಿಖ್ಯಾಪಿತಮಹಿಮೆ
ಧಾರುಣಿಯಲ್ಲಿ ವಿಸ್ಮಯವೆನಿಸಿತ್ತು.

ಅಗಣಿತಕೀರ್ತಿಯಿಂದಂಬೆಯೆಂಬೂರ
ರಾಜಧಾನಿಯಗೈದು ಧರಣಿಪಾಲಿಸುತ
ಶ್ರುತವೀರ್ಯವಿತರಣರೂಪವಿವೇಕ
ಚತುರತರೂಢಿಯಿಂ ರಾಜ್ಯಗೈಯುತ್ತ
ಜಂಗಮಲಿಂಗೈಕ್ಯ ಸದ್ಭಕ್ತಿಯುಕ್ತಿ–
ಯನ್ನಂಗೀಕರಿಸಿ ಪೂಜೆಯನು ಮಾಡುತ್ತ–

ಲೊಡಬಡೆ ರಾಜವದುಪಚಾರಗಳನು
ಗಳಿಗೆ ಗಳಿಗೆ ತಪ್ಪದಂತೆ ಭಜಿಸುತ
ವಿವಿಧ ಪುಷ್ಪದಳ ಸದ್ಭವನಾಂತರದಲಿ
ಶಿವದೇವನನ್ನು ಸಂಸ್ತುತಿಗೈಯುವಾಗ

ರಮಣ ಬತ್ತೀಸಾದಿರಾಗಗಳಿಂಗೆ
ಅಮರವೆನ್ನುವ ದಂಡಿಗೆಯನಿಯೋಗಿಸುತ
ಯಾವ ರಾಗವು ಸಕಲೇಶನಿಗರ್ತಿ-
ಯಾ ರಾಗವನು ವೀಣೆಯಲ್ಲಿ ಧ್ವನಿಸುವ
ರಾವಣಹಸ್ತವ ಬ್ರಹ್ಮವೀಣೆಯನು
ಲಾವಣ್ಯವೀಣೆ ಕೈಲಾಸ ವೀಣೆಯನು
ಆಕಾಶವೀಣೆ ಪಿನಾಕವೀಣೆಯ ವಿ-
ವೇಕಿಸೆ ಸಾರಂಗವೀಣೆಯು ಗೌರಿ
ವೀಣೆಯು ಕಿನ್ನರ ವೀಣೆಯು ಜನಕ-

ವೆನ್ನುವೀ ಮೊದಲಾದವುಗಳಲಿ ಮುನ್ನ
ಧ್ವನಿಯಿಸಿದಂತಹಾ ದಂಡಿಗೆಗಳನು
ನುಡಿಸುತ ಮೊಗಚಾಳವನು ನವತಾಣ-
ವನು ಮತ್ತೆ ಸವತಾಣವನು ಸವಿ ಸೂಸೆ
ತಾಳಪಟ್ಟಿಯನು ಕತ್ತರಿ ಚೋಳವಣಿಯು
ಲೀಲೆ ಸಾರಣವು ತಾನಲರೆ ಸಂಪ್ರೀತಿ
ತುಂಬಿರೆ 'ಸಕಲೇಶನಿತ್ಯಕಲ್ಯಾಣ
ಅವಧಾರು, ಪ್ರಾಣನಾಯಕ ನಾದಮೂರ್ತಿ-'
ಯೆನ್ನುತ ನುಡಿಸುತ್ತ ಆ ರಾಗಗಳಲಿ
ಅಂಚಿತಾಲಾಪಕ್ಕೆ ಅಭಿಮುಖನಾಗಿ

ಸದಮಲಚಿತ್ತದಿಂ ಸಪ್ತಸ್ವರಗಳ-
ನೊಗೆಸುವ ಶ್ರುತಿಗಳಿಪ್ಪತ್ತೆರಡನ್ನು
ಘನತರ ನಾರಾಟಕಾವುಳವೆಂಬ
ಧ್ವನಿಗೂಡಿ ಚೌದಳವನು ಶಾರೀರದಲಿ
ಅನಿಬದ್ಧ ರೂಢಿಯಿಂದಾಳತಿಗೈದು
ತನಿಸುವ ಗಮಕಸಪ್ತಕವು ಸಂಧಿಸಲು
ಮಾನಿತವಹ ಮಂದ್ರಮಧ್ಯತಾರಗಳು
ತಾವೊಂದೆ ಲಯಲಂಕಿತಗಳು ವ್ಯಾಪಿಸಲು

ಲಾಲಿತ ಶುದ್ಧಸಾರಗಗಳು ಬೆರೆಯೆ
ವರ್ತಿಸಿ ದೇಶಿಮಾರ್ಗಗಳವು ಮೆರೆಯೆ

ಲಲಿದ್ರುತಮಧ್ಯವಿಳಂಬಿತಗಳನು
ಇನಿ ತಾಳಮಾನಮಾನಗಳನು ತೋರಿ
ಧಾತು ಸಂಗತಿಗಳ ಜಾತಿಯ ರೀತಿ
ಭಾತಿಯೆನಿಸಲು ನಿಬದ್ಧರೂಪದಲಿ
ಲಾಲಿತವೆನಲು ವಹಿಲ ತಾಳಗಳಲಿ
ಸಾಳಿ ಪೇಳಾಪೇಳಿ ಜಾಯನುಜಾಯಿ-
ಯುಚಿತವೊಯ್ಯಾರದಿನೊಗುವ ಪಂಜಳವು
ಖಚರವು ವಿಷಮವು ಗ್ರಹಮೋಕ್ಷಣಗಳು
ಭಜವಣೆ ರವಣಿಯು ಭರಣಿ ಮಿಠಾಯಿ
ನಿಜವಣಿ ನಿವಳವು ನಿಚಯವೈಧಸವು

ವಿಗತಿ ಸುಧಾಯಿ ಸನ್ನಿಗಿತವು ಮಿಶ್ರ-
ವಹ ಗ್ರಹತ್ರಿತಯವು ಅಂಶುಕಲಲಿತ
ಗಾಢವು ಲಳಿರಾಗ ಕಾಕುವ ಪೊಚ್ಚ
ಗಾಢ ಮತ್ತೆಯು ದೇಶಿಕಾಕುವು ಸಿಂಧು-
ವಾ ಕರುಣಾಕಾಕು ನಖಕರ್ತರಿಯನು
ಹಳುವಾಯಿಯನು ಧರಹರಸಮವಾಯಿ-
ಯೆಸೆವ ಗುಂಡಾಗುಂಡಿ ಭ್ರಮರಲೀಲೆಯನು
ಕುರುಡಿ ಮೋಡಾಮೋಡಿ ಪೊರಿರವಾಳಗಳು
ತಿಕ್ಕಾಯಿಹೊಯಲು ರಿಖ್ಖಲವಿಳಗುಗಳು
ಚೊಕ್ಕಾಯಿ ಮೊದಲಾದ ಸೊಗದ ಠಾಯಗಳು

ಅಧಿಕದ ದೇಶಾಕ್ಷಿ ಧನ್ಯಾಸಿ ದೇಶಿ
ಮಲಹರಿ ಸಕಲರಾಮಕ್ರಿಯ ಲಲಿತ
ಸಾಳಂಗ ನಾಟ ಗುಜ್ಜರಿ ಮೇಘರಂಜಿ
ವೇಳಾವಳಿಯು ಚಿತ್ರವೇಳಾವುಳಿಯನು
ಮಾಳವಿ ಸಿರಿಯು ವರಾಳಿ ಕಾಂಭೋಜಿ
ಗೌಳಪಂಚಕವು ಬಂಗಾಳವು ಗುರಿಜ
ಭೈರವದ್ವಯವನು ಪಡಪಂಜರವನು
ನಾರಂಗ ಗುಂಡಕ್ರಿಯೆಯ ಕೌಶಿಕವನು
ದೇವಕ್ರಿಯೆಯು ಮಧ್ಯಮಾವತಿ ತೋಡಿ-
ಯಾವಸಂತವು ಮೊದಲಾಗಿರುವೆಲ್ಲ

ವಿರಚಿತ ಸ್ತ್ರೀರಾಗಪುರುಷರಾಗಗಳ
ಸರಸದಿ ಲಕ್ಷ್ಯಲಕ್ಷಣನಿರ್ವಿಕಾರ
ಪೂರಿತನಾದಗಂಭೀರವಿನೂತ್ನ
ಸಾರೋಕ್ತಿಗೀತಗಳಿಂದ ಹಾಡುತ್ತ
ತಮತಮಗಖಿಲವಾದ್ಯಂಗಳು ಮೊಳಗೆ
ಕ್ರಮವೊಂದೆ ಕೇಳಿಕೆಗತಿಯ ನಟಿಸುತ-
ಲವರವರಿಗೆ ಹರ್ಷಪೂರವೆನಿಸಲು
ಭಜಿಸಿ ಭಕ್ತಾಳಿಗೆ ಮನಸಾರೆ ಮೊಕ್ಕಿ
ಸತತದಿ ರಾತ್ರಿಯು ಹಗಲು ಲಿಂಗಾರ್ಚ-
ನಾಯತಾಮೃತವಾರ್ಧಿಯಲ್ಲೋಲಾಡುತಿರ-

ಲಖಿತ ಸಾಮ್ರಾಜ್ಯಸಮಂಚಿತ ಸರಸ
ಸುಖಗಳ ಭೋಗವು ಸೊಗಸದೆಯಿರಲು
ಮಲ್ಲರಸೆಂಬೊಬ್ಬ ಮಂಡಲೇಶ್ವರನು
ಮುನ್ನವಿಂತೆಯೆ ರಾಜ್ಯವೊಲ್ಲದೆ ಬಿಟ್ಟು
ಶ್ರೀಗಿರಿಗೈದು ನಿಶ್ಚಿಂತಸಮಾಧಿ-
ಯಲ್ಲಾಗಿರಿಯ ಬಿಲ್ವವನದ ಮಧ್ಯದಲಿ
ಇರುವರೆನ್ನುತಲವರುರುಭಕ್ತಿಗುಣಮ-
ಹೋನ್ನತಿಕೆಯ ಧ್ಯಾನಯೋಗಸಂಪದವ
ಶಿವಭಕ್ತಿತತ್ವಾನುಭವಸಮಗ್ರತೆಯ
ಶಿವಭಕ್ತಿಗಣಗಳಿಂದಲಿ ತಾನು ಕೇಳಿ-

ದಾಗಲೆ ಶ್ರೀಗಿರಿಗೈತಂದರರ್ತಿ-
ಯಿಂದ ಮಲ್ಲರಸನ ನೋಡಲು ಬಯಸಿ
ರಯ್ಯದಿಂದಲಿ ಮಾದಿರಾಜಯ್ಯನವರು;
ಕ್ರಿಯೆ ತುಳುಕಾಡಲಾ ಗಿರಿಶೃಂಗಗಳನು
ಸ್ಫಾಟಿಕಪರ್ವತ ಬಹುಶೃಂಗಗಳನು
ಹಾಟಕರತ್ನಮಯಾಂಚಿತಾದ್ರಿಗಳ
ಪಾತಾಳಗುಹೆಯಭ್ರಂಕಷಶಿಲೆಗಳನು
ಭೂತಲಪ್ರಚ್ಛನ್ನಪುರವರಗಳನು
ಸ್ಪರ್ಶವೇದಿಗಳನು ಮಣಿಗಿರಿಗಳನು
ದರ್ಶನಮುಕ್ತಿಪ್ರದಸ್ಥಾನಗಳನು

ಖಗಮೃಗನಾಗಸಂಕರನಿವಾಸಗಳ-
ನಗಣಿತೋದ್ಯಾನವನಾಂತರಗಳನು

ಪರ್ವತಚೂಡಾನಿಪತಿತಧಾರೆಗಳ
ನಿರ್ವಿಕಲ್ಪಪ್ರವಾಹೋರ್ವೀಸ್ಥಳಗಳ-
ಲಲ್ಲಲ್ಲಿ ನಿಂತು ಏಕಾಂತದೇಶದಲಿ
ಸಂತತ ಲಿಂಗಪೂಜೆಗಳ ಸಲಿಸುತ
ಹೋಗುತ್ತ ಹೋಗುತ್ತಲನುಪಮಬಿಲ್ವ
ವನ ಸಮೀಪದಲಿಹ ಘನತರವಾದ
ರುದ್ರಾಕ್ಷಶೈಲ ರುದ್ರಾಕ್ಷತರುಗಳು
ರುದ್ರಾಕ್ಷಗಣಿ ರುದ್ರಾಕ್ಷದ ನದಿಗಳನು

ಭಸಿತದ ಗಿರಿಗಳ ಭಸಿತದರಿಗಳ
ಭಸಿತದ ಗಣಿಗಳ ಭಸಿತನದಿಗಳ
ಲಿಂಗಪರ್ವತಗಳ ಲಿಂಗವೃಕ್ಷಗಳ
ಲಿಂಗಾಕಾರಗಳನು ಲಿಂಗತೀರ್ಥಗಳ
ಜಂಗಮಶೈಲ ಜಂಗಮತರುಗಳನು
ಜಂಗಮಗುಲ್ಮ ಜಂಗಮಲತೆಗಳನು
ಸಲ್ಲಾಪಶೈಲ ಸಲ್ಲಾಪತರುಗಳ
ಸಲ್ಲಾಪಗುಲ್ಮ ಸಲ್ಲಾಪಲತೆಗಳ
ಗಾಯಕಶೈಲ ಗಾಯಕತರುಗಳನು
ಗಾಯಕಗುಲ್ಮ ಗಾಯಕಲತೆಗಳನು

ಗಾಯಕಮೃಗ ಗಾಯಕಸತಿಯರುಗಳ
ಗಾಯಕಪಕ್ಷಿ ಗಾಯಕಫಣಿಗಳನು
ನಾಟ್ಯಪರ್ವತಗಳ ನಾಟ್ಯವೃಕ್ಷಗಳ
ನಾಟ್ಯಗುಲ್ಮಂಗಳು ನಾಟ್ಯಲತೆಗಳು
ನಾಟ್ಯಮೃಂಗಗಳು ನಾಟ್ಯಗಕ್ಷಿಗಳು
ನಾಟ್ಯೋರಗಂಗಳ ನಾಟ್ಯವಾನರರ
ಮೆರೆವ ಕಾಷ್ಠಜ್ಯೋತಿಗಳ ತೃಣಜ್ಯೋತಿ-
ಗಳ ವಾಲುಕಾಜ್ಯೋತಿ ಜ್ಯೋತಿನದಿಗಳ
ಜಲಪರ್ವತಂಗಳು ಜಲವೃಕ್ಷಗಳು
ಜಲವಿಹಗಂಗಳ ಜಲಮೃಗಾವಳಿಯ

ಬಹುವರ್ಣತರು ಬಹುವರ್ಣಶಿಲೆಗಳು
ಬಹುವರ್ಣಗುಲ್ಮವು ಬಹುವರ್ಣಲತೆಯು
ಬಹುರೂಪವೃಕ್ಷಗಳ್ ಬಹುರೂಪಶಿಲೆಯು
ಬಹುರೂಪಗುಲ್ಮಗಳ್ ಬಹುರೂಪಲತೆಯು

ಖೇಚರವೃಕ್ಷ ಖೇಚರಗಿರಿಗಳನು
ಖೇಚರಗುಲ್ಮ ಖೇಚರಲತೆಗಳನು
ಹರ್ಮ್ಯಪರ್ವತಗಳು ಹರ್ಮ್ಯವೃಕ್ಷಗಳು
ಹರ್ಮ್ಯಗುಲ್ಮಂಗಳು ಹರ್ಮ್ಯವಲ್ಲಿಗಳು
ಮೃಗರೂಪವೃಕ್ಷಗಳ್ ಮೃಗರೂಪಶಿಲೆಯು
ಮೃಗರೂಪಗುಲ್ಮಗಳ್ ಮೃಗರೂಪಲತೆಯು

ಖಗರರೂಪವೃಕ್ಷಗಳ್ ನರರೂಪಶಿಲೆಯು
ಖಗರೂಪ ಗುಲ್ಮಗಳ್ ಖಗರೂಪಲತೆಯು
ನರರೂಪವೃಕ್ಷಗಳ್ ನರರೂಪಶಿಲೆಯು
ನರರೂಪಗುಲ್ಮಗಳ್ ನರರೂಪಲತೆಯು
ಸುರರೂಪವೃಕ್ಷಗಳ್ ಸುರರೂಪಶಿಲೆಯು
ಸುರರೂಪಗುಲ್ಮಗಳ್ ಸುರರೂಪಲತೆಯು
ಸೂತವೃಕ್ಷಗಳು ಪ್ರಸೂತವೃಕ್ಷಗಳು
ಸೂತಶೈಲಿಗಳು ಪ್ರಸೂತಶೈಲಗಳು
ಗಂಧರ್ವವೃಕ್ಷ ಗಂಧರ್ವಶಿಲೆಗಳು
ಗಂಧರ್ವಗುಲ್ಮ ಗಂಧರ್ವಲತೆಗಳು

ನೆರಳದು ತಿರುಗದ ನಿತ್ಯಶೈಲಗಳು
ನೆರಳದು ತಿರುಗದ ನಿತ್ಯವೃಕ್ಷಗಳು
ನೆರಳಿರದಂಥ ಸಾನ್ನಿಧ್ಯಶೈಲಗಳು
ನೆರಳಿರದಂಥ ಸಾನ್ನಿಧ್ಯವೃಕ್ಷಗಳು
ದೂರದಿ ನೆರಳುದಯಿಸುವ ಶೈಲಗಳು
ದೂರದಿ ನೆರಳುದಯಿಸುವ ವೃಕ್ಷಗಳು
ಸೂರ್ಯನ ನೆರಳಿನಂತಿರುವ ಶೈಲಗಳು
ಸೂರ್ಯನ ನೆರಳಿನಂತಿರುವ ವೃಕ್ಷಗಳು
ತರುಗಳು ಗಿರಿಗಳು ತಾಗಿ ರಮಿಸಲು
ಆಗಲೆ ಹುಟ್ಟುವ ಬಾಲಶೈಲಗಳು

ತರುಗಳು ಗಿರಿಗಳು ತಾಗಿ ರಮಿಸಲು
ಆಗಲೆ ಹುಟ್ಟುವ ಬಾಲವೃಕ್ಷಗಳು
ಶೈಲವನೊಲಿವಂತೆ ಶೈಲವನೇರಿ
ಲೀಲೆಯಿಂದಿಹ ರಾಜಶೈಲಸಂಘಗಳು
ವೃಕ್ಷವನೊಲಿವಂತೆ ವೃಕ್ಷವನೇರಿ
ಈಕ್ಷಿಸುತಿಹ ರಾಜವೃಕ್ಷಸಂಘಗಳು

ಏರಿ ವೀಕ್ಷಿಸಲು ಈರೇಳುಲೊಕಗಳ-
ವಕ್ಕಜವೆನಲು ಕಾಣಿಸುವ ಶೈಲಗಳು
ಏರಿ ವೀಕ್ಷಿಸಲು ಈರೇಳುಲೋಕಗಳ-
ಲಕ್ಕಜವೆನಲು ಕಾಣಿಸುವ ವೃಕ್ಷಗಳು

ಏರಿ ತೂಗಾಡಿದರೆಲ್ಲಾದರೂನು
ಚಕ್ಕನೆ ಕೊಂಡೊಯ್ವ ಸಾಲುಶೈಲಗಳು
ಏರಿ ತೂಗಾಡಿದರೆಲ್ಲಾದರೂನು
ಚಕ್ಕನೆ ಕೊಂಡೊಯ್ವ ಸಾಲು ವೃಕ್ಷಗಳು
ಏರಿಹುಡುಕಿದರೆ ಯಾವರೂಪವನು
ಗಕ್ಕನಾಗಲೆ ಸೃಷ್ಟಿಗೈವ ಗಿರಿಗಳು
ಏರಿ ಹುಡುಕಿದರೆ ಯಾವರೂಪವನು
ಗಕ್ಕನಾಗಲೆ ಸೃಷ್ಟಿಗೈವ ತರುಗಳು
ಅರ್ಧವೃಕ್ಷಗಳಲ್ಲಿಯರ್ಧ ಶೈಲಗಳು
ಅರ್ಧಮೃಗಗಳಲ್ಲಿಯರ್ಧವಂಡಜವು

ಫಲಿತವೃಕ್ಷಗಳಂತೆ ಮೆರೆವಶೈಲಗಳು
ಬೆಟ್ಟದ ಕ್ರಿಯೆ ಗಿರಿಗೊಂಡ ವೃಕ್ಷಗಳು
ಒಂದೊಂದು ಗಳಿಗೆಗೊಂದೊಂದೆನೆ ಹಣ್ಣು
ಬೀಳುವಕ್ಕಜ ಗಡಿಯಾರವೃಕ್ಷಗಳು
ಒಂದೊಂದು ಗಳಿಗೆಗೆ ಒಂದೊಂದು ಬಾರಿ
ಕೂಗುವಕ್ಕಜ ಗಡಿಯಾರಶೈಲಗಳು
ಮೊದಲಿಗೆ ಕಡಿದರದುಕುವ ತರುಗಳು
ಮೊದಲು ತುಂಡರಿಸಲದುಕುವ ಲತೆಗಳು
ಎಸೆಯಲು ಮರಳುತ್ತಲಲ್ಲಿಯೆ ಮತ್ತೆ
ಎಸೆಯಲಾರದೊಲು ನಿಲ್ಲುವ ಪಾಷಾಣಗಳು

ರವಿಯೊಡನುದಯಿಸಿ ದಿವಿವರೆ ಬೆಳೆದು
ರವಿಯೊಡಜಾರಿಳೆ ಸೇರ್ವ ಗಿರಿಗಳು
ನಾಲ್ಕು ಬಾಗಿಲುಗಳು ಮೆರೆದು ಕಾಣಿಸುವ
ನಾಲ್ಕು ಕಣಿವೆಗಳ ನಡುವೇರೆ ನೋಡೆ
ಪುರಗಳ ತೋರುವ ಭೂರಿಮಹತ್ವ-
ವರಿದಾದ ಶ್ರೀಗಿರಿಯಂಥ ಗಿರಿಗಳು
ನಾಲ್ಕು ಬಾಗಿಲುಗಳು ಮೆರೆದು ಕಾಣಿಸುವ
ನಾಲ್ಕು ಕೊಂಬೆಗಳಲಿ ನಡುವೇರಿ ನೋಡೆ

ಪುರಗಳ ತೋರುವ ಭೂರಿಮಹತ್ವ-
ವೆನಿಪ ಶ್ರೀಗಿರಿ ತರುವಂಥ ತರುಗಳು

ಸಂಗತದಲ್ಲೇರ್ವ ಜನರ ಪಾತಾಳ
ಗಂಗೆಯಾಡಿಸುವ ಗಂಗಾಶೈಲಗಳವು
ಸಂಗತದಲ್ಲೇರ್ವ ಜನರ ಪಾತಾಳ
ಗಂಗೆಯಾಡಿಸುವ ಗಂಗಾವೃಕ್ಷಗಳವು
ಮೇಲೇರಲಲ್ಲಷ್ಟಷಷ್ಟಿತೀರ್ಥಗಳ
ಮೆರೆಯೆ ತೋರಿಸುವಷ್ಟಷಷ್ಟಿಶೈಲಗಳು
ಮೇಲೆರಲಲ್ಲಷ್ಟಷಷ್ಟಿತೀರ್ಥಗಳು
ಮೆರೆಯೆ ತೋರಿಸುವಷ್ಟಷಷ್ಟಿವೃಕ್ಷಗಳು
ಆಗಾಗ ತಮ್ಮಲ್ಲಿ ಉಜ್ವಲು ಅಗ್ನಿ-
ಯುಂಟಾಗಿ ಉರಿವತಿಶಯದ ಶೈಲಗಳು

ಆಗಾಗ ತಮ್ಮಲ್ಲಿಯುಜ್ಜಿಕೊಂಡಗ್ನಿ-
ಯುಂಟಾಗಿ ಉರಿವತಿಶಯದ ವೃಕ್ಷಗಳು
ಕ್ಷೀರಪರ್ವತಗಳು ಕ್ಷೀರವೃಕ್ಷಗಳು
ಕ್ಷೀರತಟಾಕಗಳ್ ಕ್ಷೀರದೀರ್ಘಿಕೆಯು
ದಧಿಪರ್ವತಂಗಳು ದಧಿ ಭೂರುಹಗಳು
ದಧಿತಟಾಕಂಗಳು ದಧಿದೀರ್ಘಿಕೆಗಳು
ಘೃತಪರ್ವತಂಗಳು ಘೃತಭೂರುಹಗಳು
ಘೃತಟಾಕಂಗಳು ಘೃತದೀರ್ಘಿಕೆಗಳು
ಅಮೃತಪರ್ವತಗಳು ಅಮೃತವೃಕ್ಷಗಳು
ಅಮೃತತಟಾಕಗಳಮೃತದೀರ್ಘಿಕೆಯು

ರಸಪರ್ವತಂಗಳು ರಸಭೂರುಹಗಳು
ರಸತಟಾಕಂಗಳು ರಸದೀರ್ಘಿಕೆಗಳು
ಕನಕಪರ್ವತಗಳು ಕನಕವೃಕ್ಷಗಳು
ಕನಕತಟಾಕಗಳ್ ಕನಕದೀರ್ಘಿಕೆಯ
ಕನಕಮೃಗಂಗಳು ಕನಕೋರಗಗಳು
ಕನಕಭೃಂಗರಗಳು ಕನಕಪಕ್ಷಿಗಳು
ಕನಕಗುಲ್ಮಂಗಳು ಕನಕಲತೆಗಳು
ಕನಕದ ರೇಣುಗಳ್ ಕನಕದ ಉಸುಕು

ಕನಕದ ಪುರಗಳು ಕನಕಹರ್ಮ್ಯಗಳು
ಕನಕದ ಕೋಟೆಗಳ್ ಕನಕ ಗುಡಿಗಳು

ಮಣಿಪರ್ವತಂಗಳು ಮಣಿಯವೃಕ್ಷಗಳು
ಮಣಿಗುಲ್ಮವಿತತಿಯು ಮಣಿಲತಾವಳಿಯು
ರತ್ನ ಪರ್ವತಗಳು ರತ್ನವೃಕ್ಷಗಳು
ರತ್ನ ಗುಲ್ಮಂಗಳು ರತ್ನವಲ್ಲಿಗಳು
ಒಂದು ಕೊಂಬೆಯಶೋಕೆ ಮತ್ತೊಂದು ಸುರಭಿ
ಒಂದದು ನ್ಯಗ್ರೋಧವಿನ್ನೊಂದು ಹುಣಸೆ
ಒಂದದು ಗುರವಂಕ ಮತ್ತೊಂದು ಕ್ರಮುಕ
ಒಂದು ತಾ ಘನಸಾರವಿನ್ನೊಂದು ಕಬ್ಬು
ಒಂದು ತಾ ನಂದನ ಮತ್ತೊಂದು ತಿಲಕ
ಒಂದು ಚಂಪಕ ತಾನಿನ್ನೊಂದು ಕುರವಕ

ಒಂದು ತಾ ಮಂದಾರವಿನ್ನೊಂದು ಬಕುಳ
ಒಂದು ಕೊಂಬೆಯು ಬಿಲ್ವ ಮತ್ತೊಂದು ಹೊನ್ನೆ
ಒಂದು ಹೂ ಮಲ್ಲಿಗೆಯಿನ್ನೊಂದು ಮಲ್ಲೆ
ಒಂದು ಹೂ ಸೇವಂತಿ ಮತ್ತೊಂದು ತೀಕ್ಷ್ಣ
ಒಂದು ಹೂ ಕರವೀರವೊಂದು ನೈದಿಲೆಯು
ಒಂದು ಹೂ ತಾವರೆಯಿನ್ನೊಂದು ಮೊಲ್ಲೆ
ಒಂದು ಹೂ ಗೋರಂಟಿ ಮತ್ತೊಂದು ಜಾಜಿ
ಒಂದು ಕೆಂದಾವರೆಯೊಂದು ಕೇತಕಿಯು
ಹಣ್ಣೊಂದು ಸಹಕಾರವಿನ್ನೊಂದು ನಿಂಬೆ
ಹಣ್ಣೊಂದು ನಾರಂಗ ಮತ್ತೊಂದು ಬಾಳೆ

ಒಂದು ನೇರಿಳೆಯಾದರಿನ್ನೊಂದು ಬೇಲ
ಒಂದು ಹಣ್ ಖರ್ಜೂರ ಮತ್ತೊಂದು ಈಳೆ
ಹಣ್ಣೊಂದು ದಾಡಿಂಬವಿನ್ನೊಂದು ಮೋವಿ
ಒಂದು ಹಣ್ ಗಜನಿಂಬೆಯೊಂದು ಹಣ್ ಹಲಸು
ವ್ಯಾಪಿಸಿ ಮೊದಲೊಂದಾಗೀರೀತಿ ಕೂಡೆ
ರೂಪಿತವಹ ಬಹುರೂಪ ವೃಕ್ಷಗಳು
ಒಂದೆಡೆ ಮಣಿಶ್ವೇತವೊಂದೆಡೆ ಪೀತ-
ವೊಂದೆಸೆ ಮಂಜಿಷ್ಠವೊಂದೆಸೆರಕ್ತ-
ವೊಂದೆಸೆಗೆ ಕಪೋತವೊಂದೆಸೆ ನೀಲ-
ವೊಂದಾಗಿ ಸೇರುವ ಐರುವರ್ಣಗಳು

ಶೋಭಿಸುತಿಹ ಬಹುವರ್ಣಶೈಲಗಳು
ಶೋಭಿಸುತಿಹ ಬಹುವರ್ಣ ವೃಕ್ಷಗಳು
ಕೆಲವು ವಿದ್ರುಮಗಳು ಕೆಲವು ದ್ರಾಕ್ಷಗಳು
ಕೆಲವು ದಾರದವಲ್ಲಿ ಕೆಲವು ತಾಂಬೂಲಿ–
ಯತಿಶಯವಾಗಿಂತು ಒಂದಾಗಿ ಕೂಡೆ
ರೂಪಿತವಹ ಬಹುರೂಪಬಳ್ಳಿಗಳು
ಅಡರಲೈತಂದು ಲಿಂಗಾಂಗಣಗಳಲಿ
ಸುಳಿದು ಕಸವ ಗುಡಿಸುವ ಮಾರುತಗಳು
ಬಯಲು ಲಿಂಗಾಯನಗಳನೆಲ್ಲ ಕೂಡಿ
ಸಮ್ಮಾರ್ಜನೆಯಗೈವ ಸ್ವಲ್ಪ ವರ್ಷಗಳು
ಚಟ್ಟನೆ ತಾ ಬಂದು ಸರ್ವಲಿಂಗಗಳ
ಸುತ್ತಲು ರಂಗೋಲಿಯಿಡುವ ಸಸ್ಯಗಳು
ಮೆರೆವ ಲಿಂಗಗಳಿದ್ದೆಡೆಗಳಿಗೆ ತಂದು
ಜಲಕಮಾಡಿಸುವಂಥ ಪುಣ್ಯತೀರ್ಥಗಳು
ಶೋಭೆಯಿಂದಿಳಿಯುತಲಾ ಲಿಂಗಗಳಿಗೆ
ಚಂದನ ಪೂಸುವ ಗಂಧವೃಕ್ಷಗಳು
ಭಾಜಿಪ ಮೂಕಾಲ ಪಟುಲಿಂಗಗಳನು
ಪೂಜಿಸಲೈತಹ ಹೂವ ತೋಟಗಳು
ಕೌತುಕವೆನೆ ಸದಾ ವಿವಿಧಲಿಂಗಗಳ
ವಿತತಿಗೆ ಧೂಪವೀಯುವ ಗುಗ್ಗುಳಗಳು

ಮೆರೆವ ಲಿಂಗಗಳಿಗೆ ನೀವಾಳಿಯಿಡುವ
ಸಲೆ ತೃಣಜ್ಯೋತಿ ಕಾಷ್ಠಜ್ಯೋತಿ ಚಯವು
ಹೊಳೆವಲಿಂಗಗಳಿಗೆ ಸತತವು ಬಂದು
ಫಲಗಳರ್ಪಣೆಗೈವ ಹಲವು ತರುಗಳು
ಹೊಳೆವ ಲಿಂಗಗಳಿಗೆ ಸತತವು ವೀಳೆ–
ಯವ ನಿವೇದಿಪ ಕ್ರಮುಕಾದಿ ತರುಗಳು
ಧರೆಯ ಮೇಗಡೆ ತಮ್ಮ ಹೆಸರಿನ ಮೇಲೆ
ಮೆರೆಯಲೀಶ್ವರನಾಮವರಿದೆನೆ ನಿಲಿಸಿ
'ವೃಕ್ಷೇಶ ಶರಣೆ'ಂದು ವೃಕ್ಷಾಲಯಗಳು
ವೃಕ್ಷಲಿಂಗಗಳನರ್ಪಿಸುವ ವೃಕ್ಷಗಳು

'ಗಿರಿನಾಥ ಶರ'ಣೆಂದು ಗಿರಿಹ್ವರಗಳು
ಗಿರಿಲಿಂಗಗಳಿಗೊಲ್ವ ಗಿರಿಸಮೂಹಗಳು

'ಮೃಗನಾಥ ಶರ'ಣೆಂದು ಮೃಗನಿವಾಸಗಳ
ಮೃಗಲಿಂಗಗಳಿಗೊಲ್ವ ಮೃಗಸಮೂಹಗಳು
'ಖಗನಾಥ ಶರ'ಣೆಂದು ಖಗಮಂಡಲಗಳ
ಖಗಲಿಂಗಗಳಿಗೊಲ್ವ ಖಗಸಮೂಹಗಳು
'ಉರಗೇಶ ಶರಣೆ'ಂದು ಉರಗಾಲಯಗಳ
ಉರಗಲಿಂಗಗಳಿಗೊಲ್ವುರಗ ಸಂಘಗಳು
'ಭೃಂಗೇಶ ಶರ'ಣೆಂದು ಭೃಂಗಾಲಯಗಳ
ಭೃಂಗಲಿಂಗಗಳನರ್ಪಿಸುವ ಭೃಂಗಗಳು

'ಜಲನಾಥ ಶರ'ಣೆಂದು ಜಲಜಾಕರಗಳ
ಜಲಲಿಂಗಗಳಿಗೊಲ್ವ ಜಲಜಾಕರಗಳು
'ತೀರ್ಥೇಶ ಶರ'ಣೆಂದು ತೀರ್ಥಾಲಯಗಳ
ತೀರ್ಥಲಿಂಗಗಳಿಗರ್ಪಿಸುವ ತೀರ್ಥಗಳು
'ಮುನಿನಾಥ ಶರ'ಣೆಂದು ಆಶ್ರಮಗಳಲಿ
ಮುನಿಲಿಂಗಗಳಿಗೊಲ್ವ ಮುನಿಸಮೂಹಗಳು
'ಶಬರೇಶ ಶರ'ಣೆಂದು ಶಬರಾಲಯಗಳ
ಶಬರಲಿಂಗಕ್ಕೊಲ್ವ ಶಬರಸಂಘಗಳು
ಉಪಮೆಗೆ ಮೀರಿದ ಉರುವೀರಘೋರ
ತಪವನಾಚರಿಸುವ ತಾಪಸವರರು

ಅವರ ಮೇಲೆಲ್ಲ ಹುತ್ತವು ಬೆಳೆದಿರಲು
ತಪವಗೈಯುತಲಿದ್ದ ಘನಸನ್ಮುನಿಗಳು
ವಿರಚಿತವೆನೆ ಮೇಲೆ ಬರಗಳು ಚಿಗುರ-
ಲುರು ವೃಕ್ಷಗಳ ರೀತಿಯಿದ್ದ ಮುನಿಗಳು
ಶಿಲೆಗಳ ಜೊತೆಯಲ್ಲಿ ಬೆರೆತಂತೆ ಬೆಳೆದು
ಶಿಲೆಯ ರೂಪದಲಿ ಕಾಣಿಸುವ ಮುನಿಗಳು
ಮುಕ್ತಕೇಶವ ಬಿಚ್ಚಿ ಮೇಲೆದ್ದು ಬೆಳೆವ
ವೃಕ್ಷನೀಲಾದ್ರಿಗಳಂಥ ಮುನಿಗಳು
ಮೇದಿನಿಯನು ತಲೆಯಲಿ ಹೊತ್ತು ಊರ್ಧ್ವ
ಪಾದದಿಂ ತಪವಾಚರಿಸುವ ಮುನಿಗಳು

ಏಕಪಾದಾಂಗುಷ್ಠದಲ್ಲಿಂತೆ ಹೊತ್ತು
ಪ್ರಕಟದಿ ತಪಾವಾಚರಿಸುವ ಮುನಿಗಳು
ಪಂಚಾಗ್ನಿ ಮಧ್ಯೆ ಬಯಲ ದೀರ್ಘಿಕೆಗಳು
ಸುತ್ತಿಬೆಳೆಯೆ ತಪಗೈವ ಮುನಿಗಳು

ಜಲಪತ್ರವಾಲುಕಾನಿಲ ಕಂದಮೂಲ
ಫಲಶಿಲಾಹಾರರಾಗಿದ್ದ ಮುನಿಗಳು
ವೃಕ್ಷಗಳಿತ್ತ ಭಿಕ್ಷವನೆ ಸೇವಿಸುತ-
ಲಕ್ಷಯಕಾಯವ ಪಡೆದ ಮುನಿಗಳು
ಪರ್ವತಗಳು ಕೊಟ್ಟ ಭೈಕ್ಷ ಸೇವಿಸುತ
ನಿರ್ವಿಕಲ್ಪ ಸ್ಥಿತಿ ಪಡೆವ ಮುನಿಗಳು

ಮೆರೆವ ಜಲಕ್ರೀಡೆಗಳ ವನಕ್ರೀಡೆ-
ಗಳನಾಡಿ ತಣಿವ ಗಂಧರ್ವ ಜೋಡಿಗಳು
ಅಮಿತ ಸ್ವಯಂಭುಲಿಂಗಾರ್ಚನಾಸಕ್ತಿ-
ಯಮರಲು ಐತರುವಮರವರ್ಗಗಳು
ಜಲಕನ್ಯೆಯರೊಲಿಹ ಬಿಲಕನ್ಯಕೆಯರು
ಜಲಪುರುಷರ ಹೋಲುವ ಬಿಲಪುರುಷರು
ಕರಿನಿವಹಂಗಳು ಪುರುಷಮೃಗಗಳು
ಶರಭಾರ್ದೂಲಾದಿ ವರಮೃಗಾವಳಿಯು
ಗಂಡಮೃಗಗಳು ಭೇರುಂಡ ತಂಡಗಳು
ಚಂಡೋರಗಗಳು ಶಿಖಂಡಿಯೂಥಗಳು

ತಮ್ಮಯನ್ಯೋನ್ಯ ಶತ್ರುತ್ವವ ಬಿಟ್ಟು
ಅಡರಿ ತಾವೆಲ್ಲರಾಡುತರೆಲ್ಲ ಕಾಲ-
ವಲ್ಲಿಯೊಪ್ಪುವ ಬಿಲ್ವವನಮಹತ್ವವನು
ಕಂಡು ವಿನುತಿಸುವ ವನಮಧ್ಯದಲ್ಲಿ
ವಿನಯಭಾವದಿ ತನ್ನ ಹುಡುಕುತ ಬಂದ
'ಅನಘನು ಮಾದಿರಾಜಯ್ಯನ ಮನವ
ನೊಡುವೆನೀಗಲೆ'ನ್ನುತ ಮಲ್ಲಿಕಾರ್ಜು-
ನಾಚಾರ್ಯನಪರಿಮಿತಾಂಗವ ತಳೆದು
ಮಾರ್ಗಮಧ್ಯದಲಡ್ಡ ದಿವಿಬುವಿಗಳನು
ಪರಿಪೂರ್ಣವೆನೆ ವ್ಯಾಪಿಸಿದುದನು ಕಂಡು

ಪರಮಯೋಗೀಂದ್ರನೊ? ಭಸಿತದ ಗಿರಿಯೊ?
ಧರೆಗೆ ಬಿದ್ದಿಹ ಸಮುದಿತರೂಪವಿದೊ?
ಸದಮಲಜ್ಯೋತಿಯೊ? ಶ್ರೀ ಶಂಭುರೂಪೊ?
ವಿದಿತ ಚಿದಬ್ಧಿಸಮುದಿತರೂಪವಿದೊ?
ಯಾವೆಡೆ ಹೋಗುವಂತಿಲ್ಲೇನ ಗೈವೆ-
ನೆಂದಚ್ಚರಿಯಲಿ ಮಾದಾಖ್ಯನೀ 'ಕ್ರಮವ

ಪರಿಕಿಪೆ' ನೆಂದುತ್ತಮಾಂಗದ ಕಡೆಗೆ
ನಡೆದು ಮೂರು ವರುಷ ಹುಡುಕಿ ಕಾಣದೆಯೆ
ಪದಪದ್ಮಗಳ ಮೇಲೆ ಬೀಳದಂತಿತ್ತ
ಬಂದುದು ತಪ್ಪೆಂದು ಹಿಂದಕ್ಕೆ ಮತ್ತೆ-

ಯಲ್ಲಿಂದಲಾ ಪಾದಗಳ ದಿಕ್ಕಿನೆಡೆಗೆ
ನಡೆದು ವರ್ಷಾಷ್ಟಕದಲ್ಲಿಲ್ಲಿ ಬಂದು
ತಾ ಭಯಭ್ರಾಂತಿಯಿಂದಲಿ "ನಿನ್ನ ರೂಪ-
ವೆಲ್ಲವ ತೋರದೆ ಕಾಡುವೆಯೇಕೆ?
ನಾನೆಷ್ಟರವ ನಿನ್ನನರಿಯುವೆನೆನಲು
ಆನಂದಮೂರ್ತಿ, ನಿನ್ನಡಿಗಳ ತೋರಿ
ರಕ್ಷಿಸಯ್ಯಾ" ಯೆಂದು ಪ್ರಸ್ತುತಿಸುತ್ತ
ಪಕ್ಷದ್ವಯವು ಕೆಲಬಾಗಿರೆ ನೋಡಿ-
ಯಾಯವಸರದಲಿ ಆ ಮಲ್ಲಿಕಾರ್ಜು-
ನಯ್ಯನು ಕೊಂಚ ಪ್ರಹಸಿತಾಸ್ಯನಾಗಿ

ತನ್ನ ಮುನ್ನಿನ ರೂಪ ತಳೆದು 'ನಿನ್ನ ಮನ-
ವರಿಯಲಿಂತಾನಾದೆ' ನೆನುತ ಮಾದಾಖ್ಯ
ಏಳೆಂದು ಕೈಚಾಚಿ ಮೇಲಕೆಯೆತ್ತಿ
ಭರದಿಂದಲವನನಪ್ಪುಗೆಗೆ ಸೇರಿಸುತ
'ಇಂಥ ಸಾಹಸಿಯಾದ್ಯೆ ಎಮ್ಮನು ನೋಡ-
ಲೆಂತಯ್ಯ ಬಂದೆನೀನೀವರೆಗೆ'ನುತ
ತನ್ನನಿವಾಸಸ್ಥಾನಕ್ಕೆ ಕೊಂಡೊಯ್ದು
ಬಂದಲ್ಲಿ ಲಿಂಗಾವಸರವ ಮೂಡಿಸುತ
ತನ್ನ ಪ್ರಸಾದವಿತ್ತನುಪಮತತ್ವ
ಜನಿತಾನುಭವ ಸುಧಾವನಧಿಯಲದ್ಧಿ

ಕೊಂಚ ಹೊತ್ತವನನಿರಿಸಿಕೊಂಡು 'ಇನ್ನು
ಕೊಂಚ ಕಾಲವು ಕ್ರಿಯಾಭ್ರಾಂತಿಯಿಂ ಧರಣಿ-
ಯಲ್ಲಿರಬೇಕೆ'ಂದು ಉರುತರಕೀರ್ತಿ
ಮಂಡಿತ ಸದ್ಗುರು ಮಲ್ಲಿಕಾರ್ಜುನನು
ಆಣತಿಯನ್ನೀಯಲಾ ಮಾದಿರಾಜ
'ನಾನೆಂತು ಹೋಗಲ್ಯೆ ಆನಂದಮೂರ್ತಿ
ಬಡವನೊಬ್ಬನು ನಿಧಾನವ ಕಂಡು ಅದನು
ಬಿಟ್ಟುಹೋಗುವನೇನು ಕೂಲಿಗೆ ಮತ್ತೆ?

ನಿಮ್ಮ ಶ್ರೀಪಾದ ಕಮಲಗಳ ಕಂಡು
ಮತ್ತೆ ಮರ್ತ್ಯಕ್ಕೆ ಮರಳುವುದೇತಕೆ'ನಲು

ಮೃದುವಾಗಿ ನಕ್ಕು ಮೇಲಾಗುವುದೆನುತ
ಮಲ್ಲಿಕಾರ್ಜುನನು ಸಮುಲ್ಲಾಸಕೀರ್ತಿ
ನಿತ್ಯಸ್ವರೂಪವಿನಿಶ್ಚಿತವಾದ
ಪ್ರತ್ಯಯಗಳಲೊಡಬಡುವಂತೆ ಹೇಳ-
ಬೇಕೆನೆ ಬಾಯೆಂದು ಅಲ್ಲೊಂದು ಜಾಲಿ
ಮರವ ತೋರಿಸುವ ನಿಶ್ಚಿಂತಸಮಾಧಿ-
ಯಲ್ಲಿಯಿಲ್ಲಿರು ನೀನೆಂದಲ್ಲೈದು ತಾನು
ಕುಟಿಲ ವೇಷವ ತಾಳಿ ಗೊಲ್ಲನ ರೀತಿ
ಮುರುಕು ಬೆರಳುಗಳ ಬಿರಿದ ಪಾದಗಳ
ಗುಜ್ಜುತೊಡೆಯುಗಲ ಕಿವಿಗಳ ಬರಡು

ಪಕ್ಕೆಯು ಗಟ್ಟಿನರೆಗಳ ಚಪ್ಪಟೆಯ
ಮೂಗಿನ ಗಂಟು ಹುಬ್ಬಿನ ಬತ್ತುಹೊಟ್ಟೆ-
ಯಡಗಿದ ಹೊಕ್ಕಳು ಉಬ್ಬಿದ ಕೆನ್ನೆ
ಬರತೆದೆ ಸುಕ್ಕುಗಟ್ಟಿದ ಸಣ್ಣ ಗಳವು
ಕಂದು ಮೀಸೆಗಳೇರ್ಪಡಲು ಗೆಡ್ಡೆಗಣ್ಣು
ಹರಕುಗಡ್ಡದ ಜೊತೆ ಕಪ್ಪಾದ ದೇಹ
ಉಬ್ಬುಹಲ್ಲುಗಳಿಂದ ಮೋಟುಗೈಯಿಗಳ
ಡೊಂಕು ಕಾಲ್ಗಳ ಗೂನು ಬೆನ್ನಿನ ತಾನು
ಮುಳುಗತ್ತಿ ಚೆಂದಿಯ ಬರೆಯಿಡುವ ಕುಡ
ಸೊಂಟತಿತ್ತಿಯ ದೊಡ್ಡಗಚ್ಚೆಯ 'ಕಟ್ಟಿ

ಗಾಳಿಬೀಸಲು ಕುರುಳುಗಳು ಓಲಾಡೆ
ಸೀಳಿಟ್ಟು ಕಣ್ಣಕೆಂಪಾಗಿಸಿ ನೋಡಿ
ತ್ಸುತ್ಸುತ್ಸುಯೆನ್ನುತ ನಾಯ್ಗಳ ಕರೆದು
ಅಡ್ಡಗಾಲನ್ನಿಟ್ಟು ನಿಲ್ಲುತ ಬರುತ
ಕೊಡಲಿಯ ಬರಿಗೋಲ ಕೊಳಗಡಿಗೆಯ
ದಪ್ಪಕೋಲ್ಪಿಡಿದು ಸಂಭ್ರಮದಲಿ ಕೆಲವು
ಮೇಕೆ ಮರಿಗಳನು ಕಂಕುಳಲ್ಲಿರಿಕಿ
ತುಡುಗುಗಳಿಗೆ ಬೀಸಿ ಛಟ್ಟನೆ ಹೊಡೆದು
ಕೆಲವು ಮೇಕೆಗಳ ತರುಮಿತಂದು ಜಾಲಿ
ಮರದಲ್ಲಿರುವ ಕಾಯಿಗಳ ತರಿವುತ್ತ

ನೆರಳೀವ ಮೇಲಿನ ಕೊಂಬೆಯನೊಬ್ಬ
ಗೊಲ್ಲ ಕಡಿಯುತಿರೆ ಕೋಪದಿ ನೋಡಿ
"ನನ್ನ ಮೇಲಿನ ಕೊಂಬೆಯನ್ನೇಕೆ ಕಡಿವೆ-
ಯೋ ಮೂಢಗೊಲ್ಲನೆ? ಈ ಕಾನನದಲಿ
ನಮಗೆ ನೆರಳನೀಯುತಿದ್ದ ಈ ಕೊಂಬೆ-
ಯನು ಬಿಟ್ಟು ಕಡಿಯಲು ಮರವಿಲ್ಲವೇನು?
ಶಂಕೆಯಿಲ್ಲದೆ ಕೊಬ್ಬಿ ಪೂರ್ತಿಮೈಮರೆತ
ನೀನಿನ್ನು ನನ್ನ ಕೈಲೆಂತು ಏಗುವೆಯೊ?
ಪಾಪಿ ಗೊಲ್ಲನೆ ನಿನ್ನ ಶಪಿಸುವೆ" ನೆನುತ
ಕೋಪಿಸಿ ಬೈಯಲು ಗೊಲ್ಲನು ನಕ್ಕು

"ಭಾಪುರೇ ನಿರ್ವಾಣಿ, ಭಾಪುರೆ ತಪಸಿ!
ಭಾಪುರೆ ಭಾಪುರೆ ಕೋಪದ ಪುಂಜ
ಪಾಪವ ಪಡೆವನು ಕೋಪಿಸುವವನು
ಪಾಪಿಯಲ್ಲದೆ ನಾನು ಪಾಪಿಯಾಗುವೆನೆ?
ಸ್ಖಲಿಸುವ ಕೋಪದ ಕಣಗಳು ಕೂಡಿ
ಕದಡದೆ ಮಾನಸಘನಸರೋವರವು
ಅಧಿಕ ಕೋಪಾಗ್ನಿಯಿಂದಿಂಗದೆ ಹೇಳು?
ತಡೆಯದೆ ಹೃದಯಾಬ್ಜಮಕರಂದಧಾರೆ
ಬತ್ತದೆ ಕೋಪಾಗ್ನಿಯಿಂ ಸುತ್ತುವರಿದು?
ನಲುಗದೆ ಸಚ್ಚಿದಾನಂದಪದ್ಮವದು?

ಜ್ಞಾನವು ಸೊಂಪೊ? ವಿಚಾರವು ಪೆಂಪೊ?
ಧ್ಯಾನದ ಫಲವೊ ಈ ತಾಪಸಗುಣವು?
ನನಗೇನು ಹೇಳುವೆಯೀ ಕಾನನದಲಿ
ಕುಳ್ಳಿರಲಿಲ್ಲವೆ ಮರಗಳು ನಿನಗೆ
ಇಂಥ ಶಾಂತಾತ್ಮರದೆಲ್ಲಿ ಸಿಕ್ಕುವರು?
ಹುಟ್ಟುವರೇ ನಿನ್ನಂತಹ ಸಂಯಮಿಗಳು?
ನದಿಯಲಿ ಕರಡಿಯ ಕಂಬಳಿಯೆಂದು
ತಿಳಿಯದಲೀಜುವವನು ತಾ ಹಿಡಿಯಲು
ಬಿಗಿಯಾಗಿಯವನನ್ನು ಕರಡಿಯೆ ಹಿಡಿಯೆ
ದಡದಲಿದ್ದವ'ನೋಹೊ ಬಿಡುಬಿಡು'ಯೆನಲು

'ನಾ ಬಿಟ್ಟೆನದೆ ಎನ್ನ ಬಿಡುತಿಲ್ಲ'ವೆಂಬ
ವಿಧದಲಿ ಬಿಟ್ಟರೂ ಬಿಡುವುದೆ ಮಾಯೆ

ಹೊಂಗಿ ಕಿಚ್ಚುರಿಯಲು ಬೀಳುತ ಸೀರೆ-
ಗೋಸರಿಸುವ ದೊಡ್ಡ ಮೂಢನ ರೀತಿ
ಹೇಸಿ ಸಂಸಾರಕೆ ಸನ್ಯಾಸವಡೆದು
ಮನೆಯಕಾಯಲು ಹೇಳುವಿಬ್ಬಂದಿಯಂತೆ
ಮತ್ತೆ ಬಾವಿಯಲಿ ಜಿಗಿಳಲು ಹೋಗಿ ಮೆಟ್ಟಿ-
ಲುಗಳನು ಹುಡುಕುವಂತಹ ಮೂರ್ಖನಂತೆ
ಜ್ಞಾನಾತ್ಮದಿಂ ಸರ್ವಸಂಗವ ಬಿಟ್ಟು
ಆಶ್ರಮ ಬಯಸುವ ತಾಪಸಿಯಂತೆ

ಇಂತಾಸೆಪಟ್ಟು ಕೊಡಲಿಯನು ತಂದು
ತಲೆಜುಟ್ಟ ಕತ್ತರಿಸಿದನೆನುವಂತೆ
ಸಂದೇಹವೇಕೆ ಕಬ್ಬಿನ ಪಂದ್ಯದಲ್ಲಿ
ಚೂರೊಂದು ಸಿಕ್ಕಲು ಸೋಲಲ್ಲವೇನು?
ಸಂಸಾರದಲಿ ರೋಸಿ ಹೇಸಿಯೊಂದಿಷ್ಟು
ಆಸೆಯ ಪಡಲದು ಬೀಳಲ್ಲವೇನು?"
ಎಂದು ತನ್ನಯ ಮುನ್ನವೇಷವ ಧರಿಸಿ
ತನ್ನ ಮುಂಚಿನ ಭಾವ ತೋರಲು ನೋಡಿ
ಕಣ್ಮುಚಿ ತಲೆಬಾಗಿ ಮನದಿ ಲಜ್ಜಿಸುತ
ಘನತರ ಶೋಕಾಶ್ರುಕಲಿತಾಸ್ಯನಾಗಿ

"ಎಲ್ಲಿಯ ಭಕ್ತಿಯೆಲ್ಲಿಯ ಮುಕ್ತಿಯೆನಗೆ?
ಎಲ್ಲೆಲ್ಲಿ ನೋಡಲು ಮಾಯೆ ತಗ್ಗುವುದೆ?
ಗತಿಮತಿಚೈತನ್ಯಕರ್ಮಕ್ರಿಯಾದಿ-
ಗಳು ಅತಿಶಯವಾಗಿರುವನಕ ತನ್ನ
ಕ್ರಿಯೆಯೆಂತೂ ಅಂತೆ ವರ್ತಿಸದಲೆ ಶಿವನ
ದಯೆ ಪಡೆಯದಲೆ ನಿಶ್ಚಯವೆಂತುಬಹುದು?
ಕಸುಗಾಯ ಕೊಯ್ದರೆ ಕಾಯಿಯಾಗಿರದೆ
ಮಾಗಿದ ಹಣ್ಣಹುದೆಂಬ ಭ್ರಾಂತಿಯಿರೆ
ಶಾಶ್ವತ ಕೀರ್ತಿ ನಿಶ್ಚಲಭಕ್ತಿಯುಕ್ತಿ-
ಯೀಶ್ವರಕೃಪೆಯಿರದಲೆ ಸಿದ್ಧಿಸುವುದೆ?

ಕಟಕಟಾ, ಎನ್ನಂಥ ಕರ್ಮಿಗೆ ಇಂತು
ಪಟುನಿಸ್ಪೃಹತ್ವವು ಪ್ರಾಪ್ತಿಯಾಗುವುದೆ?"
ಯೆನುತಿದ್ದ ಮಾದಿರಾಜಯ್ಯನವರನು
ನೋಡಿ ಮಲ್ಲಯ್ಯನಪ್ಪುಗೆಯಲಿ ಹಿಡಿದು

“ಕರ್ಮವಿದೂರ, ದುಃಖವನೆಲ್ಲ ತೊರೆಯೊ
ಕರ್ಮಿಗಳೆಂತೆಮ್ಮೆಡೆಗೆ ಬರಬಹುದು?
ನೀನು ಮರ್ತ್ಯಕೆ ಹೋಗೆನೆಂದು ಪ್ರಾರ್ಥಿಸುವ
ನಿನ್ನೀ ವಿಕಲ್ಪವನಾವೆ ಮಾಡಿದೆವು
ಏನು ಕಾರಣವೆಂದು ಕೇಳ್ವೆಯೊ, ಕೇಳು:
ಆ ಮಹಾದೇವನ ಆಣತಿವಡೆದು

ವಸುಧೆಗೆ ಸದ್ಭಕ್ತಿವರ್ಧನಾರ್ಥದಲಿ
ಬಸವನೆನ್ನುವ ಭಕ್ತನೊಬ್ಬನು ಬಂದು
ಮೆರೆಯುತಿರುವನವನುದಿತ ಗೋಷ್ಠೀ ಸ-
ಮುನ್ನತ ಸುಖವಾರ್ಧಿಯಲ್ಲಿ ತೇಲುತ್ತ
ಪರಮಶಿವಾಚಾರಸರಣಿ ವರ್ಧಿಸಲು
ಚರಿಯಿಸಬೇಕು ಧರಣಿಯಲಿ ನೀನು
ನಿರುತದಲಾರ್ನೂರ ಐವತ್ತು ವರುಷ
ಕಳೆಯಿತು ನೀ ಬಂದು ಸಂಯಮಿತಿಲಕ!
ಇಲ್ಲಿಂದಲೈವತ್ತು ವರ್ಷವ ಕಳೆಯೆ
ನಿನ್ನನ್ನು ಕರೆಸಿಕೊಂಬುದದು ನಿಶ್ಚಯವು.

ಒಟ್ಟಾರೆ ಏಳುನೂರ್ವರುಷದವರೆಗೆ
ನೀ ಬರಬಾರದು, ಈಗಿನೀಪ್ಸಿತವ-
ದೇನಾರಿದ್ದರೆ ನೀಡುವೆ”ನೆನಲು
ಆ ಮಲ್ಲಿಕಾರ್ಜುನಯ್ಯಗೆ ಕೈಯಮುಗಿದು
“ಶ್ರೀಯ ಕೇಳಲು ಪರಸ್ತ್ರೀಯಾಕೆ ನಿಜದಿ
ಆಯು ಕೇಳಲು ಮಾಯೆಗದು ಜನ್ಮಭೂಮಿ
ಸ್ವರ್ಗವ ಕೇಳಲಧ್ರುವವಿನ್ನು ಮೋಕ್ಷ
ವರ್ಗ ಕೇಳಲು ಮುನ್ನ ಭರ್ಗನ ಪದವು,
ನಾನೇನನೊಲ್ಲೆ ನೀನರಿಯೆಯ ದೇವ
ಸ್ವಾಮಿ ಸರ್ವಜ್ಞಾನ ಸಕಲೇಶ”ಯೆನುತ

ಅಡಗಡಿಗೆರಗಿ ಸಾಷ್ಟಾಂಗದಿಂ ನಿಲುತ-
ಲಾತನ ಕೃಪೆಯಿಂದ ಕಲ್ಯಾಣದಲ್ಲಿ
ಬಸವನಿಗೆದುರು ಪೆಂಪೆಸೆಯಲು ನಿಂತ-
ನಸಮಯ ಮಾದಿರಾಜಯ್ಯ ತತ್‌ಕ್ಷಣದಿ
ಇತ್ತ ಬಸವ ಸಂಗಮೇಶ್ವರದಲ್ಲಿ
ಇರುತಿರೆ ತಾಕಂಡು ಸಾಷ್ಟಾಂಗವೆರಗಿ

ಮೊಕ್ಕಿದಾ ಕ್ಷಣದಲ್ಲಿ ಮುಂಪಡೆಯಿರಲು
ಅಕ್ಕಜವೊಂದಿಯಡಿಗಡಿಗೆ ಮೊಕ್ಕೆ
ವತ್ಸಲತ್ವವು ನಿರ್ವರ್ತಿಸುತಿರಲತುಲಿ–
ತೋತ್ಸವಲೀಲೆಯಿಂದುಲ್ಲಾಸಗೊಡು

ಅಂಚಿತಲಿಂಗಸುಖಾಪಾರಸಾರ
ಸಂಚಿತವಾರ್ಧಿಯಲೇ ಮುಳುಗೆದ್ದು
ಬಸವನಿಂದಲಿ ಪೂಜೆಗೊಳ್ಳುತಲಿದ್ದ–
ರಿಂತಧಿಕದ ಮಾದಿರಾಜಯ್ಯನವರು.
ಈ ಜಗತ್ರಯಿ ಸಕಲೇಶ್ವರ ಮಾದಿ–
ರಾಜಯ್ಯನವರ ನಿರ್ಮಲಚರಿತ್ರೆಯನು
ಪ್ರೀತಿಸಲು ಪ್ರೀತಿಯಿಂ ಕೇಳೆ ಬರೆಯೆ
ಪ್ರಸ್ತುತಭಕ್ತಿ ಶುಭೋದಯವಹುದು.
ಧೀಮಣಿ, ಸುಜನಚಿಂತಾಮಣಿ, ಶುಭಶಿ–
ಖಾಮಣಿ, ಧರ್ಮರಕ್ಷಾಮಣಿ, ಶುದ್ಧ

ಶರಣಜನಾನಂದಕರಣ, ಸತ್ಪಥವಿ–
ಹರಣ, ಸಂತತದಯಾಭರನು ಚೇತಸ್ಕ !
ಲಲಿತ ನಿರ್ಮಲಯಶಃಕಲಿತದಿಗಂತ!
ಫಲಿತಸದ್ಭಕ್ತಿಸಮ್ಮಿಳಿತಾಂತರಂಗ
ರಹಿತಷಡ್ಭಾವ, ವಿರಚಿತಸದ್ಭಾವ!
ಮಹಿತತತ್ವಾರ್ಥ ಸನ್ನಿಹಿತಾವಧಾನ!
ವಿದಿತ ಪ್ರಸಾದ ಸಂವಿತ್ಸೌಖ್ಯಭೋಗ
ಮುದಿತಾತ್ಮ, ಸಂಗಾಖ್ಯ, ಮೃದಿತೇಂದ್ರಿಯೌಘ.
ಇದುವಸಂಖ್ಯಾತ ಮಾಹೇಶ್ವರದಿವ್ಯ
ಪದಪದ್ಮ ಸೌರಭಭ್ರಮರಾಯಮಾಣ

ಜಂಗಮಲಿಂಗ ಪ್ರಸಾದೋಪಭೋಗ
ಸಂಗತ ಸುಖಾಸುಧಾಶರಣನಿಮಗ್ನ
ಸುಕೃತಾತ್ಮ ಪಾಲುಕುರಿಕಿ ಸೋಮನಾಥ
ಸುಕವಿಪ್ರಣೀತವಾಗಧಿಕ ಶೋಭಿಸುವ
ಚರಲಿಂಗ ಘನಕರಸ್ಥಲಿ ವಿಶ್ವನಾಥ
ವರಕೃಪಾಂಚಿತಕವಿತ್ವಸ್ಫೂರ್ತಿಯಿಂದ
ಮೆರೆವ ಬಸವ ಪುರಾಣದ ಕಥೆಯಲ್ಲಿ
ಅನುಪಮದಲಿ ತೃತೀಯಾಶ್ವಾಸವಾಯ್ತು.

# ಚತುರ್ಥಾಶ್ವಾಸ

ಶ್ರೀಗುರುಲಿಂಗ ಸುಸ್ಥಿರ ದಯಾಪಾಂಗ
ಯೋಗಾತ್ಮಭಕ್ತಿಮಹೋತ್ತುಂಗ ಗಂಗ

## ಮಡಿವಾಳ ಮಾಚಯ್ಯನ ಕಥೆ

ಮತ್ತೆಯು, ಮಡಿವಾಳ ಮಾಚಯ್ಯನೆನುವ
ಅನ್ಯೂನ ವೀರವ್ರತಾಚಾರಯುತನು
ಶ್ರೇಷ್ಠನು ಜಂಗಮಪ್ರಷ್ಠನು ನ್ಯಾಯ
ನಿಷ್ಠುರಾಲಾಪ ಮಹಿಷ್ಠಮಂಡಲನು
ನಿಷ್ಠತೇಂದ್ರಿಯ ಗುಣಾನ್ವಿತನು ಲಿಂಗೈಕ್ಯ
ನಿಷ್ಠಾಪರನು ಸುಪ್ರತಿಷ್ಠಿತಕೀರ್ತಿ
ಭವಿಜನಸಂಸರ್ಗ ಪಥಪರಿತ್ಯಾಗಿ
ಪ್ರವಿಮಲ ತತ್ವಾನುಭವಸುಖಾಂಬೋಧಿ-

ಯಿದ್ದ ಭಾಷಾವ್ರತಪಾಲನಶಾಲಿ
ದುರಿತಷಡ್ವರ್ಗನಾಸ್ಥಾನದ ಜ್ಯೋತಿ
ರಜಕಜಾತ್ಯಾವೃತ ಪ್ರತ್ಯಕ್ಷರುದ್ರ-
ನಜರಾಮರನು ಅಯೋನಿಜನು ಅವ್ಯಯನು
ಶರಣ ಪದಾಂಭೋಜಷಟ್ಪದನೆನಲು
ಮೆರೆದು ಹಿಪ್ಪರಿಗೆಯೆಂಬ ಪುರವರದಲಿ
ಇರುತಿರೆ ಬಸವಣ್ಣನುರುಭಕ್ತಿವಾರ್ಧಿ
ನೆರೆಯೆದ್ದು ತುಂಬಲು ದೆಸೆಗಳನೆಲ್ಲ
ಪೊಂಗಿ ಲಿಂಗಾನಂದ ಪೂರಿತನಾಗಿ
ಜಂಗಮದರ್ಶನಾಸಕ್ತಿಯಿಂ ಬಂದು

ಬಸವನಿಂದಲಿ ಪ್ರಣಿಪತ್ತಿಯ ಕೊಂಡು
ಅಸಮಜಂಗಮಕೋಟಿಗರ್ಚನೆಗೈದು
ಅಲಸದಲವರ ಕೈಂಕರ್ಯವ ಮಾಡಿ
ನನ್ನ ಕೈತೀಟೆಯು ತೀರದೆನುತ್ತ

ಭಾಷೆ ವರ್ಧಿಸಲು ಸದ್ಭಕ್ತಿಮಂಡಲಿಯ
ಮಾಸಿದ ಬಟ್ಟೆಗಳನು ಹೊತ್ತು ತಂದು
ಬೆಳಗುಜಾವದಲೆದ್ದು ಬೇರೊಂದು ರೇವ
ಸೃಷ್ಟಿಸಿಯೊಗೆಯುತ್ತ ಘಟ್ಟನೆಗೈದು
ಶಸ್ತ್ರಸಮೇತನಾಗುತ ಭಕ್ತತತಿಯ
ವಸ್ತ್ರವ ರಜತಪರ್ವತದಂತೆ ಹೊತ್ತು

ಹರಿತಂದು ಪುರವೀಧಿಯಲ್ಲಿ "ಭವಿಗಳು
ಶರಣರ ವಸ್ತ್ರಗಳನು ಸಂಧಿಸಿದರೆ
ಇರಿವೆನವರನೊಡ"ನೆಂದು ಗಂಟೆಯನು
ಅಲ್ಲಲ್ಲಿ ಬಾರಿಸಿ ಕೂಡೆ ಘೋಷಿಸುತ
ಮಠದೆಡೆಗೈತಂದು ಮಡಿಗಳನೆಲ್ಲ
ಕಠಿಣವಾಗದ ರೀತಿ ಘಟ್ಟಿಸಿ ಮಡಿಯ-
ನಲ್ಲಿಗೆ ಜಂಗಮರೈತಂದು ಕೇಳ-
ಲೆಂಥ ಬಟ್ಟೆಯನಾದಡಿತ್ತು ಮೊಕ್ಕುವನು.
ಬಟ್ಟೆಗಳೊಡೆಯರು ಬಂದು ಕೇಳಿದರೆ
ಇಲ್ಲವೆನ್ನದಲೀವ ಲಿಂಗಸಂಪದವ

ಆಗಲದ್ಭುತಚಿತ್ತನಾಗುತ ಬಸವ
ಸಂತತದಲಿ ಕೇಳಿ ಸಂಸ್ತುತಿಗೈಯೆ
'ಭಕ್ತವಿತತಿಯೊಲಿಯಲು ಬಗೆವಗಸ-
ನೆಂದು ವಿಲಸಿತಭಕ್ತಿಯಲಿ ಹೇಳುವರು
ಆದರೇಕಾಕಿಯೆಂಬುವ ಮಡಿವಾಳ-
ನಮಲಭಕ್ತಿಯ ಭಾಷೆಯೊಪ್ಪಿತೇ ಹೊರತು
ಇಂಥ ಸದ್ಭಕ್ತಿಯದಿಂಥ ಮಹತ್ವ-
ವಿಂಥ ಸಾಮರ್ಥ್ಯವ ತಿಳಿಯೆವು'ಯೆನುತ
ಸಲ್ಲೀಲೆಯಿಂದನಿಶವು ಸ್ತುತಿಗೈದು
ಎಲ್ಲರು ಹೊಗಳಲು ಕೆಲದಿನ ಸರಿಯೆ

ಬರುತಿರಲೊಮ್ಮೆ ಮೈಲಿಗೆಯಾಗಲೊಬ್ಬ-
ನನು ಭರದಲಿ ಕೊಂದು ಮಾಚಯ್ಯನಿದ್ದ.

ರಾಜನಿಗೆ ದೂರಿತ್ತದ್ದು

ಅವರಿವರೆನ್ನದಂತೆಲ್ಲರು ಕೂಡಿ
ಧಾರುಣೇಶ್ವರ ಸಭಾಸ್ಥಳಕೈದು ಮೊಕ್ಕಿ

"ಬಲ್ಲಹ ಕೇಳು ನಿನ್ನಯ ಪಟ್ಟಣದಲಿ
ದುಷ್ಟನಾದಗಸನು ತಾ ಭಕ್ತನೆನುತ
ಕಟಿಗೆ ಕಠಾರಿಯ ಕಟ್ಟಿ ತೊಲಗನು
ತೊಲಗಿಸಲೆಂಥ ಬಲ್ಲಿದನ ಲೆಕ್ಕಿಸನು.
ಬಿಂಕದಿ 'ಸೀರೆಮೂಟೆಯ ಸಂಧಿಸುವರ-
ನಿರಿವೆ ಮುಂಗಡೆ'ಯೆಂದು ಘೋಷಣೆ ಮಾಡ-

ಲಂಗಡಿಗಳು ಮುಚ್ಚೆ ಬೇಹಾರುವುದುಗೆ
ಸಂಗಡದಲಿ ಎಲ್ಲೂ ಸುಳಿಯರು ಜನರು.
ಪುರವೀಥಿಗಾರಾದರೂ ಬರೆ ಕಂಡು
ಹರಿತಂದು ರಭಸದಿ ಹೊಡೆದೋಡಿಸುವನು.
ಎದುರಿಗೆ ರಥ ಹಯವಾನೆಯು ಬಂಡಿ-
ಯದುವೇನು ಚೋದ್ಯವೊ ಹತ್ತಿರ ಬರದೆ
ಹೆದರಿ ದೂರದಿ ಕಂಡು ಚೆಲ್ಲಾಪಿಲ್ಲಿಯೆನೆ
ದಿಕ್ಕುಗೆಟ್ಟೋಡುವ ಕಥೆಯೇಕೆ? ಇಂದು
ಹೊಸಬನಾದೊಬ್ಬನು ಬಾಗುತ್ತ ನಡೆದು
ಸಂತೆಗೆ ಹೋಗುತ್ತ ಸಂಧಿಸಿಧಾಗ

ಹೊಡೆದು ಮೇಲಕೆ ಚಿಮ್ಮೆ ಸೇರುತಲಲ್ಲಿ
ಬರಲಿಲ್ಲ, ತಿಂದನೊ ಹೋದನೋ ದಿವಿಗೆ
ನಾವದನರಿಯೆವು ಕೇಳವನೀಶ
ಬಂದೆವಿಲ್ಲಿಗೆ ನಿನಗರುಹಲು"ಯೆನಲು
ಬಸವನ ಕಡೆ ನೋಡಿ ಪಾರ್ಥಿವೇಶ್ವರನು
ಅಬ್ಬರಿಸುತ ಮಹೋಗ್ರತೆಯಲಿಂತೆಂದ
"ಏನಿದು ವಿಪರೀತವಾರಿಗೂಯಿನ್ನು
ಉಳಿಯೆ ಸಾಧ್ಯವೆ ನಿಮ್ಮ ಭಕ್ತರ ಕೈಲಿ
ಬಟ್ಟೆಯೊಗೆವಗಸ ಕೊಬ್ಬುತೀ ಪುರದ
ಲೋಕವನೆಲ್ಲ ಕಲ್ಲೋಲವಾಗಿಸಿದ

ಅಗಸನಿಗಿನಿತೇಕೆ ಔದ್ಧತ್ಯ, ಜನರ
ಹಿಡಿದು ತರಿಯುವನು ಮುಟ್ಟಲು ಬಿಡದೆ.
ಇಂತ ಚೋದ್ಯವ ನಾವು ಅರಿಯೆವೆಂದೆಂದು
ಮುಟ್ಟಲು ಸೀರೆಯು ಹರಿವುದೆ ಹೇಳು?
ಪುರಜನ ಮುಂದಕೆ ಚರಿಸುವಂತಿಲ್ಲ
ಪರಜನರೀಪೂರ್ಗೆ ಬರುವ ಹಾಗಿಲ್ಲ.

ಎನಿತು ಬಲ್ಲಿದನಿಂದು ಹೊಸಬನೊಬ್ಬನನು
ಸಂತೆಗೆಯ್ದದೆ ಕೊಂದೆ ಶವವದೂ ಇಲ್ಲ,
ಆಗಸಕೇರುವ ಅಟ್ಟೆಗಳುಂಟೆ?
ಅಗಸ ರಕ್ಕಸನಂತೆ ಜನರ ನುಂಗಿದನು,

ಬೈದಾಡಲಿಲ್ಲ, ಮುಟ್ಟಿದ ಮಾತ್ರಕೇನೆ
ಹೀಗೆ ಕೊಲ್ಲಲುಬಹುದೇ ಬೇರೆಯವರ?
ಧರ್ಮವನರಿಯದೆ ಭಕ್ತ ತಾನೆನುತ
ಸುಮ್ಮನೆ ಕೊಲುವನೀ ಪೌರರನೆಲ್ಲ"
ಎನುತ ಪುರೋಹಿತನನುಮತಿಯಿಂದ
ತನ್ನ ಯಾಮಿಕರಿಗೆ ಧಾರುಣೀಶ್ವರನು;
"ಅಗಸನನಲ್ಲಿಯೆ ಕೊಲ್ಲಿರಿ ಹೋಗಿ,
ನುಂಗಿದುದನ್ನೆಲ್ಲ ಕಕ್ಕಲು ಬನ್ನಿ"
ಎನ್ನಲು ಬಸವನಿಂತೆದನಾತನಿಗೆ

**ಮಡಿವಾಳನ ಮಹಿಮೆ**

"ಕೇಳು, ಮೇಲರಿಯದೆ ಮೀರಿ ನುಡಿಯುವೆ

ಖೂಳರ ಲೋಗರ ಕಿರಿಚಾಟಗಳಿಗೆ
ಅಗಸನಗಸನೆಂದು ಕಿರಿಚುವೆಯೇಕೆ
ಅಗಸನೇನವನು ಸಾಕ್ಷಾಲ್ಲಿಂಗಮೂರ್ತಿ-
ಯಲ್ಲವೆ, ಕಾಣದೇತಕೆ ನುಡಿಯುತಿಹೆ?
ಕುಲಜನು ತಾನೆಯಕುಲಜನು ತಾನೆ
ಕುಲವಿಲ್ಲದಿದ್ದರು ಕುಲವೆಲ್ಲ ತಾನೆ
ಆ ನೀಲಗಳನಪರಾವತಾರನವ-
ನಲ್ಲದೆ ತಾನು ಸರ್ವಗತನೆಂತೆನಲು:
ಸರಸಿಜಭವ ಜಡೆ ಜನಿವಾರದಂತೆ
ಧರಿಸಿ ಭಿಕ್ಷಿಸಿದ ಆ ಬ್ರಾಹ್ಮಣ ತಾನೆ

ಮಹಿತಾಪವರ್ಗ ಸಾಮ್ರಾಜ್ಯಪಟ್ಟವನು
ಸಹಜದಿ ಪಾಲಿಪ ಕ್ಷತ್ರಿಯ ತಾನೆ
ಕಡಗಿ ದುರ್ಭವಕರ್ಮ ಘಟವಹಿತ್ರದಲಿ
ಈ ಭವಾಂಬುಧಿಯ ಸುತ್ತಿಪ ವೈಶ್ಯತಾನೆ
ಈ ಸತ್ಕ್ರಿಯಾರಂಭಫಲಗಳ ಕೊಯ್ದು
ಬಳಲದಲೊಕ್ಕುವ ಶೂದ್ರನು ತಾನೆ

ಆದಿಶಕ್ತಿಗೆ ಮುನ್ನುಪಾದಾನವಾದ
ನಾದ ಬಿಂದುಗಳ ಕಾರಣವೆನೆ ಸೇರಿ
ಲೀಲೆಯಿಂ ಬ್ರಹ್ಮಾಂಡ ವಿವಿಧಭಾಂಡಗಳ
ಕೂಡಿ ಮಾಡಿದ ಆದಿಕುಂಬಾರನವನೆ

ಹರಿಯೆಲುಬದು ದಂಡವಹಿಪತಿ ಹಗ್ಗ
ನರಸಿಂಹನಾ ನೀಳನಖರವೆ ಕೊಂಕಿ
ಅವನಿಯೆತ್ತಿದ ವರಾಹವದೆರಗಿರಲು
ಅವನಿಯ ಕೂರ್ಮಮತ್ಸ್ಯಗಳನೆಲ್ಲವನು
ಗಾಳದಿಂದೇಕೋದಕದಲಿ ತಾ ಹಿಡಿದು
ಲೀಲೆಯಿಂ ನಟಿಸುವ ಬೆಸ್ತನು ತಾನೆ.
ಚಟುಲ ಸಂಸೃತಿ ಜೀವಘಟಕರ್ಮಚಕ್ರ
ಪಟುಪರಿವರ್ತನಭ್ರಮಣವನಿತ್ತು
ಕೀಲುವೊಂದಿಸುತಲಾ ಕ್ರಿಯರಾಟಣಗಳ
ಸತತವಾಡಿಸುವಂಥ ಬಡಗಿಯು ತಾನೆ.

ಮನ್ನವೀ ಜೀವಲೋಹಕ್ಕೆ ಜ್ಞಾನಾಗ್ನಿ-
ಯನ್ನಿತ್ತು ಹದಗೈವ ಕಮ್ಮಾರ ತಾನೆ
ಈವುದನರಿತು ಕಲ್ಲಚ್ಚುಗಳಿಟ್ಟು
ಅಚ್ಚಿನಲೊರೆಯುವ ಚಿನಿವಾರನವನೆ.
ಹರಿಣವಾಗುತ ರಮಿಸುವಜನ ಶಿರವ
ಶರದಲಿ ಕತ್ತರಿಸಿದ ಬೇಡನವನೆ
ಹರಿಮುಖ್ಯ ಕ್ರಿಮಿಕೀಟಕಾದಿ ಪಶುಗಳ
ಪ್ರೀತಿಯಿಂ ಪಾಲಿಪ ಗೊಲ್ಲನು ತಾನೆ.
ಪ್ರಕಟಿತಕಪಟನಾಟಕ ಸೂತ್ರಗಳನು
ವಿಕೃತಿ ಪ್ರಕೃತಿಯಾಡಿಸುವ ಸೂತ್ರಿಕನವ.

ಕುಲನಗಗಳ ನೂಕಿ ಜಲಧಿಯ ಚೆಲ್ಲಿ
ಹೊಲವನೊಡರಿಸಿದ ಬೋಯಿಯು ತಾನೆ
ಏಕಾರ್ಣವಾದೆಡೆಯಲ್ಲಜಾಚ್ಯುತರ-
ನಾದರಿಸದಲೊಗೆದಗಸನು ತಾನೆ.
ಮಹಿತ ಭಕ್ತಾಳಿಗೆ ಮಡಿಯನುಗೈವ-
ನಿಳೆಯಲಿ ಮಡಿವಾಳ ಮಾಚಯ್ಯನೆನಲು
ಇಷ್ಟೆಲ್ಲ ತಾನಾಗಿರುವವನನೊಂದು
ಕುಲದವನೆನ್ನಲು ತಕ್ಕುದೆ ನಿನಗೆ?

ಕಾರಣ ಪುರುಷವತಾರನೆಯಾತ
ಚಾರುಚರಿತ್ರ ವಿಸ್ಮಯವವದೆಂತೆನಲು

ನರಸಿಂಹಶಾರ್ದೂಲಕರಿದೈತ್ಯ ಚರ್ಮ
ಪರಿಧಾನ ಭಕ್ತರ ಪರಿಧಾನವಿತತಿ-
ಯಲ್ಲದೊಂದೊಗೆಯನು, ಅವುಗಳ ಮುಟ್ಟ-
ಲೀಯನು ಇತರರು ಘಟ್ಟಿಸುವಾಗ
ಭಕ್ತರ ಬಟ್ಟೆಯ ಭಕ್ತರಿಗೀವ
ಯುಕ್ತಸದ್ಭಕ್ತಿಯುಕ್ತಿಯುಂಟಾಗೆ
ಜಂಗಮ ಬೇಡಲು ಸಮಕಟ್ಟನೀವ
ಬಗೆಯಲಿ ಲಿಂಗಸಂಪದ ತುಳುಕಾಡೆ
ಸೀರೆಯನಿತ್ತವರೆಲ್ಲ ಕೇಳಿದರು
ಎಲ್ಲರಿಗವರ ವಸ್ತ್ರಗಳನೀಯುವನು.

ಅದರ ಮೇಲವನ ಮಹತ್ವವ ಕೇಳೆ
ಕುಟಿಲಾತ್ಮರಿಗೆ ಸರಿಹೊಂದದು ಮತ್ತೆ
ಬಟ್ಟೆ ಮುಟ್ಟಿದ ಮಾತ್ರಕಿರಿಯುವಾ ಭಕ್ತ-
ನಿರುವನೆ ಕೊಲ್ಲದೆಯಿವರು ಹೋದಾಗ?
ಇರುವಭಿಮಾನವ ಕಳೆದುಕೊಳ್ಳಲಿಕೆ
ಇಷ್ಟವಸರವೇಕೆ? ನೀನೆತ್ತಿ ಹೋಗೆ
ನೇರಬೆರಳ ತೋರಬಲ್ಲೆಯ ನೀನು?
ಅಷ್ಟೇಕೆ? ಇಲ್ಲೆ"ನೆ ಕಟ್ಟುಗ್ರನಾಗಿ
"ಕಾರಣಕಥೆಗಳ ಕಲ್ಪಿಸದಿಲ್ಲಿ
ಸುಮ್ಮನೆ ನೊಡುತ್ತಲಿರು ನೀನು"ಯೆನುತ

ಬಸವನ ವಾರಿಸಿ ಪಾಪಾತ್ಮನಾಗ
ಯಾಮಿಕರನು ಕಂಡು "ಬೇರುಪಾಯದಲಿ
ಹೋಗಿಯವನು ಬಹ ಮಾರ್ಗದಿ ನೀವು
ಬಿಡದಲವನ ತೊಲತೊಲಗೆಂದು ನಿಲಿಸಿ
ಸಮದಾಂಧಗಂಧಗಜವ ಮೇಲ್ನುಗ್ಗಿಸುತ
ಕೊಲ್ಲಿ ನೀವೆ"ನೆ ಜನುರುತ್ಸಾಹಿಸುತಿರೆ
ಮಾವಂತರೆಯ್ದು ಸಾಮಜವ ನುಗ್ಗಿಸುತ-
ಲಾ ವೀರವರ ಬಾರದಂತಡ್ಡ ನಿಲಲು
ಬಂದಲ್ಲಿ ಕಾಣುತ್ತ ಕೂಗಿ ಬೊಬ್ಬಿಡುತ
"ಕಲ್ಲಿನಾಥನ ಭದ್ರಗಜವೊಬ್ಬ ನರನ

ಆನೆಯ ಬನ್ನಕೇತಕೆ ಹೆದರುವುದು?
ಮನುಜರು ಸಾಯದೆ ಮರಳಿರಿ"ಯೆನುತ
ಗಂಟೆನಾಲಗೆಗಳ ಹೊಂದಿಸಲೊಡನೆ
ತಡಹಡಿಸಿತು ಆನೆ ಬಲವೆಲ್ಲ ನವೆಯೆ
ದೆಸೆದೆಸೆಗೋಡೆ ಮಾವಂತರು ನೂಕ-
ಲಷ್ಟಷ್ಟು ಹತ್ತಿರವದಕಿಂತ ಮುಂಚೆ
ಬೆನ್ನಲಿ ಹೊತ್ತಿರುವಂಥ ವಸ್ತ್ರಗಳ-
ನಾ ನಭೋಮಾರ್ಗದಲೆತ್ತಿ ಹಿಡಿಯುತ
ಕೈಯ ಗಂಟೆಯನು ಸೇರಿಸಿ ಮೈಯ ಬೆಳೆಸಿ
ಕೈಗಳುನುಜ್ಜಿತ್ತಲ್ಯೆತಂದು ನೋಡಿ

ಹಲವು ಮಾವಂತರ ತಂಡವ ಕೊಂದು
ಸೊಂಡಿಲ ಹಿಡಿದು ತಿರುಗಿಸುತಲೆಸೆದು
ಅಂಜಲಿಗಳ ಗುಂಜಿಯನ್ನಾಗಿಸುತ್ತ
ಭಂಜಿಸುತಲಿ ವೀರಭದ್ರನು ಕೋಪ-
ದಿಂದ ನೃಸಿಂಹ ತಾನೆಸೆವಂತೆಯೆಸೆದ.
ಬೀಳಲೀಯದೆ ಒಳಹೊರಗೈಯಲಿಕ್ಕಿ
ಅಚ್ಚಾಗಿ ಚುಚ್ಚುತ ಹರನಿಭದೈತ್ಯ
ಬಂದ ರಭಸದಲಿ ಬಂದು ಸೀಳಿದನು.
ಕೋಪದಿ ಹರಿಯ ಬೆನ್ನೆಲುಬನು ರುದ್ರ
ಭರದಿ ಮುರಿದ ರೀತಿಯೆಲುಬನು ಮುರಿದ.

ಹೊಲೆಯಗೆ ಮಾಂಸವ ಮತ್ತೆ ಮಾದಿಗಗೆ
ತೊಗಲಾಗದಂತೆಯೆ ತೊಲಗುವಂತೆಸೆದು
ಮಾರ್ಗದಿ ಪರರಿಗೆ ತೊಲಗದ ಭಾಷೆ-
ಯನ್ನು ಪಡೆದತುಲ ವೀರಾವತಾರಿ-
ಯೀ ಮಾರ್ಗದಲಿ ಭಕ್ತರೆಲ್ಲ ಹೊಂಗುತಿರ-
ಲಾ ಮದಕರಿಯನು ಸೀಳಿಯಾಕ್ಷಣದಿ
"ಎನ್ನ ಮೇಗಡೆ ಯಾರು ಆನೆಯ ಬಿಟ್ಟ-
ನಾ ವಸುಧೇಶನ ಕೊಬ್ಬಡಗಿಸೆನೆ"
ಎಂದ ವೃತ್ತಾಂತವನರಿತು ಬಿಜ್ಜಳನು
ಆ ಮುಂಚೆಯೇ ತನ್ನ ಮುಖವ ತಗ್ಗಿಸುತ

ಬಸವನ ಕಡೆನೋಡೆ, ಪರಮಹರ್ಷದಲಿ
ವಸುಧೇಶನಿಗೆ ಬಸವಣ್ಣನಿಂತೆಂದ :

"ಬೇಡೆಂದು ತಡೆತಡೆದುದ ನೀ ಕೇಳದೆಯೆ
ಚಲದಿಂದ ಕಳಿಸಿ ಜನರಮಾತುಗಳಿಗೆ
ಆನೆಯ ಹೋಗೊಟ್ಟೆ ಮಾನವ ತೆಗೆಯೆ
ಹಿರಿತನ ಕೆಟ್ಟಿತು ಶಿವದ್ರೋಹವಾಯ್ತು.

### ಇರುವದಾಂಡಾರಿಯ ಕಥೆ

ಧರಣೀಶ, ಹಿಂದೆ ದ್ರಾವಿಡಭೂಮಿಯಲ್ಲಿ
ಕರಯೂರಚೋಳ ಭೂವರನ ರಾಜ್ಯದಲಿ
ಮುನ್ನರವತ್ತು ಮೂವರುಭಕ್ತರೊಳಗೆ
ಇದ್ದನೊಬ್ಬನು ಭಕ್ತನಿರುವತ್ತುಯೆನುವ-

ನಪಗತಸರ್ವಸಂಗಪರೀತ ಚರಿತ-
ನಪರಿಮಿತಪ್ರತಾಪಾನೂನಕೀರ್ತಿ
ಸಾಹಸಾಂಕನು ಶಿವದ್ರೋಹರಗಂಡ-
ನಾಹವವೀರಭದ್ರವತಾರನೆನೆ
ಸಕಲಲೋಕಪ್ರಪಂಚ ಕಲಾವಿರಕ್ತ-
ನಾಕುಟಿಲಚಿತ್ತನತ್ಯದ್ಭುತಕೀರ್ತಿ
ಸಕಲಶಾಸ್ತ್ರಾಭ್ಯಾಸ ಶೌರ್ಯಾನ್ವಿತನೆನೆ
ಪ್ರಕಟ ಶಿವಾಚಾರಪರನೆಂದು ಮೆರೆದು
ಯೌವನಪ್ರಾರಂಭದಲ್ಲಿ ಸದ್ಭಕ್ತಿ
ಭಾವದಿಂದಲಿ ಭಯಭ್ರಾಂತಿಯ ಮೀರಿ

ವಿಸ್ಮಯಲೀಲ ಶ್ರೌತಸ್ಮಾರ್ತವಿಹಿತ
ಭಸ್ಮರುದ್ರಾಕ್ಷವಿಸ್ಫಾರಾಂಗನಾಗಿ
ವರಭಕ್ತಸಂದೋಹಚರಣಾರವಿಂದ
ಪರಿಚರಣಕ್ರಿಯಾಪರವಶನಾಗಿ
ಶಿವಭಕ್ತರಿಗೆ ಭಂಗಗೈವ ಪಾತಕರ-
ನವಿಚಾರದಲಿ ಕೊಲ್ಲುವಂಥ ನೇಮವನು
ಪ್ರಾಣಸ್ಥಲದ ರೀತಿ ಪ್ರಮಥೋಕ್ತ ಶಿವಪು-
ರಾಣಾರ್ಥಪದವಿಶಾರದನಂತೆಯೊಪ್ಪಿ-
ಯಿರುತಿರೆ ಚೋಳಮಹೋರ್ವೀತಲೇಶ
ಶುಂಡಾಲಮತಿರೌದ್ರ ಪಿಂಡಿತನಾಗಿ

ಕಲಿತ ಮದೋದ್ರೇಕಬಲಧಾರ ಸುರಿಯ-
ಲತಿವೇಗದಲ್ಲನಿವಾರಿತವೃತ್ತಿ-

ಯಲ್ಲಿ ತಾನಾಪುರ ವೀಧಿಯಲ್ಲೈತ-
ರುತಿರಲೊಬ್ಬನು ಭಕ್ತ ಕಡೆಜಾವವೆದ್ದು
ಹುಟ್ಟಿತು ಹೊತ್ತೆಂದು ಭರದಿಂದಲೊಳ್ಳೆ
ಹೂದೋಟವನು ಹೊಕ್ಕು ಭಾವಿಸಿ ನೋಡಿ
ಬೀಸುವ ಸುಳಿಗಾಳಿ ರಭಸವಾಗಿರಲು
ಬಿರಿದ ಪಕಳೆಗಳ ಛಿದ್ರಪುಷ್ಪಗಳ
ಕಿಗ್ಗಾಳಿ ಬೀಸೆ ಕಂದಿದ ಕುಡಿಗಳನು
ಬುಗ್ಗೆಯಂತಹ ಬಿರಿಮೊಗ್ಗೆ ಪುಷ್ಪಗಳ

ಸುಳಿಗಾಳಿಯಲಿ ಕೆಟ್ಟು ತೊಟ್ಟುಗಳಿಂದ
ಕಳಚಿದ ಆ ಸ್ವಯಂಪತಿತ ಪುಷ್ಪಗಳ
ಬಿದ್ದ ಕೊಂಬೆಗಳನುದುರ್ದ ಕುಡಿಗಳ
ಗಟ್ಟಿಯಾಗಿದ್ದು ಪರ್ಯುಷಿತಪುಷ್ಪಗಳ
ಬಹುಕೀಟಕೋತ್ಕರ ನಿಹತಿಯಿಂ ಬಂಡು
ರಹಿತವಾಗಿದ್ದ ಉಪಹತಪುಷ್ಪಗಳ
ಬೇಡೆಂದು ವರ್ಜಿಸಿ ಕಮನೀಯವಾದ
ಪರಿಮಳಭರಿತದ ನವಪುಷ್ಪಗಳನು
ಸೆಜ್ಜೆ ತುಂಬಲು ಕೊಯ್ದು ಸಂಭ್ರಮಡುತ
ಸಜ್ಜನಭಕ್ತನಾ ಸಾಮಜದೆದುರು

ಹರಪೂಜನೋತ್ಸವ ಪರವಶನಾಗಿ-
ಯೈತರುತಿರಲು ತತ್ಕರಿಯನು ಮುಟ್ಟಿ
ತುಂಡಾಗ್ರದಲಿ ಹಿಡಿದಲುಗಿಸಿಯೆಸೆದು
ಎರಡು ಕೊಂಬಲಿ ತಿವಿದೊಡೆಯೆ ರುಂಡವನು
ಪ್ರಾಣವಿಯೋಗ ತಾಪದಲಿಯಾ ಭಕ್ತ
"ಪ್ರಾಣೇಶ ಶಿವಶಿವಾ ಪರಮಾತ್ಮ"ಯೆನುವ
ಕಂಠಸ್ವರವು ಕೇಳಲಿರುವದಾಂಡಾರಿ
ಮಲಹರಭಕ್ತನ ಧ್ವನಿಯೆಂದು ತಿಳಿದು
ಬೆಚ್ಚಿ ಬೀಳುತಲಾಗ ಕಟ್ಟುಗ್ರನಾಗಿ
'ಇಂತಹಾರ್ತಾರವವೇತಕೋ'ಯೆನುತ

ಹರಿತಂದು ಭಕ್ತನ ಪಾಡ ಮದೇಭ-
ದಧಿಕ ಸಂಭ್ರಮವನಲ್ಲಾಗ ತಾ ಕಂಡು
ನಿಶಿತ ಕುಠಾರಸನ್ನಿಹಿತಾಗುಬ್ಬಿ
'ಪಶುವೆ, ಸೀಳುವೆ ನಿನ್ನನೋಡದಿ'ರೆನುತ
ಮಾರ್ಕೊಳಲಾತಗೆ ಮಲೆಯುತ್ತಾ ಗಜವು
ಮಾರ್ಕೊಂಡೆದುರಿಸಲುನ್ಮದವು ವರ್ಧಿಸಲು

ಸಾಮಜ ರಕ್ಕಸನೀಶನ ಮೇಲೆ
ತಿಳಿಯದೆ ಹರಿತಂದ ಗತಿಯ ಹೋಲಿತದು–
ಮುಳಿಯೆ ಕಾಣುತ ಮದೋದ್ರೇಕವಿಜೃಂಭಿ–
ತಾಕಾರನಾಗುತ್ತಲಾರ್ತು ಮೈಯುಬ್ಬಿ

ಸಂಹಾರರುದ್ರನಂತೆಸೆಯುತ ಕೋಪ
ರಂಹಸ್ಫುರಣಗೊಂಡು ಸಿಂಹನಾದವನು
ಪೂರಿಸಿ ಕಂಡರನಿರಿಯುತೀಟಿಯಲಿ
ವಾರಿಸಿಯಾನೆಯ ಕೊಲುವೆನೆನುತ್ತ
ಹರಿತಂದು ಸೊಂಡಿಲ ಹಿಡಿದವ ತಿವಿದು
ನೆಲಕೊರಗಿದ ಮಾವಂತಿಗನನು ಹಿಡಿದು
ಕೊಲ್ಲುತಲೆಡಗಾಲಿನ ಬುಡಕೆ ನೂಕಿ
ಗಂಟಲಮೆಟ್ಟಿ ಬೊಬ್ಬಿಟ್ಟು ಫಿರ್ರೆನಲು
ಹಸ್ತಿಕಂಭಸ್ಥಲನ್ಯಸ್ತಸ್ವಕೀಯ
ಹಸ್ತಕಠಾರಿಯಾಗದನೊಡಸೀಳೆ

ಶುಂಭದ್ಗಜೇಂದ್ರ ಕುಂಭಿನಿಗೊರಗಿತ್ತು
ದಂಭೋಳಿಯಿಂದ ಪರ್ವತವು ಬಿದ್ದಂತೆ.
ಇದನೆಲ್ಲ ಚೋಳ ಭೂವಿಭು ತಾನು ತಿಳಿದು
ಬಂದಲ್ಲಿ ಇರಿವತ್ತನಡಿಗಳಿಗೆರಗಿ
ನಿಟಿಲಾಗ್ರಹಸ್ತನಾಗುತ ನಿಂತು ಭಜಿಸಿ
"ಕಟಕಟಾ, ಭಕ್ತನ ಗಜವು ಗಾರಿಸಿತು
ಹರಭಕ್ತರಿಗೆ ಮುನ್ನಜಾಚ್ಯುತಾದಿಗಳು
ಸರಿಯಲ್ಲವೆನಲು ಈ ಕರಿಯ ಸಾವೆಣೆಯೆ?
ಆನೆಯು ಪಶುವದೇನನು ತಿಳಿದಿಹುದು
ಆನೆಯನಾಳುವ ನಾ ದ್ರೋಹಿತಾನೆ

ಸಾವೆನ್ನೆನ್ನಯ ಸಾವು ಸಮವೆಂದು ಬಾಯ–
ನುಚ್ಚುವಂತಾಗಿ ಸಾಯಲು ಶುದ್ಧ ನಾನು"
ಎಂದಾಗಲಿರಿವತ್ತಾಂಡಾರಿಯ ಮುಂದೆ
ಜನಪತಿ ತನ್ನ ಶಿರವನು ತಾನರಿಯೆ
ಶಿವನಲ್ಲಿಪ್ರತ್ಯಕ್ಷನಾಗುತ ಚೋಳ
ಪಟ್ಟವರ್ಧನನಿಟ್ಟು ಭಯಭಕ್ತಿಗಳಿಗೆ
ಇರುವದಾಂಡಾರಿಯ ಭಕ್ತಿಯುನ್ನತಿಗೆ
ಕರಕಂಠನಜನು ಶಂಕರನು ಅಕ್ಷಯನು

ಮೆಚ್ಚಿ ಭಕ್ತಗೆ ಪ್ರಾಣವಿತ್ತು ಮಾವಂತ–
ನನು ಬೇಗನಲ್ಲಿ ಸಂಜೀವಿತಗೈಯ–

ಲಂತೆ ಪ್ರಾಣವು ಮತ್ತೆ ದಂತಿಗುಂಟಾಗ
ಲೆಂತು ಮಹಿಮೆಯಾಯಿರುವದಾಂಡಾರಿಯದು
ಆ ಚೋಳವಲ್ಲಭನತಿದದಯಾದೃಷ್ಟಿ–
ಯಿಂದ ಕೈಲಾಸವಾಸಿಯಗೈದ ಶಿವನು
ಮದಿಸಿ ಭಕ್ತನ ಮಡುಹಿದ್ದ ಆ ಆನೆ–
ಯೊಡನೆಯಾಗಲೆ ಸತ್ತನಾ ಚೋಳನೃಪತಿ
ಪ್ರೇಮವದಲರಲು 'ಭೃತ್ಯಾಪರಾಧ
ಸ್ವಾಮಿನೊದಂಡ'ವೆಂಬುದ ನಿಷ್ಠಿಸುತ್ತ
ತನ್ನ ಕರಿಯದ್ರೋಹವೆನ್ನದೇಯೆನುತ
ತಾ ಸತ್ತನಣ್ಣ ನಿನ್ನಯ ತಪ್ಪಿಗಿನ್ನು

ಕೊನೆಯೆಂತು ಬಿಜ್ಜ ಕ್ಷೋಣೇಶ! ನೀನು
ಕರಿಯ ಕಳಿಸಿದೆಯಾತ್ಮದ ಭಯವಿರದೆ

**ಬಾಹೂರ ಬ್ರಹ್ಮಯ್ಯನ ಕಥೆ**

ಮತ್ತೆ ಬಾಹೂರಬ್ರಹ್ಮಯ್ಯನೆಂಬೊಬ್ಬ
ಕರಕಂಠಭಕ್ತನಖಂಡಿತ ಕೀರ್ತಿ
ವೀರಮಾಹೇಶ್ವರಾಚಾರ ಮತಸ್ಥ–
ನಾರೂಢಗಾಢ ಮಹತ್ವಾಕಾಂತನೆನೆ
ಮಂಗಳಭಕ್ತಿಕ್ರಿಯಾಂಗಭಾಷಾಂಗ
ಸಂಗತಚರಿತನಭಂಗಪ್ರತಾಪಿ
ಸ್ಥೈರ್ಯಸಂಪನ್ನನು ಶೌರ್ಯಪಂಡಿತನು
ಧೈರ್ಯಪ್ರಪೂರ್ಣನವಾರ್ಯವೀರ್ಯನೆನೆ

ಸತ್ಯವಚೋರಾಶಿ ಶರಣಾಗ್ರಗಣ್ಯ–
ನತ್ಯುತ್ತಮೋತ್ತಮನೆನಲೀ ಬುವಿಯಲಿ
ಮೆರೆವ ಜಂಗಮಲಿಂಗಪಾದಾರವಿಂದ
ಪರಿಚರಣಕ್ರಿಯಾಪರತಂತ್ರಲೀಲ–
ನಲಸದೆ ಹಲವು ಹೂದೋಟಗಳಲ್ಲಿ
ಮೊದಲ ಕೋಳಿಯ ಕೂಗಿಗಿಂತ ಮುನ್ನೆಯ್ದು
ಹೂಗಳ ತಿರಿತಂದು ಪುಷ್ಪಮಾಲೆಗಳ

ಭಾವಿಸುತಲಿ ಕೋದು ಭಕ್ತರಿಗಿತ್ತು
ಇಂಥ ಕಾಯಕಲಬ್ಧಿಯಲ್ಲಿ ತಾ ನಿತ್ಯ
ಚಟ್ಟನೆ ಜಂಗಮಾರ್ಚನೆಯಗೈಯುತ್ತ-

ಲಿರುತಿರೆ ಮತ್ತೊಂದು ವಾದದಿ ತಾನು
ಕರ್ತ ಗೌರೀಶನೆಂಬುದ ಪ್ರತಿಷ್ಠಿಸುತ
ಕಲ್ಲನಂದಿಗೆ ಹುಗ್ಗಿ-ಹುಲ್ಲು ಮೇಯಿಸುತ-
ಲೆಲ್ಲರು ತಿಳಿಯೆ ಜೋಳವು ಲಿಂಗವಾಗಿ
ಮಾಡಿ 'ಆ' ಯೆನಿಸುತ ಭಾಸುರಭಕ್ತಿ
ವಾಸನೆಯಲ್ಲಿರೆ ಮತ್ತೊಂದು ದಿವಸ
ಧರಣೀಶನೊಬ್ಬನು ತಂತ್ರದಿ ತಾನು
ಪರಮಂಡಲಗಳ ಮೇಲ್ವಾಯ್ದು ಹೋಗುತ್ತ
ಬಾಹೂರ ಸೇರ್ವೆಯ ಪ್ರಾಗ್ದಿಶೆಯಲ್ಲಿ
ಹೂದೋಟಗಳ ಬಳಿ ದೊರೆಯು ಬಿಡಾರ-

ಗೈದಿರಲವನ ಮುಹೋದ್ದಂಡಗಜವು
ತನ್ನ ತಾ ಮರೆತು ಮದಗ್ರಸ್ತವಾಗಿ
ಬಲುಹು ಮಾವಂತನ ಬೀಳಿಸಿ ಕೆಳಗೆ
ಬಿಡಿಸಿಕೊಂಡದು ದಂಡ ಬಿರಿಯಲೋಡಿಸುತ
ನೆರಳಿಗು ಹೆದರುತ್ತಲಾಗಸಕೆಸೆದು
ಜಾಡನೆ ಗುದ್ದುತ ಜನರ ಕೊಲ್ಲುತ್ತ-
ಲನಿವಾರಿತೋದ್ವೃತ್ತಿಯಲಿ ಬರೆ ಗಜವು
ಕಂಡು ಬಾಹೂರಬ್ರಹ್ಮಯ್ಯ ಲೆಕ್ಕಿಸದೆ
ಬರುತಲಿ ಮದಕರಿ ದಾರಿಯಲೆದುರು
ತರುಮುತ ಬಂದು ಹೋಯೆಂದು ಘೀಳಿಡಲು

ಭಯಗೊಂಡು ದಾರಿಯ ಬಿಟ್ಟು ಘರ್ರೆನುತ-
ಲೋಡೋಡಿ ಸೊಂಡಿಲ ನಿಟಿಲದಲಿಕ್ಕಿ
ಹಿಂದುಹಿಂದಕೆ ಭೀತಿಯಿಂ ಹೋಗಿ ನದಿಯ
ತೀರದಿ ಬಿದ್ದು ಮೂರ್ಛೆಯ ಹೊಂದುತಲ್ಲಿ
ಜೀವವ ತೊರೆಯಲು ಮಾವಂತರೆಯ್ದು
ಆ ವಿಭುಗಿಂತೆಂದರಾಗ ನಡುಗುತ :
"ತೊಂಡೆದ್ದ ಮದಕರಿ ರಭಸದಿ ಹರಿವ
ಎಡೆಯೊಬ್ಬ ಭಕ್ತಯ್ಯನೀ ಹಳ್ಳಿಯಿಂದ

ನವಪುಷ್ಪಗಳ ಕೊಯ್ದು ತರುತಿರೆ ಕಂಡು
ಇದು ಮಹೋದ್ರೇಕದಲವನ ತಡೆಯಲು

ಹೆದರದಲೈತಂದು ಕರತಲವೆತ್ತಿ
ಹೋ, ಪಶು, ನಿಲ್ಲೆಂದು ಝುಂಕಿಸಲೊಡನೆ
ಭಯದಿ ಹಿಂಜರಿಯುತ ನದಿಯ ತೀರದಲಿ
ತಾನು ಜೀವವ ಬಿಟ್ಟಿತೆ"ನೆ ಕೇಳಿ ವಿಭುವು
'ಆ ಅಯ್ಯನನು ಗಜವೆಂತು ಕಾಡಿಸಿತೊ'
ಎಂದು ಚಿಂತಿಸುತ ತಾನೊಯ್ಯನೆ ಬಂದು
ಆ ಮಹಾತ್ಮನ ಚರಣಂಗಳಿಗೆರಗಿ
'ಈ ಮದಕರಿ ನಿಮ್ಮ ಮೇಲ್ವಾಯ್ದ ತಪ್ಪ
ಸೈರಿಸಬೇಕೆ'ಂದು ಸಾಷ್ಟಾಂಗ ಮೊಕ್ಕೆ
ಕಾರುಣ್ಯರಸವಾರ್ಧಿಕಡಲಿನಲದ್ದು-

ತಾ ಮಹೀಜನರೆಲ್ಲರಾಶ್ಚರ್ಯಗೊಳಲು
ಬ್ರಹ್ಮಯ್ಯ ಮದಕರಿಗಿತ್ತನು ಪ್ರಾಣ;
ಮೆರೆಯೆ ಬ್ರಹ್ಮಯ್ಯಗೆ ಶರಣುವೊಗುತ್ತ
ಚರಿತಾರ್ಥವೆನಿಸಿದ ಭೂವರ ಮತ್ತೆ
ಸಜ್ಜನಭಕ್ತರ ಚರಿತೆಯನಿಂತು
ಬಿಜ್ಜಳ ಕ್ಷೋಣೀಶ, ಬಣ್ಣಿಸಲೆಂತು
ಮಲೆತು ಮಾರ್ಕೊಳುವರ ಕೊಲುವರು, ಭಯದಿ
ಶರಣೆನೆ ಕಾವರು ಹರಭಕ್ತವರರು.
ಆದರಿಷ್ಟೆಲ್ಲವ ಹೇಳಲೇತಕ್ಕೆ
ಭೂನಾಥ, ನಾವೆಷ್ಟರವರು, ಏಳು ನಡೆ

ಕಲಿಯುಗರುದ್ರನಲ್ಲದಲೀ ಮಾಚಯ್ಯ
ಭಾವಿಸೆ ಮರ್ತ್ಯನೆ ಧರಣೀಶ! ಇದುವೆ
ಕಜ್ಜವು ತಾನೆನೆ ಬಿಜ್ಜಳನಾಗ
ಲಜ್ಜೆಸಿಗ್ಗುಗಳಿಂದಲಾ ಮಾತ ಕೇಳಿ
ಆಗಲೆನ್ನುತ ಬರುತಖಿಲರು ತಿಳಿಯೆ
ಬುವಿಗೆ ಸಮಸ್ತಾಂಗವೊಂದಿಸುತಲ್ಲಿ
ಬಿದ್ದಿರೆ ಭಂಡಾರಿ ಬಸವಯ್ಯ ಬಂದು
ಮಡಿವಾಳ ಮಾಚಯ್ಯನಡಿಗಳಿಗೆರಗಿ-
ಯಸಮಾನಲೀಲೆಪೆಂಪುಗಳಿಂದ ನುತಿಸಿ
ಬಸವನಿಂತೆಂದು ಬಿನ್ನೈಸೆ ತೊಡಗಿದ;

"ಬೇಡೆಂದು ವಾರಿಸೆ ಚಲದಲಿ ಮೂಗ-
ನರಿದುಕೊಳ್ಳುವ ರೀತಿ ಹುರುಳ ಹೋಗಾಡಿ-
ಯಲ್ಲಿಗೆ ಬರಲಂಜಿ ದೀನತೆಯಿಂದ-
ಲಲ್ಲಿಯೆ ಸಾಷ್ಟಾಂಗದಲ್ಲಿರುತಿಹನು
ಪಕ್ಷಿಗೆ ತೊಡಲೇಕೆ ಪಾಶುಪತವನು?
ಈ ಕ್ಷಿತೀಶ್ವರನೆನೆ ತಾನೆಷ್ಟರವನು?
ಎದುರಾರು ನಿನಗೆಯೀರೇಳು ಲೋಕದಲಿ?
ಸದಯಾತ್ಮ, ಈ ತಪ್ಪ ಸೈರಿಸಬೇಕು"
ಎಂದುಬಿನ್ನವಿಸಲು ಅಂತಾಗಲೆನುತ
ಜನನಾಥನೆಬ್ಬಿಸೆ ಕಳಿಸಿ ತತ್‌ಕ್ಷಣವೆ

ಅಟ್ಟೆ ಹೊಟ್ಟೆಗಳನಸ್ತಿಗಳನು ಕೂಡೆ
ಸೇರಿಸೆ ಜನರು ವಿಭೀತಿಯಿಂ ನೋಡೆ
ಭಸಿತವ ತುಣುಕುಗಳಿಗೆ ಚೆಲ್ಲೆಯವನ
ಅಸಮಗಜೇಂದ್ರವನೊಸಗಿ, ತಾನಂದು
ಕೊಂದೆಸೆದಾ ಶವವುಡುವೀಥಿಯಿಂದ
ಬಿದ್ದಿತು ಸಭೆ ಭಯಭ್ರಾಂತಿಯಿಂ ಬೆದರೆ
ದೇಹಕ್ಕೆ ಪ್ರಾಣವನೆರೆದು ಮಾಚಯ್ಯ-
ನೆಲ್ಲರು ನೋಡಲು ಅಂತರಿಕ್ಷದಲಿ
ಇದ್ದ ವಸ್ತ್ರಗಳಿಗೆ ಬೆನ್ನೊಡ್ಡಿ ಜನರು
ಸನ್ನುತಿಗೈಯಲು ನಡೆದ ಸಾರುತ್ತ

ಬಸವನಾ ಮಾಚಯ್ಯನಾ ಪಾದಕೆರಗಿ-
ಯಸಮನ ಮಠಕೆ ತಾ ಕಳಸಿಯೈತಂದ
ಸಕಲನಿಯೋಗವು ಜನಪಾಲನೊಡನೆ
ಮುಕುಳಿತ ಹಸ್ತದಿ ಮೊಕ್ಕುತಲಿರಲು
ಮುಂದೆ ಮಾಚಯ ಮುನ್ನಿನಂತೆ ಸದ್ಭಕ್ತಿ
ಸಂತತಸತ್ಕ್ರಿಯಾಸ್ಪದಿಂದ ನಡೆಯೆ
ಮತ್ತಷ್ಟು ದಿನಗಳಿಗಮಲಿನ ಬಸವ
ಭರದಲಿ ಹೊಸಗೀತಕಾಣತೀಯೀಯೆ
ಭಕ್ತರು ತನ್ನೆಡೆ ಹಾಡಿದ ತಡೆವೆ
'ಯುಕ್ತಿಯೇ'ಯೆನುತ ಮಹೋಗ್ರತೆಯಿಂದ

'ಶಿವಶಿವ'ಯೆಂದು ಕೈಯಲಿ ಕಿವಿಮುಚ್ಚಿ
"ಅವಿನೀತನಿಂತಿಹ ಹೋ ಕಲ್ಲಿನಾಥ!

ಭೇಭೇಭೇ ದೀನರ ಮಾಡಿ ಶರಣರಿ-
ಗೆಲ್ಲ ತಾನೊಬ್ಬನೆ ಕೊಡುವಾತನಾದ
ಯಾವಾಗ ಕೋತಿಯಾದನು? ಎಕ್ಕರಿಸುವು-
ದೆಂದಿನಿಂ ಕಲಿತನಿನ್ನೆಲ್ಲಿಯ ಭಕ್ತಿ
ದೋಷವಲ್ಲವೆ ಭಕ್ತರಿದನು ಕೇಳಿದರೆ
ಭಾಷೆಗೀಷೆಗಳಿಹ ಹಾಡ ಹಾಡದಿರಿ
ನನ್ನ ಮುಂದೆನುತ ಮಾಚಯ್ಯನು ಕಿನಿಸಿ
ಕಾಯಕಕೈತರಲೀಯೆಡೆಯಲ್ಲಿ

ಕೇಳಿದಂತೆಲ್ಲ ತನ್ನಾತ್ಮವು ಕಲಕಿ
ಎಡೆಯೆಡೆ ಧರೆಯಲಿ ಸಾಷ್ಟಾಂಗವಿಡುತ
ಬಸವನು ಭಕ್ತಜನಸಹಾಯನಾಗಿ
ಭರದಿ ಬಂದು ಭಯಸಮಗ್ರವೃತ್ತಿಯಲಿ
ಮಡಿವಾಳಮಾಚಯ್ಯನಡಿಗಳ ಮೇಲೆ
ಕೆಡೆದು ಸರ್ವಾಂಗವನೊಂದಿಸಿ ಮೊಕ್ಕಿ
"ಆಕ್ರಾಂತ ಸಂತತಾಹಂಕಾರನಿರತ-
ನಕ್ರಮಾಲಾಪಿ ನಿರ್ವಕ್ರಾಪರಾಧಿ-
ಯೂರ್ಜಿತಕ್ರೋಧಿ ವಿವರ್ಜಿತಸತ್ಯ
ದುರ್ಜನಾಚಾರಿಯನಿರ್ಜಿತಕಾಮಿ-

ಯಜ್ಞಾನಪುಂಜವು ಅಪಗತಶೌಚ
ವಿಜ್ಞಾನಹೀನ ವಿವೇಕವಿದೂರ
ನಿರ್ಭಾಗ್ಯಚೂಡಾಮಣಿಯು ಭಕ್ತಿರಹಿತ
ದುರ್ಭಾವನನವಿನೀತನನೆನ್ನನಿನ್ನು
ಕಾಯ್ದು ರಕ್ಷಿಸೆಯಾ ನೀ ಕಾರಣುಪಾತ್ರ!
ಅಧಿಕಮದ್ಗರ್ವವನೆಲ್ಲ ಮಾಯಿಸುತ
ಲಾಲಿತದಲಿ ನಾಲ್ಕು ಲಕ್ಷದ ಮೇಲೆ-
ಯರವತ್ತುನಾಲ್ಕುಸಾವಿರ ಗೀತೆಗಳನು
ರಚನೆಗೈದುದು ದೋಷ ಕಂಡೇವಗಿಸುವ
ಭಾವನೆಯೆನಗಾಯ್ತು ನೀವು ಕೈಕೊಳದೆ

ಆಯತಪ್ರೀತಿಯಿಂದೋಯೆನ್ನದಿರಲು
ಸಾಯೆಂದು ಹೇಳೆನ್ನ ಸಂಗಯ್ಯದೇವ!"
ಎನುತಲಿಂತಾತ್ಮನಿಂದಾತಿದೀನೋಕ್ತಿ-
ಗಳ ನುಡಿಯಲು ಕೇಳದಂತೆ ಕೇಳುತ್ತ

ಜಂಗಮಪರತಂತ್ರನಂಗಾವಿಕಾರಿ
ಲಿಂಗದ ಮಾಚಯ್ಯನಾಲೀಢ ಶೂರ–
'ನಧಮನೆ, ಕೊಬ್ಬಿದೆ ಹರಭಕ್ತರೆಲ್ಲ–
ರಧಮರೆ? ನೀನೊಬ್ಬನರ್ಥಾಧಿಪತಿಯೆ?
ಕೇಳುವರಿಲ್ಲದಲಯ್ಯ ನೀನಿಷ್ಟು
ಬಡವಾಗಿರುವೆ, ಮಝು ಭಾಪುರೆ'ಯೆನುತ

'ಅಂಥಯಾಚಕರ ನಾ ಕಂಡೆನೆ ಹೊರತು
ಇಂಥ ತ್ಯಾಗಿಯ ಕಾಣೆನಾವ ಲೋಕದಲು
ಸಂದೇಹವಿನಿತಿಲ್ಲ! ಬಸವ ನೀನೀವ
ಆನೆಮರಿಗಳವು ನೀರು ಮಣ್ಣುಗಳು
ಕುದುರೆ ಕತ್ತೆಗಳವು ಕುಟಿಲಸತಿಯರು
ಕೆಂಬಟ್ಟೆಗಳು ಪ್ರಿಯವೇ ಶರಣರಿಗೆ
ಈಯೆಡೆ ನೋಡು ನೀನೆನ್ನ ಜಂಗಮವು
ಬಡತನವಿಲ್ಲದತಿಶಯ ತೋರುವೆನು
ಅದೆಕೊ'ಯೆನ್ನುತ ಚೆಲ್ಲಲಲ್ಲಿ ಬೀಳುತ್ತ
ಸದಮಲೋದಕಕಣಜಾಲವೆಲ್ಲವದು

ಮರಕತ ನೀಲ ನಿರ್ಮಲ ಪುಷ್ಯರಾಗ
ವರವಜ್ರ ವಿದ್ರುಮ ವೈಡೂರ್ಯಮುಖ್ಯ
ವಿನುತರತ್ನಾಚಲವಿತತಿಯಾಗೆಸೆಯ–
ಲಿನನ ಖದ್ಯೋತವು ಇರಿಮುರಿಗೊಳಲು
ಪೌರರೆಲ್ಲತ್ಯದ್ಭುತಕ್ರಾಂತರಾಗಿ
ಬಿಜ್ಜಳನೊಡನಲ್ಲಿಗೈತಂದು ನೋಡೆ
ವರದ ಮಾಚಯನಿದ್ದ ಪ್ರಮಥಪ್ರಸಾದ
ವಿಮಲ ಪುಷ್ಪಾಂಚಿತವೃಷ್ಟಿ ಮೇಲ್ಸುರಿಯೆ,
ಬಸವನಭಿಮತಫಲಗಳಿಂದ ತಣಿಸ–
ಲಸಮಾಕ್ಷನರ್ಚಿತನಾಗಿರುವಂತೆ

ಜಂಗಮವೊಪ್ಪಿತಾ ಲಿಂಗಾವತಾರಿ–
ಗಳೊಡನೆ ಮಾಚಯ್ಯ ಸದ್ಭಕ್ತಿಮಹಿಮೆ–
ಯರಿಯಲು ಸಾಲದೆಯಿಷ್ಟು ರೂಪಗಳ
ಮರೆಯಲು ತಳೆದ ರೀತಿಯ ಹೋಲುತಿರಲು
ಅಂಥ ಜಂಗಮಸಭಾಭ್ಯಂತರಾಳದಲಿ
ಒಟ್ಟಿದ ರತ್ನಗಳನು ಹೋಲುತಿರುವ

ಭಕ್ತರಿಗಾನೆ ಭಂಡಾರಿ ನೋಡೆನಲು
ಯುಕ್ತದಿ ಬಸವರಾಜನು ತಾನು ಮತ್ತೆ
ಭಕ್ತಿಯಿಂದಾ ಮಡಿವಾಳ ಮಾಚಯ್ಯ
ದೇವರ ಶ್ರೀಪಾದಕಂಜಯುಗವನು

ಮುನ್ನ ಸಾಷ್ಟಾಂಗದಿ ಮೊಕ್ಕುತ ಸೇರಿ
ಸನ್ನುತಿಗೈಯುತ ಶರಣು ಬೇಡುತ್ತ
"ತವ ಮಹತ್ವವ ಕಾಣಲಾನೆಷ್ಟರವನು
ಧೀಮಣಿ ಸಂಗಯ್ಯ ದೇವ ಸರ್ವಜ್ಞ
ನೀನು ಶಂಕರನಯ್ಯ ನಾನು ಕಿಂಕರನು
ನೀನು ನಿರ್ಮಲನಯ್ಯ ನಾನು ದುರ್ಮಲನು
ನೀನು ವಿಜ್ಞಾನಿಯೈ ನಾನವಿಜ್ಞಾನಿ
ನೀನಮೃತಾಂಗನು ನಾನು ವಿಷಾಂಗ
ನೀನು ಮಹಾದಾತ ನಾನಯ್ಯೊ ಕೃಪಣ
ನೀ ಪಶುಪತಿಯಯ್ಯ ನಾ ಪಶುಜೀವಿ

ಸ್ವಾಮಿ ತ್ರೈಲೋಕ್ಯಚೂಡಾಮಣಿ ನೀನು
ಬುವಿಯ ನಿರ್ಭಾಗ್ಯಚೂಡಾಮಣಿ ನಾನು
ಭಾವಿಸಲಿಂತು ದುರ್ಗುಣರಾಶಿಯಲ್ಲಿ
ಅರಸಲು ಬಹುದೆಯೆನ್ನಲ್ಲಿ ಸದ್ಗುಣವ
ರಕ್ಷಿಸೈಯಿೀಗರ್ವಪ್ರಾಪ್ತನಾದೆನ್ನ
ಶಿಕ್ಷಿಪೆಯೇನಯ್ಯ ಜೀಯ ನಾಗೈದ
ಅಪರಾಧಶತಸಹಸ್ರಾಳಿಯ ಸಹಿಸಿ
ವಿಪರೀತಮಹಿಮಾಢ್ಯ, ಕೈಬಿಡಲೇಕೆ?"
ಎನುತಿಹ ಬಸವನನಡಿಗಡಿಗಪ್ಪಿ
ಸೇರಿಸಿ ಕಾರುಣ್ಯವನಧಿಯಲದ್ದಿ

"ಇರುವುದಲ್ಲವೆ ಲಿಂಗದಲ್ಲಿಯು ಕೂಡ
ಭಾವಿಸೆ ಕೋಪಪ್ರಸಾದಗಳೆರಡು
ಸೇರು ಧನ್ಯಕೆ ಚೆಚ್ಚರದಿ ಹರವಿಯನು
ಕೊಳುವರು ಬಾರಿಸಿ ತಾನೆ ಕೊಳುವರು?
ಧರೆಯಲಂತೆಯೆ ತಮ್ಮ ಭೃತ್ಯವಿತತಿಯ-
ನೊರೆಯದೆ ಕೈಹಿಡಿವರೆಯದಲ್ಲದೆಯೆ
ಸೀರೆಗಳಿಗೆ ಕೋಪಿಸುವನೆ ರಜಕನು?

ಅಂತೆಯೆ ಬಸವನ ಹಿಡಿದು ಮಾಚಯ್ಯ
ಘಟ್ಟಿಸಿ ನಿರ್ಮಲತ್ವವನೊಂದಿಸಿದನು;

ಅಲ್ಲದೆನಿತು ಬಾರಿಯೆಷ್ಟು ಕಾಸಿದರು
ಬನ್ನವೇರದೆ ಸುವರ್ಣವು ತಾನು ಹೊಳೆದು
ಇಷ್ಟಿಷ್ಟು ಕಡಿದ್ದರು ಇಕ್ಷುಖಂಡವದು
ಅಷ್ಟಷ್ಟಕದು ಸಿಹಿಯಾಗದೆಯಧಿಕ
ರಂಪದಿ ಕೊಯ್ದರು ತೇದರು ಕೂಡ
ಕಂಪು ಹೆಚ್ಚುವುದಲ್ಲ ಶ್ರೀಗಂಧಮರಕೆ
ತೇಯಲು ಮಡಿವಾಳ ಮಾಚಯ್ಯನೊರೆದು
ನೋಡಲು ಬಸವನ ಶುದ್ಧಸದ್ಭಕ್ತಿ
ಕುಂದದೆ ಹೆಚ್ಚಾಗಿ ತುದಿ ಮುಟ್ಟಿತಲ್ಲ!"
ಯೆನುತ ಭಕ್ತಾಳಿ ಕೀರ್ತಿನೆಗೈಯುತಿರಲು

ಮುಕುಳೀಕೃತ ವಿಕಂಪಿತಕರಾಬ್ಜನಾದ
ಸುಕುಮಾರ ಬಸವನ ಕಂಡು ಮಾಚಯ್ಯ
"ಕೇಳಹಂಕರಿಸಲು ಭಕ್ತಿಯಾಗುವುದೆ
ಕೇಳ್ದರಿಯಯ್ಯ ಪುರಾತನರೊಳಗೆ

**ಶಂಕರದಾಸಿಮಯ್ಯನ ಕಥೆ**

ಜಡೆಯ ಶಂಕರಮಹಾಸ್ಥಾನವದರಲಿ
ಕೀರ್ತಿತ ಶರಣನು ಶಂಕರದಾಸಿ
ಕಾಲಕರ್ಮಾಕರ್ಮಕಲಿತಮಹೇಂದ್ರ
ಜಾಲವಿಲೋಲನಿರ್ಮೂಲನಶಾಲಿ
ಜನ್ಮಜರಾಮರಣೋನ್ಮದಾಪಹನು
ಚಿನ್ಮಯಾನಂದವಶೀಕೃತಾತ್ಮಕನು

ರೌದ್ರಮಹೋದ್ರೇಕರಂಜಿತ ವೀರ
ಭದ್ರನು ಪ್ರತ್ಯಕ್ಷಫಾಲಲೋಚನನು
ದಂಡಿತಾಜಾಂಡಕರಂಡದೋರ್ದಂಡ
ಮಂಡಿತಾಡಂಬರ ತಾಂಡವಮೂರ್ತಿ
ವಿಲಸಿತಕೀರ್ತಿ ನಿರ್ಮಲನು ಸಂಸಾರ
ತಲೆಗೊಂಡಗಂಡನತರ್ಕ್ಯಪ್ರತಾಪಿ–
ಯೆನಲು ಪ್ರಖ್ಯಾತ ತಾ ನಶ್ವರಲೀಲೆ–
ಯಿಂದಲಿ ಪ್ರಚ್ಛನ್ನ ವೇಷವೊಂದರಲಿ

ಬೊಂತೆಕಂತೆಗಳನು ಹೊಲಿಯುತ ಹೋಗು–
ವಷ್ವಕೆ ವಿಕ್ರಯಗೈಸಿ ತರಿಸಲು

ಅಕ್ಕಜವೆನಲು ಕಾಯಕಲಬ್ಧಿ ನಿತ್ಯ–
ವೇರದು ಕುಗ್ಗದು ಐದುಮಾನಗಳ
ಜಂಗಮಕೋಟಿಗೆ ಸಮುಚಿತಾರ್ಚನೆಯ
ಭಕ್ತಿಯಿಂ ಸಲಿಸುತ ಪ್ರಭುವಿದ್ದಯೆಡೆಗೆ
ಜೇಡರದಾಸಯ ನೋಡಲು ಬಂದು
ಸಂತಸ ಮನದಿ ತುಳ್ಕಾಡಲು ಮೊಕ್ಕಿ–
ಯೊಂದಿಷ್ಟು ಸುಖಗೋಷ್ಠಿಯಲ್ಲಿದ್ದು ಹೊರಟು
ಜಕ್ಕನೆ ಮಠಕೆಯ್ದು ಸದಯನಿರುತಿರೆ
"ಕಟಕಟಾ! ಇಂಥ ಲಿಂಗಸದರ್ಥನಾಗಿ–
ರುತಿರೆ ನೊಣಕು ತವುಡಿಲ್ಲ ಮನೆಯಲಿ

ಶಂಕರದಾಸಿಯ ಸದ್ಭಕ್ತಿಮಹಿಮೆ–
ಗಲ್ಲದಿನ್ನೇತಕೆ"ಯೆಂದು ಶೋಕಿಸುತ
ಕನಿಕರದಲಿ ದುಗ್ಗಳವ್ವೆಗೆ ಹೇಳಿ
ಚಿಕ್ಕ ಗೂಡೆಯ ಧಾನ್ಯ ಶೀಘ್ರದಿ ಕಳಿಸೆ
"ಅಮ್ಮಮ್ಮ, ಇಹುದೆಂದು ಧಾನ್ಯವ ದಾಸಿ
ಕಳಿಸಿದ, ಮೇಲಾಯ್ತು, ಎಷ್ಟಾದರೂನು
ಧಾನ್ಯಕೆ ಮುನ್ನಿತ್ತ ಬಟ್ಟೆಯ ನೆಯ್ದು
ಇಂದೇನು ಕೇಳ್ವನೊ ಸಾಧ್ಯವೆ ನಮಗೆ?
ನೆನೆಸಿಕೊಂಡಿದ ಕಳಿಸಿದ ಸಾಲದೇನು
ಕೊಡಲಿಕ್ಕೆ ತನ್ನಲ್ಲಿಯೇನಿಹುದೆ"ನುತ

ಹಿಡಿಯಿಂದ ತಾನೊಮ್ಮೆ ಹಿಡುಕಿದೊಡನೆಯೆ
ಹಿಡಿಯೊಳಗಡಗಿತು ಗೂಡೆಯದೆಲ್ಲ
ಆ ತವನಿಧಿ ಕೂಡ ಲಯಿಸಿತು ಅಲ್ಲಿ
ಒತ್ತಡಿ ಸಂಪದ ತೊಲಗಿತ್ತಾಕ್ಷಣವೆ
ಕೂಳೆಂಬ ಮದ್ದಿಗೆ ಧಾನ್ಯವಿಷ್ಟಿರದೆ
ನೋಡಲು ಕಣಜಗಳವು ಬರಿದಾಗೆ
ದಾಸಿ ಮುನ್ ಪಡೆದಿದ್ದ ತವನಿಧಿಯಂತೆ
ದಾಸಯ್ಯ ತರಿಸಲು ತತ್‌ಕ್ಷಣದಲ್ಲಿ
ಪರಿಭವಾದ್ಭುತ ಶೋಕ ಪಾರವಶ್ಯದಲಿ
ಶೋಕಿಪ ದಾಸಿಗೆಂದಳು ದುಗ್ಗಳವ್ವೆ:

"ಉಳ್ಳವನಂತೆ ನಿಶ್ಚಯದಿ ನೀನೊಂದು
ಗರುವಭಾವದಿ ಕಳಿಸಿದೆ ಧಾನ್ಯವನ್ನು
ಮದಿಸಿದಾನೆಯ ಹಲ್ಲ ಹಿಡಿದು ನೋಡುತಿಹ
ಮನುಜ ಬದುಕುವನೆ ಸಾಯದೆ ತಾನು
ನೆಟ್ಟನೆ ಶರಣರ ನಿಲವ ತಾನರಸಿ
ಹಿಡಿದು ನೋಡುವುದದು ಪ್ರಾಪ್ತಿಯೆ ಹೇಳು
ಮೃಡ ಪ್ರಸನ್ನತೆಯಲಿ ಕೇಳು ಕೇಳೆನಲು
ಅಣಕಗೈದನೆ ವಿನಾ ಕೇಳಿದನೇನು
ಅಷ್ಟೇಕೆ ಗೈವ ಕಾಯಕಲಬ್ಧಿಯೆಷ್ಟು?
ಕದಲದಂತಿರುವ ಜಂಗಮಸಂಖ್ಯೆಯೆಷ್ಟು?

ಅಕ್ಕಜವೆನಿಪ ಕಾಯಕಲಬ್ಧಿ ನಿತ್ಯ-
ವೇರದು ಇಳಿಯದು ಐದು ಮಾನಗಳ
ಜಂಗಮಕೋಟಿಯ ಸಂತುಷ್ಟಿಗೈವ
ಲಿಂಗಸದರ್ಥರ ಕೊರತೆಯೆಂತಹದು?
ಖಂಡೇಂದುಧರನು ಲೋಕತ್ರಯದಲ್ಲಿ
ಮತ್ತೆಯಾ ಅಯ್ಯನ ಮೆರೆಯಿಸಬಯಸಿ
'ಕೇಳೆ'ಂದು ಪ್ರತ್ಯಕ್ಷವಾಗಿ ತಾ ನಿಲಲು
ಸಿಡಿಮಿಡಿಗೊಳದೆ ಸಂಸ್ಮಿತವಕ್ತ್ರನಾಗಿ
'ಕರ್ತರ ಕರ್ತ, ಮತ್ಕರ್ತನು ನೀನು
ವರ್ತಿಸಲಿನ್ನೊಂದು ವರವ ಬೇಡುವೆನೆ?

ಎಂದೆಂದು ನಾನೇನ ಬೇಡದ ಸಿಗ್ಗು
ನಿನಗಿರೆ, ಕೇಳುವೆ, ಹಗಲೆಂತೊ ಅಂತೆ
ರಾತ್ರಿ ಸೂಜಿಗೆ ದಾರ ಪೋಣಿಸುವಂತೆ
ನೇತ್ರಗಳಿಗೆ ದೃಷ್ಟಿಯನು ಕೊಡು'ಯೆನಲು
ವರದನು ದರಹಸವದನಾಬ್ಜನಾಗಿ-
ಯರ್ತಿಯಿಂ ಮತ್ತೊಂದು ಕಣ್ಣನು ನೀಡೆ
ಹರನಿಂದ ಪಡೆದಿದ್ದಾ ಮೇಲಿನ ಕಣ್ಣು
ಪರದೈವ ದೋರ್ದರ್ಪಹರಣಾರ್ಥಕಿರಲು
ಶಂಕರದಾಸಿಯು ನಿಶ್ಶಂಕೆಯಿಂದ
ಶಂಕರೇತರ ಸರ್ವಸಮಯಾರಿಯಾಗಿ

ನಿಟಿಲತಟಾಂಬಕೋತ್ಕಟ ಚಟುಲಾಗ್ನಿ
ಪಟುದೃಷ್ಟಿಪಾತಕೆ ಬಲುದೈವವೆಲ್ಲ

ಚಿಟಚಿಟ ಬೇಯುತ ಚಟಚಟ ಬಿರಿದು
ಪಟಪಟ ಸಿಡಿಯಲು ಕಟಕಟಾಯೆನದೆ
ದೈವದ ಹೆಸರಿಗೆ ಬೆಂಬತ್ತಿ ಹುಟ್ಟ-
ನಡಗಿಸೆ ಮತ್ತಷ್ಟು ದೈವಗಳೆಲ್ಲ
ಬಲವಾಗಿ ಶಿವಶರಣರ ಮೊರೆವೊಕ್ಕು
ಭಯದಿ ಮೊಕ್ಕಲು ದೈವಗಳನೆಲ್ಲ ಕಾಯ್ದು
ಅಧಿಕದಿ ಮೂವಿಟ್ಟಿಗಳಗೈದು ಬಳಿಯ
ಕೆಲಸಗಳನು ಮಾಡಿ ಬದುಕುವೆವೆನುತ

ಮಸಣಿಯು ಮನೆಯಮುಂದಣ ಕಸವುಡುಗೆ
ಮಾರಿಯು ಮಾಣದೆ ದಿನವು ಕೊಟ್ಟಣವ
ಭರದಲಿ ಕುಟ್ಟಲು ಪೋಲಕ ಮಠದ
ಸುತ್ತಲು ಬಿಡದೆ ಸುತ್ತುತಲಿರೆ ದೊಡ್ಡ
ಕಟ್ಟಿಗೆಗಳ ಕಾಡಿನಿಂ ಹೊತ್ತು ತರಲು
ಕಾಟಿಪಾಪನು ಪಶುಗಳ ಕಾಯುತಿರಲು
ಕಡುಭಕ್ತಿಯಿಂದ ಕಟಕದ ಮೈಲಾರ-
ನಡರಿ ಸದಾ ಕೊಡೆವಿಡಿದೊಡನಡೆಯೆ
ಸೇರಿಯಾ ಬಲದಲಿ ಚೇಟಿಕಾಟಿಮೆಯು
ಕಹಳೆಯ ಬಿಡಿದುದ್ಯತ್ಕೀರ್ತಿಯನುಲಿಯೆ

ಠಕ್ಕಿನ ಆ ಪರದೈವಗಳೆಲ್ಲ
ಸೇರಿ ಕೆಲಸಗಳಗೈಯುತ್ತೋಲೈಸ-
ಲೊಪ್ಪಿಯಷ್ಟಾದಶಯೋಗ ಪೀಠಗಳು
ತಪ್ಪದೆ ಪ್ರತಿವರ್ಷ ಕಪ್ಪವನೀಯೆ
'ಮುಕ್ಕಣ್ಣ, ನಿಮ್ಮನೆ ನಾಯಿಗ'ಳೆನುತ
ಜಕ್ಕಿಗಿಕ್ಕಿಯರೆಲ್ಲ ಮೊಕ್ಕಿ ಪೂಜಿಸಲು
ಅವರತಿಶಯ ಮಹತ್ವವ ಕೇಳುತಾಗ
ಜಗದೇಕ ಮಲ್ಲನಸಹ್ಯಭಾವದಲಿ
ಹರಿಯನಡಗಿಪ, ಬ್ರಹ್ಮಾದಿದೈವಗಳ
ಹುಟ್ಟಡಗಿಸುವ, ಚಿಲ್ಲರೆ ದೈವಗಳನು

ಮುರಿವುದು ಚೋದ್ಯವೇ ಕರಕಂಠನಿಂದ
ಮೆರೆವ ಫಾಲಾಭೀಳನೇತ್ರವ ಪಡೆದು
ಮುಕ್ಕಣ್ಣನಾಗುತ ನಿಶ್ಚಯದಿಂದ
ಚಕ್ಕನೆ ವಿಷ್ಣುಗೆ ಸಮದೃಷ್ಟಿ ನಿಂತು

ಹೆಚ್ಚೇನು ಮೆಟ್ಟದೆ ಹೋದರೆ ಸಾಕು
ಹೋಗೆಂದು ಕಲ್ಯಾಣಪುರಮಧ್ಯದಲ್ಲಿ
ಉಕ್ಕಿನ ಗೋವಿಂದಪ್ರತಿಮೆಯ ಕಂಡು
ಭಾವಿಸಿಯದರ ಮೇಲ್ಪಂಚಲೋಹಗಳ
ಹೊಯ್ಸಿಸಿ ಕಡುಸಾಂಗದಲಿ ಪ್ರತಿಷ್ಠಿಸುತ
ಬಿಡದೆಯಹರ್ನಿಶಿ ಭಜಿಸುತ್ತಲಿರಲು

ಶಂಕರದಾಸಿಯು ಅಲ್ಲಿಗೈತಂದು
ಅಂಕಕಾರರ ರೀತಿ ಹರಭಕ್ತಲಲರೆ
ಕ್ಷೋಭದಿ ಮೊಗವಾಡ ತೆರೆದು ವೀಕ್ಷಿಸಲು
ತುಂಡಾಗಿ ವಿಷ್ಣುಪ್ರತಿಮೆಯು ನುಗ್ಗಾಗೆ
ಅದರ ಮೇಲಿದ್ದ ಲೋಹಗಳೆಲ್ಲ ಕರಗಿ
ಈ ಪಾದಗಳಿಗೆರಗುವ ರೀತಿ ಹರಿದು
ಬರುವಂತೆ ವಿಷ್ಣುವನಡಗಿಸಲಿವನು
ಪರಧರ್ಮಿೀಯರು ಭಯಭ್ರಾಂತಿಯಿಂದೋಡೆ
ಕಟ್ಟುಗ್ರನಾಗಿ ಶಂಕರದಾಸಿಮಯ್ಯ–
ನಿಂತು ವರ್ತಿಸಲಾಗ ನರರೆಲ್ಲ ಹೊಗಳಿ–

ದುದ ಕೇಳಿ ನೋಡರಿಯೆಯ ಹೇಳಲೇಕೆ?
ಕಾಯಲು ಕರಕಂಠನಿಗು ಶಕ್ಯವೇನು?
ಭಕ್ತರ ಸದ್ಗೋಷ್ಠಿ ನಿಲ್ಲದಂತಿರಲು
ಭಯಭಕ್ತಿಗಳು ವರ್ಧಿಸುತ್ತವೆ ಹೊರತು
ಭಕ್ತರ ಸದ್ಗೋಷ್ಠಿ ಕುಂಠಿತಗೊಳಲು
ಭಕ್ತಿಭಯಗಳೆಲ್ಲ ನಶಿಸದಿರುವುವೆ?
ಏನಿದು ಚೋದ್ಯವೊ ಈಶನೆ ಬಲ್ಲ.
ವಿದಿತದಿಂದಲಿ ಮತ್ತೆ ಓದ ತೊಡಗಿಸೆ
ಚಟುಲಮತಿಯು ಕೂಡ ಕೆಟ್ಟಂತಾಯಿತ್ತು.
"ಇಂತೆಲ್ಲ ಹೇಳಲೇತಕೆ ಕಳಿಸೆ"ನುತ

ವಂದಿಸಿ ಕುಂದುತ ಶೋಕದಲೀರ್ವ–
ರಡಿಗಡಿಗೆರಗಿ ಸಾಷ್ಟಾಂಗದಿ ಬಂದು
"ಕಾಯಯ್ಯ ಜೀಯಿ, ಶಂಕರದಾಸಮಯ್ಯ
ದೇವ, ದೆಸೆಯು ದಿಕ್ಕು ನೀನೆಮ"ಗೆನುತ
ಮೊಕ್ಕುತ ಕರಗಳ ಮುಗಿದುದ ಕಂಡು
"ಅಕ್ಕಟಾ, ಯಾರಿವರಯ್ಯಾ ಹೋದಹರು!

ದಾಸಿದೇವಯ್ಯನವರೆ! ಶರಣಾರ್ಥಿ
ಪರಿವಾರ ನಿಮ್ಮದೆ? ನಿಮಗಿದು ತರವೆ!
ಬಿಜವಿಲ್ಲಿಗೈಯಲು ಕಾರ್ಯವೇನಿಹುದೋ?
ಪಯಣವದೆತ್ತಲೊ ಇತ್ತಲೈದುವಿರಿ

ಕರುಣಿಸಿಲ್ಲಿಗೆ ಪಾದ ಬೆಳಸಿದಿರೇನು?
ಹರಹರ, ನೀವೆಮ್ಮ ಮರೆತಿಲ್ಲವೇನು!
ಇಂತಹ ಭಯವನದಿಂತಹ ಗರ್ವ-
ವಿಂತಹ ಭಕ್ತಿಯುಂಟೇನಿತರರಿಗೆ!
ಭಾಪುರೇ ದಾಸಯ್ಯ ಬಡವರಾಧಾರ!
ಭಾಪುರೇ, ದಾಸಯ್ಯ ಭಕ್ತರಾಶ್ರಯನೆ!
ಬಂದಿಹೆಯೇನಾದರೆಮಗೆ ತಂದಿಹೆಯೊ?
ಇತ್ತೆಯ ಬದುಕನೆಮ್ಮೇಶ್ವರಯ್ಯನಿಗು
ಬಟ್ಟೆಯ ಮಾರಿದ ಧಾನ್ಯಕಣಜಗ-
ಳೇನಿಲ್ಲವೇ? ಏನ ತಾರದೆ ಬಂದೆ;

ಅತಿಶಯ ಸಂಪದವೆಲ್ಲೈದಿತಯ್ಯ?
ಮಾತುಗಳೇತಕೆ, ಬಾ ಹಾರೆ ಕೊಂಡು
ವೀಸನಾಸಗಳವು ಬಿಡುವಲ್ಲಿ ಬಿದ್ದ
ಓಸರಿಸಿದ ಧನವಿಹುದಯ್ಯಾಯಿಲ್ಲಿ
ಅಗೆಯಯ್ಯಾ"ಯೆನ್ನುತಾ ದಾಸಯ್ಯನೊಡನೆ
ಅಗೆಸಲು ಜಂಗಮಾಸ್ಥಾನದೇಶದಲಿ
ಅಕ್ಕಜವೆನಿಸುವಂತೆಲ್ಲೆಡೆ ಹೊನ್ನ
ನಾಣ್ಯಗಳವು ತೋರಲಕ್ಕಜವೊಂದಿ
ದಾಸಿಯು ದುಗ್ಗಳವ್ವೆಯು ಸಾಷ್ಟಾಂಗದಲಿ
ಪಾದಾಬ್ಜಗಳ ಮೇಲೆ ಬಿದ್ದೇಳದಿರಲು

"ನೂಲಿಗೆ ಮೊದಲು ನೀ ಕೂಲಿಯನಿತ್ತು
ಶುಲ್ಕವನಳೆದಿತ್ತು ಬಟ್ಟೆಕೊಂಡಂತೆ
ದಾನವ ಸಲಿಸದಲೆಂತು ಎನ್ನಿಂದ
ಹೋಗುವೆ"ಯೆನ್ನುತ ಶಂಭುವ ಬಡ್ಡಿ-
ಯನ್ನೀಯದಿರಲೊಂದು ವಸ್ತ್ರವನಿತ್ತು
ಪಡೆಯಯ್ಯ ಹತ್ತುಕೊಳಗ ಧಾನ್ಯವನ್ನು
ಅಟ್ಟು ತಿಂದಿರುವರ ಕೈಯಿಂದ ನೀನು
ಬೀಳಿಸಿಕೊಳ್ಳು ಇಮ್ಮಡಿಮುಮ್ಮಡಿಗಳ

ಅಲ್ಲದೆ ಬಡವ ಸಾಧುಗಳ ಕೈಯಿಂದ
ಪಡೆದಾಶೀರ್ವಾದದಿಂದೇನಹುದೊಳಿತು?
ಬಡಗುಭಕ್ತರ ಕಾಲಮೇಲೆ ಬೀಳುವರೆ?
ಉಣ್ಣಲು ಕಟ್ಟಲು ಕೊಳ್ಳಲು ಕೊಡಲು
ಎಂತಿಲ್ಲವೆನ್ನಲು ಪಾದಗಳ ಬಿಡು
ಇಲ್ಲೆನೆ ಹೋಹುದೆ ಬಡವರ ದುಃಖ
ಇಷ್ಟೆಲ್ಲ ಹೇಳಲೇತಕ್ಕೆ ಈ ಹೊಳೆವ
ಮಣ್ಣನಾದರು ಕೆಲ ಹೇರುಗಳನ್ನು
ಕೊಂಡೊಯ್ಯಿಯೆನ "ಲಿಂತು ಆಣತಿಸುವರೆ?
ತ್ರಿನಯನ, ಅತಿಗರ್ವತಿಮಿರಾಂಧನಾನು
ಅಪರಾಧಶತಸಹಸ್ರಪರೀತಕೃತ್ಯ-
ನುಪಮಾನವಿರದ ಗರ್ವೋಪೇತ ಚಿತ್ತ

ದಯದಿ ತಪ್ಪನು ತಾಳ್ದುಕಾಯಯ್ಯ"ಯೆನುತ
ಶರಣು ಬೇಡುತ್ತ ಪ್ರಶಂಸಿಸುತಿರಲು
ಸದಯಾತ್ಮನಾಗುತ ಶಂಕರದಾಸಿ
ಮುದದಲಿ ಭಕ್ತಸಮೂಹ ಕೀರ್ತಿಸಲು
ಈರ್ವರ ಮೇಲೆಬ್ಬಿಸುತ್ತ ಕಾರುಣ್ಯ
ಶರಧಿಯಲದ್ದಿ ಪ್ರಸಾದಿಸಲಾಗ
ಮಿಕ್ಕೆಂದಿಗಿಂತಲು ಅತಿಶಯವೆನಿಸೆ
ತವನಿಧಿ ಜೇಡರದಾಸಗಲರಿತು
ಅದರಿಂದ, ಗರ್ವಿಸುತಿರಲು ಸದ್ಭಕ್ತಿ
ನಿರ್ವಾಹವೊಂದಲು ಬರುವುದೆ ಬಸವ

## ನಿಂಬವ್ವೆಯ ಕಥೆ

"ಇಷ್ಟೇ ಅಲ್ಲದೆ, ಕೇಳು, ನಿಂಬವ್ವೆಯೆಂಬ
ಸದಮಲಸತ್ಕ್ರಿಯಾಸ್ಪದ ಭಕ್ತಿನಿರತೆ-
ಯಕುಟಿಲ ವೀರವ್ರತಾಚಾರಯುಕ್ತೆ
ಪ್ರಕಟಜಂಗಮಲಿಂಗ ಪರತಂತ್ರ ಚಿತ್ತೆ
ಸಂಸಾರರಹಿತೆ ನಿಷ್ಕಳ ಮಹಿಮಾವ-
ತಂಸೆ ಸಜ್ಜನ ಸಮುದ್ಯದ್ಗುಣೋಪೇತೆ
ಹರಭಕ್ತರಾಲಯಕರ್ಘ್ಯಪಣ್ಯಗಳ
ಕರಮರ್ಥಿಯಲಿ ಹೊತ್ತು ಕಾಯಕವಲರೆ

ಮಗನು ಭಕ್ತರ ಮನೆಗಳ ಗೋವ ಕಾವ
ಸದಮಲ ಕಾಯಕೋದ್ಯೋಗಲಬ್ಧಿಯಲಿ

ಜಂಗಮಾಸಕ್ತಿಲಸದ್ಭಕ್ತಿಯುಕ್ತಿ-
ಯಿಂದಲಿ ದಿನಗಳ ಕಳೆಯುತ್ತಲಿರಲು

## ಸಿರಿಯಾಳನ ಕಥೆ

ಸಂಚಿತಮತಿಸಿರಿಯಾಳನೆಂಬುವನು
ಕಂಚಿಯೊಳಗೆ ನಿತ್ಯವೈದು ಜಂಗಮಕೆ
ಇಷ್ಟಾನ್ನ ಪಾನಾದಿಯೀಪ್ಸಿತಾರ್ಥಗಳ
ತುಷ್ಟಿಯಿಂದೀಯುವ ಶಿಷ್ಟವ್ರತದಲಿ
ಚರಿಸುತ್ತಲಿರಲು ಸರ್ವೇಶ್ವರನೊಮ್ಮೆ
ಸಿರಿಯಾಳನಾ ಭಕ್ತಿಯಾಳವನರಿಯೆ
ಕೃತಕ ತಪೋಧನವೇಷದಿ ಬರಲು
ಹಿತಜಂಗಮಾರ್ಥದಲ್ಯೆತಂದು ಸೆಟ್ಟಿ

ಮಸ್ತಕವಿನ್ಯಸ್ತಹಸ್ತದಿ ಮುನಿಯ
ಪ್ರಸ್ತುತಿಸುತ ಪದಾಬ್ಜಂಗಳಿಗೆರಗಿ
"ಸ್ವಾಮಿ ಬಿಜಯಗೈಯಿರೈ, ಮಹಾಪುರುಷ,
ನಿಮ್ಮ ಮನದ ನಿತ್ಯ ನೇಮವ ಸಲಿಸಿ-"
ರೆಂದು ಬಿನ್ನವಿಸಲು ಆ ತಪೋಧನನು
"ಅನಘ, ಎಮ್ಮಿಚ್ಛೆಯ ಪೂರೈಸೆ ಸಾಕು
ಇದಕಿಂತ ಹಿರಿಸುಖವಾವುದು"ಯೆನುತ
ಸಂತಸವೊಂದುತ ಸದಯನಾಗಿ ಸಿರಿ-
ಯಾಳಗೆ ಕರುಣಾಭಿಷೇಕವಗೈದು
ನರಮಾಂಸವನ್ನೊಂದುಪಾಯದಿ ಕೇಳೆ

"ಸರ್ವಜ್ಞ, ನಿಮ್ಮ ಮನೋಜ್ಞವಾಗಿರುವ
ಸರ್ವಲಕ್ಷಣಗುಣಸಂಪೂರ್ಣನೊಬ್ಬ
ವರಪುತ್ರನಿರುವನು, ನರಮಾಂಸಕಾಗಿ
ನೆರೆ ಮನೆಯಲಿ ಬೇಡಲೇಕೆ ಹೋಗುವುದು?
ನಿಮ್ಮ ಹಿರಿಯ ವ್ರತೋದ್ಯಾಪನೆಯಿಂದು
ಅರ್ಥಿಯಿಂ ಸಲಿಸಿರಿ ಕ್ಷಣದೊಳಗೆ"ನುತ
ಅಡಿಗೆ ಬೀಳುತ ಸಿರಿಯಾಳ ತಪಸಿಯ-
ನೊಪ್ಪಿಸಿ ಸದನಕೆ ಕರೆತಂದು ತನ್ನ

ಸಾಧ್ವಿಗೊಯ್ಯನೆಯೆ ತತ್ಕಾರ್ಯಧಾರೆಯನು
ತಿಳಿಸಲು "ಹೆದರಲೇತಕೆ ನೀವು"ಯೆಂದು

ಸಂಗಳವ್ವೆಯು ಆಗಲೋದುವ ಮಗನ
ಮಂಗಳವಲರೆ ತತ್ಕ್ಷಣ ಕರೆತಂದು
"ನಮ್ಮನೆಯಲಿ ಹಬ್ಬವೀದಿನ"ವೆನುತ
ನೋಡುತ್ತ ಮುಕ್ತಿವಿಲೋಲ ಸಿರಾಳ
ಲೀಲೆಯಿಂದಲಿ ತಾಯಿತಂದೆಯರುಗಳು
ತುಂಬಿದ ಮನದಿಂದ ನಿಹತಿಯ ತಿಳಿಸಿ
ಖಂಡಿಸಿ ನಾನಾಪ್ರಕಾರದಲ್ಲವನ
ಶಾಕವ ಸೇರಿಸಿ ಜನರರಿಯದೊಲು
ಶ್ರೀಕಂಠಮೂರ್ತಿಯ ಕರೆತಂದು ಭರದಿ

ಶ್ರೀಪಾದಯುಗಳಾಭಿಷೇಕವ ಮಾಡಿ
ಆ ಪಾದಜಲವನತ್ಯರ್ಥಿಯಿಂ ಕುಡಿದು
ಸಂಚಿತೋನ್ನತಸುಖಾಸನದಿ ಕುಳ್ಳಿರಿಸಿ
ಭಕ್ತಿಯಿಂದರ್ಚಿಸಿ ಪೂಜಿಸಿ ಬಡಿಸಿ-
ಯಂಗನೆ ಸೆಟ್ಟಿಯು ಸಾಷ್ಟಾಂಗವೆರಗೆ
ಹೊಂಗಿ ತಾಪಸಿ ಶಾಕಗಳ ಬೇರೆಬೇರೆ
ಪರಿಕಿಸಿ ನೋಡಿಯೇರ್ಪಡೆ ಶಿರೋಮಾಂಸ-
ವನ್ನರಸೆಲ್ಲಿಯು ಕಾಣದಿಂತೆಂದ:
"ತಲೆಯ ಕಂಡಾದರೂ ತನಯನ ಮೇಲೆ
ಪ್ರೀತಿಯ ತೋರಲು ಬಹುದೆಂದು ಬಗೆದು

ತಲೆಯ ಬೈಚಿಟ್ಟಿರಿ, ಸರಿಯಯ್ಯ, ಮಗನ
ತಲೆಯ ಕೊಳ್ಳುತಲಿನ್ನು ಧನ್ಯರಾಗುವಿರ
ಎಂತಹುದಿಲ್ಲ, ಶಿರೋಮಾಂಸವಿಂತು
ನೇಮಕ್ಕೆ ಸಲ್ಲುವುದೆ? ಆಗಮೋಕ್ತಿಯದು
ತಾನು 'ಸರ್ವಸ್ಯ ಗಾತ್ರಸ್ಯ ಶಿರಃ ಪ್ರ-
ಧಾನಂ' ಎನ್ನುವ ನುಡಿ ನೆರವೇರದಾಯ್ತು"
ಎನ್ನಲು ಸತಿಪತಿಯಿರಿಬ್ಬರು ಹೆದರಿ
"ಅನಘ, ಮಹಾತ್ಮ, ಇಂತಾಜ್ಞೆಯೀಯುವರೆ
ಉಪಮಿಸೆ ಕೇಶದುಷ್ಟಪರೀತಶಾಕ-
ಮುಪಹತವೆನಬಹುದೆನ್ನುತಲಂಜಿ

ತೆಗೆದಿಡುತೀಗಲೆ ಚಂದನಂಗನೆಯು
ಚೆಚ್ಚರ ಪಾಕವ ಗೈದಿಹ"ಳೆನುತ
ಅಂತೆಗೈದಾ ಶಿರೋಮಾಂಸವರ್ಪಿಸಲು
ಕರಕಂಠಮೂರ್ತಿಯು ಕರುಣದಿ ನೋಡಿ
"ಇಳೆಯಲೆಷ್ಟನ್ನದಾತರು ನಿನ್ನ ಹೋಲ್ವ-
ರಿಹರಯ್ಯ! ಇಷ್ಟೆಲ್ಲ ಕಡುಸಾಂಗವಾಯ್ತು
ಎಂದೆಂದು ಪ್ರತಿಯಿಲ್ಲದಿರುವ ಅಭೀಷ್ಟ
ದಾನವಮಾಡಿದೆಯಿದಕೆ ತಕ್ಕಂತೆ
ಈ ಪಕ್ಕದಲಿ ನಾವು ಆ ಪಕ್ಕ ನೀನು
ದೇವತಾರ್ಚನೆಗಳಗೈದು ಸಪಂಕ್ತಿ-

ಯಲಿ ಕಡುರೀತಿಯಿಂ ಲಿಂಗಪ್ರಸಾದ
ಸೇವನೆಯಿರದಿರಲೊಪ್ಪೆನು ನಾನು,
ಕಣ್ಣು ಮಣ್ಣುಗಳಿನಾಕಾಂಕ್ಷೆಯಿದೇನು
ಕೊಂಡೆವೊ ತಿಂದೆವೊ ಮಗನ ಮಾಂಸವನು
ಇಚ್ಛೆಗೈಯಲು ಮುನ್ನ ನೀನಿತ್ತ ಕ್ಷಣವೆ
ಇಟ್ಟುಕೊ ನೀನೆ ನಾ ಹೋಗುವೆನಿನ್ನು"
ಎನ್ನಲು ಸೆಟ್ಟಿ ಭಯಭ್ರಾಂತಿಯಿಂದ
ಸತಿಯ ನೋಡಲು "ಇನ್ನು ಅನುಮಾನವೇಕೆ?
ಬನ್ನಿರೆ"ನ್ನುತ ಲಿಂಗಾರ್ಚನೆಯನುಗೈಸಿ
ಧಾರಾಳದಲಿ ಬಡಿಸಲು ತಪೋಧನನು

"ಅತಿಥಿಪೂಜೆಯ ಮಾಡುವವಸರದಲ್ಲಿ
ಸುತರೊಡನೆಯುದಾರದುತ್ಸುಕಲೀಲೆ-
ಯಿಂದ ಪ್ರೀತಿಯಲುಂಬರುತ್ತಮ ಪುರುಷ-
ರಿಂತಿರೆ ನಿನಗೆಂತು ಕೈಯಾಡುತಿಹುದು
ಈಗೆಲ್ಲಿ ಕಾಣದಿಹನು ನಿನ್ನ ಮಗನು
ಹೇಳಲಿಲ್ಲವೆ ಆಗ ಸಿರಿಯಾಳ ನಿನಗೆ
ಪುತ್ರರಿರದ ಮನೆಯಲ್ಲೆಮಗೆಂದು
ಅನ್ನದಾನವ ಕೊಳ್ಳವುದು ಸರಿಯೇನು?
ಶ್ರುತಿ'ಯಪುತ್ರಸ್ಯ ಗತಿರ್ನಾಸ್ತಿ'ಯೆನಲು
ಗತಿಹೀನರ ಮನೆಯಲ್ಲುಂಬರೆ ಸಂಯ-

ಮಿಗಳದರಿಂದಲಿ ಮಗನಿರೆ ಕರೆಸು
ಇಲ್ಲದಿರಲು ಒಲ್ಲೆವಿದು ಖಂಡಿತ"ವೆನೆ

ಭಯದೇಹಿಯಾಗುತ ಜಯ್ಯನೆ ಮೊಕ್ಕಿ
"ಅಕಳಂಕ, ಆಗಲೆಂದಿರಿ ನೀವು, ನಾನು
ಕೇಳ್ದೆನು, ಪುತ್ರನಿಹನು, ಅವನೋದು-
ತ್ತಿರುವನೊ, ಆಡುತ್ತಲಿರುವನೊ, ಬಳಿಕ
ತಾ ಬಂದು ನಿಮ್ಮ ಪ್ರಸಾದವನವನು
ಕೊಳುವನು ನೀವು ಭೋಜನವನಾಚರಿಸಿ
ರಕ್ಷಿಸಿರಯ್ಯ, ಓಗರಶಾಕಗಳವು
ಅಕ್ಷಯಾತ್ಮಕ, ತಣ್ಣಗಾಗುವ ಮುನ್ನ"

ಎನುತ ಮೊಕ್ಕಲು ಮುನಿ ಸತಿಯೆಡೆ ನೋಡಿ
"ನಾವು ಹೇಳಿದೊಲು ಕರೆಯಬಾರದೇನು?
ತಾಯಿಯು ಕರೆಯೆ ಬಾರದ ಮಗನಿಹನೆ?
ಸರಿಯಾಗಿ ನಾಲ್ದಿಕ್ಕುಗಳ ಮುಂದೆ ನಿಂತು
ಸ್ವರವೆತ್ತಿ ಕರೆಯವ್ವ ನಮಗೆ ಕೇಳ್ವಂತೆ
ಅಲರುತ್ತ ಬಾರದಂತಿರುವನೆ ಹಾಗೆ?"
ಎನ್ನಲು "ಮರುಮಾತನೇಕೀಯಬೇಕು"
ಎಂದು ಬರುತ ಪೂರ್ವಕಭಿಮುಖ ನಿಂದು
ಜೋರಾಗಿ ತಾಪಸಿ ಹೇಳಿದ ರೀತಿ
ಸ್ವರವೆತ್ತಿ ಸುತನ ಕರೆಯತೊಡಗಿದಳು:

"ಪೂರ್ವಜನ್ಮಾರ್ಜಿತಭೂರಿಕರ್ಮಗಳ-
ಗುರ್ವಣಗೊಳಿಸುವ ಮಗನೆ, ಬಾರಯ್ಯ!
ದಕ್ಷಿಣಾಧೀಶನ ದರ್ಪವಡಗಿಪ
ದಕ್ಷತೆ ಹೊಂದಿದಾತ್ಮಜನೆ, ಬಾರಯ್ಯ!
ವಿರಸಪಶ್ಚಾಜ್ಜನ್ಮಮರಣದುಃಖಗಳ
ಪರಿಹರಿಸಲು ಸಾಕು ಮಗನೆ, ಬಾರಯ್ಯ!
ಉತ್ತರವೀಯಲುದಾತ್ತ ಯೋಗೀಂದ್ರ
ಚಿತ್ತಕೆ ಬಂದಿಹ ಶಿಶುವೆ, ಬಾರಯ್ಯ!
ಅಲರುವಾಕೋಪಭೋಗಾತೀತಪದವ-
ದಳವಡಲಿಂದು ಎನ್ನಯ್ಯ, ಬಾರಯ್ಯ!

ದಂಡಧರೋದ್ದಂಡ ದಂಡಪ್ರಶಸ್ತಿ
ಖಂಡಿಸಬಲ್ಲ ಸುಪುತ್ರ, ಬಾರಣ್ಣ!
ಹರಿಯದ ವ್ಯಾಮೋಹಪಾಶಬಂಧಗಳು
ಹರಿದರೆ ಸಾಕೆನ್ನ ಕಂದ, ಬಾರಣ್ಣ!

ದ್ರವಿಣಾದಿಕೇಷಣತ್ರಯ ವಿಜೃಂಭಣವು
ಸುತ್ತುವರಿಯದಂತೆನ್ನಯ್ಯ, ಬಾರಣ್ಣ!
ಸುರರಾಜವಿನುತ ವಿಶ್ರುತತಪೋವೇಷಿ
ವರದನಾಗಿಹ ಮುದವೆಸೆಯೆ, ಬಾರಣ್ಣ!
ಅಂತಕಾಂತಕಮೂರ್ತಿಯಹ ತವರಾಜ
ಸಂತಸಪಡಲೆನ್ನ ಸ್ವಾಮಿ, ಬಾರಣ್ಣ!

ಘೋರನಿಸ್ಸಾರ ಸಂಸಾರಶರಧಿಯ
ಪಾರಮುಟ್ಟಿಸುವ ಪಾಪುವೆ, ನೀ ಬಾರಣ್ಣ!
ಅಂಚತಾಗಣ್ಯಪುಣ್ಯಪ್ರಾಪ್ತಿವಡೆದ
ಕಾಂಚೀವಿಲಾಸದಗ್ರಜನೆ, ಬಾರಣ್ಣ!
ದಿವಿಜಕನ್ಯೆಯರೊಡಮುಕ್ತಿಯಾಗಸದಿ
ಕಾದಿರುವಳು ಭಕ್ತಿಕಾಂತನೆ, ಬಾರ!
ಹರಹಾದ ನಿಮ್ಮಯ್ಯನಾ ದಕ್ಷಿಣಭುಜ
ಬಿಡದಲದುರುತಿದೆಯಣ್ಣ, ಬಾರಣ್ಣ!
ಭಾನುವಾಗಲೆ ಪಡುವಲಿಗೆ ಬಾಗಿದನು
ಶ್ರೀನಿಲಯನೆ, ಎನ್ನ ಸಿರಿಯಾಳ ಬಾರೈ

ಸ್ವಾದುವಾರಿಗುವರ್ಥೇಶನಸನ್ನಿಧಿ ಪ್ರ-
ಸಾದವ ಕೊಳ್ಳಲೆನ್ನಣುಗನೆ, ಬಾರೈ!"
ಎನ್ನುತ ನಾಲ್ದೆಸೆಗಳಲಡಿಗಡಿಗೆ
ತನಯನ ಕರೆಯುವ ಶಬ್ದಗಳೊಳಗೆ
ಜನಿಸಿ ದಿಕ್ಕುಗಳ ಸಂಜ್ಞೆಗಳವು ತೋರೆ
ವನಿತಾಲಲಾಮೆಯು ಕರೆಯುತ್ತಲಿರಲು
ಕುಂಡಲಗಳಲುಗೆ ಚಂಡಿಕೆ ತೂಗೆ
ಒಡವೆಯೊಲೆಯೆ ಸೌಮ್ಯಗಂಟೆಗಳುಲಿಯೆ
ಗೊಂಡೆಗಳೋಲಾಡೆ ಭಾವಗಳಾಡೆ
ವಿಧಿಯು ತಾ ಬೆದರಲು ಹರ್ಷವರ್ಧಿಸಲು

ಅಂದುಗೆ ಮೊಳಗೆ ಮೋಕ್ಷಾಂಗನೆ ಬಳಿಗೆ
ಸಂದೇಹವುಡುಗೆಯಾಶ್ಚರ್ಯಕೆ ತೊಡಗೆ
ನೋಳ್ಪರು ಕೀರ್ತಿಸೆ ಸುರರು ಶಂಕಿಸಲು
ತಾಪಸಿ ವೀಕ್ಷಿಸೆ ತಂದೆ ಮೈಯುಬ್ಬೆ
ತಾಯಿಯಪ್ಪಲು ಚಾಚೆ ತ್ವರಿತದಿ ಬಾಚೆ
ಮೂಲೋಕ ಕಾಣಲು; ಪ್ರೀತಿ ತುಳುಕಲು

ಹರಿತಂದ ಮಗ ತಾನು; ಆಗಲೀಶ್ವರನು
ಕರಕಂಠನಜನುಮಾಕಾಂತನುಗ್ರಾಕ್ಷ-
ನಕ್ಷರನಾಸಿರಿಯಳನ ಕಟ್ಟೆದುರು
ಆಕ್ಷಣದಲ್ಲಿ ಪ್ರತ್ಯಕ್ಷದಿ ನಿಲಲು

ಅದಕಂಡು ಸಿರಿಯಾಳ ವನಿತೆಯು ಸುತನು
ಧರೆಯಲಿ ದೀರ್ಘಸಾಷ್ಟಾಂದಿ ಮೊಕ್ಕಿ
ಕನಸಕಂಡೇಳುವ ರೀತಿಯದ್ಭುತದ
ಶೋಭೆಗೆ ಹರ್ಷಿಸಿ ಕೀರ್ತನಗೈಯೆ
"ಶ್ರೀಶ ವಾಣೀಶ ಸುರೇಶ ಸನ್ಮುನಿಗ-
ಣೇಶ ದಿಶಾಧೀಶರಧಿಕವೋಲೈಸ
ಲಾ ರುದ್ರಗಣಗಳು ಆ ಪುರಾತನರು
ವೀರಭದ್ರಾದಿಗಳೆಲ್ಲರೋಲೈಸೆ
ಸದ್ಭಕ್ತರತುಲಿತೋತ್ಸವಲೀಲೆಯಿಂದ-
ಲದ್ಭುತಾಕ್ರಾಂತಾತ್ಮರಾಗುತ ಹೊಗಳ-

ಲಲರಿ ಚಂದನೆಯಂಗನಾಪ್ತವರ್ಗವನು
ಅಲರುವಂಗನೆಯನು ತತ್ಸಖಿಯರನು
ಸಂಚಿತಮತಿ ಸಿರಿಯಾಳ ಸೀರಾಳ
ಕಂಚಿಯ ಏಳುಕೇರಿಯ ಕೈಲಾಸಕ್ಕೆ
ಪ್ರವಿಮಲಕನಕದಿವ್ಯವಿಮಾನಪಂಕ್ತಿ
ಗಗನದಿ ಶೋಭಿಸಲಾ ದೇವದೇವ-
ನೊಡನೊಯ್ದು, ಕೈಲಾಸದಲಿ ಸಿರಿಯಾಳ-
ನನುಪಮಪ್ರಮಥಗಣಸ್ಥಾನದಲ್ಲಿ
ಭವನನು ಪ್ರಮಥರ ಹರ್ಷದಿ ನೋಡಿ
ಭುವಿಯಲಿ ತಾ ಹೆತ್ತ ಮಗನನು ನೋಡಿ

"ಇಳೆಯ ಪುತ್ರನ ಕೊಂದು ಮೃಡನಿಂದ ಮತ್ತೆ
ಪಡೆದು ಕೈಲಾಸವ ನೆರೆಸೂರೆಗೊಂಡ
ಇಂಥವನೆಲ್ಲಿದ್ದನಯ್ಯಯೀ ಮೊದಲು?
ಎಲ್ಲಾದರಿಹನೇನು ನನ್ನಂಥ ಭಕ್ತ-
ನೇನಾಗದೆನಗೆಂ"ದು ಮನದಲಿ ಕೊಬ್ಬಿ
ತಾನಹಂಕರಿಸುತ ಭಾವಿಸಲೊಡನೆ
ಕಿರುನಗೆ ನಗುತಲಿ ಶಿವನದನರಿತು
'ಚಿರುತೊಂಡೆ ಬಾರೆ'ಂದು ಕೈಯನು ಹಿಡಿದು

ಈ ಮಹೀತಳದ ಮೇಗಡೆ ಬರುತಾಗ
ನಿಂಬವ್ವೆಯಿದ್ದ ಜಾಗದಲಿ ನಿಂದಿರಲು

**ನಿಂಬವ್ವೆಯ ಕಥೆ**

ಆ ಸತಿ ಭಯಗೊಂಡು ಸಂಭ್ರಮದಿಂದ-
ಲಡಿಗಳಿಗೆರಗಿ ಪಾದಾಬ್ಜವ ತೊಳೆದು
ಸತಿಯು ಪ್ರಚ್ಛನ್ನಲಿಂಗದ ಮೂರ್ತಿಗಳಿಗೆ
ಸಾಂಗೋಚಿತಕ್ರಿಯಾಭ್ಯರ್ಚನೆಗೈದು
ಪಂಚಭಕ್ಷ್ಯಗಳನು ಪಾಯಸಾನ್ನಾದಿ-
ಗಳನಂಚಿತಪ್ರೀತಿಯಿಂದಲರ್ಪಿಸಲು
ಭುವಿಪಥಶ್ರಾಂತರ ತೆರದಿಯಾ ಸೆಟ್ಟಿ
ಶಿವರು ತಾವೆಡೆ ನಿದ್ರೆಗೈಯುತ್ತಲಿರಲು
ನಿಮ್ಮವ್ವೆಯರ್ಘ್ಯಪಣ್ಯವ ತರಲೆಯ್ದೆ
ಭರದಲಿ ಆಕಳ ಕಾಯ್ವ ಬಾಲಕನು

ದಣಿದು ಹಸಿದು ಬಂದು 'ಅಮ್ಮಮ್ಮ'ಯೆನುತ
ಕದವ ಸರ್‍ರನೆ ನೂಕಿ ತಾಯಿಯಿಲ್ಲದಿರ-
ಲತ್ತಿತ್ತ ಪರಿಕಿಸಿಯೊಂದು ಹೂರಿಗೆಯ-
ಕುಟಿಲಾತ್ಮದಿಂದೆತ್ತಿಕೊಂಡು ಭಕ್ಷಿಸಲು
ಅಷ್ಟರಲ್ಲಿಯೆ ನಿಮ್ಮವ್ವೆಯು ತಾನು ಬಂದು
ನೋಡಿ 'ಛೀ ನಾಯಿ'ಯೆಂದು ಮನೆಯ ಹೊಕ್ಕು
"ಹುಡುಗ ಮೈಲಿಗೆಗೈದ ಮೃಡನೋಗರಗಳ
ತುಡುಗಲಿ ತಿಂದ ಶಿವದ್ರೋಹಿ"ಯೆನುತ
ಹಸಿಸೌದೆಯಲಿ ತಲೆಯೊಡೆವಂತೆ ಹೊಡೆದು
ಹೆಣವನು ದರದರನೆಳೆದು ಹಾಕಿದಳು

ಎನಲೇನು, ಪುತ್ರಮೋಹವು ಚೀಮೆಯಷ್ಟು
ಇರದೆ ಮಗನ ಸಾವನಾರರಿಯದೊಲು
ಗಾಡಿಯೊಳಗೆ ಹಾಕಿ ಹುಲ್ಲಮೇಲ್ಮುಚ್ಚಿ
ಸಂತಸ ಮನದಲಿ ತುಳುಕಾಡೆ ಮತ್ತೆ
ಪಾಕಯತ್ನವಗೈಯೆ, ಬಾಲನ ಸಾವ-
ನೇಕಾಂತದಲಿ ಶಿವ ಹೇಳಬೇಕೆಂದು
"ಚಿರುತೊಂಡ, ಕಂಡೆಯ ಚಿತ್ರದಿಂದೀಕೆ
ತರುವಲಿ ಹಸಿವನು ಸಹಿಸಲಾರೆದೆಯೆ

ಕ್ರಮಬಿಟ್ಟು ಹೂರಿಗೆಯೊಂದನು ಕೊಂಡು
ತಿಂದನೊ ತಿನ್ನನೊ, ಸುದತಿಯು ನೋಡಿ

'ಪಾಕವೆಲ್ಲವ ವೃಥಾಪಾಕವಗೈದ–
ನೀ ನಾಯಿ ದ್ರೋಹಿಯೇಕಿವನೆನಗೆ'ನುತ
ಶೋಕದಿ ಹಿಡಿದು ನಿಜಾತ್ಮನ ಕೊಂದು
ದರದರನೆಳೆಯುತೀಯಡೆಗೆ ಹಾಕಿರುವ–
ಳಿದೊ ನೋಡು" ಎನುತ ಪಾದಾಂಗುಷ್ಠದಿಂದ
ಕವಿದಿದ್ದ ಹುಲ್ಲನೆಲ್ಲವ ನೂಕಲೊಡನೆ
ನೋಡಿ ಶಿರಃಕಂಪವಾಚರಿಸುತ್ತ–
ಲಾ ಚಿರುತೊಂಡನತ್ಯಾಶ್ಚರ್ಯಗೊಂಡ–
ನಂಗನೆ ಪಾಕಪ್ರಯತ್ನಾಂತರದಲಿ
ಜಂಗಮರಿಗೆ ಮೈಯಜಳಕವಗೈಸಿ–

ಯತುಳಲಿಂಗೋಪಚರ್ಯೆಗಳ ಮಾಡಿಸುತ
ಸತಿಯು ಬಡ್ಡಿಸುತಿರುವವಸರದಲ್ಲಿ
ವನಿತೆ ಪುತ್ರನ ಕೊಂದುದರಿಯದೆಂಬಂತೆ
ಅಂತಕಾಂತಕ ಮೂರ್ತಿಯಾಗಲಿಂತೆಂದ:
"ವನಿತೆ, ನಿನ್ನಯ ಮಗನೇನು, ಈ ಮುನ್ನ
ಬಹಳ ಹಸಿವೆಯಿಂದ ನಿನ್ನ ಕೂಗಿದನು
ಈಗೆಲ್ಲಿ ಹೋಗಿರುವನೊ? ಹೇಗಿರುವನೊ?
ಅಕ್ಕಟಾ, ಬಳಲಿದನಲ್ಲ ಬಾಲಕನು
ಕರುಣೆಯಿಲ್ಲದ ರೀತಿ, ಕಾಂತೆಯೆ, ಇಹರೆ?
ಹರಹರ, ಕೈಯಾಡದಾರೋಗಿಸಲ್ಕೆ!

ಸಾಕಲಿಲ್ಲವೆ ಹೆತ್ತು ಮಕ್ಕಳ ಮುನ್ನ
ಸಂತಸವಹುದೇನು ಮನೆಯಲಿ ಹೆಚ್ಚು–
ಗಾರಿಕೆ ದಿನ; ಎಂತಹವರಾದರು ಶಿಶು–
ಗಳಿರಲು ತಾವೆ ಕೈಕೊಂಬರೆ ಹೀಗೆ?
ಕನಿಕರವಿನಿತನ್ನು ಮನದಿ ಪಡಿಯದೆ
ವನಿತೆ, ಏತಕೆಮಗೆ ಬಡಿಸಿದೆಯವ್ವ !
ಹಸುಮಕ್ಕಳಿರಲಿದು ಸರಿಯಲ್ಲವಮ್ಮ,
ಸುಮ್ಮನೆ ಮಗನನು ಅತ್ತಿತ್ತ ಕೂಗು!"
ಎನ್ನಲು "ಅಹುದಹುದಯ್ಯ ಹೆಣ್ಣೇಕೆ–
ಯೆಂದು ನೋಡಿದೆಯಯ್ಯ! ನಿನ್ನಯ ಮಾಯೆ–

ಯರಿತಿಹೆನರಿತಿಹೆ ನಾ ಮೂಢೆಯಲ್ಲ
ಕರಕಂಠ, ಕಥೆಗಳನೇಕೆ ಹೆಣೆಯುವೆ
ಎನ್ನನು ಸಿರಿಯಾಳನೆಂದು ಬಗೆದೆಯ?
ಬಿಡೆನಾರೋಗಿಸದಲೆ ನೀವು ಹೋಗದಿರಿ
ಕ್ರೂರಿಯಾಗುತಲಜ್ಞೆಯಾಗೆನು ತಾನು
ಕಾಮಿ, ನೀನರಿಯೆಯ ಸಂಸಾರಕೊಲಿಯೆ
ಕಾಮಿಸಿ ಮಗುವ ಕೊಲ್ಲುತ ಮತ್ತೆ ಕರೆಯೆ;
ಕಾಮಾರಿ, ನೀನಿವ ಕೈಲಾಸವೊಲ್ಲೆ
ತಾ ದ್ರೋಹವನು ಗೈದು ಹೋದನು ಕೆಟ್ಟು;
ನಾನಾಗಿಯಾ ದ್ರೋಹಿಯನ್ನು ಕೂಡುವೆನೆ?"

ಎನೆ ಸಿರಿಯಾಳ ಕೇಳುತ ಶೋಕವನಧಿ-
ಯಲ್ಲಿ ಮುಳುಗಿ ತಲೆಬಾಗಿ ಲಜ್ಜಿಸುತ
ಕುಗ್ಗುತ ನಿಶ್ಚೇಷ್ಟಿತಾತ್ಮನಾಗಿರಲು
ಸತಿಯ ನಿರ್ಮಲ ಭಕ್ತಿಭಾವಕೆ ಮೆಚ್ಚಿ-
ಯೆಲ್ಲಕು ಮುನ್ನ ನಿಜಾಕೃತಿ ತಳೆಯು-
ತಂತಕಾಂತಕನು ಪುತ್ಯಕ್ಷದಿ ನಿಲಲು
"ಓಹೋ, ಇದೇನಯ್ಯಾ, ಉಚಿತವೆ ನಿನಗೆ?
ಆಹಾ, ಮಹಾತ್ಮ, ಮಹಾತ್ಮರ ಗುಣವೆ?
ಹಸಿವಿಂದ ಮೊಲೆವಾಲಿಗರ್ಥಿಸಿಯಳುವ
ಮಗುವಿಗೆ ಹಿಟ್ಟಿನ ಕರುಣೆಯನಿತ್ತು

ಮೊಲೆಯನು ಮರೆಯಿಸಿ ಹೋಗುವ ರೀತಿ
ಬೇಡಯ್ಯ, ನಿಮಗೆ ಸಂದೇಹವೆ ಬೇಡ.
ಒಡಲಿಗೆ ಪ್ರಾಣವು ಬಡಲು ಪ್ರಾಣಕ್ಕೆ
ಒಡಬಟ್ಟಿರುವ ರಿತಿಯುಭಯನಾಮಗಳು
ಒಪ್ಪುವ ಲಿಂಗಜಂಗಮಮೂರ್ತಿಯುಳಿದು
ಭ್ರಮೆಗೆ ಹೇತುಗಳಹ ಭಾವವ ತಳೆಯೆ
ನಗರೆ ನಿನ್ನನು ನನ್ನ ಕಾಣುವ ಭಕ್ತ-
ರೀ ಮಾಯೆಗಲಿಗೊಳಗಾಗುವೆನೇನು?
ಈ ಬಾಹುರೂಪುಗಳೇತಕೆ? ನಿನ್ನ
ಚಾಂಚಲ್ಯದಿಂದಲಿ ಕಂಡೆನೆ ಮುನ್ನ?

ಮುಕ್ಕಣ್ಣನಾಗುತ ಮೂರುಕಣ್ಣುಗಳು
ಅಕ್ಕಜವಾಗಿರಲವು ಇಲ್ಲದಿರಲಲು

ಹರರೂಪದಿಂದಿರೆ ನರರೂಪವಿರಲು
ಗುರುರೂಪರಲ್ಲವೆ ಗುರುಸನ್ನಿಹಿತರು
ಕರಕಂಠ, ಇಂತೇಕೆ ಕಳವಳಪಡುವೆ?
ಭಯಪಡದಿರು ನೀನು, ಬೇರೆಯದೆಲ್ಲ
ಹೆಚ್ಚೇಕೆ? ಗುಂಡಯ್ಯ ಪ್ರಾಯವ ಪಡೆಯು-
ವಾಗಾವ ವಿಷಕಂಠದಿಂ ಹೋದೆ ಹೇಳು?
ಭೋಗಯ್ಯನ ಮನೆಗೆ ಹೋದ ಆ ದಿವಸ-
ವಾವ ಗೌರಿಯ ಜೊತೆ ಹೋಗಿದ್ದೆ ಹೇಳು?

ದಾಸಯ್ಯನಿಂ ವಸ್ತ್ರದಾನವ ಕೊಳಲು
ಯಾವ ಸೋಮಕಳೆಯ ಧರಿಸಿ ಹೋಗಿದ್ದೆ?
ಮಾನಕಂಜಾರನ ಮಂದಿರಕಾವ
ನಂದಿಯನೇರಿ ನೀ ಹೋಗಿದ್ದೆ ಹೇಳು?
ಈ ಚಿರುತೊಂಡನ ಮನೆಗೆ ಹೋದಾಗ
ಯಾವ ಚತುರ್ಭುಜದೊಡನೆ ಹೋಗಿದ್ದೆ?
ಅದರಿಂದ ನಿನ್ನ ಚಮತ್ಕಾರಗಳನು
ನಿನ್ನ ವೇಷವನೆಲ್ಲ ನಾನರಿತಿಹೆನು.
ಎಂತಾದರಿರು ನೀನೀಗಾರೋಗಿಸದಿರ-
ಲಿಟ್ಟೆನು ನಿನ್ನಾಣೆ ತಗ್ಗುವೆನೇನು?"

ಎನುತ ನಿಷ್ಠಿಸುತ ನಿಮ್ಮವ್ವೆ ನುಡಿಯಲು
ಮನಸಿಜಾಂತಕನು ಮೆಲ್ಲನೆ ನಕ್ಕು ತಾನು
'ಅಂತಾದರಗಲಿ' ಯೆಂದಾರೋಗಿಸಲು
ಬಡಿಸಲಾ ಸಿರಿಯಾಳಸೆಟ್ಟಿಗಿಂತೆಂದ:
ಭಕ್ತಿಯಿಂ ಚಂಡೇಶಕಾಟಕೋಟಾದಿ-
ಗಳಡರೆ ತಂದೆಗಳಾಪ್ತರ ತಪ್ಪು
ನಡೆದರೆ ಕೊಲ್ಲರೆ? ಇರಿಯರೆ ಮತ್ತೆ
ಪಡೆಯರೆ? ಬೇಡರೆ ಪ್ರತ್ಯಕ್ಷವಾಗೆ
ಕೇಳದಲ್ಲದೆಯೆ ದ್ರಾವಿಡದೇಶದಲ್ಲಿ-
ಯಿದ್ದ ಪುರಾತನಶರಣರಲ್ಲೆಲ್ಲ

ನರಸಿಂಗನಯನಾರನ ಕಥೆ

ನರಸಿಂಗನಯನಾರನೆಂಬೊಬ್ಬ ರಾಜ
ಧರೆಯಲೆನ್ನಯ ಭಕ್ತನವನಗ್ರಮಹಿಷಿ-

ಯರ್ಥಿಯಿಂದಾ ಪರಮೇಶನ ಭಜಿಸಿ
ಬರುವಾಗ ಪೂಜಾರ್ಹ ಪುಷ್ಪವೊಂದನ್ನು
ಕೊಂಡುತಾ ಮೂಸಿನೋಡಲು ಹೂವಾಡಿಗನು
ಆ ಚೆಲುವೆಯ ನಾಸಿಕವನಾಗ ಕೊಯ್ಯ-
ಲಾ ತಾಣಕಾಗಲೆ ಚೋಳನೃಪತಿಯು
ಬರಲು ಸತಿಯೊಡನೆ ಸಖಿಯರು ಮೊಕ್ಕಿ
"ದೇವ, ತಪ್ಪೇನನು ಕಾಣೆವಾವಿಲ್ಲಿ
ದೇವಿಯೋವುತಲೊಂದು ಹೂವ ಮೂಸಲ್ಕೆ

ಲಿಂಗಾರ್ಥವಾದ ಚೆನ್ನಯ್ದಿಲ ಹೂವ-
ನಂಗನೆ ಮೂಸಿದಳೆಂದು ಮೂಗರಿದು
ಬಿಟ್ಟನೀ ಪೂಜಾರಿವಟು"ವೆಂದು ಹೇಳೆ
"ತ್ಸುತ್ಸುತ್ಸು ! ತಗದಿದು ಉಚಿತವೆ ನಿನಗೆ"
ಎನುತ ಹೂವಡಿಗನನಾಗಲೆ ಹೇಳಿ
ಕರೆಸುತ "ನಿನಗಿದು ಯೋಗ್ಯವೆ ವಟುವೆ?
ಎನಿತವಿವೇಕಿಯಾದೆಯೊ ಮುಂಚೆ ಹೂವ
ಮುಟ್ಟಿದ ಕೈಯ ಮೊತ್ತಮೊದಲು ಕಡಿದ
ಬಳಿಕಲಾ ಕಡಿವುದು ಸತಿಯ ನಾಸಿಕವ?
ಅರಿಯದ ನಿನ್ನನಾನೇನಬಹುದು?"

ಎನುತ ನಿಜಾಂಗನೆಯನ್ನಲ್ಲಿ ಹೇಳಿ
ಕರೆಸಿ ಭೂಪತಿ ಚೂಪು ಬಾಚಿಯನೆತ್ತಿ
"ನಿನ್ನ ನೀನರಿಯದೆ ಪೈತ್ಯದಿ ಕೊಬ್ಬಿ
ಮುನ್ನೀಶ್ವರಾರ್ಥದಿಂದಿದ್ದ ಪುಷ್ಪಕ್ಕೆ
ಚಾಚಿದ ಕೈಯಲ್ಲಿ ಚಕ್ಕನೆ ಆಗ
ಚಾಚಿದಂತೇ ಚಾಚು ಚಾಚು ಬಾ" ಯೆನುತ
ಮುಟ್ಟಿದಂಗುಳಿಗಳ ಮೊದಲು ಕತ್ತರಿಸಿ
ಹಿಡಿಯೆ ನೋಡಿದೆ ಮಣಿಕಟ್ಟ ಖಂಡಿಸುತ
ಕೊಂಡ ಅಂಗೈಯನು ಚೆನ್ನಾಗಿ ಕಡಿದು
ಅವಿಚಾರದಲಿ ಮೊಳಕೈಯ ತುಂಡರಿಸ-

ಲಾಗಲೆ ನಾವು ಪ್ರತ್ಯಕ್ಷದಿ ನಿಂತು
ತುಂಡುತುಂಡಾಗಿದ್ದ ತನ್ವಿಯ ಕೈಯ
ಮುನ್ನವೆ ಕೊಯ್ದಿದ್ದ ಮೂಗನು ಕೊಟ್ಟು
ಜನನಾಥನಿಗೆ ಆಗ ಸಾಮೀಪ್ಯಮುಕ್ತಿ-

ಯನ್ನಿತ್ತು ಕೈಕೊಂಡೆನಾ ಜನವ್ರಾತ–
ವಚ್ಚರಿಯೊಂದುತ ಕೀರ್ತಿಸುತಿರಲು.

**ಕೊಟಾರಿ ಚೋಳನ ಕಥೆ**

ಅದುವಲ್ಲದಲೆ ಮುನ್ನ ಪಟ್ಟದ ದೇವಿ
ಕೊಟ್ಟಾರಿಯಲ್ಲೆಮ್ಮ ಧಾನ್ಯವ ತಿನಲು
ಗರ್ಭಿಣಿಯೆನದೆ ತದ್ಗರ್ಭದಲ್ಲಿದ್ದ
ಅರ್ಭಕಸಹಿತವೆ ಸೀಳಿದಾಕ್ಷಣವೆ

ಕೋರಿ ಮೋಕ್ಷವ ಬೇಡಿಕೊಳನೆ ನಾ ಮೆಚ್ಚೆ–
ಯಂದು ಚೋಳನು! ಮತ್ತೆಯಾರೀತಿ ಮೆಚ್ಚೆ
ಪ್ರೀತಿಯಿಂದಭಿಮತಫಲವ ಬೇಡೆನಲು
ಗಿಂಗಾಣಗೈಯದಂಗನೆಯನು ನೋಡಿ
ತಪ್ಪುಮಾಡಿದ ಮಹೋದ್ಧತಭಕ್ತಿಯಿಂದ
ತಪ್ಪೇನು ಕೊಂದನಾ ತನ್ನ ತನೂಜ–
ನನ್ನ ಕೇಳಿದಳೆ ಪ್ರತ್ಯಕ್ಷವಾಗಿರಲು?
ಸತಿಯ ಮಹಾತ್ಮ್ಯವನೇನೆನ್ನಬಹುದು?
ಕೇಳಲು ಕೊಂದೆ, ಕರೆಯನೆ ತನುಜನ
ಕೊಲ್ಲುತ ಕರೆದೆನೀ, ಕರೆಯಳೀ ವನಿತೆ!

ಇಂತಹ ಭಕ್ತರನೇಕರುಯಿರಲು
ಏನಯ್ಯ ಸಿರಿಯಾಳ, ಏನೆಂದರಿಯದೆ
ಭಕ್ತಿಯಿಂ ಗರ್ವಿಸಿ ಮಾತನಾಡುವುದು
ಯುಕ್ತಿಯೆ?" ಯೆನುತ ತದ್ಭಕ್ತವತ್ಸಲನು
ಬಾಲನನಾಗ ಸಪ್ರಾಣನಾಗಿಸುತ
ಕೈಲಾಸಕಟ್ಟಿದ ಕಮನೀಯಲೀಲ.
"ಜಂಗಮಲಿಂಗ ಪೂಜನವ ವೀಕ್ಷಿಪುದು
ತುಂಗ ಚತುರ್ವರ್ಗ ಫಲಗಳಿಗಿಂತ
ಉತ್ಕೃಷ್ಟ"ವೆನುತ ಧರೆಯಲಿದ್ದಳಾಕೆ.
ಸತ್ಕ್ರಿಯೆಗೈವಗೆ ಸರಿಯೆ ಗರ್ವೋಕ್ತಿ–

ಯದುವೆಯಲ್ಲದಲಹಂಕಾರವ ಮಾಡ–
ಲಾಗುವುದೇ ಭಕ್ತಿ ಬಸವಕುಮಾರ!
ಹರನು ತಾ ಮತ್ತೆಯು ಹೋಗಲು ಬಿಡದೆ
'ಸಿರಿಯಾಳ ಬಾ'ರೆಂದು ಕೈಯನು ಹಿಡಿದು

**ಹಲಾಯುಧನ ಕಥೆ**

ಸರಸರ ಭಕ್ತರ ವೇಷಗಳಲ್ಲಿ
ಆ ಹಲಾಯುಧನಿದ್ದ ಊರಿಗೈತರಲು
ಆ ಹಲಾಯುಧನತಿ ಪ್ರೀತಿ ತುಳ್ಕಾಡೆ
ಮಾಹೇಶ್ವರರಿಗೆ ಸಾಷ್ಟಾಂಗದಿ ಮೊಕ್ಕಿ
ಸವಿನಯ ಸಂಭ್ರಮವಿವಶಾತ್ಮನಾಗಿ–
ಯವಸರೋದಿತಕ್ರಿಯೆಗಳಗೈದು ತಣಿಸಿ

ಮುಕ್ಕಣ್ಣ ಮೂರ್ತಿಗೆ ಮುದಗೊಳಿಸುತ್ತ
ಸುಖಗೋಷ್ಠಿಯಲಿ ಪ್ರೇಮದಿಂದ ಮಾತಾಡಿ
"ಎಷ್ಟುದೂರದ ಕಡೆಯಿಂದ ಬಂದಿಹಿರೊ?
ಬಹಳ ಪಥಶ್ರಾಂತಗೊಂಡಿಹ ರೀತಿ–
ಯಿರುವಿರೆ"ನ್ನುತ ಹೀಗೆ ಮಾತಾಡುತಿರಲು
ಆ ನೀಲಗಳ ಮೂರ್ತಿಯಾತಗಿಂತೆಂದ:
"ಧರೆಯ ಮಹಾಭಕ್ತದರ್ಶನಾರ್ಥದಲಿ
ಚರಿಸುತ್ತ ಜಂಗಮೋತ್ಕರದೊಳಗೆಲ್ಲ
ಅಚ್ಚರಿಯೆನಿಸುವಂತೊಡನಾಡುತಿಹೆವು.
ಅರ್ತಿಯಿಂ ಭಕ್ತರೇ ಗತಿಯೆನೆ ನಾವು

ತಮ್ಮ ಪಾಲಿನಲಿಂಗದಂತೆಮ್ಮನವರು
ಅಮಿತಸಂಗತಿಯಲಿ ಕೊಂಡಾಡುತಿಹರು.
ತಿರುನೀಲಕಂಠನು ವರಗೊಂಡ ಪತಿಯು
ಕರಿಕಾಳ ಚೋಳನು ಅರಿಯಮರಾಜ
ನೆಲಯದುಂಗಳಿ ಮಾರೆನೇಣಾಧಿನಾಥ–
ನಾ ಚೇದಿರಾಜ ವಾಗೀಶನ್ನೈನಾದಿ
ಚೇರಮ ಶ್ವಪಚಯ್ಯನವರು ಸೋಮಾಸಿ
ಮಾರನು ಪಿಳ್ಳನೈನಾರರು ಎಲ್ಲ–
ರಿವರಾದಿಯಹ ಭಕ್ತವಿತತಿಯಿಂದೆಲ್ಲ–
ವಾರಾಧನೆಯ ಕೊಂಡೆವವರೀಕ್ರಿಯೆಗಳು

ಇಲ್ಲಿಲ್ಲಿಯೆಂದೆನಲೇತಕೀ ಧರಣಿ–
ಯಲ್ಲಾವು ಹೊಗದ ಭಕ್ತರ ಮನೆಯಿಲ್ಲ
ಎಮ್ಮನರಿಯದ ಭಕ್ತಮಹಿಯಲಿಲ್ಲ.
ಮಹಿಯ ಹಿರಿಯ ಕಾವೆಮ್ಮಯೆ ಸುಳಿವು

ಮುನ್ನಿಡುವವರನು ಮೆಚ್ಚದ ಭಕ್ತ
ಜನರು ಹೌದೆನಲೆಮ್ಮ ದಿನವು ಕಳೆದವು.
ಕೈಹಿಡಿದೆಮಗೊಂದು ರೂಪವಿತ್ತವರ–
ಧಿಕರಹ ಭಕ್ತರನೇಕರಿರುವರು.
ಅರಿದೆಮ್ಮ ಬದುಕಾದಿಯಲ್ಲಿ ಹುಟ್ಟಿದುದು
ಬೆಳೆದದ್ದೆಲ್ಲ ನಿರಾಳಪುರವೆಂಬವೂರು

ಹುಟ್ಟಿದೆನಲ್ಲದೀ ಬುವಿಯ ತಾಯ್ತಂದೆ–
ಯಿಂಥವರೆಂಬುದನರಿಯೆನೇನೆನಲಿ.
ಮನವಾರೆ ನಿಮ್ಮವ್ವೆಯೆತ್ತಿತ್ತು ಮೊಲೆಯ
ಬೆಳೆಸಲು ಬೆಳೆದೆನು ಮಗನಂತೆ ನಾನು
ಕೆಂಭಾವಿಭೋಗಯ್ಯ ಕೈಯನು ಹಿಡಿದು
ನಡೆಸಲು ಬುವಿಯಲಿ ನಡೆಯಲು ಕಲಿತೆ.
ಬಳಿಗೆಲಸಕ್ಕೆಂದು ಕಳಿಸಲು ನಂಬಿ–
ಯೊಲವಿಂದ ಕರೆಯಲು ನುಡಿಯ ಕಲಿತೆನು.
ಕಡುಗೂರ್ಮಿ ಚೆನ್ನಯ್ಯನವರ ಪ್ರೀತಿಯಲಿ
ಜೊತೆಗುಣಲಿಡಲಾನು ಉಣ್ಣಲು ಕಲಿತೆ.

ಅರೆಕೊರೆಯಿರದಂತೆ ದಾಸಯ್ಯ ಕಲಿಸೆ
ಕಲಿತೆನು ವಸ್ತ್ರವನುಡುವ ರೀತಿಯನು.
ತನುಜೆಯ ಸೋಮರ್ಮುಡಿ ಕತ್ತರಿಸೆನಗೆ
ಜಡೆಗಟ್ಟಿ ಮಾನಕಂಜಾರನು ಮತ್ತೆ
ಮಿಂಡನಂತಾನಾಡುವುದನು ತಾ ಕಂಡು
ಮತ್ತೆ ಬಲ್ಲಹನೊಂದು ಹೆಣ್ಣ ತೋರಿದನು
ಈ ಮಿಂಡನಿಗೆ ಧನವೆಲ್ಲಿಯದೆನುತ
ಮುಮ್ಮಡಿ ಪಡಿಯಿತ್ತ ಮೊನ್ನೆಯಧರನು.
ಆಗ ದಕ್ಷಾರಾಮದಲ್ಲಹರ್ನಿಶೆಯು
ಕಾಂತಾಸುಖೋಪಭೋಗಗಳ ಹೊಂದುತ್ತ–

ಲೈತಂದು ಮೊನ್ನೆ ನಾ ಸಿರಿಯಾಳನ ಮನೆ–
ಯಲಿ ವರಪುತ್ರ ದೇವರ ಕೂಡಿಕೊಂಡ
ಬುವಿಯಲೆನ್ನಯ ಸುಖದುಃಖಗಳನ್ನು
ನಿನಗಲ್ಲದಾರ್ಗೆ ಹೇಳುವೆ ಹಲಾಯುಧನೆ!

## ಸಿರಿಯಾಳನ ಮಹಿಮೆ

ತಾನಿಂತಲ್ಲದೆ ಚೋದ್ಯವಾಯಿತು ಮುಂದೆ
ಎಂತೆನೆ ಕೇಳಯ್ಯ, ಎಲ್ಲಿ ನೊಡಿದರು
ಸಿರಿಯಾಳನಾ ಕಂಚಿಪುರಿಯೇಳು ಕೇರಿ-
ಗಳನಚ್ಚರಿಯಲಿ ಕೊಂಡೊಯ್ದನಪ್ಪರಲಿ
ಜೊತೆಗೇ ಪುತ್ರನು ಹೋದ ಕೈಲಾಸಪುರಕೆ.
ಇಂತಹ ಚಿರುತೊಂಡಗೆಣೆಯಿಹರೇನು?

ಮಲಹರನಾತನ ಮನಸಿನಾಳವನು
ತಿಳಿಯೆ ಶಂಕರಕಿಂಕರರು ಮೊದಲಾದ
ಹಲವು ವ್ರತಸ್ಥರ ಕೂಡಿ ಕಳಿಸಲು
ಕೇಳದಂತವರ್ಗತಿಭಕ್ತಿಯುಕ್ತಿಯಲಿ
ಕಬ್ಬಿನ ರಸವನೀಪ್ಸಿತವಸ್ತುಗಳನು
ಅರೆಯಿಲ್ಲದಂತಿತ್ತು ಹರನ ಪೂಜಿಸಿದ-
ನಲ್ಲದೆ ಹರನಿಪ್ಪತ್ತೊಂದು ದಿನಗಳು
ಕೊಂಡದ ಕಂಚಿಯಲಿ ಮಳೆಯ ಸುರಿಸೆ
ಭರದಿ ನಿತ್ಯವು ಬರುವೊಡೆಯರಿಗನ್ನ-
ವಿಡುತಿರೆ ತಪಸಿಗಳಲ್ಲಿಲ್ಲದಿರಲು

ಪರಮನು ತಾನು ತಾಪಸವೇಷದಿಂದ-
ಲೈತಂದು ಸಿರಿಯಾಳ ಪುತ್ರನ ಬೇಡ-
ಲರ್ಥಿಯಿಂ ಮಗನ ಶಾಕಗಳೊಡನಿತ್ತು
ಮೃಡನ ಮೆಚ್ಚಿಸುತಾಗ ಮಗನನು ಮತ್ತೆ
ಪಡೆದು ಕೈಲಾಸವನವ ಸೂರೆಗೊಂಡ.
ಅಧಿಕದಾ ದಿನದಂದು ನಾವಿದ್ದೆವಲ್ಲಿ.
ಅಂಥ ಭಕ್ತನಿರುವನಯ್ಯ! ಲೋಕದಲಿ
ನೀಡುವರುಂಟೆ ಹುಟ್ಟಿದ ಮಗನನ್ನೆ!
ಮಚ್ಚರದಲಿ ಭಕ್ತಿ ಮಾತುಗಳಾಡ-
ಬಹುದೆಷ್ಟೆ"ಯೆಂದುಬ್ಬುತಧಿಕ ಕೀರ್ತಿಸಲು

"ಶಿವಶಿವ, ಇದನೇನು ಹೇಳುವಿರಯ್ಯ?
ಶಿವನೇನು ನರರ ಭಕ್ಷಿಸುವ ರಾಕ್ಷಸನೆ?
ಶಿಶುವ ಸದ್ಭಕ್ತನ ಸಿರಿಯಾಳನಂಬಿ
ಪಶುವಿನಂತೆರಿಯೆ ಭಕ್ತಿವಿಹೀನನೇನು?

ನೀವೊಡೆಯರು ನಿಮ್ಮ ಮಾತ ಸುಳ್ಳೆನ್ನೆ-
ನಾದರೂ ಎಂದಾದರಿದು ನಿಜವಹುದೆ?"
ಎನುತ ಮಿಥ್ಯವಗ್ಯೆಯಲಾ ಮೃಡಮೂರ್ತಿ
"ನೀ ಹಲಾಯುಧ, ಕೇಳ್ ಪುರಾತನರಲ್ಲಿ
ಸತಿಯನಿತ್ತಿರುವರಸಂಖ್ಯಾತಕೋಟಿ
ಸುತರನಿತ್ತರುವರಸಂಖ್ಯಾತಕೋಟಿ

ತಮ್ಮನೆಯಿತ್ತರನಂತ ಮಹಿಯಲಿ.
ಇದನಲ್ಲವೆನ್ನಲು ತಕ್ಕುದೆ ನಿನಗೆ?
ಹರನು ಭಕ್ತರ ಮನವರಿಯಲು ಬಗೆದು
ಅರಿದಾದ ವಸ್ತುವನ್ಯೆತೆಂದು ಬೇಡೆ
ಸಂದೇಹ ಪಡದೀಯುವರು ಭಕ್ತರೆಲ್ಲ.
ಭಕ್ತಿ ಹುಟ್ಟಿತೆ ಸಿರಿಯಳನ ತಲೆಯಲಿ?
ಕರಕಂಠನವನನು ಬೇಡಿದನಾಗಿ
ಚಿರುತೊಂಡನಿತ್ತ ಸೀರಾಳ ಬಾಲನನು.
ಆರಯ್ಯೆ ನಂಬಿಯ ಧರೆಯೊಳಗೆಲ್ಲ
ಊರೂರಲರ್ಥಿಯಿಂ ಸಿರಿಯಾಳಚರಿತ

ವನ್ನಧಿಕದಿ ಭಕ್ತಕೂಟಗಳಲ್ಲಿ
ಹಾಡುಗಳನು ಕಟ್ಟಿ ಹಾಡುತ್ತಲಿಹರು;
ಪ್ರಸ್ತುತೋಕ್ತಿಯ ಗದ್ಯಪದ್ಯಕಾವ್ಯಗಳ
ವಿಸ್ತಾರದಲಿ ಮಾಡಿ ವಿನುತಿಸುತಿಹರು;
ಅಲ್ಲಿದೆ ಸಾಂಗಭಾಷಾಂಗ ಕ್ರಿಯಾಂಗ
ಪಟುನಾಟಕಗಳನು ನಟಿಸುತ್ತಲಿಹರು;
ಸರದಿಯಲವರಿವರೆನ್ನದಲೆಲ್ಲ
ಸೇರುತಲೊನಕೆವಾಡುಗಳ ಹಾಡುವರು;
ಅನುಮಾನವೊಂದಿಷ್ಟಿದರಲಿಲ್ಲ"ವೆನಲು
ಕೇಳಿ ಕಲುಷಗೊಳ್ಳುತಾ ಹಲಾಯುಧನು

**ಹಲಾಯುಧನು ಬಹಿಷ್ಕರಿಸಿದ್ದು**

"ಅದು ಹೇಗೆ ಬೇಡಿದ ಹರನು ಮಾಂಸವನು
ಇಟ್ಟನಾ ಚಿರುತೊಂಡಸೆಟ್ಟಿಯು ಮಗನ?
ಭಕ್ತವತ್ಸಲನೆಂತು ಭಕ್ತನ ತಿಂದ?
ಭಕ್ತನಾಗಿಯು ಹೇಗೆ ಭಕ್ತನ ಕೊಂದ?

ಹರಹರ, ಅಂಥ ದೇವರು ಅಂಥ ಭಕ್ತ-
ನಾಶ್ಚರ್ಯವವಗಿಲ್ಲವೆ ಸರಿಸಮಾನ
ತಾಯಿ ರಕ್ಕಸಿಯಾಗಲವನೆಂತು ಬಾಳ್ದ-
ನಕ್ಕಟಾ ಶಿವನು ದಾನವನಾದನಯ್ಯೊ ;
ಮುತ್ತುಮುಪ್ಪಿನಲಿಂತು ಮನಮರುಳಾಗಿ
ಮದನಾರಿಯೂ ಧೃತಿಗೆಡುವುದು ಸರಿಯೆ

ಕೋಮಟಿ ಬುದ್ಧಿಯಿಂದ ದುರಾಸೆಗೈದು
ಕಾಮಿಸಿ ಸುತನನು ಕೊಲಿಸಿದನೆಂತೊ
ಮುಟ್ಟರು ಭಕ್ತರು ಮುನ್ನ ಮಾಂಸವನು
ನೀಡುತ ತನ್ನ ಹಿರಿದುಗೊಳಿಸುವರೆ?
ಮನದಾಳವರಿಯಲು ಕೇಳೆ ತಪ್ಪೇನು?
ಮಗನ ಕೊಲ್ಲಲು ಕತ್ತಿಯನು ಕೊಂಡ ಕ್ಷಣವೆ
ಮೆಚ್ಚಬಾರದೆ ಮೃಡ ಜಾಣನಾಗುತ್ತ?
ಕಡುಮೋಹಗೊಂಡನಲ್ಲವೆ ಆ ಪುತ್ರನಿಗೆ
ಮತ್ತದಲ್ಲದೆಯೆ ಆ ಚಿರುತೊಂಡ ತಾನು
ಉತ್ತಮವೆನೆ ಭಕ್ತಿನಿರತನಾಗಿರಲು

ಓರೆಯಿಂ ನೋಳ್ಪನೆ ತನ್ನ ಬಚ್ಚಿಟ್ಟು
ತನ್ನ ಪ್ರಾಣಕ್ಕಾಸೆಯನು ಪಟ್ಟನವನು
ಸುತ ತನಗಾದರೂ ಜಂಗಮ ತಾನೆ?
ಕೊಲ್ಲಬಹುದೆ ತಾನು ಶಂಕೆಯಿಲ್ಲದೆಯೆ?
ನೆರೆಮನೆ ಕಿಚ್ಚದು ಸುಡುವುದೆಂದೆನಲು
ಸುಡದೇನಿಂತಹ ತಮ್ಮ ಮನೆಯದೆ ಕಿಚ್ಚು?
ಹೊರಗಿನ ದುಃಖವು ಹೊರಹೋದ ರೀತಿ
ಹೊಸದಾಯ್ತು, ಇಂತಿರಬಲ್ಲುದೆ ಬೇರೆ
ಗಂಟಲಲ್ಲಿಳಿಯದು, ಒಳ್ಳಿತಾಯ್ತೆನುತ

ಅಲರಲೀಶ್ವರನ ಮೇಲಿಂತಹ ಭಕ್ತಿ-
ಯಿರುವನು ಶಾಕಪಾಕದೊಡನೆ ತನ್ನ-
ನಾ ನೀಲಗಳನಿಗೆ ಏಕಿಕ್ಕಲಿಲ್ಲ-
ವೆನ್ನಲು ಇದು ಭಕ್ತಿಹಿಂಸೆಯೆಂತಲ್ಲ?
ತನಯನನೊಪ್ಪಿಸಿ ತನ್ನ ವಂಚಿಸಿದ-
ನೆನ್ನುವ ನುಡಿಗಂಜಿ ಪುತ್ರನ ಕರೆದ-
ನಲ್ಲದೆ 'ಆಗಲರ್ಪಿಸಿದೆನು ಕರೆಯ

ಕಳಿಸಿದ್ದು ಭಕ್ತಿಗೆ ಸರಿಹೊಂದದೆ'ನುತ
ಚಿರುತೊಂಡ ಸುಮ್ಮನಿದ್ದನೆ ತಾನು ಆಗ?
ನಡೆತರುತರ್ಥಿಸಿ ಕೊಲ್ಲಿಸಿದಂಥ

ಮನಸಿಜಾರಿಯು ತಾನು ನುಂಗಿದನೆಂಬ
ನುಡಿಗಂಜಿ ಪುತ್ರನನುಗುಳ್ದನೆ ಹೊರತು
ತೇಗುಗಳವು ಗರ್‍ರಗರ್‍ರನೆ ಬರಲು
ಕೈಕೊಳುತಾರೋಗಿಸಿದ ಹೊಟ್ಟೆ ಬಿರಿಯೆ
ಸೆಟ್ಟಿಗೆ ಕರ್ಮ, ಬೈಗುಳವು ದೇವರಿಗೆ
ಗಟ್ಟಿಯಾಯ್ತಲ್ಲವೆ, ಇಂತಾದ್ದರಿಂದ
ಭಕ್ತನ ನುಂಗಿದ ಹಸಿಯ ರಕ್ಕಸನು
ಭಕ್ತನು ಕೊಲುವ ಧರ್ಮದ ಸೂನೆಗಾರ-
ನೆಂಬುದ ಕಥೆಯಂತೆ ರಚಿಸುತಲಿಲ್ಲ-
ಯೋದುವಸಂಖ್ಯಾತ ಮೂಢರಿಗೆಲ್ಲ

ಹೊರಹೊರಗೆ"ಂದು ಹಾಕಿದನು ಕೈತಾಳ
ಕೋಪವು ದ್ವಿಗುಣಿಸಲಾ ಹಲಾಯುಧನು
ಆಗಲತ್ಯಂತ ಭಯಭ್ರಾಂತಿಯಿಂದ-
ಲಂತಕಾರಿಯು ಸಿರಿಯಾಳನು ಅವನ
ಅಕ್ಕಜವೆನಿಪ ಕೋಪಾಟೋಪದೃಷ್ಟಿ-
ಯಿಂದಿಷ್ಟು ಕೆಲಕೆ ತಾವೋಸರಿಸುತ್ತ-
ಲೆದೆಗಳಲುಗೆ ಒಬ್ಬರೊಬ್ಬರ ಮೊಗವ
ಮೆಲ್ಲನೆ ನೊಡುತ್ತ ತಲ್ಲಣಿಸುತ್ತ-
ಲಿದ್ದಯಿಬ್ಬರ ಹಲಾಯುಧನು ನೊಡುತ್ತ
"ಮನ್ನಿಸಿದೆನು ಜಂಗಮರೆನುತ ನಿಮ್ಮ

ಹಿಂದನ ನುಡಿಗಳ ತಪ್ಪನು ಹಿಡಿಯೆ
ಮುಂದಕೆ ಸಿರಿಯಾಳನೀಶ್ವರವಾರ್ತೆ-
ಯನು ಮರೆತಾಡಲೆಮ್ಮಯ ಭಕ್ತರೆಡೆಗೆ
ಮತ್ತೆ ಹರನ ಕೋಮಟಿಗೊಳಗಾದವರು
ನೀವೆ"ನಲುತ್ತರವುಸುರಲು ಹೆದರಿ
ಮನಸಿಜಾರಿಯು ಉಮಾಕಾಂತೆಯ ನೆನೆಯೆ

**ಪಾರ್ವತಿ-ಸಂಗಳವ್ವೆಯರ ಪ್ರಾರ್ಥನೆ**

ಪಾರ್ವತಿಯೂ ಭಕ್ತಿಯೆಂಬುವ ಸುದತಿ
ಸರ್ವಾಂಗಗಳ ಧರಿಸಲ್ಲಿಗೆ ಬಂದು

ಸಂಗಳವ್ವೆಯು ತಾನು ಬರುತಿರೆ ಕಂಡು
ಜಂಗಮಾಕೃತಿಯ ಹಲಾಯುಧ ನೋಡಿ

ಮೊಕ್ಕೊಡಗೊಂಡು ಸಮುಚಿತಕ್ರಿಯಾದಿ-
ಗಳನಕ್ಕಜದಿಗೈಯಲೆಂದಳಂಬಿಕೆಯು:
"ಅಖಿಲರು ತಿಳಿದಂತೆಯಜಜನಾರ್ದನರ
ಮುಖವುರದಲಿ ಮುದದಿಂದಿದ್ದ ಯುವತಿ-
ಯರು ತಮತಮಗಿಷ್ಟಬಂದರ ಮೆಚ್ಚಿ
ಹೋಗುವರವರ ಗುಣಕೆ ನಾನೇನೆನಲಿ?
ಮೆರೆಯಲು ತನ್ನ ಪುರುಷನನಲ್ಲದೆಯೆ
ಕನಸಿನಲ್ಲರಿಯಳು ಗೌರಿ, ತಾನಂತೆ
ಪರಮಪತಿವ್ರತಾಪರರುಗಳಾದ
ಹರಪಾದಭಕ್ತಿನಿರಂತರಾತ್ಮರನು

'ಒಡಲಾದಿಯೆನೆ ಹಲಾಯುಧನು ಭಕ್ತರಿಗೆ
ಕೇಳುವ ವಸ್ತುವನಿಲ್ಲೆನದೀವ'-
ನೆನುತ ಸದ್ಭಕ್ತಸಭಾಂತರಗಳಲಿ
ಘನತರದಲಿ ಹೇಳೆ ಕೇಳಿ ನಾವೀಗ-
ಬಂದೆವು ನಮ್ಮೆಲ್ಲ ವಾಂಛಿತಾರ್ಥಗಳ-
ನಿತ್ತು ಹರಕೆಗಳ ಪಡೆ ಹಲಾಯುಧನೆ!
ಮಹಿತಶಿವಾಚಾರಮಾರ್ಗಾನುಪಾಲ
ಸಹಜೈಕಲಿಂಗನಿಷ್ಠಾಪರತಂತ್ರ
ವಿದಿತಸದ್ಭಕ್ತಿಸಂವಿತ್ಸುಖಾಮಾತ್ರ
ಸದಮಲಸರ್ವಪ್ರಸಾದೈಕಗಾತ್ರ

ಜಂಗಮಶೃಂಗಾರ ಸತ್ಯಗಂಭೀರ
ಲಿಂಗಾನುವರ್ತಿಯಭಂಗುರಕೀರ್ತಿ
ನೆಟ್ಟನೆ ಶರಣನು ನಿರ್ಮಲಾಂಗನಹೆ
ಧಟ್ಟನು ಮೋಕ್ಷವಿದ್ಯಾಪಂಡಿತನು"
ಎನುತ ಕೀರ್ತಿಸುತಿರಲಾ ಹಲಾಯುಧನು
ಅಂಚಿತ ಪ್ರೀತಿ ತುಳ್ಕಾಡೆ ಕೈಮುಗಿದು
"ವ್ಯಕ್ತಿಯಾಗಾನು ಭಕ್ತರಿಗಾಳು ಪ್ರಸ್ತು-
ತೋಕ್ತಿಗಾನರ್ಹನೆ? ಒಡೆಯರೀಯುವರು
ಭಕ್ತರತುಲಸಾಮರ್ಥ್ಯವ ಪಡೆದವರು
ಕೇಳಿರಿ ನಿಮ್ಮಯಾಭೀಷ್ಟವಸ್ತುಗಳ"-

ನೆಂದಾಗ "ಚಿರುತೊಂಡನಾ ಸತಿಯೀಕೆ,
ಅನಘನೆ, ಈಶ್ವರನರ್ಧಾಂಗಿಯಾನು,
ಪತಿಬಾಹ್ಯರಾಗಿಹ ಸತಿಯರೇತಕ್ಕೆ?
ಪತಿಗಳಿಲ್ಲದೆ ಭಕ್ತಿಬಾಹ್ಯರಾದವರು
ಅದಕೆ ತಪ್ಪುಗಳನು ಹಿಡಿಯದೆ ಸ್ನೇಹ
ಭಾವನೆಯಿಂದ ದಯಾಭಾವ ತಳೆದು
ಪತಿಗಳಿಗತುಲ ಸದ್ಭಕ್ತಿ ಭಿಕ್ಷವನು
ಕರುಣೆಯಿಂದೆಮಗೆ ಸೌಭಾಗ್ಯ ಭಿಕ್ಷವನು
ನೀಡಯ್ಯ"ಯೆನುತ ಸಂಸ್ಪೃಹಭಾತಿ ಕರುಣೆ-
ಯಿಂದಲಾ ಶೈಲೇಂದ್ರ ಪುತ್ರಿಯು ಬೇಡ-

ಲಲ್ಲಿದ್ದ ಚಿರುತೊಂಡನಾಸತಿ ಮೊಕ್ಕ-
ಲಿಂತು ಹಲಾಯುಧ ಮಾಹೇಶ್ವರಾಳಿ
ಹರನಿಗು ಸೆಟ್ಟಿಗು ನೀಡಲಭಯವ
ಪರಮಾತ್ಮನಜನು ಶ್ರೀ ಪಾರ್ವತೀಶ್ವರನು
ಕಂತುಸಂಹರನು ಶ್ರೀಕಂಠನುಗ್ರಾಕ್ಷ-
ನಷ್ಟರಲ್ಲಿಯೆ ತಾ ಪ್ರತ್ಯಕ್ಷದಿ ನಿಲ್ಲ-
ಲಲರ್ದರು ಪ್ರಮಥರುದ್ರಾನೇಕ ಕೋಟಿ
ಸನಿಹಕೆ ಬಂದು ತಾವೋಲೈಸುತಿರಲು
ಹಿಂದೆಸೆಯಲಿ ತಿರುವೆಂಗಾಳಿಯಂಗ-
ನೆಯು ಸಿರಿಯಾಳನಧಿಕದಿ ಕೀರ್ತಿಸಲು

ಮುಂಗಡೆ ಭಕ್ತಿಯಿಂ ಮೊಕ್ಕುತ ಭಕ್ತ
ಸಂದೋಹವಚಲಿತಾನಂದವನೊಂದೆ
ದಿವಿಜದಾನವಪದ್ಮಭವಹರಿಮುಖ್ಯ-
ರವಿಕಲಾವರಣಸ್ಥರಾಗಿ ಪ್ರಸ್ತುತಿಸೆ
ಸರ್ವಸನ್ಮುನಿಗಳಾಶೀರ್ವಾದನಾದ
ಪೂರ್ವಕನಾಗಿ ಕೈಗಳ ತಲೆಗಿಟ್ಟು
ತುಂಬುರುನಾರದಾದಿಗಳು ಹಾಡುತಿರ-
ಲಾಜ್ಞೆಗೆ ದೇವತೂರ್ಯಗಳವು ಮೊಳಗೆ
ಕರಿಕಾಲಸಿರಿಯಾಳಚರಿತಾದಿ ಕಥೆಗ-
ಳನು ಪಾಠಕರು ಭಕ್ತಿಯಿಂದೋದುತಿರಲು

ಮುಂಚೆಯೆ ನಿಟಲತಟಾಕ್ಷಪದಾಬ್ಜ
ಘಟಿತಫಾಲಸ್ಥಲ ಪಟುದೇಹಿಯಾಗಿ

ಜನಿತನೇತ್ರಾನಂದ ಸಲಿಲಾಭಿಷಿಕ್ತ
ವಿನುತವಕ್ತ್ರಾಂಬುಜ ವಿಲಸನನಾಗಿ
ಗದ್ಗದಪ್ರೋದ್ಭೂತ ಕಂಧರಾಂಚಿತ ಸ-
ಮುದ್ಗತಸ್ತವನಸಂಯುತದೇಹಿಯಾಗಿ
ಸವಿನಯಸಂಭ್ರಮ ಸಂಸ್ಪೃಹಾನಂದ
ವಿವಶಾಂತರಂಗಾದಿ ವಿಭ್ರಮನಾಗಿ-
ದ್ದಾ ಹಲಾಯುಧನನ್ನು ಆ ನೀಲಗಳನು
ಭರದಿಂದಲಪ್ಪಲು ಸಂಪ್ರೀತಿಯಿಂದ-

ಲಾ ಹಲಾಯುಧನ ಉದ್ಯದ್ಭಕ್ತಿಮತಿಗೆ
ಸಾಹಸಗಳಿಗೆ ಅಸಾಧ್ಯನಿಷ್ಠತೆಗೆ
ಮೆಚ್ಚುತಲಾಶ್ಚರ್ಯಪ್ರೀತಿಗಳೊದವೆ
ಚಚ್ಚರದಿಂದತುಲಿತಲಿಂಗಮೂರ್ತಿ
ಮಿರುಗುವ ಕಂಗಳು ಹೊಳೆಯುತ್ತಲಿರಲು
ಹೊಳೆಯುವ ಕನಕ ದಿವ್ಯವಿಮಾನಪಂಕ್ತಿ-
ಯವಿರಳದಲಿ ತೊಳಗಲು ಆತನಧಿಕ
ನವಪುರಗಳ ಕೂಡೆ ಶಿವಭಕ್ತವಿತತಿ-
ಯಾ ಹಲಾಯುಧನ ಅತ್ಯದ್ಭುತಭಕ್ತಿ
ಮಹಾತ್ಮ್ಯವಲರಲು ಮಹಿಜನ ಹೊಗಳೆ

ಲಾಲಿತಾನಂದಸಲ್ಲೀಲ ತಳಿರಲು
ಕೈಲಾಸಕವನನಾಗಲೆ ತಾ ಕೊಂಡೊಯ್ದು
ಸಿರಿಯಾಳದರ್ಪಾಪಹರಣಾರ್ಥವಾಗಿ
ಹರನಿಂತು ಮೆರೆಯಿಸಿದನು ಹಲಾಯುಧನ.
ಅದರಿಂದಲೆಂದೆಂದು ಗರ್ವೋಕ್ತಿ ಭಕ್ತಿ
ಭಾವನೆಗೇರ್ವುದೆ ಬಸವಕುಮಾರ!

## ಮಿಂಡನೈನಾರನ ಕಥೆ

ಮತ್ತೆಯು ಸದ್ಭಕ್ತಿಮಹಿತಮಂಡನನು
ಮಿರುಮಿಂಡನೈನಾರ ನಿರ್ಮಲಕೀರ್ತಿ
ಜಂಗಮಾರಾಧಾನಾಶ್ರಾಂತ ನಿತಾಂತ
ಸಂಗತಸುಖವಿಗತಾಂಗವಿಕಾರಿ-

ಯತುಲ ಶಾಪಾಗ್ರಹ ಸಮಗ್ರಕೀರ್ತಿ-
ಯತಿಶಯ ಶುದ್ಧಶಿವೈಕಮಾನಸನು

ದುಷ್ಟಜನೋದ್ದಂಡದೋರ್ದಳನವನು
ಶಿಷ್ಟಜನೋತ್ಕೃಷ್ಟ ಶೀಲಪಾಲಕನು
ಧರೆಯಲಿ ಚೇಗೊಂಡೆಯಲಿ ವಿರಚಿಸಿದ
ಪುರವರದಲ್ಲಿ ಸುಸ್ಥಿರಭಕ್ತಿಯಿಂದ
ಪ್ರತಿತಿಂಗಳೂ ಶಿವರಾತ್ರಿನೇಮವನು
ಕೈಕೊಂಡು ಹನ್ನೆರಡುವರುಷ ಸಲಿಸಿ-
ಯಿಚ್ಛೆಯಿಂ ಹದಿಮೂರುವರ್ಷಾಂತ್ಯದಲ್ಲಿ
ಬಂದು ಮೆರೆವ ತಿರುವಾಲೂರವರೆಗೆ

ವಾಲ್ಮೀಕಿದೇವನಿವಾಸದಲ್ಲವನ
ಕಲ್ಮಷಭಕ್ತಿಜಾಗರವ ಸಲ್ಲಿಸುತ
ಪಾಪವಿಧ್ವಂಸನ ಭಕ್ತರ ಜೊತೆಗೆ
ಗೋಪುರದಲ್ಲಿಷ್ಟಗೋಷ್ಠಿಯಲ್ಲಿರಲು
ಸಂತೋಷದಲಿ ನಂಬಿ ಪರವೆನಾಚಿಯರ
ವರಗೃಹದಲ್ಲಿದ್ದು ವಾಲ್ಮೀಕಿದೇವ-
ನಾ ಗುಡಿಗೈತರೆ ಪುರಜನರೆಲ್ಲ
ಸೇರಿ ತಾವಿಕ್ಕೆಲದಲ್ಲೋಲೈಸುತಿರೆ
ಸಂತಸದಲ್ಲಿ ಹೂದಂಡೆಗಳೆಸೆದು
ಜನರಡಿಗಡಿಗುಘೇಯೆನ್ನುತ ಕೂಗೆ

ಗದ್ಯಪದ್ಯಾದ್ಯನವದ್ಯಕಾವ್ಯಗಳ
ಹೃದ್ಯವಾಗಲು ಸತ್ಕವೀಶ್ವರರ್ ಪಠಿಸೆ
ಪರಿಹಾಸಕರು ತಾವು ಪಾಠಕರೊಡನೆ
ವರಗುಣಾಂಕಗಳ ಕೈವಾರಿಸುತಿರಲು
ಗಾಯಕರೆಲ್ಲ ತಾಳವನಿಕ್ಕಿ ಮೊಕ್ಕೆ
ತಾಪಸಪ್ರಭುಗಳು ಹರಸಲು ಸತತ
ಪ್ರೀತಿಯಿಂದವರಿಗೆ ವಾಂಛಿತಾರ್ಥಗಳ-
ನೀವುತ್ತಲಡಿಗಡಿಗೆ ತಡೆದು ನಡೆದು
ಪದನಖಕಾಂತಿ ಭೂಭೌಮವಕ್ಷೋಜ
ಪದಕರತ್ನಪ್ರಭಾಪ್ರಖ್ಯದಿಂ ತೊಳಗೆ

ರಾಜಿತಭೂಷಣಪ್ರಭೆಯು ದಿಗ್ಗಜ ಶಿ-
ರೋಜಮೌಕ್ತಿಕಗಳ ರುಚಿಗಳುಲ್ಲಸದ-
ಲತುಲದಿವ್ಯಾಂಗದೀಧಿತಿಯುದಯಾರ್ಕ-
ನತಿಶಯಾತ್ಮಜ್ಯೋತಿಯೊಲು ಪ್ರಜ್ವಲಿಸಲು

ಸ್ಥಿರದರ್ಶನದ್ಯುತಿ ಶೃಂಗಾರಲಕ್ಷ್ಮೀ
ವರಮುಖಮುಕುರಭಾಸ್ವರದಂತೆ ತೊಳಗೆ
ವರದೃಙ್ಮರೀಚಿಯಾ ವಾಲ್ಮೀಕಿದೇವ
ಚರಣಾಬ್ಜರುಚಿರವಿಸ್ಫುರಣವದೊಪ್ಪೆ
ಮಕುಟಮಾಣಿಕ್ಯಾಂಶುಮಂಜರಿ ಸುರಗಿ–
ರಿಕಲಿತಶೇಖರಾಕೃತಿಯೊಲು ಹೊಳೆದು

ವರವಿಟಾಕೃತಿಯಂತೆ ಹರನಿರವದ್ಯ
ಕರುಣಾಮೃತಾಟೋಪತಲಿತವಾರಾಶಿ–
ಯಲಿ ತೇಲಿ ಚಿನ್ನದ ಕೋಲನು ಹಿಡಿದು
ಕುಣಿಯುತ್ತ ವೊಲೆಯುತ್ತ ಸೋತು ಗತಿಗಳು
ತಡಬಡಿಸುತ್ತಲಿ ದಂಡವ ಕೊಡುತ
ಬಿದ್ದು ನೋಡುತ ಮೇಲಕೇಳುತಾಡುತ್ತ
ಸಂಗಡಿಗರನು ತಾ ಚಪ್ಪರಿಸುತ್ತ–
ಲಂಗವನೇರುತಲಿಳಿದು ನೋಡುತ್ತ
ಯುವತಿಭಾವವ ಬಗೆಯುತ್ತ ತನ್ನಾತ್ಮ–
ವಲರುತ ನೀಳ ಕಟಾಕ್ಷವಕೊಂಡು

ಭುಜವ ಚಪ್ಪರಿಸುತ ಹೊಂಗುತಲಾತ್ಮ
ವಿಜಯವ ಮೆರೆಯುತ್ತಲಧಿಕ ಬೀಗುತ್ತ–
ಲತಿಶಯವಿಟಚೇಷ್ಟೆಯಿಂದ ವಿರೋಧಿ–
ಗಳ ಲೆಕ್ಕಿಸದೆ ಸುಖಲೀಲೆಯಿಂದಿದ್ದು
ಎಕ್ಕಡಗಳ ಮೆಟ್ಟಿ ಸರಸರನೊಡೆಯ
ನಂಬಿಯು ಸದ್ಭಕ್ತಗಣವ್ರಾತಗಳಿಗೆ
ಮೊಕ್ಕದೆ ಕರಗಳ ಮುಗಿಯದೆ ತಾನು
ಸಿಕ್ಕದೆ ಸುಕ್ಕದೆ ಚಕ್ಕನೆ ಬಂದು
ಗುಡಿಹೊಕ್ಕು ತನ್ನ ನಿತ್ಯದ ಪಡಿಬೇಡೆ
ಮಿಡಮಿಡ ಮಿಡುಕುತ್ತ ಮಿರುಮಿಂಡನೆಂದ:

"ಏನೆಲೊ, ಇವನಾವನೋ! ರಾಜಮೌಳಿ
ಧೀರದಿಗ್ಗಜಗಳ ಗಡಣೆಗೊಳ್ಳದೆಯೆ
ಕೊಬ್ಬಿದ! ಭಕ್ತರಿಗೆರಗನೋಲೈಸ–
ನಾ ವಾಲುಮೀಕೇಶನಡ್ಡವೆ ತನಗೆ
ಫಾಲಾಕ್ಷ ಕೆರಳಲು ಭಕ್ತರು ಕಾಯ
ಬಲ್ಲರೀಪರಿಶಕ್ತಿಯುಳ್ಳವರವರು!

ಅತುಲಮಹೋದ್ಧತಾಯತಮಹಾಭಕ್ತ
ತತಿ ಕೆರಳಲು ಕಾಯಲಹುದೇ ಈಶನಿಗೆ!
ಕಡುಗರ್ವಿಯಾಗುತ ಕಾಣಲಾರದನ
ಗಡಿಯಲಿ ಸೇರಿಸಬಾರದು ನೋಡೆ"

ಎನ್ನಲು ಕೇಳ್ದವರಾಶ್ಚರ್ಯಗೊಳಲು
ಪೂಜಾರಿಯೊಬ್ಬನು ಬಂದು ಕೈಮುಗಿದು
"ದೇವ, ಮುನ್ನರಿಯಿರೆ ಈ ವಾಲುಮೀಕಿ
ದೇವದೇವನು ಲಸತ್ಪ್ರೀತಿ ತುಳ್ಕಾಡೆ-
ಯಚ್ಚರಿಗೊಳಿಸುವೀತನ ಹಾಡುಗಳಿಗೆ
ಮೆಚ್ಚಿಯೋ ಭಕ್ತಿಗೆ ಮೆಚ್ಚಿಯೊ ತಿಳಿಯೆ
ಪಡಿ ನಿತ್ಯ ಸಾವಿರ ಹೊಂಗಳನೀವ
ಮತ್ತೆಯು ಬೇಡಲು ಕೊಡದಿರನೇನ,
ಮಗನೆಂದು ಮನ್ನಿಸಿ ಕಡುಮುದ್ದಗೈವ-
ನೆಡೆವೋಗಿ ಸೂಳೆಯಸದನಕೆ ತಾನೆ

ಅನುರಾಗಹೇತು ಸರ್ವಾರ್ಥಸಂಪದದಿ
ತಣಿಸಿ ನಂಬಿಗೆ ವಿಟತ್ವವ ಸಲ್ಲಿಸುವನು
ಇಂತು ವಿದೂಷಕನಂತೀರ್ವರೊಲವ-
ಲರಲನ್ಯೋನ್ಯಗುಣಾಂಕನಗಳನು ಗೈವ-
ನರ್ಥಿಯಿಂ ತಾನೆ ನಾಗರಿಕನಂತವನ
ಸರಸೋಚಿತಾಲಾಪಸಂಪದದಿಂದ
ತಣಿಸುತ ಪೀಠವರ್ಧಕನಂತವನ
ಪರಿಚರ್ಯೆಗಳ ಬಳಿಗೆಲಸವಗೈವ-
ನೆಲ್ಲವ ನುಡಿಯಲೇತಕೆ ಮಾರುವೋಗಿ-
ರುವನು ಶಿವನು ನಂಬಿಯಣ್ಣಗೆ"ಯೆನಲು

"ಇವನೇನು ನಂಬಿ! ಮುನ್ನೀತಗೆ ಶಿವನು
ಪ್ರೀತಿಯಂ ಪಡಿಯೀವನೇ? ಒಳ್ಳಿತಾಯ್ತು.
ಈತನ ಭಕ್ತಯನಿವನಿಗೆ ಕೂರ್ಪ-
ನಾತನ ಕೂರ್ಮೆಯ ನೋಡುವೆ"ನೆನುತ
"ನಂಬಿಯು ಗಿಂಬಿಯು ನಂಬಿಗೆ ಕೂರ್ಪ
ಶಂಭುವು ಗಿಂಭುವು ಸಕಲಭಕ್ತರಿಗೆ
ಹೊರಹೊರಗೆ"ನ್ನುತ ಹೊಡೆಸಲು ಗಂಟೆ-
ಯನ್ನಾಗ ಮಿರುಮಿಂಡನಲ್ಲನೈನಾರು

ಅಲ್ಲಿದ್ದ ಜನರೆಲ್ಲರಕ್ಕಜಗೊಳಲು
"ಇಲ್ಲಿರೆ ಸರಿಯಲ್ಲವಿನ್ನು ಬಾ"ರೆನುತ

ಮುಖಮಂಟಪದಲಿ ಮುನ್ನೋಲಗವಿತ್ತು
ಅಖಿಲಭಕ್ತರುಗಳಾಗ್ರಹವನಾಲಿಸುತ
ಭಯಭಕ್ತಿಯುಕ್ತಿಯು ಭಕ್ತ್ಯೈಕದೇಹ–
ತೆಯು ನಂಬಿಗರಿಪಲು ಬಗೆದು ಶಂಕರನು
'ಅಯ್ಯೊ'ಯೆಂದಾಗ 'ಏನಯ್ಯಾ'ಯೆಂದೆನುವ
ಮಧುರವಾಕ್ಯಗಳನಾ ಜೀಯನಡಗಿಸಿ
ಗಕ್ಕನೆ ಕೈಸನ್ನೆಯಲಿ ಬಳಿಕರೆದು
ಚಕ್ಕನೆ ಸಾಕಾರಸನ್ಮೂರ್ತಿಯಾಗಿ
ಗಡಗಡನಡುಗುತ ವಾಲ್ಮೀಕಿದೇವ–
ನೊಡೆಯ ನಂಬಿಯ ತನ್ನ ಹೆಡಗಚ್ಚೆಯನ್ನು

ಬಿಗಿಯಾಗಿ ಹಿಡಿಸಿ ಸದ್ಭಕ್ತಸಮೂಹ–
ದೆದುರಿಗೆ ಹೋಗಲು ಕಡುಭಯವೊಂದಿ
ಸಪ್ಪಳಗೈಯದೆ ಜಲಹರಿದೆಸೆಗೆ
ತಾನಾಗ ತೊಲಗಿಯೊಯ್ಯನೆಯಡಿಯಿಡುತ
ಸರಿದು ದೀಪಗಳನು ಮರೆಗೊಳಿಸುತ್ತ
ಕುಗ್ಗಿ ಮೂಲೆಗಳಿಗೆಯೋಸರಿಸುತ್ತ
ಮೆಲ್ಲಡಿಯಿಡುತ ಕರಗಳಿಂದ ಗೋಡೆ
ಕಲ್ಲನಾಧರಿಸುತಲುಲಿಯನಾಲಿಸುತ
ಲಲಿತನವಪುಷ್ಪಮಾಲಾವಿಲಂಬಿ
ಕೀಲನಪಂಕ್ತಿಗಳಿಕ್ಕೆಲದಾರಿ–

ಯಲಿ ಹೋಗಿ ಹೃದಯವು ತಟತಟ ಹೊಡೆಯು–
ತಲಿರಲು ಗರ್ಭಗೃಹಾಂತವ ಬಿಟ್ಟು
ಮೆಲ್ಲನೆ ಮೆಲ್ಲನೆಯಡಿಯಿಟ್ಟು ಹೊರಟು
ನಿಧನಿಧಾನದಿ ಕರಗಳ ಬಳಿ ಬಂದು
ಜಾಲಕ ಸಮಿತಿಯು ಬಳಿಯಲಿ ಬಗ್ಗಿ–
ಯಿಣುಕಿ ನೋಡುತ ಕಿರುದೂರದಿ ನಿಂತು
ಹೋಗದಿರಲು ಅಂಜಿ ಹೋಗಲೂ ಅಂಜ–
ಲಾ ವಾಲುಮೀಕೇಶನಾತ್ಮವದದಿರೆ
ಬದಿಯಲಿ ನಿಂತು ಸಂಚಲಿಸಿ ತ್ವರೆಯಲಿ
ಸಂದಣಿಯೊಕ್ಕು ಪೂಜಾರಿಗಳೆಲ್ಲ

ಘನಭಕ್ತನಿಚಯವು ಕಾಣುವುದೆಂದು
ಹೆದರಿ ಕರಾಗ್ರಗಳನು ಅಡ್ಡವಿಡಿದು
ಹಿಂಜರಿಯುತ ಬೇಗ ಸುಕನಾಸಿ ದಾಟಿ
ಚಕ್ಕನೆ ಗುಡಿಯ ಹಿಂದೆಸೆಗೆ ತಾ ಬಂದು
ಬೆನ್ನಟ್ಟುತಹರೇನೋಯೆನ್ನುತ ಹಿಂದೆ
ಮತ್ತೆಯಾಲಿಸುತಲಿ ಬೆಗಡುತ್ತ ನಡೆದು
ತರಗೆಲೆಯಲುಗಲು ಭಯಗೊಂಡು ನಿಂತು
ಕತ್ತೆತ್ತಿ ನೋಡಿ ನಾಲ್ದೆಸೆಯನಾರಯ್ದು
ಮೆಟ್ಟುಗಾಲಿಟ್ಟು ನಡೆಯುತಲಿ ಬಗ್ಗಿ
ಬಗ್ಗಿಯೋಡುತಲಿಣುಕಿಣುಕಿ ಕುಗ್ಗುತ್ತ-

ಲಲ್ಲಿದ್ದ ಕಲ್ಲುಕೋಟೆಯದೊಂದು ಕಲ್ಲು
ಸ್ಫುಟಪದಾಂಗುಳಿಯಿಂದ ಬುವಿಯೆಡೆ ನೂಕಿ
ಕಡುಭಯದಲಿ ಕಂಡಿಯನು ತೂರಿ ಬಂದು
ಬೇಗದಿ ಕಿರುಜಂಘೆ ನಡುನಂಘೆಯಿಡುತ
ನೀಳ ಹೆಜ್ಜೆಗಳಿಡುತೋಡುತ್ತ ಮುಂದೆ
ಧರೆಯೊಪ್ಪೆ ಕ್ರೋಶಮಾತ್ರದಲಿ ತಾನೊಂದು
ವರವಿಚಿತ್ರೋದ್ಯಾನವನವನು ಕಂಡು
ಹೋಗದೆ ದಿಗ್ಭ್ರಮಿತಾತ್ಮದಿ ನಿಂತು
"ಊರಿದುವೋಯೆಂದು ಊರಲ್ಲವುರುತ-
ರಾರಣ್ಯವೋ ಊರು ಅಡವಿಯು ಅಲ್ಲ

ಹೃದ್ಯಶಾಕಾತತಿಯಿಂದ ತರುಗಳು
ತಾವೊಪ್ಪಲುದ್ಯಾನವನವಿದಡವಿಯೊ
ಆಗಿರಲಿದುವೂರಾಗಿರದಿರೆ ಸಾಕು
ಘೋರಾಟವಿಯೊಯಿದುವುದ್ಯಾನವನವೊ
ಆಗಲಿಯೆನುತ ಮೆಲ್ಲನೆ ವನಾಂತರಕೆ
ಹೊಗುತಾಗ ಮುನ್ನಿನ ದಾರಿಯ ಬಿಟ್ಟು
ಹುಣಿಸ ಮಾವಿನ ಮರಗಳಿರುವ ತೋಪ
ಕೆಲದೊಳೊಪ್ಪುವ ಸರೋವರವನೀಕ್ಷಿಸುತ
ಪಾರಿಜಾತ ವಕುಳ ಬಂಧೂಕ ಕರ್ಣಿ-
ಕಾರ ಕ್ರಮುಕ ಕೋವಿದಾರವ ಬಿಟ್ಟು

ಚಂದನ ಘನಸಾರ ಚಂಪಕಾಶೋಕ
ಮಂದಾರ ತರುಗಳ ಜಾಗವ ದಾಟಿ

ಇಂಬಾದ ಮಾದಿಫಲಂಗಗಳ ಕುರವ-
ಕಂಗಳ ನಾರಿಕೇಳಂಗಳ ಕೆಲದ
ಮಾಗಧೀ ಕರವೀರ ಮಾಲತಿಕುಂದ
ನಾಗಕೇಸರ ವಿಕೀರ್ಣಸ್ಥಳಮಧ್ಯೆ
ಮಲ್ಲಿಕಾವಿದ್ರುಮಮಾಧವೀದ್ರಾಕ್ಷ-
ವಲ್ಲರಿವೇಷ್ಟನ ಸಲ್ಲೀಲೆಯಿಂದ
ಲಲಿತ ತದೀಯ ಕಿಸಲಯ ಪ್ರಸೂನ
ಫಲಪುಂಜಗಳ ಪ್ರಭೆ ಪ್ರಜ್ವಲಿಸುತಿರೆ

ಮೆರೆವ ಪುನ್ನಾಗ ರಂಭಾಪರಿವೇಷ್ಟಿ-
ತವೆನಿಪ ಸಂತಾನ ಧರಣೀರುಹಗಳ
ಕಾಣುತ ಮುಂದಲ್ಲಿ ಗುಡಿಯೆಂದು ಬಗೆದು
ಅಡಿಯೆತ್ತದತಿ ಸಂಶಯಾತ್ಮದಿ ನೋಡಿ
ಈ ವನಮಧ್ಯದಲ್ಲಿಹುದಿದು ಗುಡಿಯೊ,
ಕಾಣಿಸುತಿರುವಂಥ ಘನಕಲ್ಪತರುವೊ,
ತರುಶಾಖೆಗಳೊಯಿವು ಹೇಮಕುಂಭಗಳೊ,
ಘನವಿದ್ರುಮಲತಾಪ್ರಸವಮಂಜರಿಗಳೊ!
ಈ ಮಂಜರಿಗಳಲಿರುವ ರತ್ನಪಂಕ್ತಿ-
ಯೋ ಮಲ್ಲಿಕಾತತಿಯೋ! ಪುಷ್ಪತತಿಯೊ?

ಈ ಪುಷ್ಪಪಂಕ್ತಿಯೆಮಗೆ ಹೊಂದದೆಂದು
ಅತಿಶಯವಾಗಿ ಬೆಳೆದು ವೇಷ್ಟಿಸಿರುವ
ನಮಗೆ ಕಟ್ಟಿರುವಂತಹತಿಶಯ ಗುಡಿಯೊ?
ಪ್ರಾಕಟ ಪುಷ್ಪವಿಸ್ಫಾರ ಗುಲ್ಮಗಳೊ?
ಈ ಗುಲ್ಮಗಳ ಮಧ್ಯೆ ಭೂಜರಾಜನಿಗೆ
ಒಲವಿಂದ ತಣ್ಣನೆಗಾಳಿಯು ಬೀಸೆ
ಸಾಲ್ಗೊಂಡ ಪಚ್ಚನೆಯಾಲವಟ್ಟಗಳೊ!
ತೊನೆದಾಡುತಿರುವಂಥ ಕದಳೀದಳಗಳೊ,
ಈ ಕದಳೀದಳಾನೀಕವ ಸುತ್ತಿ
ಪ್ರಾಕಾರಲೀಲೆಯಿಂ ಪ್ರಜ್ವಲಿಸುತಿಹ

ವಿನುತಿಗೇರಿದ ಕಲ್ಪವೃಕ್ಷವೊಯಿದುವೆ,
ಅನುಮಾನವೊಂದಿಷ್ಟು ಸಲ್ಲದುಯೆನುತ
ಶೀತಲದಲಿ ಕಡು ರಾಜಿಸುತಿರುವ
ಆ ತರುಚ್ಛಾಯೆಗೆ ಮೆಲ್ಲನೆ ನಡೆದು

ಭುವಿನಿಪತಿತ ಪುಷ್ಪಗಳು ಗಾದಿಯಾಗೆ
ಶಿವನು ಸುಖಾಸನಾಸೀನನಾಗಿದ್ದು
ಬಿಟ್ಟ ನಿಟ್ಟುಸಿರು ವ್ಯಾಪಿಸಲೆದೆಯನ್ನು
ನೀವಿಕೊಳ್ಳುತ ನಂಬಿ ಮೊಗವ ನೋಡುತ್ತ
ಸಂಗತಾನನ ಘರ್ಮಜಲಗಳ ಕರತ-
ಲಾಂಗುಳಿಯಲಿ ತೆಗೆತೆಗೆದು ಹಾಕುತ್ತ-

ಲಾ ಕದಳೀದಳಚಲನಸಂಕಲಿತ
ಮಲಯಾನಿಲಕೆ ತನ್ನ ಮನವನೀಯುತ್ತ
ನಾನಾವಿಧಾನೇಕ ನವಪುಷ್ಪ ಪರಿಮ-
ಳಾನೂನ ವಾಸನೆಗಾತ್ಮದಿ ಸೊಕ್ಕಿ
ಘನಸಾರಚಂದನಕ್ಷ್ಮಾಜಸೌರಭದ
ಶೀತಲ ಸಂಗತಿಗೆದೆಯಲೊಗ್ಗುತ್ತ
ಪರಿಮಳಾಹೃತಭೃಂಗಪಕ್ಷೋಪನಿಹನಿ-
ಯಿಂ ಬೀಳುವಾ ಪರಾಗಕೆ ಶಿರಬಾಗಿ
ಹಿಮಕರ ಶೇಖರನಮೃತಾಂಗನಿಂತು
ಗಮನೋಪತಾಪೋಪಶಮನವ ಹೊಂದ-
ಲೊಯ್ಯನೊಯ್ಯನೆ ನಂಬಿಗುನ್ಮದ ಕುಗ್ಗ-
ಲಾಗ ಭಕ್ತಿ ಭಯಗಳಾತ್ಮದಿ ತೊಡಗೆ
"ಅಯ್ಯಾ, ಇದೇನಯ್ಯ, ಜೀಯ, ನಿನ್ನಂತ-
ಹವನಿಗು ಇಂತಹ ಭಯವಾತ್ಮಕಾಯ್ತು
ಹೆಚ್ಚುತಲಿಹುದಿಂತೇಕಾಯಿತು" ಎನಲು
ಆಗ ವಾಲ್ಮೀಕೇಶನಾತಗಿಂತೆಂದ:

### ಶಿವಭಕ್ತರ ಮಹಿಮೆ

"ಅವಿಕಲವೇದ ವೇದಾಂತಪುರಾಣ
ವಿವಿಧಶಾಸ್ತ್ರಾರ್ಥ ಸಂವಿತ್ಪ್ರಮಾಣಗಳ-
ಲೆಮಗು ಮದ್ಭಕ್ತಮಂಡಲಕು ನಡುವೆ ವಿ-
ವೇಚಿಸಲೆಲ್ಲಿಹುದಯ್ಯ ವಿಭೇದ?

ಭಕ್ತರಿಗೆಂದೆಂದು ನಾ ಪ್ರಾಣವೆನಗೆ
ಭಕ್ತರ ದೇಹವೆ ಪರಮಾರ್ಥವಹುದು.
ಮದ್ಭಕ್ತಸೇವೆಯೇ ಮತ್ಪಾದಸೇವೆ
ಮದ್ಭಕ್ತ ದೇಹವು ನಮ್ಮದೆ ದೇಹ
ಮದ್ಭಕ್ತವಿನುತಿಯೆ ಮದ್ಗುಣವಿನುತಿ
ಮದ್ಭಕ್ತನಿಂದೆಯೆ ಮತ್ತತ್ವನಿಂದೆ

ಸನ್ನುತಲೀಲರಾ ಜಂಗಮಾವಳಿಯ
ಮನ್ನಿಸದಿರಲಾಗಲೆಲ್ಲ ನಿಷ್ಫಲವು.
ಶಂಭುಪೂಜನವು ತಾ 'ಸ್ಥಾವರೇ ನಿಷ್ಫ-
ಲಂಭವೇ'ತ್ತೆಂದು ಸಾರುತಿವೆ ಶ್ರುತಿಗಳು!

ಭಕ್ತೈಕದೇಹಿಯು ಭಕ್ತವತ್ಸಲನು
ಭಕ್ತಸತ್ತ್ರಾಣನು ಭಕ್ತರಾಶ್ರಿತನು
ಭಕ್ತಪರಾಧೀನಯುಕ್ತನುಯೆಂದು
ಭಕ್ತಿಗೊಲಿವುದು ಪ್ರಖ್ಯಾತವಾಗಿಹುದು.

**ಬಾಣನ ಕಥೆ**

ಎಂತೆನೆ, ವೀರಮಾಹೇಶ್ವರ ಭಕ್ತಿ-
ಯಿಂದಿದ್ದನಾಗ ವಿನಿಶ್ಚಲಾತ್ಮಕನು
ಬಾಣನು ತಾನು ಸದ್ಭಕ್ತಿಕ್ರಿಯಾಧು-
ರೀಣನು ಲಿಂಗಮೂರ್ತಿಗೆ ಸಾಂಗವಾಗಿ
ಸಾವಿರ ಸಲ ನಿತ್ಯವಿಧಿನೇಮ ಹೊಂದಿ
ಬಿಡದೆ ಪೂಜೆಗಳನು ಮಾಡುತ್ತಲಿರಲು

ದೇಹಧರ್ಮಗಳಿಗೆ ತೆರಹಿಲ್ಲವಾಗೆ
ಬಾಹುಸಹಸ್ರವ ಬಾಣನಿಗೀಯ-
ಲದುವೊಂದು ಸಲಕೆ ಸಾವಿರ ಬಾರಿಯಾಗಿ
ಸದಮಲ ಭಕ್ತಿಯಿಂ ಪೂಜಿಸುತಿರಲು
'ಆ ಬಾಣನಿಗೆ ಮೆಚ್ಚಿ ಬಾಹುಸಹಸ್ರ-
ವೇಣಾಂಕ ಧರನಿತ್ತನೀಗಳೆಂದೆ'ನುತ
ಸಂದರ್ಶನಾಸಕ್ತಿಯಿಂ ಬಹ ಭಕ್ತ
ಸಂದೋಹ ಶಿವಕಥಾಸಂಗದಲ್ಲಿರಲು
'ಆ ಮುನ್ನಗೈವಲಿಂಗಾರ್ಚನೆಗಳಿಗೆ
ಇಲ್ಲೆಡೆಯಿರದಿರಲೇಗೈವೆ'ನೆನುತ

ಭರದಿ ಲಿಂಗಾವಸರಗಳನು ಗೈದು
ತೊಡಗಿ ಪ್ರಸಾದವ ತಿನ್ನುವಷ್ಟರಲಿ
ಒಳಗೆ ಬಿಡದೆ ಬಾಗಿಲಲ್ಲಿಯೆ ನಿಂತು
ಯಾರಿಗಾದರೂ ಮನೆಯಲಿ ಗೋಷ್ಠಿಯಿತ್ತು
ಬಾಗಿಲ ಕಾಯುವನಾಗಿದ್ದನವನ
ಬಾಗಿಲ ಕಾದೆನು ಲೋಕವೆ ತಿಳಿಯೆ

### ಪಿಟ್ಟವ್ವೆಯ ಕಥೆ

ಮತ್ತಲಾ ಮುದಿಗೊಂಡವೆಂಬವೂರಲ್ಲಿ
ಭರದಲಿ ಕರಿಕಾಲಮಂಡಲೇಶ್ವರನು
ಕಾವೇರಿಯನು ಕಟ್ಟೆ ಮನೆಮನೆಯವರು
ಹೋಗಲು 'ನಿನಗಾಗಿ ನಾ ಹೋಹೆ'ನೆನುತ

ಪಿಟ್ಟವ್ವೆಯಾ ಭಕ್ತಿಯನು ಮೆಚ್ಚಿನಾನೆ
ಬಿಟ್ಟಿಗೆ ಹೋದೆ ನಾ, ಕೇಳದಲ್ಲದೆಯೆ

### ಕಲಿಕಾಮದೇವನ ಕಥೆ

ನಿತ್ಯಾರ್ಥವಹ ಸ್ವಾಮಿಭೃತ್ಯಸಂಬಂಧ
ಕೃತ್ಯಸದ್ಭಾವನಕ್ರಿಯೆ ತುಳುಕಾಡೆ
'ಅಕ್ಕಟಾ, ಸ್ವಾಮಿಯ ದಿವ್ಯಾಂಘ್ರಿಕಂಜ-
ಗಳು ತಾವು ಕಂದುವುವೆನ್ನದೆಯಿಂತು
ಅತಿಶಯ ಕ್ರೂರಚಿತ್ತವ ಪಡೆದೊಡೆಯ
ನಂಬಿಯೆಂಬುವನು ಭಯವಿನಿತಿಲ್ಲದೆಯೆ
ಕೀಳು ಕಾರ್ಯಕೆ ಕಳಿಸುತ ವೇಶ್ಯೆಮನೆಗೆ-
ಯೆಡೆಯಾಡಿಸುತ್ತಹುದನ್ನರಿತಿದ್ದು

ವಾರಿಸದಾದ ತಿರುವಾಲೂರ ಭಕ್ತ-
ರೆಲ್ಲ ಸುಮ್ಮನೆ ನೋಡುತಿರುವರೆ ಹೊರತು
ಶಿವನ ಕಳಿಸುವುದು ಸರಿಯಲ್ಲವೆನರು,
ಅಥವಾ ನಂಬಿಗೆ ಬೇರೆ ಭೃತ್ಯನೊಬ್ಬನನು
ಪರಿಯರ್ಚೆಗೈಯಲು ನಿಯಮನಗೊಳಿಸು-
ವವರಿಲ್ಲವೆನಲೇನು' ಯೆನ್ನುತುಗ್ರದಲಿ
ಕಲಿಕಾಮದೇವನೆನ್ನುವವನೀಯೂರ
ಹೆಸರನೀ ವಾರ್ತೆಯ ಕೇಳಿ ತಾ ಸಿಡಿದು
ತಾನೆಂಥ ಬಲ್ಲಿದನಾಗಲಿ ಹಿಡಿದು
ಭಂಜಿಪೆಯಲ್ಲೈದು, ಅಂತೊಡಬಡಿಸಿ

ಚಕ್ಕನೆಯಾತನ ತಂದು ಸಮ್ಮುಖಕೆ
ಒಂದಾಗಿ ಸೇರಿಸದಿರಲೇಕೆಯಿನ್ನು?
ಕೈಚಾಚಿ ನಿಮ್ಮ ತಾತನ ಕೈಲಿ ನಮ್ಮ
ತಾತನು ಹಳೆಯ ಸಾಲವನು ಕೊಂಡಿಹನೆ,

ಕೇಳಿದಾಕ್ಷಣ ನಿನಗರ್ಥವೀಯಲ್ಕೆ
ಬಳಿಗೆಲಸವಿರಲು ಓಡಿಗೈಯಲ್ಕೆ?
ಅಧಿಕ ಭಕ್ತಿಯ ನಿಮಿತ್ತದಲಲ್ಲವೇನು
ತಾನೊಲಿಯುತಲೊಡನಾಡುತಿರುವುದು?
ಅದಕೆ, ನಮ್ಮಯ ಭಕ್ತಗಣಗಳ ನಡುವೆ
ನೀನಹಂಕರಿಸುತ ನಿಲಲೆಷ್ಟರವನು?

'ಭ್ರಾಂತಿ ಸಂಸರ್ಗಜಾಃ ಪಾಪಗುಣಾಭ-
ವಂತಿ'ಯೆಂಬ ನುಡಿಯಾಯಿತು ವಸುಧೆಯಲಿ
ನಿನ್ನ ಕಾರಣದಿಂದಲಲ್ಲದೆ ಭಕ್ತ-
ರಿಗೆಮಗೆ ವಿಷಮತೆ ಮನದೊಳಗಿಹುದೆ?"
ಎಂದಿಂತನೇಕ ದೃಷ್ಟಾಂತರಗಳನು
ಮನಸಿಜಹರನು ನಂಬಿಗೆ ಸ್ಪಷ್ಟವಾಗಿ
ಭಕ್ತರ ಮಹಿಮೆಯ ಭಕ್ತರ ಘನತೆ
ಭಕ್ತರ ನಡವಳಿಯನೊಲಿದು ತಿಳಿಸಿ
ನಯವನತಿಶಯವಿನಯವನು ಭಕ್ತಿ
ಭಯವನು ತತ್ವನಿರ್ಣಯವನು ಹೇಳೆ

ಪ್ರಥಿತ ಜಂಗಮಮಹಾಭಕ್ತಸ್ಥಲಕ್ಕೆ
ಪಥವ ತೋರಿಸೆ ಸಾಷ್ಟಾಂಗವೆರಗಿ ನಂಬಿ
"ಸದ್ಗುರುಮೂರ್ತಿ, ಜಗದ್ಗೀತಕೀರ್ತಿ
ಹೃದ್ಗತವಾಗಿಹ ಮದ್ಗರ್ವವಡಸಿ
ಸದ್ಗತಿಯನು ತೋರಿ ಜಂಗಮಭಕ್ತಿ
ತದ್ಗತಗೈದಿಹೆ ಧನ್ಯನಾನಾದೆ.
ಕಡುದೈನ್ಯ ತೋರಿಸಿಯಭಯವ ಬೇಡಿ
ಶರಣೆಂದು ಪ್ರಾರ್ಥಿಸಿ ಸಂಸ್ತುತಿಗೈದು
ಅಡಿಗೆರಗುತ ಬಂಟನಾಗಾಡಿಪಾಡಿ
ಪಡೆವೆನೆಂತಾದರೂ ಭಕ್ತರ ಕರುಣೆ

ನೋಡಿನ್ನು ನಿನ್ನ ಮಗನ ಭಕ್ತಿ"ಯೆಂದು
ತಾನಲ್ಲಿ ಭಕ್ತಾಳಿಗಭಿಮುಖನಾಗಿ
ಅಡಿಗಡಿಗವನು ತಾಳವನು ಹಾಕುತ್ತ-
ಲಲ್ಲಿಯೆ ಧರೆಯಲಿ ಸಾಷ್ಟಾಂಗವಿಡುತೆ
ತಾಳ ಚಂಗೆನುವಂತೆ ಧ್ವನಿಸುತ ಮೊಕ್ಕಿ
ವೇಳಾನುಕೂಲವಿಲೋಲರಾಗಗಳು

ಹರಿಯೆ ಮಹಾಭಕ್ತ ಚರಿತೆಗಳನ್ನು
ನಾದಭರಿತವಹ ತಿರುಪಾಡುಗಳಲಿ
ಹಾಡುತ್ತಲೊಬ್ಬೊಬ್ಬ ಭಕ್ತನ ಚರಿತೆ-
ಯನ್ನು ಹೊಗಳಿದನಾ ರೀತಿಯೆಂತೆನಲು

### ಎಣುಮೂರ್ತಿ ನೈನಾರ ಕಥೆ

ಲೀಲೆಯಿಂದಲಿ ತನ್ನ ಪ್ರಾಣಲಿಂಗಕ್ಕೆ
ತ್ರೈಕಾಲದಲ್ಲಿಯು ಮೇಲುಚಂದನವ-
ನನುರಕ್ತಿನಿಯತಿಯಿಂದರ್ಪಿಸುತಿರಲು
ಧನವೆಲ್ಲ ಚಂದನಕಾಗಿಯೆ ಸಮೆಯೆ
ಕಡು ಬಡತನ ಬರೆ ಗಂಧವನಾವ
ಬಗೆಯಲು ಪಡೆಯಲಾರದೆ ನಿರ್ಣಯಿಸುತ
"ಚಿಂತಿಸಲೇಕೆ ತನ್ನಲಿಹುದು ಭಕ್ತಿ-
ಸಂಪದವಲ್ಲದಲರ್ಥವೆ ಆಸ್ತಿ
ಮನದಲಿ ನೆನಹಿಲ್ಲದಿರುವುದೆ ಭಕ್ತಿ
ಹೀನತೆಯಲ್ಲದರ್ಥದ ಕೊರೆಯೇನು?

ತನುವಿರೆ ಮನವಿರೆ ತಲ್ಲಣಗೊಳಲು
ಮೆಚ್ಚುವನೇ ಪ್ರಾಣನಾಥನಾದೀಶ
ತನುವೆಲ್ಲವದು ಗಂಧವಾಗಲು ತೆಯ್ದು
ಅನುಷಕ್ತಿಯಲಿ ನಿತ್ಯವರ್ಷಿಪೆನಿನ್ನು
ನೆತ್ತರು ಸುರಿಯಲು ಮೈಬಣ್ಣವಳಿಯೆ-
ಲೀರೀತಿ ತನುಗುಣವಿನಿತು ತೋರಿದರೆ
ಮೆರುಗು ಕುಂದಿದರೆ ಮೈಸಡಿಲವಾಗಿರಲು
ಇನ್ನು ಚಂದನಕು ಕೊರತೆಯು ತೋರಿದರೆ
ಕಾಂತಿಗುಂದಲು ಬಣ್ಣ ಸಾಮಾನ್ಯವೆನಿಸೆ
ಲೇಪನವಿಳಿದರೆ ಒಪ್ಪ ಕಂದಿದರೆ

ಕಂಪು ತಾ ಕುಂದಲು ಗಡ್ಡೆ ಗಟ್ಟಿದರೆ
ಕೆಂಪು ಕಡಿಮೆಯಾಗೆ ಕ್ರಿಯೆಯು ಕುಗ್ಗಿದರೆ
ತಂಪಿಲ್ಲದಿರಲು ಲೇಪನಕೆ ಬಾರದಿರ-
ಲಿಂಪಾಗದಿರಲು ವಾಸನೆ ಬರುತಿರಲು
ಆಗಲ್ಲವೇ ಅಂಕ ನನಗು ಶಿವನಿಗು
ಕಳವಳವೀಗಲೆ ತಾನೇಕೆ"ಯೆನುತ

ಮುದದಿಂದಲೆಡಮೊಣಕೈಯ ಸಾಣೆಯಲಿ
ತೇದು ತೆಗೆಯುತ ಶ್ರೀಗಂಧವ ಪಡೆದು
ಶಿವನಿಗರ್ಪಿಸುತ ಭಜಿಸುತ ಮೆಚ್ಚಿಸುತ
ಬುವಿಯಲಿ ಜನ ನೋಡಲು ವಿಮಾನವೇರಿ

ಮೃಡನಗರಿಗೆ ದೇಹವೊಡಗೂಡುತಾಗ
ನಡೆದೇಣುಮೂರ್ತಿಯ ಬಂಟನು ನಾನು

## ಕಡಮಲನಂಬಿಯ ಕಥೆ

ಪ್ರಾಣಲಿಂಗಕೆ ತಾನು ಪ್ರತಿದಿನದಲ್ಲಿ
ಜಾಣತೆ ಬೆಳಗಲು ನಿಜವ್ರತವನ್ನು
ಕಟ್ಟರ್ಥಿಯಿಂದಲಖಂಡ ದೀಪಗಳ
ಮಾಣದೆ ನಿತ್ಯ ಸಹಸ್ರವ ಬೆಳಗ-
ಲದರ ನಿಮಿತ್ತದಲರ್ಥವು ಸವೆಯೆ
ಮನಸಿನಲ್ಲೊಂದನುಮಾನವಿಲ್ಲದೆಯೆ
"ತನುವೊಂದನುಳಿದರ್ಥವೆಲ್ಲ ಸವೆಯಿತು
ತನುವ ನಿವೇದಿಪ ಸಮಯ ಬಂತೀಗ

ತಲೆಮೈಯಿಗಳನುರಿಸುತ್ತಲಿ ದೊಡ್ಡ
ಬೆಳಗನಿಕ್ಕುವೆ"ನೆಂದು ಕೂದಲ ಬಿಚ್ಚಿ
ಜ್ವಲನಕೊಡ್ಡುತ ಶಂಭುವನ್ನು ಮೆಚ್ಚಿಸುತ
ಮೆರೆದ ಕಡಮಲನಂಬಿಯ ಬಂಟ ನಾನು

## ಗುಗ್ಗುಳು ಕಲಿಯಾರನ ಕಥೆ

ಆಸಕ್ತಿಯಿಂ ಮಹಿಸಾಕ್ಷಿ ಧೂಪವನು
ಭಾಷೆಯಿಂದಲಿ ಮತ್ತೆ ಪ್ರಾಣೇಶ್ವರನಿಗೆ
ಅಂದಿಂದುಯೆನ್ನದೆ ನಿತ್ಯನೇಮದಲಿ
ಮೂಸಂಧ್ಯೆಗಳಲಿ ಧೂಪವ ಸಮರ್ಪಿಸುತ
ಸತಿಯ ಮಂಗಳಸೂತ್ರವದು ಮೊದಲಾಗಿ
ಅರ್ಥವೆಲ್ಲವನಿಂತು ಸಲ್ಲಿಸುತ್ತಲಿರಲು

ತಿರುಪರಂಧಾಮದಂದುರಗೇಶ್ವರೇಶ-
ನುರಗಕನ್ಯಕೆಯರು ಸ್ಫುರಣದಿಂ ಹಾಡೆ
ಸೋತು ಮುಂದಕ್ಕಿಷ್ಟು ವಾಲಲು ಧರಣಿ
ಪಾಲನು ಹಲವಾರುಪಾಯಗಳಿಂದ

ನೆಟ್ಟನೆ ನಿರಿಸಲಾರದೆ ಚಲಿಸುತಿರ-
ಲಲ್ಲಿಗೆ ಹೋಗಿಯತ್ಯರ್ಥಿ ತುಳ್ಕಾಡೆ
"ಇಷ್ಟಪಟ್ಟನಿತು ಗುಗ್ಗುಳವೆನಗೀಯೆ
ನಿಲಿಸುವ ನೆಟ್ಟನೆ ನಿಟಿಲಾಕ್ಷನ"ನೆನೆ
ಮಹಿಯಲ್ಲಿ ಮಹಿಸಾಕ್ಷಿರಾಶಿಯ ಹಾಕಿ
ಮಹಿಪತಿಯೊಪ್ಪಿಸಿ ಸಾಷ್ಟಾಂಗವೆರಗೆ

ಪ್ರೀತಿಯಿಂ ಕೈಕೊಂಡನಖಿಲರು ತಿಳಿಯೆ
ಒಂದು ಪಟ್ಟಾವಳಿಯನು ಹರಿದೊಂದು
ದಿಕ್ಕೀಶನೊಡನೆ ಸಂಧಿಸುತ ಬೇರೊಂದು
ದಿಕ್ಕಲಿ ಶಸ್ತ್ರವೊಂದಕೆ ಕಡುಬಿಗಿದು
ಗಕ್ಕನೆ ಶಸ್ತ್ರವ ತನ್ನ ಕಂಠಕ್ಕೆ
ಆನಿಸಿ ಹಿಂದಕೆ ನಿಗುರಿದ ತಡವೆ
ಎಂದಿನಂತಲ್ಲಿ ನಾಗೇಶನು ನಿಲ್ಲ-
ಲಾಗ ಪ್ರತ್ಯಕ್ಷವಾಗುತ ಕರುಣಿಸಲು
ಪಡೆದು ತಾನಪುನರ್ಭವದಲೀಲೆಯನ್ನು
ಮೆರೆದ ಗುಗ್ಗುಳ ಕಲಿಯರ ಬಂಟ ನಾನು

**ಅರಿವಾಳು ನಾಯನಾರ ಕಥೆ**

ಲೀಲೆಯಿಂ ಮತ್ತೆ ತನ್ನಯಲಿಂಗಕೆ ತ್ರಿ-
ಕಾಲಗಳಲಿ ನಿಯಮದಲಿ ರಾಜನ್ನ-
ದಕ್ಕಿಯೋಗರವ ಸಮರ್ಪಿಸಿ ತಾನು
ಲಿಂಗಲೀನನೆಯಾಗುತಿಂತು ವರ್ತಿಸಲು
ತನ್ನಾಸ್ತಿಯೆಲ್ಲವೂ ತತ್ಕಾರಣದಲಿ
ಸವೆಯಲು ಮಿಕ್ಕುಪಾಯವದೊಂದಿರದಿರೆ
ಕುಡುಗೋಲನೊಂದನು ಹಿಡಿದು ಕೈಕೂಲಿ-
ಯನ್ನು ರಾಜನದಕ್ಕಿಗೊಡಬಡಿಸುತ್ತ
ಹಿಡಿದ ನಿಯಮವನು ವ್ರತಿ ಪಾಲಿಸುತಿರೆ
ಮುಂದಕೆ ಕೂಲಿಯು ಹುಟ್ಟದೆಯಿರಲು

ನಿಟ್ಟುಪವಾಸದೊಳೇಳು ದಿನವಿರೆ
ಹೇಗೆಯೊ ಎರಡು ಕೊಳಗದಕ್ಕಿ ದೊರೆಯೆ
ಸರಸರ ಹಿಡಿತಂದು ಸಂಭ್ರಮದಿ ಬರ-
ಲೆಡವಿ ಬೀಳುತಲೆತ್ತದಂತೆಯಾಯಕ್ಕಿ

ಮಣ್ಣಪಾಲಾಗಲು "ಪುರಹರ, ನಿನಗೆ
ಅರ್ತಿಯಿಂದರ್ಪಿಸಲೈತರುತಿರಲು
ಈಗದು ವಿಚ್ಛಿನ್ನವಾಯ್ತು ನಾನಿನ್ನು
ಸಾಯದಿರೆನು" ಯೆಂದು ಸಂಶಯವುಡುಗಿ
ಹೆಡೆಗಚ್ಚೆಯಿಂ ಕುಡುಗೋಲನು ತೆಗೆದು
ಕೊರಳಿಗಿಡುತ ಕತ್ತರಿಸಿಕೊಂಡಾಕ್ಷಣವೆ

ಪರಮೇಶನಂತಹ ಭಾಷೆಗೆ ಮೆಚ್ಚಿ
ತಾ ಪ್ರಸನ್ನತೆಯಲಿ ಕರುಣದಿ ನೋಡಿ
ಪರಮಪುನಭರ್ವವಪ್ರಾಪ್ತನಾಗಿದ್ದ
ಅರಿವಾಳು ನಾಯನಾರಿಯ ಭೃತ್ಯ ನಾನು

**ಅಡಿಭರ್ತನ ಕಥೆ**

ಮತ್ತೆಯು, ಆ ಪಾಂಡ್ಯಮಂಡಲದಲ್ಲಿ
ಮತ್ತೊಬ್ಬ ಕಾಯಕವೊಂದರಿಯದಲೆ
ಬಲೆಯೆತ್ತಿ ನೀರಲ್ಲಿ ಬೀಸಿದಾಕ್ಷಣವೆ
ಬಲೆಗೆ ಮೊದಲು ಬಿದ್ದ ದೊಡ್ಡಮತ್ಸ್ಯವನು
ಶಿವಪ್ರೀತಿಗೆನ್ನುತದನು ಹೋಗಬಿಡುವ-
ನಿದುವೆ ನೇಮವದಾಗಲಿತರ ಮತ್ಸ್ಯಗಳ

ನಂಗಡಿಯಲಿ ಮಾರಿಯದರ ಲಬ್ಧಿಯನು
ಜಂಗಮಾರಾಧನೆಗಳಿಗೆ ಸಲಿಸುತ
ಕಳೆಯಲು ಕೆಲವು ದಿನಗಳು, ಬೇಟೆಯದು
ದಿವಸವೈದರಲಿ ದೊರೆಯದಿರೆ ನೊಂದು
ಬಲೆಗೊಂಡು ಮರುದಿನ ಬೀಸಲು ಮೊದಲ
ಬಲೆಯಲದೊಂದು ಸುವರ್ಣದ ಮತ್ಸ್ಯ
ಸಿಕ್ಕಲದನು ಶಿವಪ್ರೀತಿಯೆನುತ್ತ-
ಲಲ್ಲಿ ಹೋಗಲು ಬಿಟ್ಟು ಬಲೆಯನು ಬೀಸ-
ಲಾ ಮೀನೆ ಸಿಕ್ಕಲಾ ರೇವನೆಬಿಟ್ಟು
ಭರದಿಂದ ಬಲೆ ಬೀಸಲೆಂದಿನ ಮೀನೆ

ಸಿಕ್ಕಲು ಬಿಡೆ ಮತ್ತೆ ಸಿಕ್ಕಲು ಬಿಡಲು
ಹಗಲೆಲ್ಲವಾ ಮೀನ ಹಿಡಿದು ಬಿಡುತಿರೆ
"ಆತ್ಮೇಶನಿಗೆ ಪ್ರಿಯವಾದ ಮತ್ಸ್ಯವನು
ಆತ್ಮಾರ್ಥಕೆ ಕೊಳುವುದನುಚಿತ"ವೆನುತ
ಮನೆಗೆ ತಾನೈತಂದು ಆ ರಾತ್ರಿ ಕಳೆದು

ಮೊದಲ ತೊರೆಯ ಬಿಟ್ಟು ಪೂರ್ವದೀರ್ಘಿಕೆಗೆ
ಬಲೆಯೆತ್ತಿ ಬೀಸಲು ಹಿಂದಿನ ಮೀನೆ
ಯಲರುತ ಸಿಕ್ಕಲು ತಾನದ ಬಿಟ್ಟು
ಬೀಸಲು ಮತ್ತೆಯಾ ಮೀನೆ ಸಿಕ್ಕುತಿರೆ
ಕಿರುನಗೆ ನಗುತಲಿ "ಎಲ್ಲಿ ನೋಡಿದರು

ಶಿವನ ಮತ್ಸ್ಯವೆಯಿದೆ. ಬಲೆಯಿಲ್ಲಿ ಬೀಸ-
ಲಲ್ಲೀಶ್ವರನ ಮೀನೆ ಸಿಕ್ಕಲು ಮತ್ತೆ
ಬಲೆಯ ಕೈಯಲಿ ಮುಟ್ಟೆನಿದು ವ್ರತ"ವೆನುತ
ಬಲೆಯೆತ್ತ ಬಲವಾಗಿ ಬೀಸಿಯೆಳೆಯಲು
ಬಲೆಯೊಡನೆ ತೊಡಗಿ ಬಂದು ಮುಕ್ಕಣ್ಣ-
ನವ ಚತುರ್ಭುಜಗಳು ನಂದಿವಾಹನವು
ತಳಿರಲು ಶಿವನು ಪ್ರತ್ಯಕ್ಷವಾಗಿರುತ
ಪ್ರಮಥೇಂದ್ರ ಪದವಿಯನೊಲವಿಂದಲಿತ್ತ-
ನಾ ನಿರಂತರಪರಮಾನಂದಸುಖಗ-
ಳಾನುತ್ತಲಿರುವಡಿ ಭರ್ತನ ಬಂಟ

## ಏಣಾದಿನಾಥನ ಕಥೆ

ವಿಮಲ ವಿಭೂತಿರುದ್ರಾಕ್ಷಧಾರಣೆಯ
ತನಪ್ರಾಣಲಿಂಗಭಾವದಿ ವಿಶ್ವಸಿಸುತ-
ಲಿದುವೆ ನೇಮವದಗಲೇಲಾಪುರದಲಿ
ಸದಮಲ ಲೀಲೆಯಿಂ ರಾಜ್ಯವಾಳುತ್ತ
ಮಲೆತ ರಾಜರ ಗೆದ್ದು ಸೋತವರ ಬಳಿ
ಭರದಿಂದಲೈದು ಕಪ್ಪಗಳನು ಕೊಳುತ-
ಲವನೀಶರಿಂಗೆಲ್ಲವೆದೆಶೂಲವಾಗಿ
ಬುವಿಯನಾಳುತಿರಲಾ ರಾಜರು ಒಬ್ಬ
ದಳವಾಯಿಯನ್ನು ಶಾಸನಧಾರಿಗೈದು
ಬಲಸಹಿತದಿ ಕಳಿಸಲು ತಾನಾಕ್ಷಣದಿ

ತನ್ನ ತಂತ್ರವ ಕೂಡಿ ಬಂದು ತಾಗುತ್ತ
ಕೊಲುತಿರೆ ಭೂತಿರುದ್ರಾಕ್ಷಧಾರಣನ
ಕಾಣುತ್ತ 'ಶಿವ ಶಿವಾ'ಯೆನುತ ಕತ್ತಿಯನು
ಬಿಸುಟು ತಾ ಬಂದು ಸಾಷ್ಟಾಂಗದಿ ಮೊಕ್ಕೆ
'ಎಲ್ಲಿ ಪೋಗುವೆ ಹೋಗು'ಯೆಂದು ಬಂದಲ್ಲಿ

ಸ್ಫುಟಿಶಕ್ತಿಯಿಂ ಕತ್ತಿ ಬೀಸಲುದ್ಯಮಿಸ-
ಲದ ಲಿಂಗವೆನೆ ಮೊಕ್ಕೆ ತನ್ನ ಕಂಠದಲಿ
ಸೇರುವ ಮುನ್ನ ಹೂಮಾಲೆಯ ಮಾಡಿ-
ಯಕ್ಷರನಾಗ ಪ್ರತ್ಯಕ್ಷದಿ ನಿಂತು
ಅಕ್ಷರತ್ವವ ದಯಾಮತಿಯಿಂದಲೊಸಗೆ

ಕ್ಷೋಣಿ ಲಸತ್ಕೀರ್ತಿಯ ಪಡೆದೇಣಾಧಿ-
ನಾಥನ ಮನೆಯಲಿ ಹುಟ್ಟಿದ ಬಂಟ

## ಚೇದಿವಲ್ಲಭನ ಕಥೆ

ಅಂತು ವಿಭೂತಿರುದ್ರಾಕ್ಷಿಧಾರಿಗಳ-
ನೆಂದಿಗು ಶಿವನೆಂಬ ಭಕ್ತಿಯುಕ್ತಿಯಲಿ
ಚರಿಯಿಸುತಿರೆ ಪರರಾಷ್ಟ್ರಪತಿಗಳು
ಧುರದಲಿ ತನ್ನಿಂದ ವಿರಥರಾಗೋಡಿ
ರುದ್ರಭಕ್ತರ ರೀತಿಯಲಿ ಪಂಚಮುದ್ರ-
ಧಾರಿಗಳಹ ಹದಿಮೂವರಮಾಡಿ
ಕಳಿಸಲು ಕಪಟಲಾಂಛನಧರರಾಗಿ
ಬರಲತಿಭಕ್ತಿಯಿಂ ವಿನಮತನಾಗೆ

ದಾರುಣಾಂಚಿತನಿಶಾತಕ್ರೂರಶಸ್ತ್ರ
ಧಾರೆಗಳಲಿ ಜರ್ಜರಿತನಾಗೆ ಮಾಡೆ
ಪರಿಕಿಸುತಲಿತರ ಭಾವಗಳಿರದೆ
ಗುರುರೂಪವೆನುತ ಕೈ ಕೊಂಡಾಗ ನಮಿಸೆ
ಪ್ರತ್ಯಕ್ಷದಲಿ ನಿಂತು ಪಾರ್ವತಿನಾಥ-
ನತ್ಯುತ್ತಮವೆನಿಪ ನಿತ್ಯತ್ವವೊಸಗೆ
ಸಲ್ಲಿಲಿತೋನ್ನತ ಮುಕ್ತಿವಲ್ಲಭನು
ತಾನಾದ ಚೇದಿವಲ್ಲಭ ಬಂಟ ನಾನು

## ಕರಯೂರ ಚೋಳನ ಕಥೆ

ಸಂಗತದಲ್ಲಿಂತು ಶಾಸನಧರರ
ಭಕ್ತಿಯಿಂ ತನಪ್ರಾಣಲಿಂಗವೆಂದೆನುತ

ಪರಮ ವಿಶ್ವಾಸ ಸದ್ಭಕ್ತಿಭಾವದಲಿ
ಅನ್ಯ ಭೂಪರ ಮೇಲೆ ದಂಡನು ಕಳಿಸೆ

ಮೂವತ್ತು ಚೀಲಗಗಳಂಥ ತಲೆಗಳ-
ನಚ್ಚರಿಯೆನಿಸೆ ಬೀಳಿಸಿ ತರುತಿರಲು
ರಕ್ತದಿ ತಲೆಯೊಂದು ಕೆಂಪಾಗಿ ಬಿಗಿದು
ತರಿದಿಹ ಜೆಡೆದಲೆಯನು ಹೋಲುತಿರಲು
ಅದ ಕಂಡು 'ಹರ ಹರಾ'ಯಿಂದು ತತ್‌ಕ್ಷಣವೆ
ತನ್ನ ತಲೆಯ ತರಿದದರ ಮೇಲಿಡಲು
ತಾನಪ್ಪರಲ್ಲಿ ಪ್ರತ್ಯಕ್ಷದಿ ನಿಂತು
ಕಂತುಸಂಹರನು ಮೋಕ್ಷವ ಕರುಣಿಸಲು

ಜಡೆದಲೆಗಿತ್ತ ತನ್ನಯ ತಲೆಯೆಂಬ
ಕರಯೂರ ಚೋಳನ ಬಳಿಬಂಟ ನಾನು

**ಕಳಿಯಂಬ ನೈನಾರ ಕಥೆ**

ಕೆಲಸವ ಮಾಡಲಾರದ ದಾಸಿಪುತ್ರ
ತಾ ಲಿಂಗಧಾರಿಯಾಗುತ ಬಂದ ಕ್ಷಣವೆ
ದಾಸಿಯ ಮಗನೆಂಬ ಭಾವವಿಲ್ಲದೆಯೆ
ತಾನೀಶನೆನುತ ಪಾದಗಳನು ತೊಳೆಯೆ
"ನಮ್ಮ ಸಿರಿಯಕನ ಮಗನಿವ ಮಲ್ಲ,
ಕಾಣೆಯ, ಕಾಲನು ತೊಳೆಯುವೆ"ಯೆನುತ
ಹಗುರಾಗಿ ಪೂರ್ವವ ಹಿಡಿದು ಮಾತಾಡಿ
ಹೆಂಡತಿ ಜಲವ ತಾನೆರೆಯದೆಯಿರಲು

"ಹರಮೂರ್ತಿಯನ್ನಳಿಗೊಳುವೆಯ"ಯೆನುತ
ಸತಿಯ ಕೈಯೆರಡನು ಕಡಿದು ತಾನಾಗ
ಮಲಹರ ಕಾರುಣ್ಯನಿಲಯನಾದ ಕಲಿ-
ಯಂಬ ನೈನಾರ ಪ್ರೇಮದ ಬಂಟ ನಾನು

**ಇರುವದಾಂಡಾರಿಯ ಕಥೆ**

ಜಂಗಮಲಿಂಗಭಾಸ್ವದ್ಭಕ್ತಿಯುಕ್ತಿ
ಸಂಗತಿಯಲಿ ದಿನಗಳ ಕಳೆಯುತಿರ-
ಲಂತಕಾಂತಕ ಭಕ್ತಾಕೃತಿಯಿಂದ ಬಂದು
ಬೊಂತೆ ಕಚ್ಚುಟಗಳ ಬೇಡಿದ ಕ್ಷಣವೆ

ಚಚ್ಚರದಲಿ ತಾನು ಇಟ್ಟೆಡೆ ಹುಡುಕಿ-
ಯಲ್ಲದ ಕಾಣದೆ "ಅದರ ತೂಕವನು

ನಿನಗೀವೆನನಘ"ಯೆನ್ನುತ ತುಲಾಯಷ್ಟಿ-
ಯಲ್ಲಿ ಮತ್ತೊಂದು ಬೊಂತೆಯ ಕಚ್ಚುಟವನು
ಒಂದೆಸೆಯಲ್ಲಿಟ್ಟು ಮತ್ತೊಂದೆಸೆಯಲಿ
ವಿವಿಧವಸ್ತುಗಳನು ಕಟ್ಟಿಟ್ಟು ತೂಗೆ
ಸಮಕೆ ಬಾರದಿರೆ ತಮ್ಮ ಮನೆಯಲ್ಲಿರುವ
ಅಮಿತಾಂಬರದ ಜೊತೆಗರ್ಥವು ತಾನು
ಬಂದು ತ್ರಾಸನ್ನೇರಲಾಕ್ಷಣ ವರದ
ಮೆಚ್ಚುತಲಾತಗೆ ಪ್ರಮಥತ್ವವೀಯೆ

ಪಾಂಡುರಾಂಗನ ಭಕ್ತಿ ಮೆರೆದಿರುವಿರುವ-
ದಾಂಡಾರಿಗನುಕೂಲಭೃತ್ಯನು ನಾನು

**ದಂಗುಳಿ ಮಾರಯ್ಯನ ಕಥೆ**

ಜಂಗಮಾರ್ಥಕೆ ಸಕಲಾರ್ಥವನೆಲ್ಲ
ಭಕ್ತಿಯಿಂ ಸಲಿಸುತ ಪಡೆದು ದುರ್ದಶೆಯ-
ಲಿರುತಿರೆ ಶಿವನೊಂದು ದಿನ ಮಳೆಯಲ್ಲಿ
ನೆನೆಯುತ್ತಲರ್ಧರಾತ್ರಿಯಲಲ್ಲಿ ಬರಲು
'ವರತಪೋಧನಮೂರ್ತಿ ನಡುಗುವ'ನೆನುತ
ಪ್ರೀತಿಯಿಂ ಗುಡಿಸಲ ಕಿತ್ತು ಕಾಯಿಸಲು
'ಹಸಿದೆನು ತಾ'ನೆನೆ ಹಿಂದಿನ ದಿನವೆ
ಬಿತ್ತಿದ್ದ ಬೀಜವಾರಿಸಿ ತಂದು ನೀರಿ-

ನಲ್ಲದ್ದಿ ಚೆನ್ನಾಗಿ ಹುರಿದು ಕುಟ್ಟಿಸುತ
ಸುದತಿಯು ತಾನು ಉತ್ಸುಕಲೀಲೆಯಿಂದ
ಪಾಕಯತ್ನವಗೈದು ಭಕ್ತಿಯಿಂ ಬಡಿಸಿ
ಶ್ರೀಕಂಠನನ್ನಾಗ ಮೆಚ್ಚಿಸಿ ಮುಕ್ತಿ
ಸುಖಲೀಲೆಯಲ್ಲಿದ್ದ ಅಳಿಯದಂಗುಳಿಯ
ಮಾರಯ್ಯನಾ ಲೆಂಗಿಬಂಟನು ನಾನು

**ಗಣಪಾಲನ ಕಥೆ**

ಭವಿಯೊಬ್ಬನನು ತನ್ನ ಬುವಿಯಲಿರಿಸದೆ
ಶಿವಸಹಿತರಗೈವ, ಕೈಕೊಳ್ಳದಿರಲು
ವೇದಾರ್ಥಗಳ ಹೇಳಿಯಾದಿ ತೋರಿಸುತ-
ಲಿಲ್ಲೆನೆ ದೃಷ್ಟಸಂಪಾದನೆ ತೋರಿ

ಕೇಳಿದರಿಷ್ಟಾರ್ಥವನ್ನಾದರಿತ್ತು
ಬಡಬಡಿಸುವ ಸರ್ವೋಪಾಯಗಳಿಂದ
ಕರಕಂಠಭಕ್ತನಾಗಲ್ಕೊಲ್ಲದಿರಲು
ಕೊಲ್ಲುವನಿದೆ ನೇಮವಾಗಿ ವರ್ತಿಸಲು
ಪರಮೇಶ್ವರನವನ ಭಾಷೆಯ ನೋಡ-
ಲೈತಂದೊಕ್ಕಲನಾಗಿ "ಕಪ್ಪ ಕಾಣಿಕೆಯು
ಅರ್ಪಣೆ ದಕ್ಷಿಣೆ ಸುಂಕವದೆಂದು
ಕೆಲಸ ಬಿಟ್ಟಿಯು ಲಾಭ ಯುದ್ಧಕೆ ನೆರವು
ಅರುವಣವೆನುತೆನಗೀಯೆ ತೊಂದರೆಯ
ಧರಣೇಶ, ತಗ"ದೆಂದು ತಾ ಮೊರೆಯಿಡಲು

"ಬಾಗಿಲ ಕಾವರ ಕಣ್ಣ ತಪ್ಪಿಸುತ-
ಲೆಲೊ ಶೂದ್ರ, ನೀನೆಂತು ಬಂದೆಯೊ ಈಗ?
ಸರ್ವಮಾನ್ಯವನೀವೆನೀಗಲೆ ನಿನಗೆ
ಶರ್ವಭಕ್ತನ ರೀತಿ ಚರಿಯಿಸು"ಯೆನಲು
"ತನಗೆಯೊಗ್ಗದು ಭಕ್ತಿ, ತನ್ನ ವಂಶದಲಿ
ಭಕ್ತರಾರಿರಲಿಲ್ಲ ಮುನ್ನಿಂತು"ಯೆನಲು
"ರಕ್ಷಿಪೆನೆನ್ನಾಣೆ, ಮತ್ತದಲ್ಲದಲೆ
ಧನವೀವೆ ಮನವೀವೆ ರಾಜ್ಯವನೀವೆ-
ನೊಡಬಡು" ಎನಲು ಸರ್ವೋಪಾಯಗಳಲಿ
ಒಡಬಡದಿರಲು ಮಹೋಗ್ರತೆಯಿಂದ

ಝಳಪಿಸಿಯಸಮನಿಶಾತಖಡ್ಗವನು
ತಲೆ ಕತ್ತರಿಸಲೆಂದು ಹೊಡೆಯಲಾಕ್ಷಣದಿ
ಹರನುಪ್ರತ್ಯಕ್ಷವಾಗುತ "ಬೇಡು" ಎನಲು
"ವರಮೂರ್ತಿ, ನೀನೀವ ವರವೇನನೊಲ್ಲೆ
ಉತ್ಸಾಹದಲಿ ಭಕ್ತನಾ"ಗೆಂದು ಶಿವನ
ಲಿಂಗಸಹಿತಗೈದು ಲೀಲೆಯಿಂ ಪ್ರಮಥ
ಗಣವಂದ್ಯ ಸದ್ಭಕ್ತಿಗತಿ ತೋರಿ ಪ್ರಮಥ
ಗಣಮೂರ್ತಿಯಹ ಗಣಪಾಲನ ಬಂಟ

### ಕುಂಬಾರ ಗುಂಡಯ್ಯನ ಕಥೆ

ಶೋಭಿಸುತಿಹ ಪೆನುಪಟ್ಟಪುಲೂರ
ತಿರುನೀಲಕಂಠದೇವರಗುಡಿಗೈದು

ಮರಳಿ ಬರುತಿರಲೊಂದು ದಿವಸ ರಾತ್ರಿ
ದಟ್ಟ ಕತ್ತಲೆಯಿಂದ ಕಾಣದಾಗಿರಲು
ಮಡದಿಯೊಬ್ಬಳು ಹರ್ಮ್ಯತಳದ ಮೇಲಿದ್ದು
ಚೆಲ್ಲಲು ಎಂಜಲ ನೀರನು ಮೇಲೆ
ಬೀಳಲು "ಹರಹರ, ಪ್ರಾಣೇಶ"ಯೆನಲು
ಮಾನಿನಿಯೈತಂದು ಸಾಷ್ಟಾಂಗವೆರಗಿ
ಕರೆದವನನ್ನೊಯ್ದುತಭ್ಯಂಜನಾದಿ
ಪಟುತರಸ್ಕೃತಿಯಾಪರಿಪೂರ್ಣನೆನಿಸಿ
ಕ್ಷಮೆಗೊಳೆ ನೀಡಿ ತಾ ಮನೆಯೆಡೆ ಬರಲು
ರಮಣಿ "ವಾರಾಂಗನಾರ್ಥದಿ ತಡ"ವೆನುತ

ಕಟ್ಟುಗ್ರದಲಿ ಪತಿಯನ್ನು ಸೇರಿದರೆ
"ಅಂತೇಕೆ ಬಳಿ ಬಾ"ರೆಂದು ಸೆರಗ ಹಿಡಿದು
ತರಳಾಕ್ಷಿಯನೆಳೆಯೆ "ಎನ್ನ ಮುಟ್ಟಿದರೆ
ತಿರುನೀಲಕಂಠದೇವರ ಆಣೆ"ಯೆನಲು
ಸತಿಯನು ಮುಟ್ಟದಲಂತಾಗಲೆನುತ
ಭಾಷೆಯಿಂದೆಂಬತ್ತು ವರ್ಷಗಳಾಗೆ
ಆ ಪರಮನು ಭಕ್ತನಂತೆ ಒಂದೊಂದು
ಕಪ್ಪರವನದೃಶ್ಯವನು ಮಾಡಿ ಕೇಳ-
ಲೆಲ್ಲಯು ಕಾಣದಲಾ ಸತಿಪತಿಯು

ಗಡಗಡ ನಡುಗಲು ಆ ತಪೋಮೂರ್ತಿ
"ಕಳೆದ ಮಾತುಗಳಿಗೆ ಹೆಚ್ಚಿನದೇಕೆ
ಕಪ್ಪರ ಕೊಳದಿರೆ ಕಾಂತೆಪತಿಯರು
ಹೇಳಿದ ಶಪಥವ ಮಾಡಿ"ರೆಂದೆನುತ
ಕುಂಭಿನಿ ಜನರೆಲ್ಲ ಕೂಡಿ ನೋಡುತಿರೆ
ಗಂಭೀರ ಜಲದಲಿ ಸತಿಪತಿಯರನು
ಕೊಳದೊಳಗದ್ದಿದ ತತ್ಕ್ಷಣಮಾತ್ರ
ಮಿಂಡಪ್ರಾಯವ ಹೊಂದಿ ಮೇಲಕೆ ನೆಗೆಯೆ
ಮುನ್ನಲ್ಲಿ ಪ್ರತ್ಯಕ್ಷವಾಗುತ ನಿಂದು
ನಿಟಿಲಾಕ್ಷನತಿದಯಾನ್ವಿತಭಾವದಲಿ

ಭೂಮಿಯಲೆಂದಿನಂತೆಂಬತ್ತು ವರುಷ-
ಗಳು ಸುಖಲೀಲೆಯಿಂದ ಕಳೆದ ಬಳಿಕ
ಮಂಡಿತಾನಂದ ಪ್ರಮಥ ವೈಭವದಲಿ
ಮೆರೆದ ಕುಂಬರಗುಂಡಯ್ಯನ ಬಂಟನಾನು.

### ಪೂಸಲ ನಯನಾರ ಕಥೆ

ರೂಢಿಯಿಂ ವಿಕ್ರಮಚೋಳನು ಧರಣಿ-
ಯನ್ನಾಳೆ ಚೆನ್ನದಿ ಗುಡಿಯ ಕಟ್ಟಿಸುತ
ಲಿಂಗಪ್ರತಿಷ್ಠೆಯ ಲೀಲೆಯಿಂ ಮಾಡೆ
ಮಂಗಳವಲರಲು ಮಾನಸದಲ್ಲಿ
ಭಕ್ತಿಯಿಂ ರತ್ನವಿಮಾನಮಯವಹ
ಗುಡಿಯೊಂದ ತಾ ಕಟ್ಟಿ ಕಾಲಿಕಂಧರನ

ಸಕ್ತಿಯಿಂ ಮೆಚ್ಚಿಸಿ ಕೈಲಾಸಕೈದ
ಪೂಸಲನಯನಾರಿ ದಾಸಾನುದಾಸ

### ಮತ್ತೆ ಕೆಲವರ ಕಥೆ

ಧರೆ ರಾಜ್ಯವೊಲ್ಲದೆ ತಿರುಮುಡಿ ಧರಿಸಿ
ಶಿವನ ನಂಬಿದ ತಿರುಪಾಲನ ಬಂಟ;
ತಿರುನಾವಕಪುರೀಶ ಕರುಣ ಪ್ರಾಣೇಶ-
ನಿರವರಿದು ಮೆರೆದ ತಿರುಕುರ್ವಿಯಾಳು;
ರೋಹಿಣಿಯೂ ತಾನು ಹರಕೃಪೆ ಪಡೆದ
ತಿರುವೂರ ತಿರುಮೂಲದೇವನ ಬಂಟ;
ಭಕ್ತಸಹಸ್ರಾರ್ಚನೆಯನು ತಾ ಮಾಡಿ
ಮುಕ್ತಿಪಡೆದ ಚಿರುಪುಲಿಗೆ ನಾ ಬಂಟ;

ಪಡಿಹೊನ್ನ ನಿತ್ಯವು ಭರ್ಗನಿಂ ಕೊಳುವ
ಘನ ಚಿರುತ್ತೊಣಯನ ಬಂಟರ ಬಂಟ;
ಸಂದ ಪುರಾತನ ಶರಣರ ಬಂಟ;
ಇರುವ ನೂತನ ಭಕ್ತಯೂಥರ ಬಂಟ;
ಶಿವನ ಮುಂದರ್ಚಿಸಿಯೀಪ್ಸಿತಾರ್ಥಗಳ
ಪಟುತರವಲಿ ಕೊಂಬ ಭಕ್ತರ ಬಂಟ;
ಎನುತ ಭಕ್ತರ ಚರಿತ್ರಾಂಕನಗಳನು
ಅನುರಕ್ತಿಯಲಿ ತಿರುಪಾಟಂತೆ ಹಾಡಿ
ಹೊಸಯಿಚ್ಛೆಯುದಿಸೆ ವಿನುತಿಯಗೈಯುತ್ತ-
ಲಡಿಗಡಿಗೆರಗಿ ಸಾಷ್ಟಾಂಗವನಿಡುತ-

ಮೊಕ್ಕುತ ಕರಗಳ ಮುಗಿಯುತ್ತ "ನೀವೆ
ಎಮಗಿಂದು ದೆಸೆದಿಕ್ಕುಗಳು ದೇವ"ಯೆನುತ
"ನಿಮ್ಮಯ ಬಂಟನು ದೂತ ಡಿಂಗರಿಗ

ನಿಮ್ಮ ಕಂದನು ಕುನ್ನಿ ನಿಮ್ಮಯ ಲೆಂಕ
ನಿಮ್ಮ ದತ್ತಿಯು ಭೃತ್ಯ ಧರ್ಮದ ಕವಿಲೆ
ನಿಮ್ಮ ದಾಸನು, ಎನ್ನ ಕಾಯೊ ದಯೆಯಲಿ"
ಎನ್ನುತ ನಂಬಿ ಭಕ್ತಾವಳಿಯೊಡನೆ
ಮುಂದೆ ತಾ ವಿಭುವಿನ ಹಿಂದೆಸೆ ಸೇರಿ–
ಯಭಯಾರ್ಥಿಯಾದ ನಂಬಿಯ ಕೈಯಹಿಡಿದು
ಆಭವನೆದುರಿಗೆಲ್ಲ ಕರೆದೊಯ್ದು ಮೊಕ್ಕೆ

ಮಿರುಮಿಂಡ ನಯನಾರು ಮೆರವಣಿ ಮೆಚ್ಚಿ
ಕರಕಂಠನಾ ಭಕ್ತಗಣಸಹಿತದಲಿ
ಕೈಲಾಸವಾಸಿಗಳಾಗಿಸಿ; ನಂಬಿ–
ಯನು ಭೂಲೋಕದಿ ಸಲ್ಲಲಿತದಿಂದಿರಿಸಿದ–
ನದರಿಂದ ಭಕ್ತ ಗರ್ವಿಸುವಂಥ ಭಕ್ತಿ
ಭಾವವು ಹಿರಿದೇನು ಬಸವಕುಮಾರ?"
ಎಂದಿಂತು ಮಾಚಯ್ಯನತಿಭಕ್ತಿಯುಕ್ತಿ–
ಯಿಂದ ಸದ್ಭಕ್ತಚರಿತೆಗಳ ತಿಳಿಸಿ
ಬುದ್ಧಿನೀತಿಗಳನು ಮನವೊಪ್ಪಲರುಹಿ
ಹಿರಿದಾದ ಗರ್ವಾತಿಶಯವ ಮಾಯಿಸುತ

ಮಿರುಗುವ ಕಂಗಳು ಹೊಳೆಹೊಳೆವುತಿರೆ
ಶೋಭಿಪ ರತ್ನಪರ್ವತಗಳನರ್ತಿ–
ಯಿಂದ ಜಂಗಮಗಳಿಗರ್ಪಿಸಿ ಬಸವ–
ರಸನ ಬೀಳ್ಕೊಡಲು ನಿರಂತರ ಭಕ್ತಿ–
ಯಿಂದಾ ಬಸವನು ಪಾದಾಕ್ರಾಂತನಾಗು–
ತುಬ್ಬಲು ಭಕ್ತಾಳಿ ಕೂಡೆಯೆರಗಿತು.
ಆ ಪೌರರೆಲ್ಲ ಸಾಷ್ಟಾಂಗದಿ ಮೊಕ್ಕಿ
"ತಪ್ಪದು, ದೇವರೆ ತಾನೀತ"ನೆನುತ
ಕರಗಳ ನಿಜಮಸ್ತಕಗಳಲಿ ತಳೆದು
ಹೋದರು ಧಾರುಣೀಶ್ವರರು ತಾವೆಲ್ಲ;

ಮಹಿಯಲಿ ಮೊದಲಂತೆ ಮಾಚಯ್ಯ ಭಕ್ತಿ
ಮಹಿಮೆಯಿಂ ತ್ರಿಭುವನ ಮಾನ್ಯನಾಗಿದ್ದ;
ಮಡಿವಾಳ ಮಾಚಯ್ಯನಾ ಮಹನೀಯ
ಚರಿತೆಯ ಭಕ್ತಿಯಿಂದೋದಿ ಕೇಳಿದರೆ
ಹರಭಕ್ತಿ ಬುದ್ಧಿ ದೃಷ್ಟಾದೃಷ್ಟ ಸಿದ್ಧಿ

ಸರಸವಚೋಶುದ್ಧಿಸಂಪದವೊದಗು;
ಗುರುಭಕ್ತಿವಿಸ್ತಾರ ಗುರುಭಕ್ತಿಸಾರ
ಗುರುಭಕ್ತಿಪರತಂತ್ರ ಗುರುಭಕ್ತಿತಂತ್ರ
ಜಂಗಮಸುಖಕೃತ್ಯ ಜಂಗಮಭೃತ್ಯ
ಜಂಗಮಹಿತಚರ್ಯ ಜಂಗಮಧುರ್ಯ

ಲಿಂಗಾರ್ಚನಾಸಕ್ತ ಲಿಂಗಸದ್ಭಕ್ತ
ಲಿಂಗಲೀನಪ್ರಾಣ ಲಿಂಗಧುರೀಣ
ಸತ್ಪ್ರಸಾದೋಪಾಂಗ ಸತ್ಪ್ರಸಾದಾಂಗ
ಸತ್ಪ್ರಸಾದಪರೀಕ್ಷ ಸತ್ಪ್ರಸಾದಾಕ್ಷ
ಸರ್ವಸ್ಥಲೈಕಭಾಸ್ವದ್ಭಕ್ತಿ ಸೌಖ್ಯ
ಸರ್ವಸ್ಥಲೈಕ ಭಾಸ್ವರ ಸಂಗನಾಖ್ಯ
ಇದುವಸಂಖ್ಯಾತ ಮಾಹೇಶ್ವರ ದಿವ್ಯ
ಪದಪದ್ಮ ಸೌರಭಭ್ರಮರಾಯಮಾಣ
ಜಂಗಮಲಿಂಗ ಪ್ರಸಾದೋಪಭೋಗ
ಸಂಗತ ಸುಖಸುಧಾಶರಧಿ ನಿಮಗ್ನ

ಸುಕೃತಾತ್ಮ ಪಾಲಕುರಿಕಿ ಸೋಮನಾಥ
ಸುಕವಿಪ್ರಣೀತವಾಗಧಿಕ ಶೋಭಿಸುವ
ಚರಲಿಂಗ ಘನಕರಸ್ಥಲಿ ವಿಶ್ವನಾಥ
ವರಕೃಪಾಂಚಿತ ಕವಿತ್ವಸ್ಫೂರ್ತಿಯಿಂದ
ಮೆರೆವ ಬಸವಪುರಾಣದ ಕಥೆಯಲ್ಲಿ
ಅನುಪಮದಲಿ ಚತುರ್ಥಾಶ್ವಾಸವಾಯ್ತು.

# ಪಂಚಮಾಶ್ವಾಸ

## ಕಿನ್ನರ ಬ್ರಹ್ಮಯ್ಯನ ಕಥೆ

ಶ್ರೀಕರ, ಭಕ್ತಿರತ್ನಾಕರ ದೋಷ-
ಭೀಕರ, ವಿಮಲಗುಣಾಕರ, ಸಂಗ,
ಈ ಮಹಿಯಲಿ ಮತ್ತಲೀಶ್ವರ ಭಕ್ತ-
ನತಿಶಯ ಕಿನ್ನರ ಬ್ರಹ್ಮಯ್ಯನೆನುವ
ವೀರವ್ರತೈಕನಿಷ್ಠಾರಮಣನಹ
ಸಾರ ಶಿವಾಚಾರ ಪಾರಾಯಣನಹ
ಲೋಕೈಕ ಪೂಜ್ಯನಲೋಕಾನುಸಾರಿ-
ಯೇಕಾಂತ ಭಕ್ತಿಮಹಿಷ್ಠಮಂಡನನು
ಅಘಟಿತನಾದ ವಿದ್ಯಾ ಪಂಡಿತನಹ
ಅಘವಿನಾಶನ ಕಾರಣಾವತಾರನಹ

ವಿದಿತ ಕಾರುಣ್ಯ ಸಮುದಿತಾನುರಾಗ
ಹೃದಯನು ಸರ್ವಜೀವದಯಾಪರನಹ
ಸಲ್ಲಲಿತನೆನಿಸಿ ಶರಣಮಾರ್ಗದಲಿ
ಎಂದೆಂದು ಭಕ್ತಿಮಹಿಷ್ಠತೆಯಿಂದ
ಭಕ್ತರ ಪರಿಚರ್ಯೆಗಳನು ಮಾಡುತ್ತ
ವ್ಯಕ್ತದಿಂ ಪೊಂಡೂರ ಯುಕ್ತಿ ಹೆಚ್ಚಿಸುತ
ವಿವಿಧ ಕಾಯಕಗಳನಭ್ಯಾಸಗೈದು
ಸಾವಿರ ವಿಧದಲಿ ವಿತ್ತವಾರ್ಜಿಸುತ
ನಿರ್ವಂಚಕತ್ವದಿ ಶರ್ವಭಕ್ತರಿಗೆ
ಸರ್ವಧನಂಗಳ ಸವೆಸಿ ಸೇವಿಸುತ

ಕ್ರೀಡಾರ್ಥದಲಿ ಮತ್ತೆ ಕಿನ್ನರ ವೀಣೆ-
ಯನ್ನೊಲವಿಂದಲಿ ಕೇಳಿಸಲೊಮ್ಮೆ
ಕಿನ್ನರೇಶ್ವರವಂದ್ಯನಾ ನಾರನಾದಿ
ಸನ್ನುತ ನಾದಾನುಷಕ್ತನು ಮೆಚ್ಚಿ

ಯುಕ್ತದಿ ಕಿನ್ನರಬ್ರಹ್ಮಯ್ಯನೆಂದು
ಧರೆಯಲಿ ಹೆಸರಿತ್ತು ಪಡಿಯಾಗಿ ನಿತ್ಯ-
ವೊಂದು ಚಿನ್ನದ ಹಣವೊಂದು ಹಾಗವನು
ಪ್ರೇಮದಿಂ ಕರುಣಿಸೆ ಮಹಿಯೆಲ್ಲ ಹೊಗಳೆ
ಕೈಕೊಂಡು ಜಂಗಮಾನೀಕಗಳಿಗೆ ಸ-
ದಾಕಾಲದಲ್ಲರ್ಪಿತವ ಗೈಯುತಿದ್ದ.

ಬಸವಣ್ಣನಸಮಸದ್ಭಕ್ತಿ ಸೌರಭವು
ವಸುಧೆಯೊಳಗೆ ಹಬ್ಬಿ ದೆಸೆಗೆಳ ತೀವೆ
ರಾಗದಿಂ ಕಿನ್ನರ ಬ್ರಹ್ಮಯ್ಯ ನಡೆದ
ಬೇಗದಿ ಬಸವನ ಕಾಣಬೇಕೆಂದು;
ಬಸವಣ್ಣ ಕಿನ್ನರ ಬ್ರಹ್ಮಯ್ಯ ಬರಲು
ಸಡಗರದಲಿ ಸಂಗಮೇಶ್ವರನನ್ನು
ಕಂಡೆದುರಿಗೆ ಬಂದು ಮೈಚಾಚಿ ಮೊಕ್ಕಿ-
ಯನುನಯೋಚಿತಸತ್ಕ್ರಿಯಾದಿಯಿಂ ತಣಿಸೆ
ಕರಚಾಚಿ ಪಾದೋದಕಪ್ರಸಾದಗಳ
ನಿರತಿಶಯಪ್ರೀತಿಯಿಂ ನಿತ್ಯಕೊಂಡು

ಸವಿಶೇಷ ತತ್ವಾನುಭವಭವ್ಯಗೋಷ್ಠಿ-
ಯಲ್ಲಿ ಬಸವನತ್ಯುತ್ಸವದಿಂದಲಿರಲು
ಆಗ ವಿನೋದಾರ್ಥವಾಗೊಂದು ದಿವಸ
ಸಂತಸಚಿತ್ತದಿ ಬರುತಲಿ ಕಿನ್ನ-
ರಯ್ಯನಲ್ಲಿನ ತ್ರಿಪುರಾಂತಕ ದೇವ
ಗೃಹದ ಗೋಪುರದಲ್ಲಿ ಕುಳ್ಳಿರುವಾಗ

**ಕುರಿಯ ಕಥೆ**

ವಾರಾಂಗನಾರ್ಥದಿಂ ವಧಿಸಲು ಬಿಲಿದು
ಕೊಂಡೊಬ್ಬ ಮಿಂಡನು ಕುರಿಯೊಂದ ಹಿಡಿದು
ಆ ಬೀದಿಯಲಿ ಬರುತಿರಲು ಹಗ್ಗವನು
ಹರಿದುಕೊಂಡಾ ಕುರಿಯಾ ದೇವಾಲಯಕೆ

ಬಂದು ಸೇರಲು ಹಿಂಬಾಲಿಸಿಯದನವನು
ಬರಲೋಡಿ ಕಿನ್ನರಬ್ರಹ್ಮಯ್ಯ ಕಂಡು
"ಹೋಗದೆ ನಿಲ್ಲಣ್ಣಯಿಲ್ಲೆ, ಆ ಕುರಿಯು
ದೇವಾಲಯವನು ಸೇರಿತು ಸಾವಿಗಂಜಿ-

ಯದ ಕೊಲ್ಲುವುದು ದೋಷವಂತಾಗದಿರಲು
ಹೆದರದೆ ಬೆಲೆ ಹೇಳು ಕೊಳ್ಳವೆನೆಂತೊ
ಮೃಡಭಕ್ತರೊಪ್ಪಿಸುವರೆ ಶರಣಾಗೆ
ಜಡನರರಾದರೂ ನೀಡಲು ಕೊಲ್ಲೆ.
ಚರಜೀವಿಗಳಿಗೆಲ್ಲ ಸಾವುನೋವುಗಳು
ಸಹಜವಲ್ಲವೆಯೆಂದು ಯೋಚಿಸಿ ನೊಡು.

ನೀನಿದ ಕೊಲುವುದು ನೇಮವೆ ಹೇಳು
ಆ ಕಾಂತೆಯಿದಕೆ ಮುದ್ರೆಯನೊತ್ತಿರುವಳೆ?
ಪಡೆಯಲಾರದ್ದಿಲ್ಲಿ ಚಿನ್ನವೆ ತಾನೆ
ಬಿಡಲಾಗದಿರೆ ಹೊನ್ನ ಕೇಳಿದರೀವೆ
ತೆಗೆದುಕೊ"ಯೆನ್ನಲು "ಅಕ್ಕಟಾ, ಇಂಥ
ಚದುರನೇನಿರುವನೆಯೀ ಜಗದೊಳಗೆ
ಗುಡಿ ಮಡಿ ಹೊಲಗಳನೆಲ್ಲಿ ಸೇರಿದರು
ಬಿಡುಪರೆ ಕುರಿಯನು ಬಿಲಿದು ತಂದವರು?
ಬಿಡದಿರೆ ದಾರಿಯನೆಂತು ಹೋಗುವುದು?
ನೀನಲ್ಲವೇ ನೀತಿವಂತನೀ ಬುವಿಗೆ

ನಾವೆಂದು ತಿಳಿಯೆವಿಂತಹ ರೀತಿಯನ್ನು
ತಡೆಮಾಡಿದರೆ ಕೋಪಗೊಳುವಳು ಸೂಳೆ
'ಬೆಲೆಯ ನೀಡುವೆ'ನೆಂದು ಬೀಗಿಹನಿವನು
ಇಂಥ ದಯಾಪರನೆಲ್ಲಿ ದೊರೆವನು?
ಚರಜೀವಿಗಳಿಗೆಲ್ಲ ಸಾವುನೋವುಗಳು
ಸಹಜವಲ್ಲವೆಯೆಂದು ವಾದಿಸುತಿಹನು.
ಮನುಜರ ಪ್ರಾಣವು ಸಾವಿರ ಹೊನ್ನು
ಎಂದೆನಲಿವನೇನು ಸುಳ್ಳ ಹೇಳುವನೆ?
ಸಾವಿರವನ್ನಿತ್ತು ಬಿಡಿಸುವ ಕುರಿಯ–
ನೀಯಯ್ಯ ಕೊಲ್ಲಲು ಬಿಡನಿದ"ನೆಂದು

ಕೊಲ್ಲ ಹೋಗಲು 'ಅಣ್ಣ ಕೊಲ್ಲದಿ'ರೆಂದು
ಬೇಗದಿ ತರಿಸಿ ಸಾವಿರ ಹೊನ್ನುಗಳನು
ತಾನಿತ್ತು "ನೀ ಬೊಂಕೆ ಹೋಗಲು ಬಿಡೆನು!
ಅಚ್ಚೊತ್ತಿ ಬಿಡುವೆನದರ ಮೇಲಾನರಿಯೆ"–
ನೆನ್ನ 'ಲಾಗಲಿ'ಯೆಂದು ಹಣವನೆಣಿಸುತ
ಸೂಳೆಯ ಮನೆಗೆ ತಾ ಹೋಗುತ ಮತ್ತೆ

ಕುರಿಯಿಲ್ಲದಿರಲೇನು ಹಿರಿತನವೆನುತ
ಮತ್ತೊಂದು ಕುರಿಯನು ಹಣಕೆ ತಾ ಕೊಂಡು
ಹೋಗಲು, ಭರದಲಾ ಹೆಣ್ಣು ಕೋಪಿಸಿತು
"ಛೇ, ಎಂಥ ಮಿಂಡನೊ, ಹೊರಡಿನ್ನು ನೀನು

ಸರಿವಿಟರೆಲ್ಲ ನಗುವಹಾಗೆ ಮನೆಗೆ
ಬರಲು ಸಿಗ್ಗಿಲ್ಲವೆ ಶೂನ್ಯಬುದ್ಧಿಗನೆ
ಹೆಚ್ಚಿನ ಹಣವದು ಶ್ಲಾಘ್ಯವೆ? ಹೊನ್ನ
ಬಿತ್ತಿಸುವೆನು ಬೀದಿಗಳಲೆಲ್ಲ ನಾನು
ಇಸ್ಸಿಸ್ಸಿ! ವಿಟತನವಿಂಥದೆ ನಿನ್ನ!
ಹುಲ್ಲ ಕಟ್ಟಿದೆಯೆಲ್ಲೊ ಎಲ್ಲರ ತಲೆಗೆ?
ಬದುಕಬಹುದೆ ನೀನು ಸುದತಿಯೀ ರೀತಿ-
ಯೆದುರಿಗೆ ಹೇಳಲಿನ್ನೇತಕೆ ಸೂಳೆ
ಕುರಿಗಳ ಬೊಜಗರು ಬಿಲಿದುಕೊಡುವರು
ತನಗು ಪ್ರಜೆಗಳಿಗೂ ನೀಡಲು ಗ್ರಾಸ

ಮಝು, ಭಾಪುರೇ ಸೂಳೆಯಿಹಳೆ ಹೋಗೆನುವ
ಗುಜುಗುಜುಗಳಿಗೆಲ್ಲ ಗುರಿಯಾದೆನಿನ್ನು
ನಗೆಚಾಟಿ ಹೆಚ್ಚಾಯ್ತು ಸತಿಯರಲೆಲ್ಲ
ಮೊಗವೆತ್ತಬಲ್ಲೆನೇ! ಮುನ್ನನರಿಯೆಯ
ಅಭಿಮಾನಗಿತ್ತಿಯಾದೆನ್ನ ನೀ"ನೆನುತ-
ಲಭಿಮಾನ ಕೆದಕಿಯಾ ಸತಿಯು ಮೂದಲಿಸೆ
"ಬಿಡಲಾರೆನಾ ನಿನ್ನ ಹಿರಿಹಬ್ಬದಂದು
ಸಾವಿರ ಕುರಿಗಳ ಸಾವಿರ ಹಣಕೆ
ಕೊಂಡು ತರುತ ಹಿಂಡುಹಿಂಡುಗಳಾಗಿ
ಬೇಕೆನಿತರ್ಥವ ವ್ಯಯಕಿತ್ತು ನಿನ್ನ

ಚೆನ್ನಳೆನಿಪೆ ವಿಲಾಸವತಿಯರಲ್ಲಿ
ಚೆನ್ನಾಗಿ ಹಬ್ಬವ ಮಾಡು ನೀ"ನೆನಲು
"ದೇವರಿಗೆಂದು ಮುನ್ ಬಿಲಿದ ಕುರಿಯನು
ಮರಳಿ ತಾರದೊಡೆ ಹಬ್ಬವ ಮಾಡೆ ಭಯವು.
ಕೊಲ್ಲುವುದೆಮ್ಮನು ಅ ದೈವ"ವೆನಲು
ಗಾಬರಿಯ'ಲ್ಲಾಗಲೆ'ಂದು ತತ್‌ಕ್ಷಣವೆ
ಕಾಮಾಂಧನಿಗೆ ಕಾರ್ಯವಾವುದೂ ಸ್ಪಷ್ಟ
ಕಾಣಿಸದದರಿಂದ ವೇಗದಿ ಬಂದು

ಕುರಿಯ ಹಿಡಿಯೆ ತುಂಬ ಕೋಪಿಸಿ ನೋಡಿ
ಕಿನ್ನರ ಬ್ರಹ್ಮಯ್ಯನೆದುರಿಗೆ ಬಂದು

"ಹಿಡಿಯಬೇಡವೊ ಬೇಡ, ಬಸವಣ್ಣನಾಣೆ
ಹಿಡಿದರೆ ತಲೆಯೊಡೆವಂತೆ ಹೊಡೆವೆನು;
ಅಂಜುವರೇ ಶರಣಾಗತವಜ್ರ
ಪಂಜರವಿದು ನಮ್ಮ ಭಕ್ತರ ಬಿರುದು"
ಎನುತ ಸಮೀಪಿಸಿಯಲುಗನು ಸೆಳೆದು
ಕಿನಿಸಿ ರೌದ್ರೋದ್ರೇಕದಲಿ ಬಲವಾಗಿ
ನಿಶಿತಖಡ್ಗಾಯುಧನಿಹಿತದಿಂ ಹೊಡೆಯೆ
ಪಶುಪತಿಗುಡಿಯಾಚೆ ಬಿದ್ದಿತು ಶಿರವು.
"ಭಾಷೆಹೀನನ ಕಳೇಬರವನು ಶಿವನಿ-
ವಾಸದಲ್ಲಿರಿಪುದು ದೋಷ"ವೆಂಬಂತೆ-

ಯಟ್ಟೆಯನೆಳೆಸಗಳ್ತೆಯಲಿ ಹಾಕಿಸಿದ
ಕಟ್ಟುಗಟ್ಟುತ ಸಮೂಹವು ನೋಡುತಿರಲು
ಆ ವೃತ್ತಾಂತವನಾಗಲಾ ಕರ್ಮಿಬಂಧು-
ಗಳು ತಾವು ಕೇಳಿ ಶೋಕಿಸುತಲಿ ಬಂದು
ಧರಣೀಶನೆಡೆಗೈದು ಜನರೊಡನೆಲ್ಲ
ಜಗದೀಶಗೆಂದರು ದುಃಖದಿಂದಳುತ:
"ತಪ್ಪಾವುದೂಯಿಲ್ಲ ಕುರಿಯನೆಮ್ಮವನು
ಹಿಂಬಾಲಿಸುತ ಬಂದು ಗುಡಿಯಲ್ಲಿ ಹಿಡಿಯೆ
ಭಕ್ತನಾ ಕಿನ್ನರಬ್ರಹ್ಮಯ್ಯ ಶಕ್ತಿ-
ವಂತನಾದುದರಿಂದ ಕೊಂದ ತಾ"ನೆನ್ನ-

ಲುರ್ವೀಶ್ವರನು ತಾ ಕೋಪೋದ್ರೇಕವಹ್ನಿ
ಹಬ್ಬುತಲಿರೆ ಬಸವನ ನೋಡುತೆಂದ:
"ಹರಭಕ್ತರತಿದಯಾವಂತರೆನ್ನುವರು
ನಿರಪರಾಧಿಯ ಕೊಲ್ಲುವುದು ನೀತಿಯೇನು?
ಮನುಜರನೂರಲ್ಲಿಯುಳಿಸರಲ್ಲದೆಯೆ
ಕುರಿಗೂ ನಿಮಗುಯೇನು ಸಂಬಂಧ ಹೇಳು?
ನಮ್ಮ ಮೇಲೊಬ್ಬನು ರಾಜನಿರುವನೆ
ಭೂಮಿಯಲೆಂಬಂತೆ ಹೊಡೆದು ಹಾಕುವರು.
ರಾಜರೂ ನಿರಪರಾಧಿಗಳನು ಕೊಲ್ಲ-
ಲೋಜೆಯೆ? ಭಕ್ತರಿಗುಚಿತವಾಗುವುದೆ?

ಕಾಲಲೊದೆವುದು ಮಾಂಸವನು ತಿನ್ನುವುದು
ಬಾಲನ ಕೊಲುವುದು ಕಲ್ಲ ಬೀಸುವುದು
ಕುಲಗೆಟ್ಟೂಟವ ಮಾಡುವುದು ತನ್ನ ತಂದೆ
ತಲೆಯ ತರಿವುದು ತನ್ವಿಯನೀಯುವುದದು
ತಾವು ಮಾಡಿದುದನು ಧರ್ಮವೆನ್ನವರು
ಸರಿಯಲ್ಲವೆಂಬರು ಪರರು ನುಡಿಯಲು
ಆಳಿರಿ ನೀವೆಯೀ ರಾಜ್ಯವನೆಲ್ಲ
ಧಾರುಣಿಯಾಳಲು ನಮಗಿನ್ನಸಾಧ್ಯ-
ವಾಗಾಗ ನಮಗೇತಕಿಂತಹ ಭಯವು
ಒಪ್ಪಿಕೋ ರಾಜ್ಯವ ತಪ್ಪೇನು?"ಯೆನಲು

"ಕಜ್ಜವನರಿಯದೆ ನೀನುಡಿಯುವುದು
ಬಿಜ್ಜಳಕ್ಷೋಣೀಶ, ಹಿರಿತನವೇನು?
ಧರ್ಮವ ಕರ್ಮಿಯು ತಪ್ಪುವನೆಂದು
ಧರ್ಮವ ಭಕ್ತರು ತೊರೆಯರು ಕೇಳು
ಕಿನ್ನರಬ್ರಹ್ಮಯ್ಯ ಸನ್ನುತಕೀರ್ತಿ
ಸಣ್ಣವನೇ ಸುಮ್ಮನಿದ್ದರೂ ಕೊಲ್ಲೆ?
ಹಾಗೇಕೆ ಎತ್ತೀಯಿತೆಂದರೆ ಗೊಂದಿ-
ಯಲ್ಲಿ ಕಟ್ಟೆನ್ನುವ ರೀತಿಯು ಸರಿಯೆ?
ಸರಿಯಾದ ಕಾರ್ಯಾಂಶವರಿಯೋಣ, ಮಾತ
ಕೇಳೋಣ, ತಕ್ಕರನರಿಯಲು ಕಳಿಸು

ಮತ್ತಲ್ಲಿ ಹೋಹುದು ಮರ್ಯಾದೆಯೆಲ್ಲ
ತಿಳಿಯಲಾರೆಯ ನೀನು ಇಷ್ಟನ್ನು"ಯೆನಲು
ತನ್ನಾಮಾತ್ಯರ ನೋಡಿ ಧಾರುಣೀಶ್ವರನು
ಕಳಿಸಲು ತ್ರಿಪುರಾಂತಕನ ಗುಡಿಗೈದು
ಕಿನ್ನರ ಬ್ರಹ್ಮಯ್ಯನನು ಕಂಡು ಮೊಕ್ಕಿ
"ಅಣ್ಣಯ್ಯ, ತಕ್ಕುದೇ ನಿನ್ನಂಥ ಭಕ್ತ
ಹಿಂಸೆಗೆ ಒಳಗಾಗಲೇನು ಕಾರಣವು?
ಸಂಸಾರಿಯನ್ನೇಕೆ ಸರಿಮಾಡಿಕೊಂಡೆ?
ಕೊರಳನರಿವ ಚಿಂತೆಯೇಕೆ ಹುಟ್ಟಿತ್ತು?
ಜಗದಿ ಸುಮ್ಮನೆಯಪಕೀರ್ತಿಯು ಬಂತು

ದುಷ್ಟತನವು ಜರಬುಳ್ಳ ಮನುಜರ
ಕುರಿಯ ವಿಚಾರಕ್ಕೆ ಕೈಯಿಕ್ಕಬಹುದೆ?

ಭೂಮೀಶ್ವರನು ನಮ್ಮನಟ್ಟಿದನರಿಯ-
ಲೇನೆಂದು, ನೀನೇನ ಹೇಳುವೆ"ಯೆನಲು
"ಈಯೆಲ್ಲ ಸುತ್ತುಮಾತೇತಕೆ? ಅವನು
ಬರುತಿರೆ ಹಗ್ಗವ ಹರಕೊಂಡು ಕುರಿಯು
ಗುಡಿಯನು ಸೇರೆ 'ಹಿಡಿಯಬೇಡವಿದನು
ಬಿಡಲಾಗದಿರೆ ಹೇಳು ಬೆಲೆಯ, ಕೊಳ್ಳುವೆನು
ಇಮ್ಮಡಿ ಮುಮ್ಮಡಿಯೀವೆನಾ'ನೆನಲು
ಅವನಣಕಿಸಿಯೆನ್ನನಿಂತಹ ಭಕ್ತ

ಸಾವಿರವಿತ್ತು ಬಿಡಿಸುವನಲ್ಲದೆಯೆ
ಇದನಿವ ಹಿಡಿದೊಯ್ಯಲೀವನೆ'ಯೆನಲು
'ಕೇಳಿರೀ ಮಾತ ಸಾವಿರ ಹೊನ್ನುಗಳಿಗೆ
ಕುರಿಯನೆಲ್ಲಾದರೂ ಕೊಳುವರೆ'ಯೆನಲು
ಬೆಕ್ಕಸಗೊಳ್ಳಲು ಸಾವಿರ ಹೊನ್ನ
ಚಕ್ಕನೆಣಸಿದೆನು ಚೌಕವನೆಸೆದು
'ಮತ್ತೆ ಮರಳಿದರೆ ಬಿಡೆನು ನಾ'ನೆಂದು
ಹೇಳಿಯಚ್ಚೊತ್ತಿದೆ ಶಿವಲಾಂಛನವನು.
ಕಾಂತೆಯು ತನಗೆ ಕಡಂಗಿ ಮಾತಾಡ-
ಲೆನ್ನಿಂದ ಹಣವನು ಪಡೆದಿಹೆನೆನದೆ

ಕೊಂಡೊಯ್ದು ಹೊತ್ತಿದ್ದು ಮತ್ತೆ ತಾ ಬಂದು
ಮಿಂಡ ಬಸವಗೆ ಕೊರಳಪಾಶವನಿಡೆ,
ಬೇಡೆಂದು ವಾರಿಸಲಲಗನು ಸೆಳೆಯೆ
ತಲೆಯ ಕತ್ತರಿಸಿದೆನಾರದು ತಪ್ಪು?
ಇದಕೆಲ್ಲಕೀ ತ್ರಿಪುರಾರಿಯೆ ಸಾಕ್ಷಿ.
ಹಿಡಿದರೆ ನುಡಿಸುವೆನಿಂತೆಂದು ಹೇಳಿ"
ಎನ್ನಲು ಅತಿವಿಸ್ಮಯಕ್ರಾಂತರಾಗಿ
ಜನನಾಥನಿಗಿದನು ತಿಳಿಸಿದ ತಡವೆ
"ಕಂಡಿರಾ! ಈ ಭಕ್ತನರೆಗೊಡ್ಡತನವ!
ಕೆಟ್ಟದಾಡುವನು, ಕೇಳಿರಲಿಲ್ಲವಿದನು;

ವಿಪರೀತವೆಲ್ಲರು ಕೇಳೆ 'ನುಡಿಸುವೆ
ತ್ರಿಪುರಾರಿಯುನೆನಲು ಕಪಟವೊ ನಿಜವೊ
ನೋಡಿಯೆಬಿಡುವೆನೆಂ'ದೆನುತ ಬಿಜ್ಜಳನು
ಐತರಲಧಿಕ ವಿಭೂತಿಭಾತಿಯಲಿ

ಬಸವನು ಕಿನ್ನರಬ್ರಹ್ಮನ ಪಾದ
ಬಿಸರುಹಾಕ್ರಾಂತನಾಗುತ ಪ್ರೀತಿಯಲರೆ
'ಶೃಂಗಾರಗಳ ಕೀಲು ಶಿವಕರವಾಲ
ಮಂಗಳದಾಗರ ಮಾನ ಸಾಗರವು
ವಿಜಯದ ಶಿಖರ ವಿವೇಕದ ಸಾರ
ನಿಜಗುಣಸ್ತುತಿಮೂಲ ನಿಷ್ಠೆಯ ರೂಪ

ಸತ್ಯದ ಭಾತಿಯಾಸ್ಥಾನದ ಜ್ಯೋತಿ
ಪ್ರತ್ಯಯಗಳ ರಾಜ ಭಾವುಕತೇಜ
ಪಾಪದ ಶತ್ರು ವಿರಾಗದ ಗಣಿಯು
ಆಗಮಗಳ ಸೌಮ್ಯ ಹರ್ಷದ ಹರ್ಮ್ಯ
ಶಾಂತಿಯ ರಾಶಿ ಸದ್ಭಕ್ತಿವಾರಾಶಿ
ತಪಸಿನ ಪೆಂಪು ಪ್ರತಾಪದ ಸೊಂಪು'
ಎಂದಸಮಾನಸಮಂಚಿತಾರ್ಥದಲಿ
ವಿನಯಪೂರ್ವಕವಾಗಿ ವಿನುತಿಗೈಯುತ್ತ-
ಲಿರುತಿರಲಖಿಲನಿಯೋಗವೋಲೈಸೆ
ತಂಡತಂಡಗಳ ಭಕ್ತವ್ರಾತವಲರೆ

ಗುಡಿ ವಟುವಾಮುನ್ನ ಕುಂಚಕೋಲುಗಳ
ತೋರಿಸದಂತೆಯ್ದಿರಲು ಕಿನ್ನರಯ್ಯ
ದರಹಸಿತಾಸ್ಯದಿ ಕದಗಳ ಕಡೆಗೆ
ಓರೆಗಣ್ಣಲಿ ಕೊಂಚಕಾಲ ದಿಟ್ಟಿಸಲು
ಗಡಿಬಿಡಿಯಲಿ ಮುನ್ನವಾಪುರಾಂತಕನು
ಭಯದಿ ಕದಗಳನೋಸರಿಸೆ ಚೋದ್ಯವೆನೆ
"ದಾಸಿಗೆ ತೆರೆದ ಕದವನು ಮುನ್ನೆಂದು
ಕೇಳಿದ್ದೆವಾವದನೀಗ ನೋಡಿದೆವು.
ಭರದಲಿ ತ್ರಿಪುರಾಂತಕನ ಕವಾಟಗಳು
ದಿಟ್ಟಿಸಿ ನೋಡಲು ಬಿದ್ದವು ಕಿತ್ತು

ಭಾಪುರೇ, ಕಿನ್ನರಬ್ರಹ್ಮಯ್ಯನಿಂದು
ಬಿಡದಲೆ ನುಡಿಸುವನೀ ಪುರಾಂತಕನ"-
ನೆನುತ ನೋಡುವ ಜನರೆಲ್ಲ ಪ್ರಸ್ತುತಿಸ-
ಲೈತಂದು ಬ್ರಹ್ಮಯ್ಯ ಸಂತೋಷವಲರೆ
"ಮನಸಿಜ ಕ್ರೀಡಾಂತದಲಿ ಕೈಯ ಹಾಕಿ
ವನಿತೆಯ ಮೊಲೆಯ ನೀನೆಂದು ನಿಶ್ಚಯಿಸಿ

ಭರದಿಂದಲಾತ 'ನಯ್ಯಾ'ಯೆಂದು ಕರೆಯ-
ಲೊಡೆಯ ನಂಬಣ್ಣನಿ'ಗೋ'ಯೆಂದು ಶಿವನೆ,
ಶೋಭಿಸೆ ದಾಸಿಮಯ್ಯನು ವಾದಗಳಲಿ
ನಿಲೆ ಪಿಪೀಲಿಕೆಯಲಿ ನುಡಿದಂಥ ಶಿವನೆ,

ಮುನ್ನ ಬಾಹೂರು ಬ್ರಹ್ಮಣ್ಣಗೆ ನುಡಿದು
ಜೋಳವೆ ನೀನಾಗಿಯಿದ್ದ ಶಂಕರನೆ,
ನುಡಿಯೆಯಾ ಎನ್ನ ಬಾರಿಂದೋಡಿದಂತೆ"
ಎಂದಲಗಿನ ಮೋಹಳವ ಕೈಲಿ ತುಡುಕಿ
ಕಿನ್ನರಬ್ರಹ್ಮಯ್ಯನಂದು ತುಳ್ಕಾಡೆ
ಪನ್ನಗಧರ ಮಹಾಭಕ್ತರು ನೆನೆದು
ಆಯತಿಯಿಂದಭಿಮುಖನಾಗಿ ನಿಂದು
'ತ್ರಿಪುರಾಂತಕಾ'ಯೆನ'ಲೋ' ಯೆನುತಿದ್ದ.
ಬೆಚ್ಚುತ ಮೂರ್ಛಿಸಿ ಸ್ಪೃಹೆಯನು ತಪ್ಪು-
ತೆಂತೆಂಯೋ ಲಿಂಗಸನ್ನಿಹಿತರನುಳಿದು

ಖಗಮೃಗೋರಗ ನರಕರಿತುರುಗಾದಿ-
ಯಹ ಸಮಸ್ತಚರಾಚರಾದಿ ಜಂತುಗಳು
ಭರದಿಂದ ಮಗ್ಗುತಲಿದ್ದಕಿದ್ದಂತೆ
ಚಕ್ಕನೆ ಪ್ರಾಣಗಳನ್ನು ತೊರೆದವು,
ಕಟಕವು ತಾನಿಂತಂತಲುಗಾಡಿತಾಗ,
ಲೋಕಗಳೆಲ್ಲ ಕಲ್ಲೋಲವೊಂದಿದವು,
ಈ ಕ್ಷಿತಿ ಕಂಪಿಸಲಿನನಸ್ತಮಿಸಲು,
ನಕ್ಷತ್ರಗಳು ಬೀಳೆ ನಗಗಳು ತಗ್ಗ-
ಲಂಬುಧಿಗಳುಯಿಂಗೆ ಕೂರ್ಮವು ನೆಗ್ಗ-
ಲಂಬರ ತಾ ಬಗ್ಗಲಹಿಪತಿ ಕುಗ್ಗ-

ಲನಿಲನುಡುಗಲು ಸ್ವಾಹಾಪತಿ ಬೀಳೆ
ವನಜನಾಭನಳುಕೆ ವನಜಜ ನಡುಗೆ
ಸಮಸುಪ್ತಿಯನುಗೈದು ಜಗಗಳ ಮುಸುಕಿ
ಪ್ರಮಥಲೋಕಗಳೆಲ್ಲ ತಮಮಯವಾಗ-
ಲಾಡುತ್ತ ಪಾಡುತ್ತಲಸಮಾನಲೀಲ
ಕ್ರೀಡಿಸಿ ಮತ್ತೆ ಸತ್ಕ್ರಿಯೆ ತುಳಕಾಡ-
ಲವಿಕಲಾನೇಕ ಭಕ್ತಾವಳಿಯುಬ್ಬಿ
ಸವಿಶೇಷಗತಿಯಿಂ ಮಹೋತ್ಸವ ಸಲಿಸೆ

ಮಾಣದೆ ರಾತ್ರಿಹಗಲುಗಳು ಕೂಡಿ
ಮೊರೆಯಲೇಳುದಿವಸ ಕಳೆಯಲು ಮುಂದೆ

ಭುವನೋಪಕಾರಾರ್ಥಬುದ್ಧಿಯಿಂ ಬಸವ-
ನವಿರಳದಲಿ ಕಿನ್ನರಯ್ಯಗೆ ಮೊಕ್ಕಿ
"ಸಜ್ಜನಶೃಂಗಾರ ಸತ್ಯಗಂಭೀರ
ಈ ಜಗದಾಧಾರ ಈಶ್ವರಾಕಾರ
ಮಂಗಳಗುಣಧಾಮ ಮಹಿಮಾಭಿರಾಮ
ಲಿಂಗಾಭಿರೂಪ ಅಭಂಗ ಪ್ರತಾಪ
ನಿರ್ಜಿತಾಹಂಕಾರ ನಿಖಿಲೋಪಕಾರ
ದುರ್ಜನದೂರ ವಿಧೂತಸಂಸಾರ
ಕಾರುಣ್ಯಪಾತ್ರ ಅಕಲ್ಮಷಗಾತ್ರ
ವೀರವ್ರತಾಚಾರ್ಯ ವಿಪರೀತಶೌರ್ಯ

ಅಂಚಿತಾಗಣ್ಯ ನಿರಂತರಪುಣ್ಯ
ಸಂಚಿತಸುಖಲೀಲ ಶರಣವಿಲೋಲ
ಸನ್ನುತಕೀರ್ತಿ ಸಾಕ್ಷಾದ್ರುದ್ರಮೂರ್ತಿ
ಕಿನ್ನರ ಬ್ರಹ್ಮಯ್ಯ ಕೃಪೆಯಗೈ"ಯೆನಲು
ಬಸವನ ಕೈಮುಟ್ಟಿ ಪ್ರಹಸಿತನಾಗಿ-
ಯಸಮಾಕ್ಷನನು ನೋಡಿ 'ಹೇ'ಯೆಂದು ವಾರಿ-
ಸಲು ಮೊದಲಿದ್ದಂತದ್ಭುತಲೀಲೆಯಿಂದ
ಬಂದವು ಲೋಕಗಳು ಮಹಿಷ್ಠತೆಯಲಿ,
ಕಟಕವು ನೋಡಲೆಂದಿನೊಲು ಬಲಿಯಿತು,
ಬದುಕಿದವಿಂತು ಚರಾಚರಜೀವಿ-

ಯಾಗಲ್ಲಿ ಬಿಜ್ಜಳ ಮೂರ್ಛೆಯ ತಿಳಿಯು-
ತಾ ಜನೌಘದ ಜೊತೆ ಸಾಷ್ಟಾಂಗವೆರಗಿ
"ಅಭಯವೇ ಜೀಯ, ಅತ್ಯದ್ಭುತಕೀರ್ತಿ
ಅಭಯವೇ ಜೀಯ ಮಹಾಮಹಿಮಾಢ್ಯ
ಕಿನ್ನರ ಬ್ರಹ್ಮಯ್ಯ ಗೀರ್ವಾಣವಂದ್ಯ
ಕಂಗಳು ಕಾಣದ ಕಷ್ಟಲೋಗರನ-
ಜ್ಞಾನಜೀವರನಪಗತಮತಿಗಳನು
ಅಜ್ಞರನಧಿಕಸರ್ವಾಪರಾಧಿಗಳ
ಕಡೆಗಂಡ ನಿಮ್ಮ ವಿಖ್ಯಾಪಿತಮಹಿಮೆ-
ಯಾ ಕೊನೆಯರಿಯಲು ಶಕ್ಯವೇನೆಮಗೆ!

ನಿನ್ನಾಜ್ಞೆಯನು ಹೊತ್ತು ನಿಟಿಲಲೋಚನನು
'ಓ'ಯೆಂದು ಕರೆದ, 'ಹೇ'ಯೆನ್ನಲುಡುಗಿದ-
ನಿಷ್ಟರಲ್ಲಿಯೆ ಈ ಈರೇಳುಲೋಕಗಳು
ಸಂತಾಪವೊಂದಿತು ಸಮಸುಪ್ತಿಯಲ್ಲಿ
ನೀನೀಗ ಕರುಣಿಸಲುಲ್ಲಸವಾಯ್ತು
ಹೇಳೆ ವಿಚಿತ್ರವಲ್ಲವೆ ತಾನೆಂದೆಂದು.
ಪಸರಿಸಲಿಹಲೋಕ ಪರಲೋಕಗಳಿಗೆ
ಹರನು ತಾ ನೀನೆ ಶಂಕರನು ತಾ ನೀನೆ
ಭವ ನೀನೆ ಸದ್ಭಕ್ತರೂಪನು ನೀನೆ
ಬುವಿಯಲ್ಲಿ ನಿನ್ನನು ಹೋಲುವರಿಹರೆ?

ಕರುಣದಿ ನೀರಲಾದರೂ ಅದ್ದು ಹಾಲ-
ಲಾದರೂ ಅದ್ದೆಮಗನ್ಯಥಾಯಿಲ್ಲ.
ಒಬ್ಬನೇತಕ್ಕೆ ಬ್ರಹ್ಮೋಕ್ತ ಜೀವರಿಗೆ
ನಿಶ್ಚಯಗಲಿ ದೆಸೆದಿಕ್ಕು ನೀನೆಮಗೆ
ಅದರಿಂದಲೆಮ್ಮ ಕಟಾಕ್ಷ ಪ್ರೇಕ್ಷಣದಿ
ಭಾವಿಸೆಯಾ ಕೃಪಾಭಾವವ ಬೆರಸಿ"
ಎನುತ ಮತ್ತೆಯು ಮೊಕ್ಕುತಭಿನುತಿಗೈಯ-
ಲದಕಂಡು ದರಹಾಸಕಲಿತಾಸ್ಯನಾಗಿ
"ಕರಕಂಠ ಭಕ್ತರಿಗರೆಕೊರೆಯಿರದೆ
ಕೂಡಿ ನೀ ಬಾಳು ಹೋಗಿನ್ನು ಹೆಚ್ಚೇಕೆ?"

ಎನ್ನುತ ವಿಶಿರಸ್ಕನಾದ ಮಾನವನ-
ನೆಲ್ಲರು ನೋಡೆ ಸಪ್ರಾಣನಾಗಿಸುತ
ನಡೆದ ಕಿನ್ನರ ಬ್ರಹ್ಮಶರಣನು ಭಕ್ತ
ಜನರು ಬಸವ ತಾನು ಅನುರಾಗವೊಂದೆ,
'ನಿಶ್ಚಯದಿಂದೀತ ನಿಟಿಲಾಕ್ಷ'ನೆನುತ
ಲಾಶ್ಚರ್ಯಹೃದಯದಿ ನಡೆದ ಬಿಜ್ಜಳನು.
ಆ ಮುಂದೆ ಕಿನ್ನರಯ್ಯನು ಭಕ್ತಿಕಾಂತ-
ನಾಗುತ ತ್ರಿಭುವನಖ್ಯಾತಿಯೊಳಿದ್ದ.
ಪಸರಿಪ ಕಿನ್ನರ ಬ್ರಹ್ಮಯ್ಯನ ಘನ
ಚರಿತೆಯ ಭಕ್ತಿಯಿಂದೋದಿ ಕೇಳಿದರೆ

ಭಕ್ತಿಯು ಸಕಲವಿರಕ್ತಿಯು ಸಹಜ
ಭುಕ್ತಿಯೂ ಅಭಿಮತಭೋಗ ದೊರೆವುದು.

## ಕಲಕೇತ ಬ್ರಹ್ಮಯನ ಕಥೆ

ಮತ್ತೆಯು ಕಲಕೇತ ಬ್ರಹ್ಮಯ್ಯನೆಂಬ
ಕಡುಭಕ್ತನೊಬ್ಬನು ನಿರ್ಮಲಕೀರ್ತಿ
ಜಂಗಮವಿಶ್ವಾಸಿ ಲಿಂಗಾಭಿಮಾನಿ
ಸಂಗತಚರಿತನಭಂಗಪ್ರತಾಪಿ
ನಿರ್ಮೂಲಿತೋಭಯ ಕರ್ಮಸಂಚರನು
ಧರ್ಮಲೋಷ್ಟೈಕಸದ್ಭಾವಗೋಚರನು
ಮಹಿತ ಜೀವನ್ಮುಕ್ತಿಮಾನಸವರ್ತಿ
ಸಹಜಲಿಂಗೈಕ್ಯನಿಷ್ಠಾಸಮನ್ವಿತನು

ಲೋಕೈಕನುತನು ತೃಣೀಕೃತಲೋಕ-
ನೇಕಾಂಗವೀರನಪಾಕೃತಕರ್ಮಿ
ಶುದ್ಧಲಿಂಗಾತ್ಮ ಪ್ರಸಿದ್ಧಾನುಭವನು
ಸಿದ್ಧಮಹಾದ್ಭುತಶೀಲನು ತಾನು
ಹಿಡಿದು ಗಿಲ್ಕೆಯ ದಕ್ಷನ ತಲೆಕೋಡಿನೊಲು
ತಗರ ಕೊಂಬನು ಹಿಡಿದಿಹ ವೇಷವೊಪ್ಪೆ
ಆ ತ್ರಿವಿಕ್ರಮಗಿದ್ದ ಬೆನ್ನೆಲುಬಿನೊಲು
ತೋರುವ ಗುದಿಗೆಯ ಕೈಯಲ್ಲಿ ಹಿಡಿದು
ಕಲಕೇತವೇಷವನಿಂತು ತಳೆಯುತ-
ಲೊಪ್ಪುವ ಭಕ್ತರ ಮನೆಗಳಿಗೆಯ್ದು

"ಪರಸಮಯಗಳನು ಮೆಟ್ಟುವ ಧರೆಯ
ರುದ್ರನ ನಿಟಿಲಾಗ್ನಿತಗರ್ಯೆದು ಬಂತು
ಜಿನದರ್ಶನಗಳನು ತೊತ್ತಳದುಳಿವ
ವೀರಭದ್ರನ ನಮ್ಮ ಮದಕರಿ ಬಂತು
ಈ ಮಹಿಭಕ್ತರಭ್ಯಾಗತಬಂದ-
ನಾ ಮಹಾಪ್ರಮಥಚಯದ ಮುದ್ದು ಬಂದ
ದುಗ್ಗಳವ್ವೆಗಳ ಸುಪುತ್ರನು ಬಂದ
ಸಂಗಳವ್ವೆಯ ತಮ್ಮನಿವನು ತಾ ಬಂದ
'ಅಮ್ಮಗಳಕ್ಕಗ'ಳೆಂದು" ನಗಿಸುತ
ಧಾನ್ಯವು ನಿತ್ಯವು ಇಬ್ಬಳದಳತೆ-

ಯನು ತಂದು ಜಂಗಮಕೋಟಿಗತ್ಯರ್ಥಿ-
ಯಿಂದಲಿ ಪರಿಚರ್ಯೆಯನ್ನಾಚರಿಸುತ

ಸನ್ನುತ ಭಕ್ತಿಸಮುನ್ನತಲೀಲೆ-
ಯಿಂದಿರೆ ನಿಯತಿಯಿಂದೊಬ್ಬನು ಭಕ್ತ
ಭಾತಿಯಿಂ ಕಿನ್ನರಬ್ರಹ್ಮನ ನೋಡ-
ಲೆಂದು ಬರುತ ಬರಲಾಗದೆ ಬಳಲಿ
ಕಲಕೇತ ಬ್ರಹ್ಮಯ್ಯನಾ ಸನ್ನಿಧಿಯಲಿ
ಅಲಸಿ ಪಥಶ್ರಾಂತನಾಗಿ ಬಿದ್ದಿರಲು
"ಬಳಲಿ ಶರೀರವು ಕೃಶಿಸಿ ಪಾದಗಳು
ಬಿರಿಯುವಂತೀರೀತಿ ಶ್ರಮದಿಂದಲಿಂತು

ಬರೆ ನಿನಗಾವ ಕೆಲಸವಿದ್ದಿತಯ್ಯ!"
ಎಂದಾಗಲಾ ಅಯ್ಯನಾಗ ವೀಕ್ಷಿಸುತ
"ನಂಬಿಗೀಶನು ಮುನ್ನಿನಿಂ ಪಡಿಯೀವ-
ನಿಂಬಿನಿಂ ಜನರೆಲ್ಲ ತಿಳಿಯುವಂತೀಗ
ಪಡಿಯೀವನಾ ಕಿನ್ನರಬ್ರಹ್ಮಯ್ಯನಿಗೆ
ಎಡೆವಿಡದೆನೆ ಜನರಚ್ಚರಿಯಿಂದ
ಕೇಳಿ ನೋಡಲು ಬಂದೆ, ಕೇಳು ದಾರಿದ್ರ್ಯ
ಘನದುಃಖವ ಕಳೆವನೆಂದು ಭಾವಿಸುತ
ನೋವುಗೀವುಗಳೆಲ್ಲ ಹೆಚ್ಚಿದವಿಲ್ಲಿ
ಎಷ್ಟು ದೂರವು ಹೇಳು ಅಯ್ಯನಾ ಮಠವು

ಹೋಗುವೆನಾ ಅಯ್ಯನನು ಕಂಡು ಹೊರತು
ಶ್ರಮ ಹೋಗದೆ"ನ್ನುತ ತಥ್ಯವ ನುಡಿಯೆ
"ಈ ರೀತಿಯಿಂದವನನು ಹೊಗಳುತ್ತ
ನುಡಿಯದಿರಯ್ಯ ಕೈಕೂಲಿಯು ನಾನು,
ಕೆಲಸ ಬೆಲೆಗೆಗೈವ ಬಂಟ ರಾಶಿಯನು
ಕೊಳಬಹುದೇ? ತನ್ನ ಕೂಲಿಯೆ ತಕ್ಕ
ಫಲಗಳು ತಿಳಿದಿರು, ಭಕ್ತರಿಗೆಂದು
ದೊರೆವುದು ಲಿಂಗನಿರಂತರಸುಖವು
ಪದವಿಗಿದವಿಗಳು ಪಡಿಗಿಡಿಗಳವು
ಮದನಾರಿಸದ್ಭಕ್ತಮಂಡಲಿಗರಿದೆ

ಅಷ್ಟು ದೂರವನೆಂತು ನಡೆಯುವೆ ಬಳಲಿ
ಎಷ್ಟಾದರರ್ಥವನೆತ್ತಿಕೋ" ಯೆನುತ
ಕೈಯ ಗುದಿಗೆಯಿಂದ ಕಲ್ಲರಾಶಿಯನು
ತಡೆಯದೊಂದೊಂದಾಗಿ ತಾಕಿಸಲೊಡನೆ

ತಂಗಡಿ ಹೂಗಳು ಧರೆಗೆ ಬಿದ್ದಂತೆ
ಅರ್ಥವಿರಲು ಮೇಲೆ ಚೀರವ ಹೊದಿಸಿ
ಕಂಗಳು ಹರ್ಷಾಶ್ರುಕಣಗಳ ಸುರಿಸ-
ಲರ್ಥಿಯಿಂ ಹೊರೆಯೆತ್ತಿಕೊಳ್ಳುತ ಭಕ್ತ
ಬಲುವೇಗದಿಂ ಬರಬರುತಲಾಯಾಸ-
ಗೊಳ್ಳುತ ಚಕ್ಕನೆ ಬಸವಣ್ಣಮಂತ್ರಿ

ನಗರೋಪಕಂಠದಲಿಳಿಸಿ ಹೊರೆಯನು
ಸರಸರನ್ಯೆದಿ ತಾ ತಂದ ಕ್ರಮವನು
ಬರುವವರೆಗಿನ ವಾರ್ತೆಯನೆಲ್ಲ ಧಾನ್ಯ
ಬಿತ್ತಿದ ವಿಧದಲಿ ಸರಸರ ಹೇಳಿ
"ಬಸವಣ್ಣ, ಕಲಕೇತಬ್ರಹ್ಮಯ್ಯನೆನಗೆ
ನೀಡಿದರ್ಥವ ಹೊರಲಾರೆ ನಾನೊಬ್ಬ,
ಕಳುಹಿಸು ಬೇರೊಬ್ಬ ಪರಿಚಾರನೆನಗೆ"
ಎಂದಾಗ ಬಸವನ್ಯತ್ಯಾಶ್ಚರ್ಯವೊಂದಿ
"ಇಂಥವರಿರುವರೇನೀಶ್ವರಭಕ್ತ-
ರೆಂತಿಹರವರನಿನ್ನೇನೆನಬಹುದು?

ಕಾಯಕವಲರಲು ಕಲಕೇತ ವಿದ್ಯೆ-
ಯಾತನ ಮಹಿಮೆಯು ವಿಸ್ಮಯಕರವು
ಕಲ್ಪವೃಕ್ಷದ ತ್ಯಾಗ ಘನವೆಂಬೆನೇನು
ಅಷ್ಟಭೋಗವು ಮಾತ್ರವಪವರ್ಗವೆಲ್ಲಿ?
ಚಿಂತಾಮಣಿಯ ಬಗ್ಗೆ ಹೇಳುವುದೇನು
ಯೋಚಿಸೆ ಶಾಶ್ವತ ಸಿದ್ಧಿಯದೆಲ್ಲಿ?
ಮೇರುವನೆನಲೇನು ಹೊನ್ನಿನ ಹೊರತು
ಕೇಳಿದರೊಂದನು ನೀಡುವುದೇನು?
ಕಾಮಧೇನುವು ನಿತ್ಯವೇ ಮುನ್ನ ತಾನು
ಕಾಮಿಸಿದವರಿಗೆ ಕಾರ್ಯವೆಸಗಿತು

ಕಲಕೇತ ಬ್ರಹ್ಮಯ್ಯನವರ ಮಹತ್ವ-
ವನ್ನಿಂತಾದರಿಸಲು ತಾನಿದಕಿಂತ-
ಲತಿಶಯದಿಂದ ಸರ್ವಾರ್ಥಸಿದ್ಧರಿಗೆ
ಅತಿಶಯಸ್ಥಿತಿಹೇತುವಾಗುವುದೆನುತ
ಕಿನ್ನರ ಬ್ರಹ್ಮನ ಕೀಳಾಗಿ ನುಡಿಯೆ
ಜನ್ನಿಗೆಯೊಬ್ಬನಾ ಶರಣನ ಹೊರತು

ಕಾಣೆ, ತಾನಾತ ಸಾಕ್ಷಾತ್ಸಂಗಮೇಶ–
ನೆಂದಿಗಿತರರವನಿಗೆ ಸರಿಯಹರೆ?
ತನುವ ತೋರದೆ ಧರೆಯಲ್ಲಿ ವರ್ತಿಸುವ–
ನವನೆನಲಾತನೇನಲ್ಪನೇ"ಯೆನುತ

ಭಕ್ತನು ಜೊತೆ ಪರಿಚಾರನನಿತ್ತು
ವ್ಯಕ್ತಸಂದರ್ಶನಾಸಕ್ತಿಯಿಂ ಬಂದು
ಬಸವಣ್ಣನಾಕಲಕೇತ ಬ್ರಹ್ಮಯ್ಯ–
ನಿಗೆ ಭಕ್ತಿಯಿಂದ ಸಾಷ್ಟಾಂಗವೆರಗುತ–
ಲಂಜಲೀಕೃತಕರಕಂಜದಿಂ ನೇತ್ರ–
ಸಂಜನಿತಾನಂದ ಜಲರಾಶಿಯಲ್ಲಿ
ಮುಳುಗುತ್ತಲಧಿಕದಿ ನುತಿಯಿಸುತಿರಲು
ಬಸವಗೆ ಕಲಕೇತಬ್ರಹ್ಮಯ್ಯನೆಂದ:
"ಬಸವ, ಈ ಕಿನ್ನರ ಬ್ರಹ್ಮಯ್ಯನಂಥ
ಭಕ್ತನೀ ಪಸರಿಪ ಬುವಿಯೊಳಗಿಹನೆ?

ಒಡೆಯ ನಂಬಿಗೆ ಮುನ್ನ ಪಡಿಯಿತ್ತ ಶಿವನು
ಪಡಿಯೀವ ಕಿನ್ನರ ಬ್ರಹ್ಮಯ್ಯಗೀಗ.
ನುಡಿಸುವುದದು ನಿತ್ಯಪಡಿಯ ಕೊಳ್ಳುವುದು
ಮೆರೆಯಲಾಯೀರ್ವರ ವೃತ್ತಿ ತಾನೊಂದೆ.
ಬಿಡದೋಲೈಸಿದ ಫಲವಿಂತಿರಬಹುದೆ?
ಬರಿಯ ಮಾತುಗಳೇತಕಿಹವು ವಸ್ತುಗಳು
ನಿಟಿಲಾಕ್ಷ ಬೇಡದೆ ನಿಶ್ಚಯವಿಹುದೆ?
ಕಟಕಟಾ! ನಾನಿಷ್ಟು ಕಾಲ ಭಜಿಸಲು
ಅಕ್ಕಟಾ! ನಿಷ್ಫಲವಾಯಿತು, ನಿತ್ಯ–
ವೊಂದೊಂದು ಹಾಗವನೂ ಕೊಳ್ಳಲಿಲ್ಲ.

ಶಿವಪೂಜಾಫಲವನು ಕೈಲಿ ಕೊಂಡಂತೆ
ಭರದಿಂದಲಾತನ ಕೈಗೂಡಿರುವುದು.
ಪುಣ್ಯವ ಕಳಕೊಂಡು ಬಡವರೆನಿಸಿದ
ನಮ್ಮ ಬಾಳುವೆಯಿಂದಲೇನುಪಯೋಗ?
ಮೃಡಪೂಜೆಗೈದು ಚಿಟಿಕೆಯಿಂದ ಚಿನ್ನ
ಪಡೆಯುವುದರಿದೇನು? ಹಗಲೆಲ್ಲ ಕೆಲಸ–
ವನು ಬಸವಳಿಯುತಗೈದು ಬೆವರನು
ಸುರಿಸಿದರೂ ಬಳ್ಳ ಹೆಚ್ಚಿಗೆಯಿಲ್ಲ.

ಇಷ್ಟೆಲ್ಲ ಹೇಳಲೇತಕೆ ನಮ್ಮ ಕಿನ್ನ-
ರಣ್ಣಗೆ ಹೇಳಲು ವ್ಯಯಗಳು ಹಿರಿದು

ತಾನೊಮ್ಮೆ ರಜತಮಹೋರ್ವೀಧರಕ್ಕೆ
ಹೋಗಿ ಬಂದುದರಿಂದ ಹೆಚ್ಚಿತು ಕೀರ್ತಿ.
ನಚ್ಚಿನಿಂ ಶಿವನ'ನೋ'ಯೆನಿಸಿದನೆನುತ
ತನ್ನನು ನೋಡಲು ಬರುವವರಿಹರು
ವ್ಯಯಕರ್ಥ ಬೇಕೆಂದೆನುತ್ತಲಿ ಶಿವನು
ದಯೆಯಿಂದ ಪಡಿಯೀಯುವರ್ಥದ ಜೊತೆಗೆ
ವಿವಿಧ ಕಾಯಕಗಳ ಮಾಡುತ ಪಡೆದು
ಹೂಳಿದರ್ಥವು ತಾನು ಮರಳಿನಷ್ಟಿಹುದು
ಶಂಕರದಾಸಯ್ಯಚರಣವೋಲೈಪ
ಲೆಂಕರಿಗೆಂದುವಿಲ್ಲೆನಬಾರದಲ್ಲ.

ಬಸವ, ನಿಮ್ಮಯ ಬ್ರಹ್ಮಯ್ಯಗೊರೆದು ಕಳಿಸಿ
ಬಂಡಿಗಳ ತರಿಸು, ಕೆಲವು ಸಹಸ್ರ-
ವಿದೆಯರ್ಥವೀರೀತಿಯೀವೆನೆ"ನುತ್ತ
ಬೂದಿಯ ಹಿಡಿಯಲು ಹೊನ್ನಾಗಿ ಹೊಳೆಯೆ
ಬಸವನಕ್ಕಜವೊಂದಿ ಪ್ರಣುತಿಸುತಿರಲು
ಘನ ಕಿನ್ನರಯ್ಯನೀ ವೃತ್ತಾಂತವರಿದು
ಹರಿತಂದು ಕಲಕೇತಬ್ರಹ್ಮಯ್ಯನವರಿ-
ಗರಿವದು ತುಳುಕಾಡೆ ಸಾಷ್ಟಾಂಗವೆರಗೆ
ಕಲಕೇತಬ್ರಹ್ಮಯ್ಯನನು ಕಿನ್ನರಯ್ಯ
ನಲವಿನಿಂದಪ್ಪಿಕೊಳ್ಳುತ ಮತ್ತೆ ಮತ್ತೆ-

ಯತಿದಯಾಮೃತದಿಂದಲಭಿಷೇಕಗೈದು
ನುತನಿಷ್ಪ್ರಪಂಚಸನ್ಮತಿಯನು ತೋರಿ-
ಯಪ್ರತರ್ಕ್ಯಾದಿಲಿಂಗಪ್ರಾಣಮಥನ
ಸುಪ್ರಸನ್ನಾನುಭವಪ್ರಾಪ್ತಿಗೈದು
ಈರ್ವರಿಂ ಲಿಂಗಾವಸರವಮಾಡಿಸುತ
ಸರಸೋಚಿತಕ್ರಿಯಾಸಂತುಷ್ಟಿಗೈದು
ಬಸವಣ್ಣ ಕಿನ್ನರಬ್ರಹ್ಮಯ್ಯರುಗಳ
ಹಿಂದಕೆ ಬೀಳುಕೊಟ್ಟಸಮಾನಲೀಲೆ-
ಯಲ್ಲಿದ್ದ ಕಿನ್ನರಬ್ರಹ್ಮಯ್ಯ ಮುಂದೆ
ವಿಲಸಿತಭಕ್ತಿ ನಿಶ್ಚಲಲೀಲೆಯಲ್ಲಿ.

ಕಲಕೇತಬ್ರಹ್ಮಯ್ಯನ ಘನಚರಿತ್ರೆ-
ಯನು ಭಕ್ತಿಯಿಂದೋದಿ ಬರೆದು ಕೇಳಿದರೆ
ಅಭವಕಾರುಣ್ಯ ಕಟಾಕ್ಷೇಕ್ಷಣದಲಿ
ಅಭಿಮತಫಲಸಿದ್ಧಿಗಳಹುದಾಕ್ಷಣವೆ.

## ಮೋಳಿಗೆ ಮಾರಯ್ಯನ ಕಥೆ

ಮತ್ತೆಯು ಮೋಳಿಗೆ ಮಾರಯ್ಯನೆಂಬ
ಕರಕಂಠ ಸದ್ಭಕ್ತಗಣ ವಿಲಾಸಿಗನು
ಪ್ರಚ್ಛನ್ನರುದ್ರನವಿಚ್ಛಿನ್ನ ಕೀರ್ತಿ
ಸ್ವಚ್ಛ ಸದಾಚಾರ ಸಂಪತ್ಪ್ರಪೂರ್ತಿ
ವಿಜಿತಕಾಮಕ್ರೋಧವಿಮಲಮಾನಸನು
ನಿಜಗತಿ ಲಿಂಗೈಕ್ಯನಿಷ್ಠಾಪರನೆನೆ

ಮಂಗಳ ಚರಿತನು ಲಿಂಗಸದರ್ಥ-
ನಂಗವಿಕಾರದೂರೈಕವರ್ತನನು
ಸವಿಶೇಷ ಜಂಗಮಾರ್ಚನ ಪರತಂತ್ರ-
ನವಿಕಲವಿಧಿನಿಷೇಧ ವಿವರ್ಜಿತನೆನೆ
ಪ್ರವಿಮಲಾಂಗನು ನಿಷ್ಪ್ರಪಂಚಗುಣಾಢ್ಯ-
ನವಿರಳತತ್ವಾನುಭವಸುಖಾಂಬೋಧಿ
ಕರ್ಮಾಪಹರನುಲಿಂಗಪ್ರಾಣಮಥನ
ಮರ್ಮಜ್ಞನೆನೆ ಲಸನ್ಮಹಿಮನತಿಶಯ
ಪೆಂಪಿನಿಂದತುಲ ಘೋರಾಟವಿಗೈದು
ಘನತರದಲಿ ಹೊರೆ ಕಟ್ಟಿಗೆ ತಂದು

ಅಂಗಡಿಯಲಿ ವಿಕ್ರಯಿಸಿ ಹಣ ತರಿಸಿ
ಜಂಗಮಾರಾಧನೆಯನು ಸಲಿಸುತಿರೆ
ರಸರಸಾಯನಗಳ ಬಸವನ ಭವನ-
ದಲ್ಲುರೆ ಭೋಗಿಸಿ ತೃಪ್ತಿಪಡೆಯದೆ
ಜಂಗಮಕೋಟಿಯು ನಿತ್ಯವೊಪ್ಪೊತ್ತು
ಭರದಿಂದಲಾರೋಗಿಸುತ್ತ ಬಂದವರು
“ಬಸವ, ಮಾರನ ರೀತಿ ಭಕ್ತರೇನಿಹರೆ?
ಧರೆಯ ನಿನ್ನರಮನೆ ರಸರಸಾಯನಗ-
ಳವನ ಮನೆಯಲೀಯುವಂಬಳಕಕ್ಕೆ
ಪ್ರತಿಬಹುದೇನು ತಾನಾವುದೇ ರೀತಿ?

ಅನಿಶದಲವನ ಕಾಯಕಲಬ್ಧಿಯೆಷ್ಟು
ಎನ್ನಲೇಕಿಂದು ನಾಳೆನ್ನದಲದುವೆ
ಸಂತತ ಬರುವ ಜಂಗಮಕೋಟಿಗಳಿಗೆ
ಸಂತುಷ್ಟಿಗೈವುದಚ್ಚರಿಯಲ್ಲವೇನು?
ಭಾಪು, ಮೋಳಿಗೆ ಮಾರ, ಭಕ್ತಿವಿಸ್ತಾರ
ಭಾಪುರೇ"ಯೆನ್ನುತ ಪ್ರಸ್ತುತಿಗೈಯ-
ಲತಿಶಯ ವಿಸ್ಮಿತನಾಗುತ್ತ ಬಂದು
ಬಸವನು ಪ್ರಚ್ಛನ್ನ ಭಾವವನೊಂದಿ
ಮೋಳಿಗೆ ಮಾರಯ್ಯನ ಸತಿಯ ಕಂಡು
ಲಾಲಿತೋದ್ಯತ್ಸಮುಲ್ಲಾಸವುಂಟಾಗೆ

'ಶರಣಾರ್ಥಿ'ಯೆನ್ನುತ್ತ ಸಾಷ್ಟಂಗಮೊಕ್ಕೆ
ತರುಣಿಯಾ ಮುನ್ನವೆ 'ಶರಣಾರ್ಥಿ'ಯೆನುತ-
ಲಡಿಗಳಿಗರ್ಘ್ಯಪಣ್ಯಗಳನು ನೀಡ-
ಲೊಪ್ಪದೆ ತಿಳಿವುದೊಯೆಂಬ ಮತಿಯಲಿ
"ಅಮ್ಮ, ನಮ್ಮಯ ದೇವ ಹಸಿದು ಬಂದಿಹನು
ಕ್ರಮದಲಿ ಬಡಿಸು ತಾ ಈಗಲೇ"ಯೆನುತ
ಸರಸರ ಲಿಂಗಾವಸರವನುಗೈದು
ಪರಿಕಿಸಿಯಾಗೊಂದು ಪಡುಗದ ಕೆಳಗೆ
ಚೀಲದಲ್ಲೆರಡು ಸಾವಿರ ಹೊನ್ನನಡಗಿ-
ಸಿಟ್ಟು ತಾನಾಕೆಗೆ ಶರಣಾರ್ಥಿಗೈದು

ಸದಮಲಲಿಂಗಪ್ರಸಾದವ ಕೊಂಡು
ವಿದಿತಮುತ್ಪುಲಕ ಸಮುದಿತಾತ್ಮನಾಗಿ
ಧರೆಯಲಿ ಕಡುಬಡವನು ನಿಧಾನವನು
ಕಂಡಂತೆ ಹರ್ಷಾಶ್ರುಕಣಗಳು ಸುರಿಯೆ
"ಇದು ತಾನೆ ಭವದುಃಖ ಹರಿಸುವೌಷಧವು,
ಇದು ತಾನೆ ಭಕ್ತಿಮಹಿಷ್ಠೆಯ ಬೆಳೆಯು
ಇದು ತಾನೆ ಹುಟ್ಟಿದ ಮನೆಯ ಕಲ್ಪಕವು
ಇದು ತಾನೆ ಮುಕ್ತಿಗೆ ನಿಶ್ಚಯ"ವೆನುತ
ಹೊಂಗಿ ಪ್ರಸಾದೈಕಭೋಗದಿ ತದ್ಗೃ-
ಹಾಂಗಣದಲಿ ನಿಂತು ತನ್ನಾತ್ಮದಲ್ಲಿ

'ಈ ಸದನವನಿಂತು ನೊಡಿದ ನರನ
ದೋಷಗಳೆಲ್ಲ ವಿಧೂತವೆನಿಸವೆ?

ಈ ನಗರದ್ವಾರದೊತ್ತಿಗೈತರುವ
ನರನವನಾಗ ಕೃತಾರ್ಥನೆನಿಸನೆ?
ಈ ಸೀಮೆಯಲ್ಲಿ ಚರಿಸುವ ಜಂತುಗಳು
ಪಡೆಯುವ ಭಾಗ್ಯವೆಷ್ಟೆಂದೆನಬಹುದೆ?
ಈ ಗೃಹಾಂತರ ರೇಣುಕಣವ ನೊಸಲಲಿ
ಧರಿಸಿದಂಥವನಿಗೆ ಭಕ್ತಿ ವರ್ಧಿಸದೆ?
ಉಗ್ರಪಾತಕಗಳಿಲ್ಲಿಯ ಪ್ರಸಾದವನು
ಸೇವಿಸಲಳಿಯುವುದದು ದೊರೆಯದಡೆ

ಒಡಬಡಲಲ್ಲಿಯ ಕಲಗಚ್ಚು ನೀರ
ಕುಡಿತೆಯ ಕುಡಿಯಲಳಿವುದು ಪಾಪಗಳೆ'-
ನುತ ತಲೆಬಾಗುತ ಹೋದನಾ ಬಸವ-
ನನುರಾಗಚಿತ್ತದಿಂದನಿತರಲಿತ್ತ
ಮಧ್ಯಾಹ್ನವಾಗೆ ಮಾರಯ್ಯನು ಲಿಂಗ
ತದ್ಧ್ಯಾನಸುಖನಿರಂತರವರ್ತಿಯಾಗಿ
ಬಾಗಿಲಿನಲಿ ಕಟ್ಟಿಗೆಯ ಹಾಕಿ ಬರಲು
ಆ ಕಾಂತೆಯೆದುರಾಗುತಡಿಗಳ ತೊಳೆಯೆ
ಭಂಗಿಯಿಂ ಜಂಗಮಪ್ರಣಿಪತ್ತಿಗೈದು
ಲಿಂಗಾರ್ಚನೆಯನು ಸಲ್ಲೀಲೆಯಿಂ ಮಾಡಿ

ಪಡುಗದಡಿಯಲಿ ಬಸವನು ಮುನ್ನಡಗಿ-
ಸಿಟ್ಟಿದ್ದ ಹೊನ್ನಿನ ಚಿಲವ ಕಂಡು
"ಎಲ್ಲಿಯ ಚೀಲವಿದಾರಿಂದು ಇಲ್ಲಿ
ಬಂದಿದ್ದ"ರೆಂದು ಸತಿಯ ಕೇಳಿದಾಗ
"ದೇವ, ಒಬ್ಬಯ್ಯನು ಬಂದಾರೋಗಿಸಿರ್ದ-
ನದಕಿಂತ ಭಾವಿಸೆ ಮಿಗಿಲೇನನರಿಯೆ-
ನಾಗಲೆ ತಾ ಹೋದ"ನೆಂದು ಬಿನ್ನವಿಸೆ
"ತಪ್ಪದು, ಬಸವನಲ್ಲದೆ ಬೇರೆಯಲ್ಲ
ಕಡುವರ್ಥಸಂಪದವಿಹ ಭಕ್ತರರಸಿ
ಬಣಗುಭಕ್ತರ ಕಾವನಾತನೆ ತಾನೆ?

ದಾತನಲ್ಲದೆಯಿತು ಕಾಯದಲಾರು
ಹೋಹರು, ಮೇಲಾಯ್ತು, ನಾನು ಬದುಕಿದೆ
ತನ್ನಯ ಮಕ್ಕಳೆಂದೆಮ್ಮನು ಬಗೆದು
ತಾನೈತಂದನು ಇಷ್ಟೆ ಸಾಲದೆ ನಮಗೆ.

ನಮ್ಮ ಲಿಂಗವು ಕೊಟ್ಟ ಕಾಯಕವೆಮಗೆ
ದೊರಕಿಹುದೀ ಹೊತ್ತಿಗೂ"ಯೆನ್ನುತಾಗ
ಚಕ್ಕನೆ ಇಬ್ಬರು ಜಂಗಮರಗಳಿ
ಗೊಂದೊಂದು ಚೀಲವನೀಯುತ ಮೊಕ್ಕಿ
ಸದಮಲಸ್ಥಿತಿಯಿ ಜಂಗಮಕೋಟಿಗಳಿಗೆ
ಪದಪದ್ಮಗಳ ಕರ್ಚಿ ಭಕ್ತಿಯಿಂದವರ

ಶ್ರೀಪಾದಜಲವನು ಚಿಮುಕಿಸೆ ಕಟ್ಟಿ-
ಗೆಯ ಹೊರೆಯಪರಂಜಿಯಾಗಿ ಹೊಳೆಯಲು
ಆನಂದ ಮನದಲಿ ತುಳುಕೆ ಸಹಸ್ರ
ಹೊಂಗಳ ತೂಕಕೆಯವುಗಳ ಕಡಿದು
ಅಲ್ಲಿ ಜಂಗಮಕೋಟಿಗೊಂದೊಂದರಂತೆ
ಚಂದದಿಂದರ್ಪಣಗೈದು ಮೊಕ್ಕುತಿರ-
ಲಕ್ಕಜವೊಂದುತಲಾ ಜಂಗಮುಗಳು
ಗಕ್ಕನೆ ಬಸವನ ಕಡೆ ಪ್ರಸರಿಸುತ
"ಅತಿಶಯ ಭಕ್ತಿಗೆ ನಿಶ್ಚಯನಿಯತಿ-
ಗೆತ್ತೀವ ಕೈಯಿಗೆಲ್ಲಕು ಹೆಸರಾದ

ಮೋಳಿಗೆ ಮಾರಯ್ಯನಂತಹ ಭಕ್ತ-
ನಾವಲೋಕದಲಾದರಿಹನೆ"ಯೆನ್ನುತಿರೆ
ಬಸವನು ಗಾಬರಿಗೊಳ್ಳುತೈತಂದು
"ಅಸದೃಶ ಕಾಯೆಂ"ದು ಸಾಷ್ಟಾಂಗವೆರಗೆ
"ಅಣ್ಣಣ್ಣ, ಇಂತೇಕೆ ಆಣತಿಯೀವೆ?
ನಿನ್ನನೆಂದುದು ನಾನು ಮುನ್ನೊಂದುವಿಹುದೆ?
ಬಣಗು ಭಕ್ತರಿಗೆಲ್ಲ ಪ್ರಾಣವು ನಿನ್ನ
ಸಮನಾದ ಭಕ್ತರೀ ಬುವಿಯೊಳಗಿಹರೆ?
ನಮ್ಮಂಥ ಭಕ್ತರ ಅಳಿವುಳಿವುಗಳು
ನೀ ಬಯಸಲು ತಾನೆ ನಿಖಿಲೋಪಕಾರ!

ಕೇಳರಿಯೆವು ಮುನ್ನವೀ ಚೀಲಗಳವು
ಕಾಣಿಸಿಕೊಂಡವು ನಿನ್ನ ಕಾರಣದಿ
ಭಾಪು ಭಾಗ್ಯಪ್ರಾಣಿ, ಭಾಪುಕೃಪಾತ್ಮ
ಭಾಪುರೇ ಧನವಂತ, ಭಾಪು ಕೀರ್ತೀಶ
ಭೇಷಯ್ಯ ಬಸವಯ್ಯ ನನಗಿತ್ತ ರೀತಿ-

ಯಲ್ಲಿತ್ತೆ ಭಕ್ತರಿಗೆಲ್ಲ ನೀ ಮುಂಚೆ
ಮಡಿವಾಳ ಮಾಚಯ್ಯನಾ ಮೊಮ್ಮರೆಮ್ಮ
ಬಿಡದಂತೆ ನಡೆಸಿಕೋ, ಹೆಚ್ಚಿಗಿನ್ನೇನು?"
ಎನುತ ನಾನಾ ರೀತಿಯಾಳಿಗೊಳುತಿರೆ
ಘನತರ ಶೋಕಾಂಬುಕಲಿತಾಸ್ಯನಾಗಿ

"ಕನಕಾದ್ರಿಯರಸುವುದೇ ಕಾಗೆ ಗುಣವ?
ಲೋಹದ ಗುಣವನರಸುವುದೆ ಪರುಷ?
ಗುಣನಿಧಿ ನೀನು, ದುರ್ಗುಣನಿಧಿ ನಾನು
ಗಣಿಸುವಷ್ಟಿಹುದೆ ಸದ್ಗುಣವದೆನ್ನಲ್ಲಿ?
ಚಂಡಾಲನಲ್ಲಿರುವುದೆ ವೇದಘೋಷ?
ಆವುಗೆಯೊಳಗಿಹುದೇನಯ್ಯ ತಂಪು?
ತಿಳಿಯೆ ಕುಂಪಟಿಯಲ್ಲಿ ತಾವರೆಗಡ್ಡೆ
ಮೊಳೆವುದೆ, ಇವನೆಲ್ಲ ಮೂದಲಿಸುವುದೆ?
ಗತವಿವೇಕನ ನೀನೆ ಕಾಯಬೇಕಯ್ಯ,
ಗತಿ, ದಯಾಭಾವ, ಸಂಗಯದೇವ"ಯೆನುತ

ಮಾರಯ್ಯನಾ ಪಾದಪದ್ಮಗಳ್ಗೆರಗಿ
ಸಾರಾಂಚಿತೋಕ್ತಿಯಿಂ ಸಂಸ್ತುತಿಗೈದು
ಅಭಯವ ಬೇಡುತ್ತಲಡಿಗಳ ಮೇಲೆ
ಸಭಯಾತ್ಮದಿಂ ಬೀಳಲೊಯ್ಯನೆ ಎತ್ತಿ
ಪ್ರೀತಿಯಿಂದಪ್ಪಿಕೊಳ್ಳುತ ಮತ್ತೆ ಮತ್ತೆ
ಬಸವನ ಕಾರುಣ್ಯರಸವಾರ್ಧಿಯಲ್ಲಿ
ತೇಲಿಸಿ ಮೃದುಮಧುರಾಂಚಿತಾಲಾಪ-
ಗಳ ಪ್ರಬೋಧಿಸಲು ನಲಿವು ತುಳುಕಾಡೆ
ಮಾರಯ್ಯನವರಿಗೆ ಮತ್ತೆ ತಾ ಮೊಕ್ಕು-
ತೆಯ್ದನು ಬಸವರಾಜನು; ಮುಂದೆ ತಾನು

ಮೋಳಿಗೆ ಮಾರಯ್ಯ ಮೊದಲಿನ ರೀತಿ
ಲಾಲಿತಭಕ್ತಿಸಲ್ಲೀಲೆಯಿಂದಿದ್ದ.
ಆರಯ್ಯೆ ಮೋಳಿಗೆ ಮಾರಯ್ಯನವರ
ಚಾರುಚರಿತ್ರವನೋದಿ ಕೇಳಿದರೆ
ನಿತ್ಯಪ್ರಸಾದವಿನಿರ್ಮಲಾತ್ಮೀಯ
ಸತ್ಯಸುಖಿಗಳು ಸಲ್ಲೀಲೆಯಿಂ ಬಹವು

## ಕನ್ನದ ಬ್ರಹ್ಮಯನ ಕಥೆ

ಮೆರೆಯುತ ಕನ್ನದ ಬ್ರಹ್ಮಯ್ಯನೆಂಬ
ಧರೆಯಲೊಪ್ಪುವ ಸದ್ಭಕ್ತಿಪರನು ಮತ್ತೆ
ದರ್ಪಿತಸಂಸಾರದಳನಾಗಿ ಜಂಗ–
ಮಾರ್ಪಿತ ಪ್ರಾಣದೇಹಾರ್ಥಾಭಿಮಾನಿ–

ಯದ್ಭುತಚರಿತನುದ್ಯದ್ಭಕ್ತಿಯುಕ್ತಿ
ಸದ್ಭಾವನೋಪೇತ ಚರಲಿಂಗಮೂರ್ತಿ
ಸಾರವೀರವ್ರತಾಚಾರನು ಜಂಗ–
ಮಾರಾಧಕರೊಳಗೆ ತಾನಗ್ರಗಣ್ಯ
ಸಂಚಿತಬಾಹ್ಯ ಪೂಜಾಪರತಂತ್ರ–
ನಂಚಿತಾಂತಸ್ಸಪರ್ಯಾಪರಾಯಣನು
ನಿರವದ್ಯಹೃದ್ಯವಿನಿರ್ಮಲ ಭಕ್ತಿ
ಪರತಂತ್ರನೆನೆ ಲಸಚ್ಚರಿತೆಯಿಂದವನು
ಕತ್ತಿ ಬಳಪ ಕಾವಿಸೀರೆಗಳನ್ನು
ಕತ್ತರಿ ಮರಳು ಅಕ್ಷತೆಗಳ ಮುಳ್ಳ

ಚೆಂಡನು ನೀಲಿಕಪ್ಪಡವನು ದಿಂಡು
ಮಂತ್ರದ ಕಾಡಿಗೆಯನು ಚಂಡವೇರಿ
ಸೆಳೆಗೋಲೊಂದಟ್ಟೆಯ ಚಪ್ಪಲಿ ಪೀಪಿ
ಮಸಣದ ಬೂದಿಯನೆಸೆಯುವ ಕಲ್ಲು
ನಾಯ್ಗಳ ಬಾಯ್ಕಟ್ಟು ಕೊಂಕಿನಾರಸವು
ಗಕ್ಕನೆ ಕಂಕಟಿರಜ್ಜು ಸೇರಿಸುತ
ಸೂಚೀಮುಖವನು ತೂರಿಸಲಸಾಧ್ಯವಹ
ದಟ್ಟಗತ್ತಲೆಯಲಿ ಮನೆ ಹಿತ್ತಿಲುಗಳ–
ನಿಡಿಮುಡಿಯಿಂದಲಿ ಮಾತ ಪರಿಕಿಸಿ–
ಯಗಳಿಯ ಕನ್ನವ ಹೊಸತಿಲ ಕನ್ನ

ಗೋಡೆಯ ಕನ್ನವ ಗುರಿನೆಲ ಕನ್ನ
ಕೊರೆಯುತ್ತ ಮನೆಯೊಳಗೊಯ್ಯನೆ ತೂರಿ
ಪರಿಕಿಸುತಲಿ ಭಕ್ತಭವನಗಳಾಗೆ
ಸರಸರ ದೀಪವ ಹೊತ್ತಿಸಿಯವರ
ಪಾದಾಬ್ಜಗಳ ಮೇಲೆ ಬಿದ್ದೆಬ್ಬಿಸುತ್ತ
ಪಾದೋದಕಪ್ರಸಾದಗಳನು ಕೊಂಡು

"ಶರಣೆನುವೆನು ಸತ್ಯಶರಣರ ಮನೆಯ
ಕಿಂಕರ ಬ್ರಹ್ಮನೆಂಬುವನು ನಾ"ನೆನುತ-
ಲೆಡೆಯೆಡೆಗೈದಿತರರ ಮನೆಗಳಲಿ
ತಡೆಯದೆ ಪಡಿಪದಾರ್ಥಗಳನು ದೋಚಿ

ತರುತಲಿ ಜಂಗಮಕೋಟಿಗೆ ಹಂಚಿ
ಸೇವೆಯಗೈಯುತಲಿಂತು ವರ್ತಿಸುತ
ಜಂಗಮವೊಂದಿನ ಬಹಳವೈತರಲು
ಭಂಗಿಯಿಂದಲಿ ಹಾಡುಹಗಲೆಯಾಗಿರಲು
"ನೆಲಗಲವನ್ನಿಟ್ಟು ನಿಖಿಲೇಶನಗರ-
ದಿಂದಧಿಕರ್ಥವ ತಹೆ ಚಕ್ಕ"ನೆನುತ
ಬರೆ ಕಂಡು ಬಸವನು ಪುರವೀದಿಯಲ್ಲಿ
ಭಕ್ತಿಯಿಂ ಬುವಿಯಲಿ ಸಾಷ್ಟಾಂಗವೆರಗೆ
"ಹಿಡಿದುಕೊ ಕತ್ತಿಯ ಬಳಪವ, ಕನ್ನ-
ವಿಡಲಾನು ಹೋಗಬೇಕಿಹುದೀಗ ಯಾವ

ಎಡೆಯಲು ಧನವಿಲ್ಲ, ಇರುವ ಬಿಜ್ಜಳನ
ಭಂಡಾರವನೆ ತೋರು ಬಸವ ಬಾ"ರೆನಲು
ಪ್ರತ್ಯುತ್ತರವನೀಯದಿಹ ಭಾಷೆಯಿಂದ-
ಲತ್ಯನುಚಿತವಾದರಾಗಲೆಂದೆನುತ
ಕನ್ನದ ಬ್ರಹ್ಮಯ್ಯನನ್ನೊಡಗೊಂಡು
ಕನ್ನ ಮುಟ್ಟುಗಳನತ್ಯರ್ಥಿಯಿಂ ಕೊಂಡು
ಪರಿಚಾರಕನ ರೀತಿಯಂಜದೆ ನಗರ-
ಕೈತಂದು ಭಂಡಾರಸದನವ ತೋರ-
ಲಗಳಿಯ ಕನ್ನವನಿಡಲು ಮಣ್ಣೆಲ್ಲ
ಹೊಳೆಯುವ ಹೊನ್ನಾಗಿ ನೆಲದಲ್ಲಿ ಬೀಳೆ

ಹೊಕ್ಕು ಪೆಟ್ಟಿಗೆಗಳಲಾ ಹೊನ್ನ ತುಂಬಿ
ಕೊಳ್ಳುತ್ತೈತರಲು ಬ್ರಹ್ಮಯ್ಯನಕ್ಕಜದ-
ಲಂಗರಕ್ಷಕರೆಲ್ಲ ತಿಳಿದಿದನಾಗ
ಭಂಗಿಯಿಂದೀ ವಾರ್ತೆಯನು ಪತಿಗರುಹೆ
'ಬಸವಣ್ಣನೆನ್ನ ಬಲೆಗೆ ಬಿದ್ದ'ನೆನುತ
ಕೋಪಗೊಳ್ಳುತ ಮಹೋಗ್ರದಲಿ ರೇಗುತ್ತ-
ಲವುಡನು ಕಚ್ಚುತ"ಲಕ್ಕಟಾ ಎನ್ನ
ಶಿವಭಕ್ತನೆನುತ ವಿಶ್ವಸಿಸಿದಕೆಲ್ಲ

ಸರಿಯಾಗಿ ಮಾಡಿದ, ಕಿರಿಯುವನೆನುತ
ಲರೆಯಿಲ್ಲದಲೆ ಮನ್ನಿಸಿದೆನದಕೀಗ

ಹಾಡುಹಗಲೆ ಕನ್ನವಿಡಿಸಿದ ಬಸವ–
ನೆಂತೆಯೋ ಪ್ರಾಣವ ಹಿಡಿದುಕೊಂಡಿಹನು
ಕೇಳಲು ಬೇಕಾದರ್ಥವನೀಯನೇನು
ಎಂತಿಂತವಿಶ್ವಾಸಿಯಾದನೀಗಿನಿತು
ತೆಗೆದುಕೊಂಡಿಹನಿನ್ನು ಮುಂದೆ ತಾನೆಷ್ಟು
ತೆಗೆದುಕೊಳ್ಳುವನೊ ತಾ ತಿಳಿಯೆನೆ"ನುತ್ತ
ಕಂಗಳಲುರಿಯು ತುಂಬಿರೆ ತಾನೈತಂದು
ಕನ್ನದ ಬಾಗಿಲ ಕನಕವ ಕಂಡು
ಅತಿವಿಸ್ಮಯಾಕ್ರಾಂತದಲಿ ಲೊಟಕಿಟ್ಟು
ಗತಕೋಪನಾಗಿ ಕ್ಷಿತಿಪತಿಯಿಂತೆಂದ:

"ಎಲ್ಲಿಯ ಹೊನ್ನಿವನೆಲ್ಲಿಯ ಕಳ್ಳ–
ನೆಲ್ಲಿಯ ಕನ್ನವಿದೇನ ಮಾಡಿರುವೆ?
ಬಸವಣ್ಣಮಂತ್ರಿಯೆ ತಿಳಿಯ ಹೇಳೆ"ನೆನಲು
ವಸುಧೇಶನಿಗೆ ಬಸವಣಮಂತ್ರಿಯೆಂದ:
"ಭಕ್ತನು ಕನ್ನದ ಬ್ರಹ್ಮಯ್ಯನೆನುವ
ವ್ಯಕ್ತಿಲಿಂಗವೆಯೆಂಬ ಯುಕ್ತಪ್ರತಾಪಿ
ಕನ್ನದ ಬ್ರಹ್ಮಯ್ಯನವರ ಮಹತ್ವ–
ವನು ಹೇಳೆ ಶಕ್ಯವೇನೀಶಗು ಕೂಡ?
ಆತನ ಶ್ರೀ ಚರಣಾಂಗುಷ್ಠಯುಗವು
ಖ್ಯಾತಿಯಿಂ ಕಲ್ಪವೃಕ್ಷಗಳಿಗಾಧಾರ

ಈ ಮಹಾತ್ಮನ ಅಮೃತಾವಲೋಕನವು
ಕಾಮಧೇನುಸಮೂಹ ಹುಟ್ಟಿದ ಮನೆಯು
ಯೋಚಿಸಲಾತನ ಚಿತ್ರದ ಚಿಗುರು
ಚಿಂತಾಮಣಿಗಳ ನಿರಂತರಾಶ್ರಯವು,
ಆರಯ್ಯಲವನ ಹಸ್ತಾಂಗುಲಿಸ್ಪರ್ಶ
ವಿರಚಿಸಲಾ ಸ್ಪರ್ಶವೇದಿಕಣ್ಣುಗಳು,
ಅವನ ಶ್ರೀಪಾದಸಂಗತಿ ಮುಕ್ತಿಭೂಮಿ–
ಯವನ ಪ್ರಸಾದವದಮೃತದ ರುಚಿಯು,
ಅವನ ಕೋಪವದು ಸಂಹಾರಕಾರಣವು
ಅವನ ಕಾರುಣ್ಯವೆ ಅಪವರ್ಗವಿಂತು

ಅಣಿಮಾದಿಸಿದ್ಧಿಗಳವನ ಕಿಂಕರರು
ಗಣುತಿಸಲಿನಿತು ಸದರ್ಥನಾಗಿದ್ದೂ
ಹಿಡಿದ ನೇಮವು ತಾನು ಮೀರದೆ ಕನ್ನ-
ವಿಕ್ಕಿದರ್ಥದ ವಿನಾ ಮುಟ್ಟನು ಕೈಲಿ
'ಇದು ಕುಮಾರ್ಗವು ಭಕ್ತಿಯೇ' ಎನ್ನಬೇಡ-
ವಿದುವೆ ತಾ ಸನ್ಮಾರ್ಗವೆಂತೆನಲದನು
ಭ್ರಷ್ಟರಾದರು ಜೂಜಿನಿಂದ ಪಾಂಡವರು
ಜೂಜಿನಿಂ ಮೂರ್ಖ ಗಿರೀಶನ ಪಡೆದ
ಬೇಟೆಯಾಡುತ ರಾಮ ಸತಿಯ ನೀಗಿದನು
ಬೇಟೆಯಾಡುತ ಬೇಡ ಶಿವನ ಸೇರಿದನು

ಪರಸತೀವಶರಾಗಿ ಕೆಟ್ಟರರಸರು
ಪರಸತೀವಶ ನಂಬಿ ಹರನ ಸೇರಿದನು
ಕೊಂದು ಮಾಂಡವ್ಯನು ಶೂಲವೇರಿದನು
ಕೊಂದ ಚಂಡೇಶ ಪ್ರಸಾದವ ಪಡೆದ
ಬೊಂಕಿದ ಬ್ರಹ್ಮಗೆ ಹುಟ್ಟು ಹಾಳಾಯ್ತು
ಬೊಂಕಿದ ಚಿರುತೊಂಡ ಖಂಡಿಸಿಕೊಂಡ
ಕುರಿಕದ್ದ ಶೂದ್ರಕ ಖಂಡಿಸಿಕೊಂಡ
ಗಣನಂದಿ ಶಿವನ ಸೇರಿದ ದಾರಿ ಬಡಿದು
ರಮಣ'ರಾಜ್ಯಾಂತೇ ನರಕ'ವೆನೆ ಮುಕ್ತಿ
ವಿಮಲತೆ ಪಡೆದರು ಚೋಳಚೇರಮರು

ಯಾವುದನಪಮಾರ್ಗವೆನ್ನದಿರದಕೆ
ತಾನೀಶ್ವರಾರ್ಥವೆಂದೆನ್ನುತ ಗೈಯೆ
ತಾ'ನಧರ್ಮೋಧರ್ಮತಾಂ ವ್ರಜೇತ್ತೆ'ಂಬ
ಹರನ ವಾಕ್ಯವೆಯಿರಲಿಂತಹ ಪಥವು,
ಇಷ್ಟೆಲ್ಲವೆನಲೇಕೆ, ಮಿಗಿಲೆಲ್ಲಕಿಂತ
ಕನ್ನದ ಬ್ರಹ್ಮಯ್ಯನ ಗತಿಯೆಂತೆನಲು
ಯಾವಾಗ ಜಂಗಮವೈತರೆ ಮನೆಗೆ
ಆಗಲ್ಲದೇ ಹೋಗನಸಹಾಯಲೀಲ-
ನಿದು ಹಗಲಿದು ರಾತ್ರಿಯೆಂತೆಯೊಯೆನುತ
ಮನದಲ್ಲಿರದು ಅಣುಮಾತ್ರದ ಭಯವು

ಅಲ್ಲದೆ ಶಿವಭಕ್ತ ಸದನಕ್ಕೆ ಬರಲು
ಮುದದಲಿ ಹೆಸರಿಸಿ ಮೊಕ್ಕಿ ಬರುವನು

ಮನೆಮನೆದಪ್ಪದಂತಿತರಾಲಯಗಳ
ಅರ್ಥವೆಲ್ಲವ ತಹನಿಹಪರಗಳಿಗೆ
ದೂರವಾಗಿರಲು ಲುಬ್ಧರ ಮನೆವೊಕ್ಕು
ಚರಿತಾರ್ಥವಂತರಗೈಯಲವರನು
ಜನಿಯಿಸಿದಂತಹ ಪ್ರಾಕ್ತನಪುರುಷ–
ನೆನಲೇನು ಕಡುವಿಸ್ಮಯವು ತಾನೆ ತಿಳಿಯೆ
ಮುಟ್ಟಿದ ತೋಡಿದ ಮೆಟ್ಟಿದ ಠಾವು
ಹಿಡಿದಕೈದುಗಳೆಲ್ಲವೂ ಹೊನ್ನಮಯವು

ಪ್ರಾಕಟದಲಿ ನಿನ್ನ ರಕ್ಷಿಸಬಯಸಿ–
ದನು ಬ್ರಹ್ಮಯ್ಯಗೆ ಶ್ಲಾಘ್ಯವೇ ಪದಾರ್ಥಗಳು?
ಲೆಕ್ಕಕೆ ಮೀರಿದಷ್ಟಿರದಿರೆ ತಪ್ಪು,
ಬೇಕೆನೆ ನೀ ಭಂಡಾರದ ಲೆಕ್ಕ ನೋಡು"
ಎನುತಲಾ ಬಸವಯ್ಯನುರಾಗಲೀಲೆ–
ಯಿಂ ನೋಡಿ ಭಂಡಾರ ಪುಸ್ತಕವೋದ–
ಲಕ್ಕಜಗೊಳ್ಳುತಲವನೀಶನಿದ್ದ–
ನೀ ಕಡೆ ಬ್ರಹ್ಮಯ್ಯ ಮನೆಗೆ ತಾ ಬರಲು
ಸುದತಿಯು ಪತಿಗುತ್ಸುಕತೆ ತುಳುಕಾಡೆ
ಬಂದಿದಿರಡಿಗಳಿಗೆರಗುತ ಕನ್ನ

ಮುಟ್ಟುಗಳನು ಕೈಯ ಸೊಮ್ಮನು ಪಡೆಯೆ
ಚಟ್ಟನೆ ಬ್ರಹ್ಮಯ್ಯ ಜಂಗಮಾವಳಿಗೆ
ಮುದದಿಂದ ಮೈಚಾಚಿ ಮೊಕ್ಕೆ ತತ್ಕ್ಷಣವೆ
ಮುದದಿಂದ ತಾನು ಸಮುದಿತಸದ್ಭಕ್ತಿ–
ಯತಿಶಯವಾಗಲು ಪಂಚಭಕ್ಷ್ಯಗಳ–
ನಂಚಿತವಾದ ದಿವ್ಯಾನ್ನಪಾನಗಳ
ರುಚಿಯಾದ ಪಕ್ವಗಳನ್ನೆಲ್ಲ ಜಂಗ–
ಮಾವಳಿಗಂದು ಸಮರ್ಪಣಗೈದು
ಅವರ ಪ್ರಸಾದ ಸುಧಾರಸವಾರ್ಧಿ–
ಯಲ್ಲೋಲಾಡುತ ಭಕ್ತಿಯಿಂದಲಿ ಮತ್ತೆ

ಧನಧಾನ್ಯವಸ್ತ್ರವಾಹನ ಭೂಷಣಗಳ–
ನಿತ್ತು ಜಂಗಮಲಸತ್ಕರುಣಾಭಿವೃದ್ಧಿ–
ಯಲ್ಲಿದ್ದ ಕನ್ನದ ಬ್ರಹ್ಮ ಮುನ್ನಿನೊಲು
ಸನ್ನುತ ಭಕ್ತಿಮಹೋನ್ನತಿಯಿಂದ;

ಕನ್ನದ ಬ್ರಹ್ಮಯ್ಯನ ಘನಚರಿತ್ರೆ-
ಯನು ಕೇಳಿಯೋದಿ ವಿಸ್ತರಿಸಿ ಹೇಳಿದರೆ
ಮೃಡದಯಾಮೃತರಸ ಮಿಳಿತೇಕ್ಷಣದಲಿ
ಒಡಗೂಡುವುದವರಿಷ್ಟೋಪಭೋಗಗಳು.

**ಮುಸಿಡಿಯ ಚೌಡಯ್ಯನ ಕಥೆ**

ಮತ್ತೆಯು ಅಸದೃಶಲೀಲೆಯಿಂದಧಿಕ
ಮುಸಿಡಿ ಚೌಡಯ್ಯನಾಮದಲೊಬ್ಬ ಗಣವು

ನಿಖಿಲಸಜ್ಜನ ಭಕ್ತಮುಖಮುಕುರನೆನೆ
ಸುಖಶೀಲಸಂಬಂಧ ಸುಪಥಪ್ರಚಾರಿ-
ಯಫಲಾರ್ಥಕೃತಸತ್ಕ್ರಿಯಾಸಮನ್ವಿತನು
ಸಫಲೀಕೃತಾಮೋಘ ಸತ್ಯಪ್ರತಾಪಿ
ತಜ್ಞನು ಸಂಸಾರ ತಲೆಗುಂದ ಗಂಡ-
ನಜ್ಞಾನ ಜನದೂರನಪಗತಭಯನು
ನೀರರಸಾಂಬೋಧಿಕಾರಣಪುರುಷ-
ನಾರೂಢದಿವ್ಯಾಮೃತಾವಲೋಕನನು
ಅಧಿಕಶಾಪಾನುಗ್ರಹಸಮರ್ಥನಖಿಲ
ವಿಧಿನಿಷೇಧಕ್ರಿಯಾವಿರಹಿತಾತ್ಮಕನು

ಅಕ್ಷಯ ಕೀರ್ತಿ ದೃಷ್ಟಾದೃಷ್ಟಲೋಕ
ಸಾಕ್ಷಿಕ ಪ್ರತ್ಯಯಚರಲಿಂಗಮೂರ್ತಿ
ಸ್ವಸಮಯ ಭೂತಿ ಶಾಸನ ಜನಾಧಾರ-
ನಸಮಾನ ವೀರಭದ್ರನ ಸಮನೆನಲು
ಮೆರೆಯುತ ಗೂಳಿಯ ಭಕ್ತನು ತಪಸಿ
ಮರಣವ ಹೊಂದಲು ಮಡಿಯುವ ಭಾಷೆ
ನಡೆಯುತ್ತಲಂಬುಧಿ ನದಿಯಡ್ಡಬರಲು
ಅಡಗಿಸಿ ಮಾರ್ಗದಿ ನಡೆಯುವ ಭಾಷೆ
ಭಕ್ತಿಸತ್ಕ್ರಿಯೆಯ ತಪ್ಪದೆಗೈವ ಭಾಷೆ
ವ್ಯಕ್ತವಾಗುತ ಭಕ್ತಿಯುಕ್ತಿಯಿಂ ತಾನು

ಬುವಿಗೊಪ್ಪೆ ಮುಸಿಡಿಯೆನ್ನುವ ಪುರವರದಿ
ಸವಿಶೇಷಭಕ್ತಿಯಿಂ ಚೌಡಯ್ಯನಿರಲು
ಬಸವನ ಭಕ್ತಿ ಸೌಭಾಗ್ಯಮಹತ್ವ-
ವನು ಕೇಳಿ ತಾ ದರ್ಶನಾಸಕ್ತಿಯಿಂದ

ಭಕ್ತರ ಜೊತೆ ತಾನು ಪರಮಾನುರಾಗ
ಯುಕ್ತಿಯಿಂ ಹೋಗುತ್ತಲಿರಲೊಂದು ಸ್ಥಳದಿ
ನೆತ್ತಿಯಿಂ ಮೇಲೆತ್ತಿ ಚೆಲ್ಲಿದ ಮರಳು
ಬೀಳದಂತಹವೊಂದರಣ್ಯಾಂತರದಲಿ
ಮುಸಿಡಿ ವೃಕ್ಷಗಳೊಪ್ಪೆಸೆಯಲೆಲ್ಲೆಡೆಯಲಿ
ಹೊನ್ನಬೆಟ್ಟಗಳಂತೆ ಮಿರುಗುತ್ತಲಿರಲು

"ಅಧಿಕದಿ ಮುಸುಡಿಹಣ್ಣುಗಳನಾರೋಗಿ-
ಸುವುದು ಲಿಂಗಗಳಿಗೆ ತಾನಿಷ್ಟವಹುದು"
ಎನುತ ಭಕ್ತಾನೀಕವಾಣತಿಯೀಯೆ
ಕೇಳೆ ಸ್ಮಿತಾನನವಿಲಸಿತನಾಗಿ
ಹೋಗಿ ತಾ ಮೊದಲ ಮುಸಿಡಿವೃಕ್ಷಗಳಿಗೆ
ತನ್ನಯ ಕರವಾರನ್ನೂರಿ ನಿಂತು
"ಆರೋಗಿಸೆಲೆ ದೇವ"ಯೆಂದು ಬಿನ್ನವಿಸ-
ಲವರವರಾ ಗಣವ್ರಾತವೈತಂದು
ಅಮೃತಾಂಶುಧರನಿಗೆ ಅರ್ಪಣಗೈದು
ಅಮೃತಾಂಶುಧರಭಕ್ತರಾರೋಗಿಸುತ್ತ

"ಮುಸಿಡಿ ಚೌಡಯನೆಂಬ ಮುನ್ನಿನ ಹೆಸರು
ಮೆರೆವುದು ಜಗದಲ್ಲಧಿಕದಲ್ಲಿಯಿನ್ನು"
ಎನ್ನುತ ದರಹಾಸದಿಂದ ಸಂತಸದಿ
ಹೋಗಲು ಕಲ್ಯಾಣಪುರಕೆ ಸಂಪ್ರೀತಿ-
ಯೆಸಕವೇರಲು ಸಂಗಮೇಶ್ವರನಾಗ
ಬಸವಣ್ಣ ಚೌಡಯ್ಯನಾ ಭಾವ ಕಂಡು
ಚಕ್ಕನೆ ಎದುರ್ಗೈದು ಜಗತೀತಲದಲಿ
ಮೈಚೆಲ್ಲಿ ಮೊಕ್ಕುತ ಜೊತೆ ಕರೆತಂದು
ಉಚಿತೋಪಚಾರನಿಯುಕ್ತಿಯಗೈದು
ಅಚಲಾತ್ಮ ಮುಸಿಡಿಚೌಡಯ್ಯನನೆಂದು

ಸಂಗಮೇಶ್ವರನಂತೆ ಭಕ್ತಿಕ್ರಿಯೆಗಳ
ಭಕ್ತಿಯಿಂ ಭಜಿಸುತ ಬಸವಯ್ಯಸಲಿಸ-
ಲಸಮಾನಲೀಲನು ಕಲ್ಯಾಣದಲ್ಲಿ
ಮುಸುಡಿಚೌಡಯ ಮಹೋಲ್ಲಾಸಪ್ರಯುಕ್ತಿ-
ಯ ಬಿಡದೆ ಸದ್ಭಕ್ತಿಯಲ್ಲಿರಲಿಂತು
ನಡೆಯುತ್ತ ಮತ್ತೊಂದು ದಿನವುತ್ಸವದಲಿ

ಆರ್ಯರು ಹರಸುತ ಕಳಿಸೆ ವಿವಾಹ
ಕಾರ್ಯಾರ್ಥದಿಂದ ಹೋಗುತಿರೆ ಕಟ್ಟೆದುರು
ಕಟಕದ ರಾಜಮಾರ್ಗದಿ ಸಂಭ್ರಮದಲಿ
ನಟಿಸುವ ಭಕ್ತಗಣಂಗಳ ನಡುವೆ

ಘನವಿಮಾನದೊಳಗೆ ಗಗನಮಾರ್ಗದಲಿ
ಹೋಗುತ ತವರಾಜಶವವನೀಕ್ಷಿಸುತ
"ಅಧಿಕದಿ ತವರಾಜವಲ್ಲಭನಿಂದ
ಹರಕೆಯ ಹೊಂದದೆ ಮುಂದೈದಲಹುದೆ?
ಪರಿಣಯಕೀ ತಪಸ್ವಿಯು ತಾನೈತರದೆ
ಹೋಗುವನಲ್ಲದೆ ನಿಲ್ಲನು" ಎನುತ
ಖಡ್ಗಮೋಹಳವನು ಹಸ್ತದಿ ಹಿಡಿದು
ಝಳಪಿಸಿ ಮೊನೆದೋರಿ ಕೂಗಿ ಬೊಬ್ಬಿರಿದು
ಸಾಗುತ ಹತ್ತಿರ "ಅಯ್ಯನವರಿಗೆ
ಶರಣಾರ್ಥಿ ಶರಣಾರ್ಥಿ ಶರಣಾರ್ಥಿ"ಯೆನಲು

"ಶಿವಮಸ್ತು ಶಿವಮಸ್ತು ಶಿವಮಸ್ತು"ಯೆನುತ–
ಲೊಡನೊಡನೆಯೆ ತಪಸಿಯು ತಾನು ಹರಸೆ
"ಇಳಿಯಿಳಿ ಗೊರವ, ಕಾಣಿಸಿದೆ ನೀಯೆನಗೆ–
ನಗೆಯಲ್ಲವಿಲ್ಲಿದರೂನು ಸೈರಿಸಲು
ನಂದಿವಾಹನ, ನಿನಗೆ ನರವಾಹನವು
ಹೊಂದುವುದೇ, ನೋಡಿ ಬುವಿಜನ ನಗರೆ"
ಎನುತ ಪಾದವ ಹಿಡಿದಲುಗಿ ತೆಗೆಯಲು
ಕಾಣುತ ದರಹಾಸಕಲಿತಾಸ್ಯನಾಗಿ
ಧರೆಗಿಳಿದು ಮುಸುಡಿಚೌಡಯ್ಯನನ್ನು
ಕಟ್ಟಭಿಲಾಷೆಯಿಂ ಸೇರಿಸಿಯಪ್ಪೆ

ಸತ್ಯಸ್ವರೂಪನು ಚೌಡರಾಯನನ–
ತ್ಯದ್ಭುತಾಕ್ರಾಂತರಾಗುತ ಜನ ಹೊಗಳೆ
ತವರಾಜನನು ಜೊತೆಕೊಂಡೊಯ್ದು ಮದುವೆ–
ಗೈತರೆ ಮೆರೆಯುತ್ತ ಬರುತಿರೆ ಹೆಣ್ಣಿ–
ನೂರಾಚೆ ವಟವೃಕ್ಷಗಳ ಸಮೀಪದಲಿ
ನೆರೆಯುತ್ತ ಗೋಪಾಲಕರು ನಟಿಸುತ್ತ–
ಲಿರಡಾಗಿ ಜೊತೆಗೊಂಡು ಹರಿಪರಿಯುತ್ತ
ತಮ್ಮಲ್ಲಿ ಕೇಲಿವಾದವ ಬಗೆಯುತ್ತ

"ಗೋಕುಲಪತಿಯಾಣೆ ಗುರಿಯದು ನಿಮಗೆ
ನಮಗೆಯು ಬಸವನಾಲದ ಮರ"ವೆನುತ

ನ್ಯಗ್ರೋಧಗಳ ಬಳಿ ನಡೆಯುತ್ತ ಸಜ್ಜ–
ನಾಗ್ರಗಣ್ಯನು ಚೌಡಯ್ಯನದನಾಲಿಸುತ
ಪಶುಪಾಲಕರ ಜೊತೆ "ಹೇಳಿರದೇಕೆ
ಬಸವನಾಲವೆನುತ ಹೆಸರಾಯ್ತಿದಕೆ"ನೆ
ಪಶುಗಳ ಪಾಲಿಸುವವರೊಳಗ್ರಜನು
ಈ ಬಸವನ ವಾರ್ತೆ ತಿಳಿದುದು ಕೊಂಚ,
ತಾತನಿಂ ಕೇಳಿದೆನೆನುತೆಮ್ಮ ತಾತ
ಚಿಕ್ಕವರಾಗಿರಲೆಮಗೆ ಹೇಳಿದಹನು:
"ಭಯಹುಟ್ಟಿಸುವೆರಡು ಗೂಳಿಗಳಿಲ್ಲಿ
ಮಲೆತೇಳು ದಿನಗಳು ಕಾದುತ್ತಲಿರಲು

ನೆತ್ತರು ಹೊನಲಾಗಿ ನೆಲದ ಮೇಲೆಲ್ಲ
ಹರಿಯಲು ಎತ್ತೊಂದು ದಣಿಯುತ್ತ ಸಾಯ–
ಲಲ್ಲಿಯೆ ಹೂಳಲು ಚೆಚ್ಚರ ಮೊಳೆತು
ಹಿರಿದಾಗುತೀಯಾಲ ಬೆಳೆದ ಕಾರಣದಿ
ಬಸವನಾಲವಿದೆಂದು ಕರೆವರಲ್ಲದೆಯೆ
ಅತಿಶಯ ಚೋದ್ಯವೇನಿದರೊಳಗಿಲ್ಲ.
ತಿಂದೆರೆ ಮಾಂಸದಂತಿಹುದೀ ಹಣ್ಣುಗಳು
ಮುರಿದರೆ ರಕ್ತದಂತಹ ನೀರುಗುವುದು.
ಎಂದಾದರಾಲದ ಹಾಲು ಕೆಂಪಿತ್ತೆ
ನಂಬದಿರಲು ನೋಡು ತಥ್ಯವ"ನೆನುತ

ದಾರಿಸಿ "ಹಳೆವಾರ್ತೆಯಿದು"ಯೆಂದು ದಾರಿ
ಹೋಕರು ಹೇಳಲವಾರಿತವೃತ್ತಿ
ಪಸರಿಸೆ "ಹೊಸತೇನು ಹಳತೇನು, ಇನ್ನು
ಬಸವನ ಮೃತಿ ಕಿವಿಯಲಿ ಬಿದ್ದ ಮೇಲೆ
ಮತ್ತೆ ಬಸವನು ಮುಂದೆ ನಡೆಯದಿರಲು
ಪರಿಣಯಕಾನು ಹೋಹುದು ಸರಿಯೇನು
ಪಡೆಯದೆ ಹೋಗದೆ ನುಡಿಯಲೇ" ಕೆನುತ
ಹಿರಿಬೊಬ್ಬೆಯಿಡುತ ಸಂಪ್ರೀತಿಯಿಂದರಚಿ
"ಹೊರಗೆ ಬಾ ಹೊರಗೆ ಬಾ ವೃಷಬೇಂದ್ರ"ಯೆನುತ
ಭರದೆಯ್ದಿಯಲುಗನೂರುತ್ತ ತಾ ನಿಲಲು

ಆ ಮುನ್ನ ನಂದಿಯು ಹಿಗ್ಗಲು ಧರಣಿ
ಪಟಪಟನೊಡೆಯಲು ವಟವಿಟಪವದು
ಚಟ್ಟನೆ ಬೇರ್ಗಳಿಂ ಚಟಚಟನೆನುತ
ಕಿತ್ತುಕೊಳ್ಳುತ ಮೇಲಕೆಗರುತ್ತಲಿರಲು
ಜನರೆಲ್ಲರತಿವಿಸ್ಮಯಾಕ್ರಾಂತರಾಗ-
ಲಲ್ಲಿಂದ ಬಲವಾಗಿ ಭೂಮಿಗೆ ಹಾರಿ
ನಿಂತು ನೆಟ್ಟಗೆ ಫಣಿಲ್ ಫಣಿಫಣಿಲೆನ್ನು-
ತಲರಿ ಗುಟುರನಡಿಗಡಿಗೆ ಹಾಕುತ್ತ
ಬಾಲವಾಡಿಸುತ ಕಾಲಲೆ ಕೆರೆಯುತ್ತ
ನೆಲವನು ತಿವಿಯುತ್ತ ದೂರ ಹಾರುತ್ತ-

ಲುಡುವೀದಿಗೆಗತುತ್ತಲೊಡಲ ಹಿಗ್ಗಿಸುತ
ವೇಗದಿ ಹಾರುತ ನಿಡುಜಂಗೆಯಿಡುತ
ಕೋಪದಿ ಗಜರುತ್ತ ತಳರುತ್ತ ಮೂತಿ
ಹಿಗ್ಗಲಿಸುತ ಮೊಗವೆತ್ತಿನೋಡುತ್ತ
ಸಗಣಿಯ ಹಾಕುತ್ತ ಜಿರ್‍ರನೆ ತಿರುಗಿ
ಕಿರುಜಂಘೆಗಳನಿಟ್ಟು ದೆಸೆಗಳ ನೋಡಿ
ಪಕ್ಕಕ್ಕೆ ಒದೆಯುತ್ತ ಮೇಲೆ ಹಾರುತ್ತ
ಘೂತ್ಕರಿಸುಗುಳುತ ಹಿಣಿಲ ನೆಕ್ಕುತ್ತ
ಚಂಗನೆ ನೆಗೆಯುತ್ತ ಹೊಂಗುತ ಕೊಂಬು-
ಗಳನೋರೆ ಮಾಡುತ್ತ ಮೆಲೆತು ಬಾಗುತ್ತ

ಹೂಂಕಾರಗೈಯುತಲುರವಣಿಸುತ್ತ
ಜನರ ಮೇಲೆರಗುತ್ತ ಮುಸ್ಸು ಮುಸ್ಸೆನುತ
ಚೌಡಯ್ಯನನು ಕಂಡು ಸಂತೋಷಿಸುತ್ತ-
ಲವನನು ಸುತ್ತಿ ತಪಸಿಯ ಬೆಂಬತ್ತಿ
ಬಾಸಿಗವರಿಸಿನವಕ್ಷತೆಹಾರ-
ವಾಸಮಂಚಿತ ಸುಗಂಧಾನುಲೇಪನವು
ಮೆರೆಯಲು ಜೊತೆಯಲ್ಲೊಲೆವುತಿರೆ ಗಂಟೆ-
ಗಳು ಕಿರುಗಂಟೆ ಗೆಜ್ಜೆಗಳೆಲ್ಲ ನೊರೆಯ-
ಲಧಿಕೋತ್ಸವದಿ ವೃಷಭೇಶ್ವರನಿರಲು
ಸಂತೋಷದಲಿ ಮುಸುಡಿಯ ಚೌಡರಾಯ

ಮೆಲ್ಲಗೆ ನಡೆತಂದು ಕೊರಳನಪ್ಪುತ್ತ-
ಲಡಿಗಳ ತೊರೆದು ಪುಷ್ಪಾಂಜಲಿಯಿತ್ತು

ಅಯುತಧೂಪದೀಪಾದಿಗಳಿತ್ತು
ತುಪ್ಪ ಹಾಲುಗಳ ಹೊಟ್ಟೆಯ ತುಂಬ ಬಡಿಸಿ
"ನಡೆಯಣ್ಣ ನಡೆಯಣ್ಣ ನಂದಿಯೆ ನೀನು
ನಡೆಯದೆ ಮದುವೆಗೆ ಹೋಗೆ ನಿಶ್ಚಯವು"
ಎಂದಾಗ ಲೋಕಗಳಚ್ಚರಿವೊಂದೆ
ವಿನುತಿಸಲಾ ಭಕ್ತಜನರುತ್ಸಾಹಿಸಲು
ಎಲ್ಲರ ಮುಂದೆ ನಡೆಯಲಾ ತಪಸಿಯ
ಮುಂದಕಾ ವೃಷಭನು ಭರದೊಳು ನಡೆಯೆ

ಹೋಗುಹೋಗುತಲಿರಲಷ್ಟು ಮುಂದಕ್ಕೆ
ಉರವಣಿಸುತ ಹೊಂಗಿಯುಡುವೀಧಿ ಸೇರಿ
ಹೆದ್ದೊರೆಯೆಂಬ ನದಿಯು ತುಂಬಿ ಹರಿಯೆ
ದಡದಲುದ್ವೃತ್ತಿಯಿಂದಲಿ ತಾನು ನಿಂತು
"ಅರಿಯೆಯಾ ವಾರಾಶಿಯನ್ನೆಲ್ಲವೊಬ್ಬ-
ನಂಗೈಯಿನೊಳಗಡಗಿಸಿದನು ಮತ್ತೆ
ಭವಿಯ ದೋಣಿಯನೊಲ್ಲದೆಯೆ ಮೂದಲಿಸುತ
ಸವಿಶೇಷ ಭಕ್ತಪ್ರಸಾದಿ ದಾಸಯ್ಯ
ತಾವೆ ನಿನ್ನಡಗಿಸಿ ಕಾಲ್ನಡೆಯಲ್ಲಿ
ಈ ದೇಶವೆಲ್ಲವರಿಯಲು ದಾಟಿದನು,

ಮತ್ತೆಗಜೇಶ್ವರ ಮಸಣಯ್ಯ ತನ್ನ
ಮರೆತು ಶಿವಾರ್ಚನಾಮಗ್ನನಾಗಿರಲು
ಮೇಲಕ್ಕೆ ಬರಲಂಜಿಯೆರಡು ದಿಕ್ಕಿನಲಿ
ಖಂಡಿತಗೊಂಡು ನೀನೋಡಿದೆಯಲ್ಲ!
ಈಗೇನೆನ್ನುತಲಿ ಪ್ರವಾಹದಿಂದಿರುವೆ
ಅಡಗುತ್ತ ದಾರಿ ನೀಡೆ"ನುತ ಚೌಡಯ್ಯ-
ನಲಗಮೋಹಳವನು ಹಸ್ತದಿ ತುಡುಕಿ
ಝಳಪಿಸೆ ನೀರೆಲ್ಲ ಝಲ್ಲನೆ ಹರಿದು
ನೀರಪರ್ವತವೆನಲಾಕಾಶಕೇರಿ
ತಾರಾಪಥದ ಮೇಲಕುಕ್ಕಿತು ತಾನು

ಆಕಾಶಗಂಗೆಯನಾ ಭಕ್ತಮಹಿಮೆ-
ಯನ್ನೇಕಾಂತದಿ ಕೇಳಿ ಹರನೆಯ್ದೆ ತೆರದಿ
ಆಯೇರು ಮುಸಿಡಿ ಚೌಡಯ್ಯಗೆ ಹೆದರಿ
ಚಯ್ಯನೆ ತಾನಿಳಿಯಿತು ರಸಾತಳಕೆ

ಎನಲು ದಾರಿಯ ನೀಡು ಗರ್ವವನುಳಿದು
ಸುಮ್ಮನೆ ನಡುವೆಲ್ಲ ದಿನ್ನೆಗಳಾಗೆ
"ಬನ್ನಿ ಬನ್ನಿರಿ ನೀರಿನ ನಡುವೆ ಹೊಡೆಯ-
ಲೆರಡಾಗದೆನ್ನುವ ನುಡಿ ಸುಳ್ಳಾ"ಯ್ತೆಂದು
ಮುಸಿಡಿ ಚೌಡಯ್ಯನು ಮುಂದಕೆ ನಡೆಯ-
ಲಸಮ ಭಕ್ತಾನೀಕವಾನಂದಲೀಲೆ-

ಯಿಂದಲಲ್ಲಿಲ್ಲಿ ನಿಂತಾರುತ್ತ ಹಾರು
ಕುಪ್ಪೆಯನಾಡುತ್ತ ಗತಿಗೆ ನಿಲ್ಲುತ್ತ-
ಲೆಡೆಯೆಡೆಯಾರುತ್ತ ಬೊಬ್ಬೆಯಿಡುತ್ತ
ಭರದಿ ಸುತ್ತುತ ಹೆಜ್ಜೆಯನು ಹಾಕೆದ್ದು
ಓಟವ ಹಾಕುತ್ತ ನಡೆಯುತ್ತ ಮುಂದ-
ಕೊಲವಿಂದಲಾ ತಪಸಿಯು ಎತ್ತು ನಡೆಯೆ
ದರಹಸಿತೋಲ್ಲಾಸವರವಕ್ತ್ರನಾಗಿ
ನಡೆಯೆ ಚೌಡಯ್ಯನಾ ದರಿಯಲ್ಲಿ ನಿಂತು
"ಅತಿಶಯದಲಿ ಲೋಕವೆಲ್ಲವು ಮುಳುಗೆ
ಕಾಡದೆ ನಡೆ ನೀನು ಗರ್ವವಡಗಿಸಿ"

ಎನುತಲಾ ಮುಸಿಡಿ ಚೌಡಯ್ಯ ಸದ್ಭಕ್ತಿ
ಜನಸಹಿತದಲನುರಾಗಲೀಲೆಯಲಿ
ಬಂದು ಶೋಭಿಸಲು ತತ್ಪರಿಣಯ ಕ್ರಿಯೆಯ
ಪರಿತೋಷದಲಿ ಸಮಾಪ್ತಿಯ ಕಾಣಿಸುತ್ತ
ಭಕ್ತರೆದುರ್ಗೊಳೆ ಮತ್ತೆ ಕಲ್ಯಾಣ
ನಗರದ ಬೀದಿಗಳಲ್ಲಿ ಬರುತಿರೆ
ತಪಸಿಯೂ ಎತ್ತು ತನ್ನೊಡನೆ ನಡೆಯಲು
ವಿಪರೀತಮತಿ ನರರು ಭ್ರಾಂತಿ ಹೊಂದೆ
ಜಯಜಯ ಧ್ವನಿಯಾಗಸವನು ತುಂಬಿರಲು
ರಯ್ಯನೆ ಹರಿತಂದು ರಮಣಿಯೊಬ್ಬಾಕೆ

ಭಾವಿಸೆ ಚೌಡಯ್ಯನ ಪದಕೆ ನೊಸಲು
ತಾಕಿಸಿ ಮೈಚೆಲ್ಲಿ ಮೊಕ್ಕುದ ಕಂಡ-
ನುನಯದಿಂದಲಿ 'ಶತಾಯುಷ್ಯ'ವೆಂದೆನುತ
ಬಂದು ತಮ್ಮಯ ನಿಜಾಸ್ಥಾನದೇಶಕ್ಕೆ
ಮೊದಲಿನಂತದ್ಭುತ ಲೀಲೆಯಿಂದಿರಲು
ಆ ಸುಕನ್ಯಕೆ ಮೃತಳಾಗೆ ಮರುದಿನ

ಜನಕಾದಿಗಳಳುತ ಕೊಂಡು ಬಂದವರು
ಕಾಣುತ ಚೌಡಯ್ಯನವರಿಗೆ ಮೊಕ್ಕಿ
"ನಿನ್ನೆ ನಿಮ್ಮಯ ಪಾದಗಳಿಗೆ ಭಕ್ತಿಯಲಿ
ನುತಿಸಿ ಮೊಕ್ಕಿದ ಸತಿಯಿಂದು ಸತ್ತಿಹಳು ೧೦೪೦

ನಿಮ್ಮ ಹರಕೆ ತಪ್ಪುವುದೆ"ಯೆನುತವರು
ಪದಗಳ ಹಿಡಿದು ಪ್ರಲಾಪಿಸುತಿರಲು
'ತೊಲತೊಲಗೆ'ನ್ನುತ 'ಬಳಿಗಡ್ಡವಾಗಿ
ನಿಂತೊರಲುತಿರದೆ ನಿಲ್ಲುನಿಲ್ಲೆ'ನುತ
ಚಟ್ಟವನವನಿಯಲ್ಲಿಳುಹುತ ಮಹಿಮೆ
ಹೊಂಪುಳಿಗೊಳ್ಳಲು ಬಾಗಿ ತಟ್ಟುತ್ತ
'ಹರಸುವರಾಯುಷ್ಯವನ್ನೆಂತೀಯುವರು'
ಎನ್ನುವ ನುಡಿಗಳ ತಾ ಸುಳ್ಳುಮಾಡಿ
ನಿಶಿತ ಖಡ್ಗವನ್ನೆತ್ತಿ ನಿಖಿಲರು ತಿಳಿಯೆ
'ಶಿಶುವೆ, ಏಳೆ'ನ್ನುತ ಹೆಸರನು ಕರೆಯೆ ೧೦೫೦

ಪುಟ್ಟೆಂದು ಕಟ್ಟುಗಳವು ಬಿಚ್ಚೆ ನಿದ್ದೆ
ತಿಳಿಯುತ ಭಯಗೊಂಡೇಳುವ ರೀತಿಯಲತಿ-
ಸಂಭ್ರಮಾಕ್ರಾಂತಮತಿಯಲಿ ನೋಡುತ್ತ
ಕನ್ಯೆ ಚೌಡಯ್ಯಗೆ ಸಾಷ್ಟಾಂಗವೆರಗೆ,
ತಾಯಿತಂದೆಯರು ತಮ್ಮಯ ಪುತ್ರಿಯೊಡನೆ
ಹೃದಯದಿ ಬೆಳಕಿರೆ ಭಕ್ತಿಯಿಂ ನಮಿಸಿ
"ಮುಸಿಡಿ ಚೌಡಾಚಾರ್ಯ, ಅಸಮಾನಶೌರ್ಯ
ವಶವೆ ನಿನ್ನಯ ಗರಿಮೆಯನು ಬಣ್ಣಿಸಲು?
ಪ್ರಾಣೋಪಕಾರಿಗೆ ಪ್ರತ್ಯುಪಕಾರ-
ವೇಣಾಂಕಧರಮೂರ್ತಿ ಮಾಡಲಾಗುವುದೆ? ೧೦೬೦

ದಾಸರಾದೆಮ್ಮನು ದಯೆಯಿಂದುದ್ಧರಿಸು
ಈ ಸಂಸರಣವಾರ್ಧಿಯನು ದಾಂಟುವಂತೆ"
ಎಂದು ಬಿನ್ನಪವನು ಮಾಡೆ ಮೂವರನು
ಅಂಚಿತ ಪ್ರಾಣಲಿಂಗಾಂಗಿಗಳೆನಿಸಿ
ಗತವತ್ಸರಾಯುವಾಯತಿಯಿಂ ಕರುಣಿಸಿ
"ಪ್ರಾಣದಾನವ ಮಾಡಲನ್ಯರ್ಗೆ ವಶವೆ?
ಏಣಾಂಕಧರನಿಗೂ ಅರಿದಿದು ಎನಲು

ಕಾಣೊದಗೆ ಮುಸಿಡಿ ಚೌಡಯ್ಯ ಪ್ರಾಣ
ದಾನವಗೈದ ವಿಚಿತ್ರವಿದೆ"ನುತ

ಮೊಕ್ಕುತ ಲೋಕವು ಬೆಕ್ಕಸಗೊಳ್ಳ-
ಲತಿಶಯ ಕೀರ್ತಿಗೆ ನೆಲೆಯಾಗುತಂತು
ಮಹನೀಯ ಸದ್ಭಕ್ತಿ ಮಹಿಮೆ ತುಳ್ಕಾಡೆ
ಸಹಜೈಕಲಿಂಗಿಯಾ ಚೌಡಯ್ಯ ನಡೆಯ-
ಲವನ ಮಹಾದ್ಭುತೋನ್ನತಿ ಕಾಣಲಾರ-
ದತಿ ಮತಿಹೀನರಾಗನ್ಯದರ್ಶನರು
"ತೊಡೆಸುಟ್ಟೆತ್ತುಗಳನು ಜತೆ ತಮ್ಮಡಿಗಳ
ಪಡೆಯುವನಂತೆ ಶವಗಳನು ಕಂಡು,
ಚೌಡಯ್ಯನವರ ರೀತಿಯನು ಕಾಣುವೆವು
ತಪ್ಪೇನಿದರ"ಲೆಂದು ದುರ್ಬುದ್ಧಿಯಿಂದ

ಗೋಣಿಯ ಗರ್ಭದಿ ಮಾನಸರೂಪ-
ವನ್ನಿಟ್ಟು ಬೂದಿಯ ದಳವಾಗಿ ಪೂಸಿ-
ಯೆಲ್ಲ ಜಾಗದಲಿ ರುದ್ರಾಕ್ಷವ ತೊಡಿಸಿ
ಜನ್ನಿವಾರವ ಹಾಕೆ ಜಡೆಗಳ ಕಟ್ಟಿ
ಬಟ್ಟೆಯ ಹರಿದಡಿಯಲಿ ಕೌಪವುಡಿಸಿ
ಕಡೆಗೊಬ್ಬನದನು ಗುಡಿಯ ಕಡೆಯಿಟ್ಟು
ಮತ್ತಾರಿದನ್ನರಿಯದ ರೀತಿಯಲ್ಲಿ
ಬಳಿ ನಿಂತು ದೂಷಕರುತ್ಸಾಹದಿಂದ
"ಅಕ್ಕಟಾ, ಗುಡಿಯೆಡೆಗೊಬ್ಬ ತಪಸಿಯ
ದಿಕ್ಕುಗೆಟ್ಟಿಹ ಹೆಣವೊಂದು ಬಿದ್ದಿಹುದು

ಉಣ್ಣಲುಡಲು ಕೊಡೆಬಿಡಲಿಲ್ಲವೆಂದೊ!
ಬಣಗು ಹೆಣವದಕೆ ಭಕ್ತರು ಬರರು
ಪ್ರಾಣವೆಲ್ಲರಿಗೇನು ನಿತ್ಯವೇ ಎಂದೂ?
ಅಯ್ಯೋ, ಯಾರೂ ಸೇರರೀಯೆಡೆಯಲ್ಲಿ
ಎಂತು ನೋಡಲು ಸಾಧ್ಯವಿನ್ನು, ಧರ್ಮವಿದು
ಕಟ್ಟಿಗೆಯನ್ನಾದರಿಡುವೆ"ವೆಂದೆನುತ
ಕೆಲ ತಮ್ಮಡಿಗಳ ತಪಸಿಗಳ ಕರೆದು
ಬೇಗನೆ ಬಂದು ವಿಮಾನವಗೈದು
"ಈ ಗುಡಿಯಲ್ಲೆಷ್ಟು ದಿನದಿಂದಲಿಹುದೊ!
ಹಡಿಕೆನಾರುತಿದೆ ಮುಟ್ಟಲು ಬಾರದೆ"ನುತ

ತಾವೆಯಾ ಕೃತಕ ತಪಸಿಯ ಶವವನು
ತಂದು ವಿಮಾನದಲಿಟ್ಟು ಬಂಧಿಸುತ
ಜಗದಭಿನುತರಾದ ಚೌಡಯ್ಯನವರ
ಮನೆಯ ಹತ್ತಿರ ವಿಮಾನವನು ಬರಿಸುತ-
ಲಾಗಾಗಲವರನು ಹಾಸ್ಯಗೈಯುತ್ತ
ಕುಹಕಲೋಗರುಗಳು ಹೋಗುತಲಲ್ಲಿ
ನಡೆತರಲಾವಿಮಾನದ ಶವವನ್ನು
ಕಾಣುತ್ತ ಚೌಡಯ್ಯ ಕಡುದೂರದಲ್ಲಿ
ಕೃತಕದ ಶವವೆಂದು ಮತಿಯಲ್ಲಿ ತಿಳಿಯು-
ತತಿದರಹಸಿತಾಸ್ಯನಾಗುತಲುಬ್ಬಿ

"ಅವಿಕಲಾಜಾಂಡಗಳನು ಖತಿಯಿಂದ
ಕೆಡಿಸಲು ಕೂರ್ಪಿನಿಂ ಕಾಯೆ ದಕ್ಷರಹ
ಮದನಾರಿ ಭಕ್ತರ ಮಹಿಮೆಯ ತಿಳಿಯ-
ಲಿದು ಯಾವ ಹಿರಿದು ತಾನೀರೂಪಕೀಗ
ಬರಿಸುವೆನೊಡಲು ಪ್ರಾಣಗಳನೆ"ನುತ್ತ
ಮೃಡಭಕ್ತಮಂಡಲಿಯಡಿಗಳ ನೆನೆದು
ಬೇಗ ಹತ್ತಿರ ಬಂದು ಕತ್ತಿಯ ಸೆಳೆದು
ಝಳಪಿಸಿ ಕಾಯಕೆ ಕಡುಮೊನೆದೋರಿ-
ಯಲ್ಲಿಂದ ಲಂಘಿಸಿಯೂ ವಿಮಾನದಲಿ
ಯಿರಿಸಿದ್ದ ಕೃತಕಾಂಗದಾ ಹಸ್ತವಿಡಿದು

ಜೋರಾಗಿ 'ತಪಸಿ ಮೇಲೇಳೆ'ಂದು ಕರೆಯ-
ಲಾ ಮಾತ್ರದಲ್ಲಿ ಜೀವಾಂಗದಿಂದೆದ್ದು
ಮುಸಿಡಿ ಚೌಡಯ್ಯನ ಮುಂದಕೆ ನಿಂತು
ವಸುಧೆಯ ತಜ್ಜನಾವಳಿ ಚೋದ್ಯಗೊಳಲು
ಚೌಡಯ್ಯನವರ ಶ್ರೀ ಚರಣಾಬ್ಜಗಳನು
ಮುಟ್ಟಿ ಸಾಷ್ಟಾಂಗದಿ ತಾ ಮೊಕ್ಕು ನಿಂತು
"ಪರನು ತಾ ನೀನೆ ಸದ್ಗುರುವು ತಾ ನೀನೆ
ಕರುಣಿಸು ನಿನ್ನ ಪಾದುಕೆಗಳ ಹೊರಲು
ಖ್ಯಾತಿಯಿಂ ಭವದೀಯ ಕಾರುಣ್ಯ ಗರ್ಭ
ಜಾತನಾನನ್ಯಥಾ ನೀತಿಯನರಿಯೆ"-

ನೆಂದು ಪ್ರಾರ್ಥನೆಗೈಯಲಾತನಿಗಾಗ
ಸಂಚಿತಗುರುಲಿಂಗ ಸಂಗತಿಗೈದು

ಅತುಲ ಕೋಪೋದ್ರಿಕ್ತನಾಗುತ ಮಸಗಿ
ಕೃತಕರ ಖಂಡಿಸೆ ಮನದಿ ನಿಶ್ಚೈಸೆ
ಪರವಾದಿಗಳು ಭಯಭ್ರಾಂತಾತ್ಮರಾಗು-
ತ್ತೈತಂದಡಿಗಳಿಗೆ ಮೈಚಾಚಿ ಮೊಕ್ಕಿ
"ಅಸಮಾನ ಮುಸಿಡಿ ಚೌಡಾಚಾರ್ಯವರ್ಯ,
ದೆಸೆ ದಿಕ್ಕುಗಳು ನೀನೆ ಸಪ್ತರಕ್ಷಕರು
ನೀನೆಯೆ ನಮಗನ್ಯಥಾ ಭಾವವಿಲ್ಲ
ಕಾಯಯ್ಯ ಅಜ್ಞಾನಶೀಲರ ಶಠರ

ಸಕಲಾಪರಾಧವ ಸೈರಿಸಿ ನಮ್ಮ
ಸುಕೃತವಂತರ ಮಾಡಿ ಸುಜನಾಗ್ರ ಗಣ್ಯ!"
ಎಂದು ಬಿನ್ನವಿಸುತಲಭಯವ ಬೇಡೆ
ಘನಕೃಪಾಮತಿಯಾರ್ತಜನಶರಣ್ಯನಹ
ಸಜ್ಜನ ಶ್ರೇಷ್ಠನಾಗಿಹ ಚೌಡರಾಯ-
ನಾ ಜನಾನೀಕವತ್ಯರ್ಥಿಯಿಂ ಭಜಿಸೆ
ಗತಪೂರ್ವಲಾಂಭನಾಕೃತಿಗಳ ಮಾಡಿ-
ಯತುಲಿತ ಶಿವಸಮಯಸ್ಥರಗೈದು
ಅಸದೃಶಲೀಲೆಯಿಂ ಮುಸಿಡಿಚೌಡಯ್ಯ
ಧರೆಯಲೆಂದಿನ ರೀತಿ ವರ್ತಿಸುತಿದ್ದ,

ಮುಸಿಡಿಯ ಚೌಡಯ್ಯನಸದೃಶ ಚರಿತೆ-
ಯನು ಭಕ್ತಿಯಿಂ ಕೇಳುತರ್ಥಿಯಿಂದೋದಿ
ಬರೆಯಲು ಸದ್ಭಕ್ತಿಸಂಪದವೊದಗು-
ವುದು ಶಿವ ಕರುಣಪ್ರಮಥಲೀಲೆಯಿಂದ,

**ಸುರುಗಿ ಚೌಡಯ್ಯನ ಕಥೆ**

ವರಕೀರ್ತಿ ಸುರಗಿ ಚೌಡರಸನಾ ಮತ್ತೆ
ಪರಕಿಸೆ ಕಾರಣಪುರುಷರತ್ನನೆನೆ
ಲಿಂಗ ಧರ್ಮಜ್ಞಾನಿ ಲಿಂಗಾಭಿಮಾನಿ
ಲಿಂಗಯೋಗಾನಂದ ಸಂಗತಾತ್ಮಕನು
ಗಾಢವೀರವ್ರತಾರೂಢಪ್ರತಾಪಿ
ಗೂಢ ಲಿಂಗೈಕ್ಯನಿರೂಢಮಾನಸನು

ಉಭಯಲಿಂಗಪ್ರಸಾದೋಪಭೋಗಿಯವ
ತ್ರಿಭುವನ ಪೂಜ್ಯನು ಶುಭಕರಕೀರ್ತಿ

ಶುದ್ಧಾಂತರಂಗ ಪ್ರಬುದ್ಧನು ಗತವಿ-
ರುದ್ಧ ಕರ್ಮೇಂದ್ರಿಯ ಬುದ್ಧೀಂದ್ರಿಯನೆನೆ
ಸದಮಲಕೀರ್ತಿ ಭಾಸ್ವತ್ಪುಣ್ಯಕೀರ್ತಿ
ಸದಯಾತ್ಮನಪಗತ ಸಂಸಾರಭಯನು
ಶಿಷ್ಟಮಹೋತ್ಕೃಷ್ಟಶೀಲಪಾಲನೆನೆ
ಇಷ್ಟಾಷ್ಟವಿಧಭಕ್ತಿ ಪುಷ್ಟಿಚೇತನನು
ಕಾಯವಿಯುಕ್ತ ವಿಕಾರ ದೂರನೆನೆ
ಮಾಯಾಪ್ರಪಂಚಾವಿಧೇಯ ವರ್ತನನು

ಎನ್ನುತಲೊಪ್ಪಿದ್ದ ಕಲ್ಯಾಣದಲ್ಲಿ.
ಈ ಹೊತ್ತು ನಾಳೆಯೆನ್ನದೆ ಮೂರು ಹೊತ್ತು
ಭಕ್ತಿಯಿಂ ಸದ್ಗುರುಭಾವನೆಯಿಂದ
ಜಂಗಮಕೋಟಿಗರ್ಚನೆಯಗೈಯುತ್ತ
ಪಾಯಸಾಹಾರವ ಪಂಚಭಕ್ಷ್ಯಗಳ-
ನಾಯತಭಕ್ತಿಯಿಂ ದಿವ್ಯಾನ್ನಪಾನ-
ಗಳನೆಲ್ಲ ಬಡಿಸಿ ಸುಪ್ರೀತಿಯಿಂ ಮೊಕ್ಕಿ
ತನ ಕರಾಂಬುಜಗಳ ತಲೆಯಲಿ ಹೊತ್ತು
"ಬಿಡದಲೆ ಶ್ರುತಿ 'ರಸಾನ್ ಭಕ್ತಜಿಹ್ವಾಂಚ-
ಲೇ' ಯೆಂದು ಸತತವು ಮೆರೆದುದರಿಂದ-

ಲಾರಯ್ಯಲೀಜಂಗಮಾವತಾರದಲಿ
ಆರೋಗಿಸೈ ದೇವ"ಯೆಂದು ಬಿನ್ನವಿಸೆ
ಜಂಗಮವಾರೋಸುತ್ತಿರೆ ತಾನು
ಲಿಂಗಾರ್ಚನಕ್ರಿಯಾಸಂಗತಿಯಲ್ಲಿ
ಮಜ್ಜನೋದಕಗಳ ಪಡೆಯುವ ಮುನ್ನ
ಪರಮನ ಮೇಲಾನಂದದ ಬಾಷ್ಪ ಸುರಿಸಿ,
ಪೂಜಿನ ನವಪುಷ್ಪರಾಜಿಗೆ ಮುನ್ನ
ರಾಜಾಂಕನಿಗೆ ಹೃತ್ಸರೋಜವು ಬಿರಿಯೆ,
ಧೂಪವಾಸನೆಗೆ ಮುನ್ನವೆ ಧೂರ್ಜಟಿಯೆಡೆ
ವ್ಯಾಪಿತಾಂತರ್ಗತ ವಾಸನೆ ತುಂಬೆ,

ಬೆಳಗುವ ನೀರಾಜನಗಳಿಂದ ಮುನ್ನ
ಮಲಹರನೊಳು ತನ್ನಾತ್ಮಜ್ಯೋತಿ ಬೆಳಗೆ,
ವಿನಿವೇದಿತ ಪದಾರ್ಥವಿತತಿಗೆ ಮುನ್ನ
ತನ್ನ ಪ್ರಾಣಪದವೀಶ್ವರಗರ್ಪಿತವೆನೆ,

ಲಿಂಗಾರ್ಚನೆಯನು ತಾನುಬ್ಬಿ ಮಾಡುತ್ತ-
ಲಂಗಚೇಷ್ಟೆಗಳಿಂದಲೆನಿತೊ ಹಿಗ್ಗುತ್ತ
ಸುಭಗಲಿಂಗವ ನೋಡುತ್ತಲಿ ತಲೆದೂಗಿ-
ಯಭವಾಮೃತವನಾಂತು ಅಂತು ಬಾಗುತ್ತ
ಸುರುಚಿರೋಕ್ತಿಗಳಿಂದ ಹಿಗ್ಗಿ ಹಾಡುತ್ತ
ಸ್ಥಿರಸುಖಾಂಭೋದಿಯೊಳಗೆ ತೇಲಿ ತೇಲಿ

ಮಂಗಳೋನ್ನತ ಬಹಿರಂಗದಲ್ಲಂತ-
ರಂಗದಿ ತನ ಪ್ರಾಣ ಲಿಂಗಸ್ಥಗೊಳಿಸಿ-
ಯಮಳದಿ ನಿತ್ಯ ಲಿಂಗಾರ್ಚನವೇಳೆ-
ಯಲಿ ಸಮುಚಿತ ನೈವೇದ್ಯದ ಸಮಯದಲಿ
ಮೆರವಣಿಯಲಿ ಸುರಗಿಯ ಕಿತ್ತು ಪ್ರಾಣ-
ದಾ ಕೊರೆ ಕೊಯ್ದಂತೆಯೊಂದೆಸೆಯಿಟ್ಟು
ಜಂಗಮಲಿಂಗಾವಸರವ ಸಲ್ಲಿಸುತ
ಭಂಗಿಯಿಂ ತನ್ನಯ ಪ್ರಾಣಲಿಂಗಕ್ಕೆ
ಹರಿವಾಣದಲ್ಲೆಲ್ಲ ಪಡಿಪದಾರ್ಥಗಳ-
ನತಿಶಯವಾಗಿ ಬಡ್ಡಿಸಿ ಸಾಂದ್ರವೆನಲು

ಅಚ್ಚರಿಯೆನೆ ತುತ್ತುತುತ್ತನು ನೀಡ-
ಲತ್ಯರ್ಥಿಯಿಂ ತುತ್ತುತುತ್ತನು ಕೊಳುತ
ಭಕ್ತವತ್ಸಲನಾದ ಪರಮೇಶನಾಗ
ವ್ಯಕ್ತಿಯಂತೆಯೆ ಕೈಯಿಂದಾರೋಗಿಸುತ್ತ
ಮೂಹೊತ್ತು ಪ್ರಾಣಲಿಂಗಪ್ರಸಾದವನು
ಸುಪ್ರಸನ್ನತೆಯಿಂ ಜಂಗಮಪ್ರಸಾದವನು
ಕೂಡೆ ಭೋಗಿಸುತಿಹ ರೂಢಿ ಪೆಂಪಾಗಿ
ಮೆರೆಯುತ ಚೌಡಯ್ಯ ವಿಹರಿಸುತಿರಲು
"ಹರನಿಗೆ ನಿತ್ಯವೈ ಕರಿಕಾಲಚೋಳ
ನರಪತಿಯಾರೋಗಣವ ಪ್ರೀತಿಯಿಂದ

ಸಲಿಸೆ ಹಲಗೆಗಳ ರಾಜಾನ್ನದಕ್ಕಿ
ಯಳವಡೆ ಮೂನ್ನೂರ ಅರವತ್ತು ಸೊಲಿಗೆ-
ಯಧಿಕದ ಪತ್ರಶಾಕಾದಿಗಳಲಿಹು-
ದೆನಲೇನು ಮೂವತ್ತು ಕೊಳಗದ ಮೆಣಸ-
ನಾರೋಸುವನಲ್ಲದಾ ಪದಾರ್ಥಗಳ
ಹೆಸರನೀಶ್ವರನೆ ತಾನರಿಯನು"ಯೆನಲು

ತಾನೆಲ್ಲ ಪದಪದಾರ್ಥಗಳನು ಬಿಡಿಸಿ-
ಯರಸನಾಯುಧಗೊಂಡು ಕೆಲದಿ ನಿಂತಿರಲು
ಆಗಾಗಲಾಸ್ವಾದಗಳ ಚಪ್ಪರಿಸುವ
ಸದ್ದು ಕೇಳಲು ಪ್ರತಿದಿನದಲಿ ಶಿವನು

ಅನುರಾಗಲೀಲೆಯಿಂದಾರೋಗಿಸಿದನು.
ಬೋನವ ತಾ ಮುನ್ನವೆನಲದಲ್ಲದಲೆ
ಮಾದರ ಚನ್ನನು ಮಹನೀಯ ಕೀರ್ತಿ
ಪ್ರೇಮವು ಮನದಿ ತುಳ್ಕಾಡಲು ಅಂದು
ಅಂಬಳಕವ ಜಿಹ್ವಾಗ್ರವನು ಹರಿಯಣ-
ವಾಗಿಸಿ ತನಗರ್ಪಣೆಯಗೈಯಲಾಗ
ಶಿವನಾರೋಗಿಸಿದ ಪ್ರಸಿದ್ಧಿಯಲಂದು.
ಅವಿರಳ ಪ್ರೀತಿಯಿಂದಲಿ ತಾನು ಮತ್ತೆ
ವೀರ ಚೋಳವ್ವೆ ದ್ರಾಕ್ಷಾರಾಮದಲ್ಲಿ-
ಯಾರೋಗಿಸಲು ಸವಿಯಾದರೂ ನಡುಗಿ-

ದನು ಕುಡಿಕೆಯ ಕೂಡ ತುತ್ತನೆತ್ತದಲೆ
ತಡೆಯದೆ ಹುಗ್ಗಿಯ ದಾಸಿಯಿಂ ಕಳಿಸೆ
"ಕಳಿಸಿದಳೆಮ್ಮಕ್ಕ ಹುಗ್ಗಿಯಂ ನಿನಗೆ
ಚಿತ್ತಜಾಂತಕ, ಇದೋ ಕೈಹಿಡಿ"ಯೆನಲು
ಪ್ರೀತಿಯಿಂ ಕೈ ಚಾಚಿ ಪ್ರೀತಿಯಿಂ ಸತಿಯ
ಕೈಯ ಹುಗ್ಗಿಯನು ಚಚ್ಚರವೀಸಿಕೊಳುತ-
ಲಾರೋಗಣೆಯ ಮಾಡಿಯೆಲ್ಲರು ನೋಡೆ
ಬಟ್ಟಲನೆಸೆದನು ಗುಡಿಯ ಹಿಂದೆನಲು
ಕೇಳುವೆ ಮತ್ತೆ ಹಿಂದಿನ ಕಥೆಗಳಲಿ
ನೋಡಲಾದುದುಯಿಂದು ಅನುರಾಗದಿಂದ

ಕಟಕದಿ ಚೌಡಯ್ಯನಿಂದ ತುತ್ತುಗಳ
ನಿಟಿಲಾಕ್ಷನಾರೋಗಿಸಿದನಂದು"ಯೆನುತ-
ಲಖಿಲಭಕ್ತಾವಳಿಯೆಲ್ಲ ಕೀರ್ತಿಸಲು
ಸುಖಲೀಲೆಯಲ್ಲಿದ್ದ ಸುರಿಗಿ ಚೌಡಯ್ಯ.
ಸುರಗಿ ಚೌಡಯ್ಯನ ಚರಿತೆಯ ಕೇಳು-
ತರ್ಥಿಯಿಂದೋದಿ ವ್ಯಾಖ್ಯಾನವಗೈಯೆ
ಸಹಜ ಜಂಗಮಲಿಂಗಸದಯಾಭಿವಿನುತ
ನಿಹಿತ ಪ್ರಸಾದವಿನಿರ್ಮಲಚರಿತ

ಸ್ವಾನುಭವಾತಿಶಯಾನಂದವೊದಗು
ಮಾನಿತ ಸದ್ಭಕ್ತಿ ಮಹಿಮೆ ವರ್ಧಿಸುಗು.

### ತೆಲುಗು ಜೊಮ್ಮಯ್ಯನ ಕಥೆ

ಮಲಹರ ಸದ್ಭಕ್ತಿ ಮಹಿತನು ಮತ್ತೆ
ತೆಲುಗು ಜೊಮ್ಮಯ್ಯನಾ ತ್ರಿಮಲಾಪಹರನು
ಸಂತತ ಸದ್ಭಕ್ತಿ ಸಹಜ ಸೌಭಾಗ್ಯ-
ವಂತನು ಸರ್ವಜೀವದಯಾಪರನೆನೆ
ಪುಣ್ಯಪಾಪೋನ್ಮುಕ್ತಪೂತಮಾನಸನ-
ಗಣ್ಯಪುಣ್ಯೋದಯ ಕಾರುಣ್ಯಾತ್ಮಕನು
ಆನಂದಕಲಿತ ಮಹಾಪ್ರಸಾದಾವ-
ಧಾನಸಂಧಾನ ವಿದ್ಯಾವಿಶಾರದನು
ಅಶ್ರಾಂತಶುದ್ಧ ಶಿವಾಚಾರಯುತನು
ವಿಶ್ರಂಶಾಚಿತಕೀರ್ತಿ ವೀರಸತ್ತಮನು

ಲೋಕಹಿತಾರ್ಥನಲೋಕನು ಶಿವಪ-
ದೈಕನಿಷ್ಠಾಪೂರಿತಾಂತರಂಗನೆನೆ
ಕಲಿಯುಗ ಜನಿತಮೃಗವ್ಯಾಧರುದ್ರ-
ನಲಘು ಪರಾಕ್ರಮನಸಮಾನದಾನಿ
ಶಿವಭಕ್ತಿಪರತಂತ್ರ ಭಕ್ತನು ಸಕಲ
ಭುವನಪಾವನನೆನೆ ಭುವಿಯಲುಲ್ಲಸದಿ
ಲಿಂಗಾರ್ಚನಕ್ರಿಯೆ ಲೀಲೆಯಿಂ ಸಲಿಸಿ
ಜಂಗಮಾರಾಧನಾಸಕ್ತಿಯಿಂದಿರುತ
ಘನರೂಢಿ ಕಲ್ಯಾಣಕಟಕದಲ್ಲಾಗ-
ಲನುರಾಗಲೀಲೆಯಿಂ ಜೊಮ್ಮಯ್ಯನಿರಲು

ಅನಿತರಲೊಬ್ಬ ಶಿವಾನಂದನಾನಿ-
ರಂತರಲಿಂಗತದ್ಧ್ಯಾನಾತ್ಮನಾಗಿ
ಪರಮ ಪರಾನಂದಪಾರವಶ್ಯದಲಿ
ಪರಮಕಾಷ್ಠೀಭೂತಭಾವನೆಯಿಂದ
ಶ್ರೀ ಶೈಲದಲಿ ಸಮಂಚಿತ ನಿರ್ಝರ ಪ್ರ-
ದೇಶದಲ್ಲಿಯೆ ಸಮಾಧಿಸ್ಥನಾಗಿರಲು
ಪದನಖಗಳು ಬುವಿಯಲ್ಲಿ ಪಸರಿಸಿ
ವಿದಿತದಿಂ ಕೆಳಗೆ ಬೇರುಗಳೆಲ್ಲ ಹರಡ-

ಲವನ ಕರಸ್ಥಲನಖಗಳು ಹೊಳೆಯೆ
ಬಿಳಿದಾಗಿ ಮೇಲೆ ಬಳ್ಳಿಗಳಂತೆ ಪ್ರಬಲ-

ವುರು ಮುಕ್ತಕೇಶವದೊಡಲನು ಕಂಡು
ನೀಲಗಿರಿಯ ರೀತಿ ಗುರುಮೂರ್ತಿಯೊಪ್ಪ-
ಲಾತನ ಶಿಷ್ಯನತ್ಯಾಯತ ಭಕ್ತಿ-
ಯಿಂದೋಲೈಸುತ ಸದಾ ಪರತಂತ್ರ ಲೀಲೆ-
ಯಿಂದಲಿ ಕಂದ ಮೂಲಾಹಾರನಾಗಿ-
ಯನುಷಕ್ತಿಯಿಂದಲಿ ತಾನಲ್ಲೆಯಿರಲು
ಆಗ ವಿನೋದಾರ್ಥವಾಗಿ ಗಂಧರ್ವ
ಕಾಂತೆ–ಪುರುಷರಾಯೆಡೆಗೆ ಹೋಗಿ ಹೋಗಿ
'ಬಿಳಿಬಳ್ಳಿಗಳ ಕೂಡೆ ಕರಿಯತನವದು
ಬಲಿದಿಹುದಾವುದೊ'ಯೆನುತ 'ದೂರದಲಿ

ಶಿಲೆಯದು, ಶಿಲೆಗೆ ಬಳ್ಳಿಗಳೆಂತಿರುವುವು
ವೃಕ್ಷವೋ, ವೃಕ್ಷವಾದರೆ ಎಲೆಯೆಲ್ಲಿ?
ಮುದಿಕರಡಿಯದೇನೋ, ಕದಲದೆ ತಾನು
ಕುಳಿತಿದೆ'ಯೆನುತಲಲ್ಲಲ್ಲಿ ವೀಕ್ಷಿಸುವ
ಸುದತಿ–ಪುರುಷರ ನೋಟಗಳನು ಕಂಡು
ಅದಯದಿ ಶಿಷ್ಯನತ್ಯಾಗ್ರಹದಿಂದ
"ಕಾಣಿರೆ! ಪರಮಯೋಗಾನಂದಮೂರ್ತಿ-
ಯನ್ನನ್ಯಭಾವದಿಂದರಿವುದು ಸರಿಯೆ?
ಅಜ್ಞಾನಿಗಳೆ, ಮೃಗಾಕೃತಿಯೆಂದು ಜ್ಞಾನಿ-
ಯನ್ನು ಹೋಲಿಸಿದಪರಾಧಕ್ಕೆ ಹೋಗಿ

ಹುಟ್ಟಿರಿ ಬುವಿಯಲಿ ಮೃಗಗಳಾಗೆಂ"ದು
ತಾನುಗ್ರಶಾಪವನೀಯಲು ಅವರು
ಅತಿಭಯಾಭ್ರಾಂತರಾಗುತಲಾಕ್ಷಣದಲಿ
ನಮಿಸುತ್ತಲಡಿಗಡಿ"ಗಕ್ಕಟಾ ನೀವು
ಆಣತಿಯಿತ್ತಂತೆ ನಮ್ಮಗಳಲ್ಲಿ
ದುರ್ಬುದ್ಧಿಯುಂಟಾಯಿತಾವುದೊ ರೀತಿ;
ಆದರೂ ಮುನ್ನಪಹಾಸ್ಯಭಾವವನು
ಮನದಲ್ಲಿ ನೆನೆದಂಥ ಮಾರ್ಗವದಲ್ಲ.
ಆದರೂ ಬಹಳವಾಗಜ್ಞಾನವಿಹುದು
ತಾನೆಂತು ತಪ್ಪುವುದೆಮ್ಮ ಕರ್ಮಫಲ?

ಇಷ್ಟೆಲ್ಲವೆನಲೇಕೆ? ಈ ಶಾಪಮೋಕ್ಷ-
ವೆಂದಿಗೆ ದೊರೆವುದು ನಮಗಿನ್ನು ಹೇಳಿ?
ಈಗ ನೀ ದಯೆಗೆಯ್ಯೆಯಾ ಮಹಾಪುರುಷ!
ತಪ್ಪನು ಸೈರಿಸು ದಯೆಯಿಂದ"ವೆನಲು
"ತಪ್ಪದಮೋಘವು ತಮ್ಮ ಶಾಪವೆನೆ
ಹೇಳುವುದೊಂದೇನು ಬೇಗನೆ ನೀವು
ಹುಟ್ಟಿರಿ ಮೃಗಗಳಾಗುತ ಬುವಿಯಲ್ಲಿ
ಕಲ್ಯಾಣಪಟ್ಟಣಾಂಕಿತ ಪ್ರಾಂತದಲ್ಲಿ
ಶೂಲಿಭಕ್ತ ತೆಲುಗುಜೊಮ್ಮಯ್ಯನೆಂಬ
ಭೂಲೋಕಪಾವನನಾ ಲಿಂಗಮೂರ್ತಿ-

ಯಿಂದ ನಿಮಗೆ ಮರಣವು ಸಿದ್ಧಿಸುವೊಲು
ಕಾಮಿಸೆ ಶಾಪಮೋಕ್ಷವಹುದು ಮತ್ತೆ
ಆಯಯ್ಯನಿಂ ಸಾವ ಹೊಂದಲು ಮಾತ್ರ
ಹಿರಿದಹ ಮುಕ್ತಿಸಂಪದ ಸಿದ್ಧಿಸುವುದು"
ಎನ್ನಲಂತಾಗಲೆನ್ನುತಲಿ ಗಂಧರ್ವ-
ರನುರಾಗದಲಿ ಕಟಕಾಂತಿಕದಲ್ಲಿ
ಮೃಗಗಳಾಗುತ ಮೊದಲ ಸತಿಪತಿಯರು
ಜೊತೆಯಲ್ಲರಣ್ಯ ಮಧ್ಯದಲಿ ಜನಿಸಲು
ಮನದಲ್ಲಿ ತೆಲುಗು ಜೊಮ್ಮಯ್ಯನ ಬರವ-
ನೆದುರುನೋತಲಿರುವೆಡೆಯೊಂದು ದಿವಸ-

ವಲರುತಲಾ ಅರಣ್ಯಾಂತರದಲ್ಲಿ
ತೆಲುಗು ಜೊಮ್ಮಯ್ಯನು ಪತ್ರೆಯ ಕೊಯ್ಯ-
ಲೊಯ್ಯನೈತರುತಿರೆ ಮೃಗಗಳು "ಈತ-
ನಿರುವಂತೆ ಕಾಂಬುದು ತೆಲುಗು ಜೊಮ್ಮಯ್ಯ"-
ನೆಂದು ಸುತ್ತಲು ನಿಲ್ಲುತರಚುತ್ತಲವನ
ಹೋಗಲೀಯದೆ ಮುತ್ತಿರಲದೊಂದು ಮೃಗವು
"ಮರಣವು ನಿಮ್ಮಿಂದ ನಮಗಾದಲ್ಲದೆಯೆ
ಕರುಣಾತ್ಮ, ಶಾಪಮೋಕ್ಷವು ನಮಗಿಲ್ಲ.
ಸಂತಸದಲಿ ನಿತ್ಯವಿಧಿಯಿಂದ ಬೇಟೆ-
ಯಾಡಯ್ಯಯೆಮ್ಮನು ನಿಖಿಲೋಪಕಾರ!

ಗಂಧರ್ವರಾವೊಂದು ಕಾರ್ಯಕಾರಣದಿ
ಸಂದಿಸಿ ನಮಗಿಂಥ ಶಾಪವೊದಗಿತು"

ಎನುತ ತದ್ವೃತ್ತಾಂತವೆಲ್ಲವ ಹೇಳಿ
"ನೋಡೆ ಶಾಪವಿಮೋಕ್ಷವಾಗುವುದಕ್ಕೆ
ನಿಶ್ಚಯವಿದು ನಿಮ್ಮ ಕೈಯಲಿ ನಾವು
ಸತ್ತರೆ ದಿವ್ಯವಿಮಾನಗಳೈದು
ಕೊಂಡೊಯ್ಯುವುವು ಕೈಲಾಸಕ್ಕೆ ತತ್‌ಕ್ಷಣವೆ
ಜನರೆಲ್ಲರಿಗೆ ದೃಷ್ಟಪ್ರತ್ಯಯವಾಗೆ
ಪಡೆದು ಶಾಪವನಿಲ್ಲಿ ಇರುವೆವು ನಾವು.
ವರವೆನಿಸಿಹುದಿದು ಪರಿಕಿಸಿ ನೋಡ-

ಲವಧರಿಸಿರದನು ಹೇಗೆ ಎಂದೆನಲು:
ಈ ಮುನ್ನ ಗಂಧರ್ವಲೋಗರು ನಾವು
ಅಮಲಾತ್ಮ, ನಮಗಿನ್ನು ಅಪವರ್ಗಪದವಿ
ದೊರೆವುದು ನಿಮ್ಮಿಂದ ಸಾಯಲು ನಾವು.
ಅದರಿಂದೆಮ್ಮನು ದಯಾಮತಿಯಿಂದ ನೋಡಿ
ಬದುಕಿಸಯ್ಯಾ"ಯೆಂದು ಪ್ರಸ್ತುತಿಸುತಿರ-
ಲಕ್ಷಯಮೂರ್ತಿ ದಿವ್ಯಜ್ಞಾನದೃಷ್ಟಿ-
ಯಿಂ ನೋಡಿ ತತ್ಕಾರ್ಯವೆಂಥದೆಂದರಿದು
ಹೋಗದೆ ನಿಲ್ಲುತ ಮತ್ತೆ ತಾ ಬಂದು
ಅರ್ಥಿಯಿಂ ಕೊಂಚ ಪತ್ರೆಯ ಕೊಯ್ದುಕೊಂಡು

ಸರಸರನಸಮಾನಶರಣಾಗ್ರಗಣ್ಯ-
ನೈತಂದು ಕಂಡನುರಾಗಲೀಲೆಯಲಿ
ಪಚ್ಚನೆ ತಲೆಸುತ್ತು ಪಚ್ಚಕುಪ್ಪಸವು
ಶೋಭಿಸೆ ಬಿಲ್ಲುಬಾಣಗಳನು ಹಿಡಿದು
ನಂದನವನವರಣ್ಯದ ಮೇಲೆ ಬಂದು
ಚಂದದಿಂದಲಿ ಸಹಜಕ್ರಿಯೆಯಿಂದ
ಬಲುಬೇಟೆಗಾರನಾ ಪಂಚಾಸ್ಯನಂತೆ
ಚಲಬಲದಿಂದ ಕೂಡಿದ ಜಾಯಿಲಗಳ
ತನ್ನನು ಪರಿವೇಷ್ಟಿಸಿಕೊಳುತೈತಂದು
ಅನಘ ಜೊಮ್ಮಯ್ಯನು ಬರಲರಣ್ಯದಲಿ

ತನ್ನೃಗಾವಲಿಯುಬ್ಬಿ ಜೊಮ್ಮನ ಮೇಲೆ
ಬಂದು ಭರದಿ ಬೀಳಲಾ ಬೇಟೆಗಾರ
ಹಗ್ಗವ ಸಡಲಿಸೆ ಸಾರಮೇಯಗಳ-
ವಡರಲಂಕದ ರೀತಿ ಬಿಡಿಸಿಕೊಳುತ್ತ

ಹೊಂಗಿ ಮನೋವೇಗದಿಂ ತರುಮಿಕೊಳು-
ತಲ್ಲಿನ ಮೃಗಗಳಿಗರಚುತ್ತ ಹೊಡೆಯೆ
ನಾಯ್ಗಳ ಝುಂಕಿಸಿ ಕೋಲ್ಗಳ ತಪ್ಪಿ
ಚಕ್ಕನೆ ಜೊಮ್ಮಯನ ಶರಕೆ ಸಿಕ್ಕಿ
ಸಾಯುತ್ತ ಶಾಪಮೋಕ್ಷಗಳನು ಪಡೆದು
ತಾವಲ್ಲಿ ಗಂಧರ್ವರಾಗುತ ನಿಂತು

ತೆಲುಗು ಜೊಮ್ಮಯ್ಯನ ಪದಗಳಿಗೆರಗಿ
ಸಮ್ಮುದದಿಂದ ಪ್ರಶಂಸೆಮಾಡುತ್ತ-
ಲವನಿಂದ ಮರಣವೊದಗಿರಲು ತಾವು
ಅತುಲಿತಾಗಣ್ಯಪುಣ್ಯಪ್ರಾಪ್ತಿಯೊಂದಿ
ಪ್ರವಿಮಲಕನಕದಿವ್ಯವಿಮಾನಗಳಲಿ
ಶಿವಲೋಕಕವರು ಚೆಚ್ಚರವೈದುತಿರಲು
ಕ್ರೂರವಾಗೆಗರುವ ನಾಯ್ಗಳ ಮರೆಸಿ
ತಾವೆಚ್ಚ ಶರಗಳ ತಪ್ಪಿಸಿಕೊಳುತ
ಜೊಮ್ಮಯ್ಯನಾ ಕೈಯಿಂದಲೆ ತಾವು ಸತ್ತು
ಮೃಗರೂಪಗಳನಲ್ಲಿ ಬಿಡುತಲಿ ಮೊಕ್ಕಿ

ಗಂಧರ್ವರಾಗುತ ಕನಕವಿಮಾನ
ಚಯದಲ್ಲೈದುವುದದಚ್ಚರಿಯಲ್ಲವೇನು?
"ಅದೆ ನಾಯಿಗಳು ಎಯ್ದುದವೆಂಬಷ್ಟರಲ್ಲಿ
ಇದೊ ಹೋಯ್ತು ಹೋದುವಾ ನೆಗೆದು ಹಾರಿದವು
ಎಂದಿಗೂ ತಾವೆಸೆಯುವ ಬಾಣಗಳವು
ತಪ್ಪುವುದೇ? ತಾಕಿ ತಾಗದಾಯ್ತಲ್ಲಿ
ಮೃಗಗಳಿಗೆಂದಿಗು ಮಿಂಚಿ ಹೊಳೆಯುವ
ಗಗನದಿ ಕನಕವಿಮಾನ ಪಂಕ್ತಿಯದು
ಮೇದಿನಿಯಲಿ ಕಾರಣದಿ ಮೃಗರೂಪ
ಧರಿಸಿಹರಿವರಾರೊ ಆತನೆ ಬಲ್ಲ!

ಬೇರೆಯೆ? ಜೊಮ್ಮಯ್ಯನಿಹಲೋಕರುದ್ರ-
ನತುಲಕಾರಣಪುರುಷಾವತಾರನವ"-
ನೆಂದೊಡಬೇಟೆಗಾರರು ವಿಸ್ಮಯದಲಿ
ವಿನುತಿಸಲೀ ರೀತಿ ಬೇಟೆಯಾಡುತಲಿ
ಅಲ್ಲಿನ ಮೃಗಗಳನಂತು ಕೊಲ್ಲುತ್ತ
ನೆಟ್ಟಗೆ ಶಿವಪುರಕೆ ಕಳಿಸುತಿರಲು

ಉರ್ವೀಶನಾದಿಯಾಗೊಂದೊಂದು ದಿವಸ
ಸರ್ವಜನಗಳು ತಾವೈತಂದು ನೋಡೆ
ಹರಭಕ್ತವಿತತಿಯೈತಂದು ನೋಡುತ್ತ
'ಅರಿ'ದೆಂದು ಹೊಗಳೆ ಜೊಮ್ಮಯನೀಕ್ಷಿಸುತ

ಗುರುಧ್ಯಾನವೆಂಬುವ ಬಿಂಡಿವಾಳದಲಿ
ಪ್ರಥಿತಸಂಸಾರ ಪಂಚಾಸ್ಯವನಿರಿದು
ಹರಭಕ್ತದರ್ಶನವೆನುವ ಮುದ್ಗರದಿ
ಉರುಪುರಾಕೃತಕರ್ಮ ದುಪ್ಪಿಯ ಕೊಂದು
ಗುರ್ವಾಜ್ಞೆಯೆನುವ ಕತ್ತಿಯ ಕೊಂತದಿಂದ
ಪೂರ್ವಾಶ್ರಮವೆನುವ ಹುಲಿ ಬೀಳೆ ಹೊಡೆದು
ಸುಜ್ಞಾನವೆನುವ ಕೂರ್ ಸುರಗಿಯ ಹಿಡಿದ-
ಜ್ಞಾನವೆನುವ ವರಾಹವನು ಚೆಂಡಾಡಿ
ಆಯತಿ ಸದ್ಭಕ್ತಿಯೆನುವ ತೋಮರದಿ
ಮಾಯಾಪ್ರಪಂಚದ ಮರೆಯ ಖಂಡಿಸುತ

ವಿನುತ ಶಿವಾಚಾರದ ಕುಠಾರದಿಂದ
ಜಿನಲೋಕಪಥದ ಶಿವಂಗಿಯ ಸೀಳಿ
ವಿಮಲಪ್ರಸಾದದ ಬಿಲ್ಲನು ಹಿಡಿದು
ಭ್ರಮಿತೇಂದ್ರಿಯಗಳೆಂಬ ಸಾರಂಗಕೆಚ್ಚಿ
ಭಾಷಾಪ್ರಣೀತದ ಭಲ್ಲೆಯದಿಂದ-
ಲೀಷಣತ್ರಯವೆಂಬ ಕರಡಿಯನಿರಿದು
ಹರಮಹತ್ವವೆನುವಡ್ಡಾಯುಧದಿಂದ
ಪರವಾದಿಗಳ ಮೃಗೋತ್ಕರವ ಸಂಹರಿಸಿ
ಮೆರೆಯುವ ಆ ಬಲುವೇಂಟೆಗಾರನಿಗೆ
ಈ ಮೃಗಗಳನು ಕೊಲ್ಲುವುದೇನು ಹೆಚ್ಚೆ?

ಅಲ್ಲದೆ ಪರಿಕಿಸೆ ನಡೆಯುವಾಗವನ
ಪದಘಟ್ಟದಲಿ ಸಾವ ಬಹುಜಂತುಗಳಿಗೆ
ಮೋಕ್ಷ ದೊರೆವುದೆನೆ ಜೊಮ್ಮನಿಂ ಸತ್ತ
ಮೃಗಗಳೈದುವುದು ಚೋದ್ಯವೆ ಶಿವಪುರಿಗೆ!"
ಎನುತಲಾ ಬಸವಯ್ಯನರ್ಥಿಯಿಂ ಹೊಗಳೆ
ಘನಕೀರ್ತಿ ಕಲ್ಯಾಣಕಟಕದಲಾಗ
ಚೋದ್ಯತರದಲಿ ಜೊಮ್ಮಯ್ಯಗೆ ಶಿರಸ-
ಮುದ್ಯದ್ಗುಣಾಂಕನಾಗಿರುತಿದ್ದನಾಗ.

ತೆಲುಗು ಜೊಮ್ಮಯ್ಯನ ನಿರ್ಮಲ ಚರಿತೆ-
ಯನ್ನೋದೆ ಭಕ್ತಿಯಿಂದರ್ಥಿಯಿಂ ಕೇಳೆ

ರಾಜ್ಯಾಭಿಷಿಕ್ತನಾಗುತ ರಂಜಿಸುವನು,
ಪೂಜ್ಯವೆನಿಪ ಲಿಂಗಸಾಮ್ರಾಜ್ಯವಹುದು,
ಸಾರಜಂಗಮ ಪಾದ ಸರಸಿಜಯುಗ್ಮ
ಧಾರಾಳ ಮಕರಂದ ಧೌರಶಿರಸ್ಕ
ಶಾರದ ನೀರದಾಹಾರನೀಹಾರ
ತಾರಾಮರಾಹಾರ ಧೌತಯಶಸ್ಕ!
ಅಂಚಿತ ಕರ್ಣರಸಾಯನ ಕಲ್ಪ
ಸಂಚಿತ ಪರಿಪಾಕ ಸತ್ಯವಚಸ್ಕ!
ಮಹನೀಯ ರುದ್ರಾಕ್ಷಮಾಲಿಕಾಭೂತಿ
ವಿಹಿತ ಮಂಡನ ಕಾಂತಿ ವಿಲಸದುರಸ್ಕ!

ಸಂಗಾಖ್ಯ ಸಮಸುಖ ಸದಮಲಪ್ರಾಣ
ಲಿಂಗನಿರಂತರಲೀನ ಮನಸ್ಕ!
ಇದು ಅಸಂಖ್ಯಾತ ಮಾಹೇಶ್ವರದಿವ್ಯ
ಪದಪದ್ಮ ಸೌದಭಭ್ರಮರಾಯಮಾಣ
ಜಂಗಮಲಿಂಗ ಪ್ರಸಾದೋಪ ಭೋಗ
ಸಂಗತ ಸುಖಸುಧಾಶರಧಿನಿಮಗ್ನ
ಸುಕೃತಾತ್ಮ ಪಾಲಕುರಿಕಿ ಸೋಮನಾಥ
ಸುಕವಿಪ್ರಣೀತವಾಗಧಿಕ ಶೋಭಿಸುವ
ಚರಲಿಂಗ ಘನಕರಸ್ಥಲಿ ವಿಶ್ವನಾಥ
ವರಕೃಪಾಂಚಿತ ಕವಿತ್ವಸ್ಫೂರ್ತಿಯಿಂದ

ಬರೆದ ಬಸವ ಪುರಾಣದ ಕಥೆಯಲ್ಲಿ
ಅನುಪಮದಲಿ ಪಂಚಮಾಶ್ವಾಸವಾಯ್ತು.

# ಷಷ್ಠಾಶ್ವಾಸ

## ಏಕಾಂತ ರಾಮಯ್ಯನ ಕಥೆ

ಶ್ರೀಮನ್ಮಹಾಭಕ್ತ ಚಿರತರವರದ-
ಯಾಮೃತಪೂರವಿಹಾರ ಸಂಗಾಖ್ಯ
ಮತ್ತೆಯೇಕಾಂತ ರಾಮಯ್ಯನೆಂಬೊಬ್ಬ
ಪರಿಪೂರ್ಣಭಕ್ತನು ಕರಕಂಠಮೂರ್ತಿ
ಶಮದಮ ಸ್ಫುರಣಾನುಷಕ್ತನು ಜೈನ
ಸಮಯಕೋಲಾಹಲನಮಿತಪ್ರತಾಪಿ-
ಯತುಲಿತ ಶಿವಸಮಯ ಪ್ರತಿಪಾಲ-
ನತಿಶಯವೀರಭದ್ರಾವತಾರನೆನೆ
ನಿಸ್ಪೃಹೇಂದ್ರಿಯಗುಣಾನ್ವಿತ ಚೇತಸನು
ಅಸ್ಪೃಶ್ಯ ಭವಿಜನನಪಗತಭಯನು

ಲಿಂಗಸಮ್ಯಜ್ಞಾನಿ ಲಿಂಗಾವಧಾನಿ
ಲಿಂಗಗಂಭೀರನಭಂಗಿತಕೀರ್ತಿ-
ಯೇಕಾಂತಭಕ್ತಿಸುಶ್ಲೋಕನು ಮರ್ತ್ಯ
ಲೋಕಪಾವನನು ತ್ರಿಲೋಕದಿ ವಂದ್ಯ
ಧೀರಮಹೋದಾರ ಶೂರಗಂಭೀರ
ಸಾರಗುಣಸ್ತೋಮಧೌರೇಯನೆನಲು
ಮೆರೆದು ನಿತ್ಯಕ್ರಿಯಾನಿತ್ಯಪ್ರಯುಕ್ತ-
ದಿಂ ಶಿವಾರ್ಚನೆಯಂತ್ಯದಲ್ಲರ್ಥಿಯಿಂದ
ಪ್ರಮಥಲೋಕಕ್ಕೆ ಉದ್ಯಮಶೀಲನೆರಗಿ
ವಿಮಲಾತ್ಮವೀರಕ ವೀರಭದ್ರಾದಿ

ಗನನಿಕಾಯಗಳಿಗೆ ನಮಿಸುತ್ತಲವರ
ಗುಣಕೀರ್ತನೆಯಗೈದು ಸ್ವಯಮೇಚ್ಛೆಯಿಂದ
ಶಿವಭಕ್ತಿತತ್ವಾನುಭವಸದೇಕಾಂತ-
ವಧಿಕಸುಖಸುಧಾ ಶರಧಿಯಲೋಲಾಡಿ

ಎಂದಿನಂತಲ್ಲಿ ಸಂತಸದಿನ್ನೈತಂದು
ಮೂಹೊತ್ತಲೀ ಮಾರ್ಗದಲಿ ಚರಿಸುತಿರೆ
ಬಸವನ ಭಕ್ತಿ ಸಂಪತ್ಸಮುದ್ರವದು
ದೆಸೆಧರೆಗಳನೆಲ್ಲ ತುಂಬಿಯಂಕುರಿಸೆ
ಸ್ವಚ್ಚನು ಸಂದರ್ಶನಾರ್ಥದಿ ಬಂದು
ಪ್ರಚ್ಚನ್ನಯುಕ್ತಿಯಿಂ ಬಸವನ ಕಂಡು

ಆ ಕಟಕದಲಿಂದು ಏಕಾಂತರಾಮ–
ನೇಕಾಕಿಯಾಗಿ ತಾ ಚರಿಸುತ್ತಲಿರಲು
ಜೈನನೊಬ್ಬನು ಕೆರಗಳೆಯದೆ ತಾನು
ಚಕ್ಕನೆ ಶಿವನಿವಾಸದೊಳಗೆ ಬರಲು
ಒಳಗಿದ್ದ ರಾಮಯ್ಯ ಕೋಪಿಸಿ ನೋಡಿ
"ಈ ಪಾಪಕಿನ್ನಾವ ಶಿಕ್ಷೆಯಿರುವುದು
ಎಲವೊ ಜೈನನೆ ಇರದುಡುರಾಜಧರನ
ನಗರಾಂತರಕ್ಕೆ ಚಪ್ಪಲಿಗಾಲಿಂ ಬಹೆಯ
ತಪ್ಪಿ ಬಂದೆನು ಎಂದು ಮೃಡನಿಗೆ ಮೈಯ
ಚಾಚುತ ಮೊಕ್ಕು ಕೆರಹುಗಳ ಬಿಟ್ಟು;

ಅಲ್ಲದೆ ಬಳಿಕಿನ್ನು ಅಂತಕೋದ್ದಂಡ
ಪಟುದಂಡಬಾಧೆಗೆ ಪಾಲಾದೆಯಲ್ಲ,
ಇನ್ನೂ ಚಪ್ಪಲಿಯೊಡನಿಂತಿರುತಿರಲು
ಶಂಕಿಸದಲೆ ಕೀಲುಕೀಲಿಗೂ ನಿನ್ನ
ಕಡಿಯುವೆ" ನೆನ್ನಲು ಹಿಂದೆ ಸರಿಯದೆ
"ಸುಮ್ಮನೇತಕ್ಕಿಷ್ಟು ಆಗ್ರಹಿಸುತಿಹೆ?
ಮುಕ್ಕಣ್ಣನ ಗುಡಿಗಳಿಗೆ ದಿಕ್ಕಾಗಿರುವೆ
ನಿಶ್ಚಯ ಭಕ್ತನೆ, ನಿನಗೇಕೆ ಭ್ರಾಂತು?
ಗುಡಿ ಬಸದಿಯು ದೈವವೊಡೆಯನು ಜಿನನು;
ಇದನಲ್ಲವೆಂದರೆ ಪಡೆವೆಯಾ ಮತ್ತೆ

ತಲೆಯ ತರಿದುಕೊಂಡು ಮಲಹರನಿಂದ;
ಆಗ ನೀನೇ ಭಕ್ತನಿವನೆ ದೈವ"ವೆನೆ
"ಇವನ ಕೊಲ್ಲುವುದೇನು ಹಿರಿದು ಭಾವಿಸಲು
ಪ್ರತಿಯ ತೋರದ ಭಕ್ತಿಪಂತವಿದಲ್ಲ
ಶಿರವಿತ್ತು ಪಡೆಯುವೆನು ಜಿನಸಮಯದ
ಶಿರವ ಕಡಿದು ಭಾಷೆ ಸಲಿಸುವೆ"ನೆನುತ

ಶ್ರೀಕಂಠಭಕ್ತಗೆ ಧೈರ್ಯವು ಹೆಚ್ಚ-
ಲೇಕಾಂತರಾಮಯ್ಯನಿಂತು ನುಡಿದನು:
"ಶಿರವಿತ್ತು ಪಡೆಯುವುದಿದೆಂಬೆಯೇನು
ಪರವಾದಿ, ಕೇಳೆಮ್ಮ ಭಕ್ತರ ಮಹಿಮೆ;

ಒಬ್ಬ ಭಕ್ತನು ಜಂಬೂರಮಹಾಕಾಳನೆನ-
ಲಕ್ಕಜದಲಿ ಶಿರವನಭವನಿಗಿತ್ತು
ಎಲ್ಲರರಿಲು ತಾ ನೆಲದಲಿ ಬಿದ್ದ
ತಲೆಯನಟ್ಟೆಗೆ ಸೇರಿಸಲು ಪ್ರಾಣವಡೆದ-
ನಾ ವಾರ್ತೆಯನು ಕೇಳಿ ಕಟಕದಲ್ಲಿರುವ
ಪಟುಮತಿ ಗೋವಿಂದಭಟ್ಟಾರಕನವ
ಶಿವನ ನಿರ್ಮಾಲ್ಯವಿತ್ತಿಹ ಮಸ್ತಕವನು
ಸೇರಿಸಿಕೊಳುವುದು ತಪ್ಪು ತಪ್ಪೆನುತ
ಕರಕಂಠನಿಗೆ ತಲೆತರಿದು ಪೂಜಿಸುತ-
ಲಿರೆ ಮೂರುದಿನಕಾಗ ಮತ್ತೊಂದು ಶಿರವು

ಬೀಳಲು ಮತ್ತೊಬ್ಬ ಭಕ್ತನಿಂತಿದುವೆ
ಕಟ್ಟಪಹಾಸ್ಯದಿಂದಲಿ ಪ್ರತಿಷ್ಠಿಸುತ
ಮೂರುದಿನಗಳಲ್ಲಿ ಮುಕ್ಕಣ್ಣನಿಲ್ಲಿ-
ಯಿಲ್ಲವೊ ಸತ್ತಿರುವನೊ ತಾನೆನುತ್ತ
ಮೊರಟದ ಬಂಕಯ್ಯ ಭರದಲಿ ಶಿರವ
ತರಿಯಲು ಮೊಳೆಯಿತು, ತರಿಯಲು ಮೊಳೆಯೆ
ತರಿದಿದ್ದ ತಲೆಗಳ ತರಿಯದ ಭಕ್ತಿ
ತರಿಯದಂತೆಯೆಗೈದು ತದವಸರದಲಿ
ಪೂಣ್ದಿಹ ಶಿರವನು ಪೂಣದ ಶಿರವು
ಪೂಣಿದ ನಂತರ ಕಳೆದಿಹ ಶಿರವು

ಮೊಳೆಯುವ ಶಿರವನು ಮೊಳೆತಿಹ ಶಿರವು
ಮೊಳೆಯುತ ತನ್ನಲಿ ಹಿಗ್ಗುವ ಶಿರವು
ತರಿದಿಹ ಶಿರವದು ತರಿಯದ ಶಿರವು
ತರಿಯದೆ ತನಗೆ ತಾನೊರಗಿದ ಶಿರವು
ಸರಸರ ಹರನ ಮೇಲಲರುವ ಶಿರವು
ಮೇಲೊಯ್ಯನೊಯ್ಯನೆ ಬೆಳೆಯುವ ಶಿರವು
ಕಂಗಳಾಡಿಪ ಶಿರವಲುಗದ ಶಿರವು
ಸುಮ್ಮನೆ ಶಿವನೆದುರಾಡುವ ಶಿರವು

ಉನ್ನತಿಯಲ್ಲಿ ಕುಳಿತಿರುವ ಶಿರವು
ಕೂಗುವ ಶಿರವಹುದಹುದೆಂಬ ಶಿರವು

ಸಂಭ್ರಮಿಸುವ ಶಿರ ಚಲಿಸುವ ಶಿರವು
ಓಡಿ ಬರುವ ಶಿರ ಬೀಳುವ ಶಿರವು
ಪ್ರೇಮದಿಂದ ಶಿವನ ಸೇರುವ ಶಿರವು
ಸನ್ನೆಗೈಯುವ ಶಿರ ಜರುಗುವ ಶಿರವು
ಅನಲದ ಮೇಗಡೆಯಲರುವ ಶಿರವು
ಅನಲವ ನುಂಗುತಲಲ್ಲಿಹ ಶಿರವು
ಬೊಬ್ಬಿಡುವ ಶಿರವು ಉಬ್ಬುವ ಶಿರವು
ಭೋರೆನೆ ಬಿದ್ದಲ್ಲಿ ಕುಣಿಯುವ ಶಿರವು
ನಾಲಿಗೆಯನು ಸೀಳಿ ನಲಿಯುವ ಶಿರವು
ಶೂಲಿಯನೆಕ್ಕರಿಸುತ್ತಿಹ ಶಿರವು

ಹಾರಿ ಬೀಳುವ ಶಿರ ಮೊರೆಯುವ ಶಿರವು
ಮತ್ತೆ ಸೇರುತ ಮತ್ತೆ ಬೀಳುವ ಶಿರವು
ಪೊಗಳುವ ಶಿರವು ಹಲುಗಿರಿವ ಶಿರವು
ತೆಗಳುವ ಶಿರವದು ಹರಸುವ ಶಿರವು
ಶರಣೆನುವ ಶಿರವು ಜಯವೇಳ್ವ ಶಿರವು
ಸರಸವಾಡುವ ಶಿರವೋದುವ ಶಿರವು
ಮಲೆಯುವ ಶಿರವು ಮಾರ್ಕೊಳ್ಳವು ಶಿರವು
ಹೋಗುತೀಶ್ವರನೊಡತಾಕುವ ಶಿರವು
ಭಾಪು ಎನ್ನುವ ಶಿರ ಬಾಡುವ ಶಿರವು
'ಹಂದೆ' ಯಂದು ಶಿವನ ಝುಂಕಿಪ ಶಿರವು

ಸತ್ಯದಿಂದಿಂತೀಶ್ವರನನು ಪೂಜಿಸುವ
ಕುಪ್ಪೆಯಾಗುತ ತಲೆ ಕುಡಿಗಳು ತುಂಬೆ
ಮಾರಾರಿ ವಿಸ್ಮಯಮಾನಸನಾಗಿ
'ಓಹೋಹೋ ಬಂಕ, ಏದುಬ್ಬಸವೆನಗೆ
ಸೋತೆನೆನ್ನಯ ಮೇಲೆ ಯುದ್ಧಕೆ ಬರಲು
ಸರಿಯೆ? ನಿನ್ನಯ ವೀರಭಕ್ತಿಯೆದುರಿಸ-
ಲೆನ್ನ ವಶವೆ' ಯೆಂದು ತದ್ದೇವದೇವ
ಬಂಕತಂದೆಯ ಶ್ರೀಹಸ್ತಗಳನು ಹಿಡಿದು
ಅನುರಾಗದಿಂದಲಿ ತಲೆಗಳನೆಲ್ಲ
ತನ್ನಯ ಲಿಂಗಮೂತಿಯಲಿ ಧರಿಸಿದ;

ಶಂಕಿಸುತ್ತಲಿ ನರರೆಲ್ಲ ಸಂಸ್ತುತಿಸೆ
ಬಂಕಯ್ಯ ಶಿವನ ಮಾರಂಕವ ಗೆಲಿದ-
ನಿಂತಹ ಭಕ್ತರನೇಕರಿರುವರು
ಕುಟಿಲಾತ್ಮ, ಕೇಳಲಶಕ್ಯವೈ ನಿನಗೆ
ತಿಳಿಯೆಯಾ ಮುನ್ನ ನಿಮ್ಮೇಳು ರಕ್ಷಕರ
ಧ್ವಂಸಗೈದೆಮ್ಮಯ ಭಕ್ತರ ಮಹಿಮೆ:
ತಿರುನಾವಲೂರೆಂಬೂರಲಿ ತಿರುನಾವ-
ಕರಿಶನೆನ್ನುವ ಜೈನಗುರುವು ತಾನೊಬ್ಬ
ಜಿನಸಮಯಾಚಾರ್ಯನೆನಿಸಿದನೊಮ್ಮೆ
ಶೂಲೆಯಿಂದಲಿ ಮುಲುಗುತ್ತ ನೆಲದಲಿ

ಬಿದ್ದು ಹೊರಳುತಿರೆ ಪರಿತಾಪದಿಂದ-
ಲಲ್ಲಿಗವನ ಸೋದರಿಯು ಬಂದು ನೋಡಿ
'ಈ ಮಂತ್ರ ತಂತ್ರದ ಪಿಸುಗುಟ್ಟುವಿಕೆಗೆ
ಓ ಮಲದೇಹಿ ನೋವುಡುಗದು ನಿನಗೆ
ಬದುಕುವುಪಾಯವ ಭಕ್ತಸಮ್ಮತದಿ
ಮದನಸಂಹರ ದಿವ್ಯಮಂತ್ರವನರಿಯೆ
ವೇಗದಿ ನಿನಗೆ ನಿರೋಗ ತಾನಹುದು
ರಾಗದಂದೀಪ್ಸಿತಾರ್ಥಗಳುಂಟಾಗುವುವು'-
ಯೆನ್ನಲು 'ಶಿವಭಕ್ತನಾಗುವೆನಿನ್ನು
ಅನುಮಾನನವೊಂದಿಷ್ಟು ಪಡೆಯದಿರೆ'ನುತ

ಶಪಥವ ಮಾಡಲು ಸತಿಯು ತಾನಾಗ
ತ್ರಿಪುರಾರಿ ಭಕ್ತರ ಭಕ್ತಿಯಿಂ ನೆನೆಯು-
ತನುಪಮದಿವ್ಯಪಂಚಾಕ್ಷರಿಮಂತ್ರ-
ದಲಿ ಭಸಿತವ ಮಂತ್ರಿಸಿ ಕಟಿಗೆ ಬಳಿಯೆ
ಶೂಲೆಯುದುಡುಗಲು ಚೋದ್ಯವನೊಂದಿ
ಆ ಸತಿಗಾತನು ಸಾಷ್ಟಾಂಗವೆರಗಿ
'ಸತಿ ನಿನ್ನ ಕತದಿಂದ ಬದುಕಿದೆನಿನ್ನು
ನಿಷ್ಠೆಯಿಂ ಭಕ್ತನಾನಾಗುವೆ'ನೆನುತ
ಶ್ರೀಪತಿನಾಥನಾಜ್ಞಾಪನೆಗೈಯು-
ತಾ ಪಗಲೂರಿಗೆ ಹೋಗಿ ತಾನಲ್ಲಿ

ಪಂಕದಲ್ಲಿರುವ ತಾವರೆಯ ರೀತಿಯಲಿ
ಹೊಲಗೇರಿಯಲ್ಲಿಹ ನಿರ್ಮಲಚರಿತ

ಗುರುಮೂರ್ತಿಯನು ಕಂಡು ತಿರುನಾವಕರಿಶ
ಬಂದು ಸಾಷ್ಟಾಂಗದಿ ಮೊಕ್ಕಿ ತಾ ನಿಲಲು
ಮುದದಿಂದ ತದ್ಗುರುಮೂರ್ತಿಯಾತನನು
ಶಿವಭಕ್ತಿ ಪರವಾಗಿ ಮಾಡಲು ಬಗೆದು
ತನ್ನ ಕೃಪಾವಲೋಕನವನುಗೈದು
ಘನಪುರಾಕೃತಕರ್ಮಕಲ್ಮಷ ಕಳೆದು
ಭಸಿತಸದೈಶ್ವರ್ಯಪಟ್ಟವ ಕಟ್ಟಿ
ನೊಸಲ ದುರ್ಲೇಖವನೆಲ್ಲ ತಾನಳಿಸಿ

ಶಿವತೀರ್ಥಕಲಶಾಭಿಷೇಕವಗೈದು
ಸವಿಶೇಷಲಿಂಗಸಂಸ್ಕಾರವಗೈದು
ಸಂಚಿತಶಿವಗಸ್ತಸಂಗತನೆನಿಸಿ
ಪಂಚಭೂತವಿಕಾರ ಪಥವನು ಹರಿದು
ಅಂಗಲಿಂಗನಿಯುಕ್ತಿಮಂಗಳಕ್ರಿಯೆಗ-
ಳೊಂದಿಗೆ ಸತ್ಯಪ್ರಸಾದಾಂಗನೆನಿಸಿ
ವಿಗತ ವಾಯುಪ್ರಾಣವಿಧಿಗಳಾಚರಿಸಿ
ನೆಗಳೆ ಲಿಂಗಪ್ರಾಣನಿಷ್ಠನಗೈದು
ಸಿದ್ಧಮಂತ್ರದಲಿ ಪ್ರಸಿದ್ಧವ ತೋರಿ
ಶುದ್ಧಾತ್ಮದಲ್ಲಿ ಚಿನ್ಮಯಜ್ಯೋತಿಯಿರಿಸಿ

ವಿನುತ ಜೀವನ್ಮುಕ್ತಿಕಾರಣವಾದ
ಅನುಪಮ ಶಿವರಹಸ್ಯಾರ್ಥವನರುಹಿ
ತಮ್ಮಯ ಕರುಣಾಪ್ರಸಾದವನಿತ್ತು
ವಿಮಲಸದ್ಭಕ್ತಿಸಂವೇತ್ತನಗೈದು
ತಿರುನಾವಕರಿಶಿ ತೇಜಿಷ್ಣುಲೀಲೆಯಲಿ
ಪರಮಶಿವಾಚಾರ ಪಾರವಶ್ಯದಲಿ
ಭವಭಕ್ತವಿತತಿಗೆ ಸಾಷ್ಟಾಂಗವೆರಗಿ
ಶಿವಮಹೋತ್ಸಗಳ ಮಾಡೆ ತೊಡಗಿಸಿ
ವಾಹನವಸ್ತ್ರಸುವರ್ಣಾಭರಣ ಸ-
ರ್ಮರ್ಪಣೆಗಳನು ಮುದದಿಂದ ಸಲಿಸಿ

ಭಕ್ತಿಯಿಂ ತನುಮನೋವಾಕ್ಕಾಯಕರ್ಮ-
ಗಳ ಪ್ರಾಣದೇಹಾರ್ಥಗಳ ನಿವೇದಿಸುತ
ಭೂತಿರುದ್ರಾಕ್ಷವಿಭೂಷಣ ಪರಮ
ಪೂತಪ್ರತಿಷ್ಠಾಗತ ವರ್ತಿಸುತಿರ-

'ಲಸ್ಯದರ್ಶನಮಾರ್ಗನಿವನಾದ' ನೆನುತ-
ಲನ್ಯಾಯದಲಿ ಜೈನರೆಲ್ಲರಾತನನು
ಆನೆಗೆ ನೂಕಲು ಕರಿ ಮುಟ್ಟದಿತ್ತು.
ಕರಿಚರ್ಮಧರಬಂಟನೇನ ಮಾಡುವುದು?
ವಿಷವನಿಡೆ ಕುಡಿದು ವಿಜಯದಿ ನಿಲಲು
ವಿಷಸಂಹರನ ಬಂಟಗೇನಗೈಯುವುದು?

ಬಹ್ವಗ್ನಿಯೊಳಗಿಕ್ಕಲಾರಿತು ವಹ್ನಿ
ಜಿಹ್ವಾಂತಕನ ಬಂಟನನ್ನು ಸುಡುವುದೆ?
ಜಲದಲಿ ಮುಳುಗಿಸೆ ಸಾಲದು ಮುಳುಗೆ
ಜಲಮೌಳಿಬಂಟನ ಜಲಮುಳುಗಿಪುದೆ?
ಕೊಲ್ಲಲಾವುದೆ ಕ್ರಿಯೆಯಾಗದೆ ತಮ್ಮ-
ನೀತ ಕೊಲ್ಲುವನೆಂದು ಶರಣಾಗಿ ಬರಲು
ಕಂಟಕೆಹ ಜೈನಕರ್ಮರ ಕಾಯ್ದು
ಮೊದಲ ಲಾಂಛನಗಳ ತೆಗಿಯಿಸವರಿಗೆ
ರುದ್ರಾಕ್ಷಭಸಿತಾದಿ ರೂಪಿತ ಪಂಚ
ಮುದ್ರಾಧರರ ಮಾಡಿ ತಾ ರೌದ್ರದಿಂದ

ಜೈನಪ್ರತಿಮೆಗಳ ತೆಗೆದೆಸೆಯುತ್ತ
ಬಸದಿಗಳನು ಕುಟ್ಟಿ ಹುಡಿಯಗೈಯುತ್ತ
ಜೈನಸಮಯಕೋಲಾಹಲನೆನಿಸುತ್ತ
ತಿರುನಾವಕರಿಶಿ ದೇವನು ಮೆರೆದಿದ್ದ.

**ಇರುತ್ತಾಂಡಿಯ ಕಥೆ**

ಕೇಳೆಲೊ, ತಿರುವಾಲಲೂರಲ್ಲಿಯೆ ಮತ್ತೆ
ಮಾರಾರಿಭಕ್ತನು ತಾನಿರುತ್ತಾಂಡಿ-
ಯೆನ್ನುವೊಬ್ಬಯ್ಯನು ಜಾತ್ಯಂಧನಾಗಿ
ಮನಸಿಜಹರನಿಗೆ ಮಜ್ಜನಾರ್ಥದಲಿ
ಗುಡಿಯ ಮುಂದೊಂದು ಕೊಳವನು ತೋಡಿಸಲು
ಕಡಗಿ ಗುದ್ದಲಿಹೆಡಗೆಗಳ ತಾ ತಂದು

ತೋಡುತ ಕಂಬಗಳನು ದರಿ ಗುಡಿಗೆ
ನೆಟ್ಟೊಂದು ಹಗ್ಗವ ಸಂಧಿಸಿ ಹಿಡಿದು
ಹಗ್ಗದ ಹಿಂದಕೆಯೆಡೆತಾಕಿ ಸುತ್ತಿ
ರಾಶಿಯ ಹಾಕುತ್ತ ಕಾಲವ ಕಳೆಯೆ

ಜಿನಸಮುಯಿಗಳೆಲ್ಲವಿದನು ಕಡಿಸಲು
ಯೋಚಿಸಿ ನಾನಾವಿಘ್ನಗಳನು ಮಾಡೆ
ಹೆದರದೆಂದಿನ ರೀತಿಯಲ್ಲಿ ತೋಡುತಿರೆ
ಹಗ್ಗವ ಕಡಿದು ಕಂಬಗಳನು ಕೀಳೆ
ಕರಕಂಠನಿಂದಾಗ [illegible]
ಭರದಿಂದ [illegible]

ಜಿನಸಮುಯಿಗ[illegible]
[illegible]

## ಪಿಳ್ಳನೈನಾರನ ಕಥೆ

ಮತ್ತೆ ಶ್ರೀಕಾಳಿಯೆನ್ನುವ ಪುರದಲ್ಲಿ
ಶಿವಬ್ರಾಹ್ಮಣನಿಗೊಬ್ಬನುದಯಿಸುತಲ್ಲಿ-
ಯಲರಿ ಕುಮಾರನ ಅಂಶದಿಂದಂದು
ನಲಿದೊಪ್ಪಲಾ ಪಿಳ್ಳನಯನಾರೆನುತ್ತ
ಜನಕ ಹೆಗಲಲಿಕೂಡಿಸಿಕೊಂಡೊಂದು ದಿನ
ಬಂದು ಸರೋವರ ತೀರದಲಿಳಿಸಿ
ತಾನು ಘಮರ್ಷಣಸ್ನಾನಗೈಯುತಿರ-
ಲಾ ನಭೋವೀಥಿಯಿಂ ಗೌರಿಯು ಶಿವನು

ಮಾನಿತ ದಿವ್ಯ ವಿಮಾನನಿರೂಢ
ಯಾನಿಗಳಾಗಿ ಬರುತಿರ 'ಲೀ ಬಾಲ-
ನೆಮ್ಮ ಕುಮಾರನಂತಿಹ'ನೆಂದು ಗಿರಿಜೆ
ನೇತ್ರಯುಗವು ನೋಡೆ ಸ್ತನಯುಗ ತೊರೆಯ
ಲವನೀತಳಕ್ಕಿಳಿಯುತ ಬಾಲಕನನು
ಅಪ್ಪುತ ಕೂದಲಿನಲಿ ಕೈಯಾಡಿಸುತ
ದೇವಿಯವನಿಗೆ ಶಾಂಭವದೀಕ್ಷೆಯಿತ್ತು
ಭಾವಿಸಿ ಶಿವಭಕ್ತಪರನನ್ನಾಗಿಸುತ
ಹಸಿವಾರೆ ಮೊಲೆವಾಲ ಕುಡಿಸುತ ಹೊನ್ನ
ಕುಡಿಕೆಯೊಳಗೆ ಮತ್ತೆ ಕರೆದವಗಿತ್ತು

ಗೌರಿ ತಾನೀಶ್ವರನೆಡೆ ಬಂದಳಲ್ಲಿ.
ಮುಳುಗಿ ನೀರಲಿ ಧರಣೀಸರೋತ್ತಮನು
ಭೋರೆಂದೇಳುತಲಿ ವಿಸ್ಫಾರದಿವ್ಯಾಂಗ
ಚಾರುದೀಧಿತಿಯ ಸತ್ಪುತ್ರಕಂಡು

'ಓಹೊ, ಮೊಲೆಯನೂಡಿದವರಾರು ಇಲ್ಲಿ
ಎಲ್ಲಿಯದಿದು ಹೊನ್ನ ಬಟ್ಟಲು, ಹಾಲು
ಯಾರು ಬಂದರು ಇಲ್ಲಿಗೆಲ್ಲಿಗೆ ಹೋದ-
ರಾವೆಡೆಯಿಹರವರೀಗ ಹೇಳೆ'ನುತ
ಜನ್ನಿವಾರದ ಕೊಂಡು ಹೊಡೆಯುತ್ತಲಿರಲು
ಸಿಹಿಯಾದ ನಗುವದು ಮೆತ್ತನೆಯಳುವು

ಕಣ್ಣಲಿ ಸುರಿಯುವ ಸಣ್ಣಬಾಷ್ಪಗಳು
ನೆಲಕೆ ಬೀಳುತ್ತಿರೆ ಬಟ್ಟಲ ಹಾಲು
ಬೀಳದಂತೆಯೆ ಕೈಯಿಂ ಗಿಣ್ಣಿಲ ಮುಚ್ಚಿ
'ಅಣ್ಣಣ್ಣ, ನನ್ನೇಕೆ ಹೊಡೆಯುವೆ ಕೇಳು:
ಆಗಸದಲಿ ಹೋಹ ದೇವದೇವೇಶ-
ನೊಡನಿದ್ದುಮಾದೇವಿಯೈತಂದಳಿಲ್ಲಿ;
ಉರುಜಟಾಜೂಟಭಾಸ್ವರನೆಡೆಯಿಂದ
ಚಿರಮಣಿಮಕುಟ ಭಾಸ್ವರೆ ಬಂದಳಿಲ್ಲಿ;
ಚಂದ್ರರೇಖಾವತಂಸನ ನಿಲ್ಲಿಸುತ್ತ
ಸುಗುಣಾವತಂಸೆಯು ಬಂದಳಾ ಸುದತಿ;

ಮುಕ್ಕಣ್ಣನಾ ಸಮ್ಮುಖದೆಡೆಯಿಂದವಳು
ಇಕ್ಕಣ್ಣಿನೊಡಗೂಡಿ ಸತಿ ಬಂದಳಿಲ್ಲಿ;
ಕರವೊಪ್ಪಿ ನೀಲಕಂಧರನೆಡೆಯಿಂದ
ಸರಸರ ಕಂಬುಕಂಧರೆ ಬಂದಳಿಲ್ಲಿ;
ಘನಚಂದನಾಂಕನ ವಕ್ಷವ ಬಿಟ್ಟು
ಸ್ತನಚಂದನಾಂಕ ವಕ್ಷೆಯು ಬಂದಳಿಲ್ಲಿ;
ಉರಗೇಂದ್ರಹರನವೂರುಗಳನು ಬಿಟ್ಟು
ವರರತ್ನಹಾರಸುಂದರಿ ಬಂದಳಿಲ್ಲಿ;
ಆ ಮಹೋಕ್ಷಗಮನನರ್ಧಾಂಕದಿಂದ
ವರಹಂಸಗಮನೆ ಕಾಮಿನಿ ಬಂದಳಿಲ್ಲಿ;

ಮೂಲೋಕಗಳ ಭಾನುವಿನ ಮುಂದಿನಿಂದ
ಮೂಲೋಕಗಳ ತಾಯಿ ತಾ ಬಂದಳಿಲ್ಲಿ
ಮೊಲೆಯಿತ್ತು ಹಸಿವಾರೆ ಮನ್ನಿಸಿ ಮತ್ತೆ
ಸ್ವಲ್ಪ ಹಾಲನು ಹೊನ್ನಗಿಂಡಿಯಲ್ಲದುಮಿ
ನಿಲ್ಲಿಸಿ ಬಂದ ನೀಲಗಳನ ಬಳಿಗೆ
ಯುವತಿ ಹೋದಳು ನೋಡು, ಅಲ್ಲಿಗೆ'ಯೆನಲು

ಭೂಸುರನದ್ಭುತಾತ್ಮದಿ ಕೂಡುತಾಯು-
ಮಾಮಹೇಶ್ವರರಿಗೆ ಮೈಚಾಚಿ ಮೊಕ್ಕಿ
ಮಗನ ಹೆಗಲಲಿ ಕೂಡಿಸಿಕೊಂಡು ಬಂದು
ಮಡದಿಯೊಂದಿಗೆ ತಾ ಸಮ್ಮದದಿಂದಲಿರಲು

ಪಾರ್ವತೀಸ್ತನಪಯಃಪಾನ ಪ್ರಶಕ್ತಿ-
ಯಿಂ ಸರ್ವಜ್ಞತ್ವ ವಚಃಸಿದ್ಧಿಯಾಗೆ
ಬೆಳಗಾಗ ಗುಡಿಗೈದು ನಾನಾವಿಧದಲಿ
ಭಾವಿಸಿ ಪಾರ್ವತಿಯನ್ನು ಪ್ರಸ್ತುತಿಸ-
ಲಂಬಿಕೆ ಸ್ವರ್ಣತಾಳಗಳನು ನೀಡೆ
ತುಂಬುರುನಾರನಾದಾದಿಗಳನು ಮೀರಿ
ಹಾಡಲತ್ಯರ್ಥಿಯಿಂ ಶ್ರೀಕಾಳಿನಾಥ
ವಿರಚಿತವೊಪ್ಪುವ ಬೆಳ್ಳಿಕೊಡೆಯನು
ಅಕ್ಷಯ ನಿಧಿಯ ಮುತ್ತಿನ ಹಂದರವನು
ಕ್ಷಿತಿಯಲಪ್ರತಿಮದ ಹೇಮಾಸನವನು

ಖಂಡೇದುಧರನಾಗ ಕರುಣಿಸೆ ಕನಕ
ದಂಡಿಗೆಯನ್ನೇರಿ ವೈಭವದಿಂದ
ಭಾತಿಯಿಂ ಶಂಖವು ಪರಮತಧೂಮ
ಕೇತುವೆನ್ನುತಲಿ ಪ್ರಖ್ಯಾತದಿಂ ಮೊಳಗ-
ಲುರುತರಲೀಲ ಕುಲೋತ್ತುಂಗಚೋಳ
ಧರಣೀಶನ ಶಿವಭಕ್ತಿಪರನಗೈದು
ಅಲರುತ ಸುಗತಸಹಸ್ರದ್ವಯ ಜನ-
ರೋಲಗದಲಿ ಬೌದ್ಧಗುರುವನೋಡಿಸುತ
ಮತ್ತೆ ತಾನೆರಡು ಸಹಸ್ರ ಬೌದ್ಧರನು
ಪಾಲಿಸಿ ಶಿವಭಕ್ತಪರರನು ಮಾಡಿ

ತಿರುಮರಕ್ಕಡವೆಂಬ ಪುರದಿ ಬ್ರಹ್ಮೇಶ-
ನಚಿರಕವಾಟಗಳನು ತಾನು ತೆಗೆಸಿ
ತಿರುನಾವಲೂರೆಂಬ ಹೆಸರಿನ ಪುರಿಗೆ
ತಾ ಬಂದು ಜೈನರನ್ನೆಲ್ಲರ ಜಯಿಸಿ
ಕಪುಸರ್ಪದಷ್ಟನಾಗುತ ಮಡಿದಿದ್ದ
ಶೂದ್ರನ ಪ್ರಾಣವ ಬೇಗನೆ ಪಡೆದು
ಮಧುರೇಶನಾ ದೇವಿ ಸಮ್ಮತಗೈದು
ಮಧುರೆಗೈತರುತಿರೆ ಮನುಜೇಶ ಕಡೆಗೆ

[illegible]
[illegible]

ಆತತವೇದ ಬಾಹ್ಯಸಮಯ ಧೂಮ
ಕೇತುವು ತಾ ಕೊಬ್ಬುತೆಯ್ತಂದಿರುವನು
[illegible]ದ ಹೊಡೆದಟ್ಟು ನರನಾಥ”ಯೆನಲು
[illegible]ತ್ರೆ ಆ ಚೋಳನರಗತಿಗವನು
[illegible]ಡಿಸುವುದುಚಿತ್ರಪಲ್ಲವನ
ಅವರನೋಡಿಸಿರಾವುದೋ ವಾದದಿಂದ”
ಎನಲು ಜೈನರು ಹದಿನೆಂಟು ಸಹಸ್ರ
ನಡೆತಂದು ತರ್ಕಿಸಲಾರದೆ ಸೋತು
ಅರ್ಧರಾತ್ರಿಯಲಾತನಿರುತಿದ್ದ ಮನೆಗೆ
ಸ್ಪರ್ಧೆಯಿಂ ಕಿಚ್ಚಿಡೆ ಜ್ವಲನನು ಹೆದರಿ

ಎದುರು ನಿಲ್ಲಲು “ಏನೆಲೆವೆಲವೊ ನೀನು
ಸದನವ ಸುಡಲೆಂದು ನಡೆತಂದು ತೀವ್ರ
ವಿಪ್ಲವನಾಗುತ ವೀರಭದ್ರೇಶ
ಜಿಹ್ವೆಗಳನ್ನೂ ಈರೇಳು ಕೈಗಳನು
ಕೊಯ್ದಿರಲಿಹುದೊಂದೆ ನಿನ್ನಯ ಮೂಗು
ಕೊಯ್ದು ಹಾಕಿಸಿಕೊಳ್ಳೆ ಮರುಗಿದೆ ನೀನು
ಜೈನರಗೀನರ ಶಕ್ತಿ ನೋಡುವೆನು
ತಪ್ಪೇನು? ಈ ಭೂನಾಥನ ದೇಹದಲ್ಲಿ
ಸೇರುತಲುಷ್ಣಜ್ವರ ಸ್ವರೂಪದಲಿ
ತಾಪವನೊದವಿಸು ದಹನಕಾದಹೆನು”

ಎಂದೆನ್ನಲಾತನ ದೇಹವ ಸೇರಿ
ಘನತರ ಜ್ವರರೂಪದಿಂದಲಿ ಸುಡಲು
ಮಂಗಯಕ್ಕರಸಿಯೆಂಬಾ ಮಂಡಲೇಶ್ವ-
ರನ ಸತಿ ತನಪತಿಯನುಮತದಿಂದ
ತಾನಾಗ ಕರೆಸಿಯಾ ಜ್ಞಾನಸಂಬಂಧಿ-
ಗಾಸತಿ ಸಾಷ್ಟಾಂಗಳಾಗಿ ಬಿನ್ನವಿಸೆ
“ಯಾರಾದರಿರುವರೆ ಈ ರಾಜನೊಡಲ
ಈ ರುಜೆಯನು ವಾಸಿಮಾಡಬಲ್ಲವರು
ಬಲಗಡೆಯೆಮ್ಮದು, ವಾಮಭಾಗವನು
ಬಲಹೀನರಿರ, ನಿಮ್ಮ ಪಾಲ ಮಂತ್ರಿಸಿರಿ”

ಎನುತ ವಿಭೂತಿಯಿ ಮಂತ್ರಿಸಿ ಚೆಲ್ಲೆ
ಸಂಚಿತದಲಿ ಮೈಯಿನರೆ ವಾಸಿಯಾಗಿ
ವಾಮಭಾಗದಿ ಜ್ವರವಿಮ್ಮಡಿಸಿರಲು
ಮುನಿಗಳು ಮಂತ್ರಿಸಲಗ್ಗಳವೆನಿಸೆ
"ಎನ್ನ ರೋಗವನುಡುಗಿಸು ರುದ್ರಮೂರ್ತಿ,
ರುಜೆಯನು ಮಾಣಿಸೈ ಕಾರುಣ್ಯಪಾತ್ರ
ಈ ವ್ಯಾಧಿಯಾರಿಸೈ ನಲ್ಲನೈನಾರ
ಈ ತಾಗವಡಗಿಸೈ ಸ್ತುತ್ಯಚರಿತ್ರ
ಈ ಜಡ್ಡನಡಗಿಸು ಯೋಗೀಂದ್ರವಂದ್ಯ
ಈ ಗಹನಜ್ವರವಿಳಿಸಯ್ಯ ತಂದೆ"

ಎಂಬ ಬಗೆಬಗೆ ಮಹಾರವವುಲಿಯೆ
ಜನಪತಿ ಪ್ರಾರ್ಥಿಸೆ ಜ್ಞಾನಸಂಬಂಧಿ
ಸುಮ್ಮನೆ ಭಸಿತವನಾಗಲ್ಲಿ ಚೆಲ್ಲಿ
ಮೂಬಾರಿ ಇಳಿತೆಗೆದವನನು ಮುಟ್ಟೆ
ಹೊರಟು ಪಾಂಡ್ಯೇಶನ ಒಪ್ಪವಳಿಯಲು
ಹೊರಟು ಹೋಗಲು ಬೆನ್ನ ಹೊರಡ ಮಾಣಿಪುದು
ಭಾವಿಸೆ ಸುಳ್ಳಾಯ್ತು ಸಾಯದಲಿಹುದೆ
ಎನ್ನ ಬೆನ್ನದು ಗೂನುಯೆನ್ನುವ ಮಾತು
ಗೂನಪಾಂಡನುಯೆಂಬ ಹೀನತ್ವವುಡುಗಿ-
ಯೊಪ್ಪಿದನಾಗ ಸುಂದರ ಪಾಂಡ್ಯನೆನಿಸಿ

ದ್ವಿಗುಣಿಸಿಯೆಡದಲ್ಲಿ ತುಂಬಿದ್ದ ಜ್ವರವು
ಚಟ್ಟನೆಯುಡುಗಲು ಆ ಸತಿಯಾಗ
ಧರೆಗೆ ಸಮಸ್ತಾಂಗ ತಾಗಲು ಮೊಕ್ಕಿ-
ಯವಸರೋಚಿತಸತ್ಕ್ರಿಯಾದಿಯಗೈದು
"ಇನ್ನುಗೈಯುವುದೇನು ಆರಿಸಿ"ರೆನಲು
ಶಂಕರಮೂರ್ತಿಗೆಂದರು ಜೈನರಿಂತು:
"ಜಿನಮಂತ್ರಲೇಖೆಯು ಶಿವಮಂತ್ರಲೇಖೆ-
ಯನ್ನಗ್ನಿಯಲಿ ಹಾಕಲಾವುದು ಸುಡದೊ
ಅವರದೆ ಗೆಲವೆ"ಂದು ತಾವು ನುಡಿಯಲು
ಧಾರುಣೀಶ್ವರನನು ನೋಡುತಲೆಂದ:

"ಹೊಸ್ನೊಡಸೊಂದು ನಾಯಿಯ ಹಲ್ಲ ತೂಗೆ
ಚಿನ್ನವು ಮೂಳೆಯು ಸರಿಯಹುದೇನು?

ಹಾಲಿನಡ್ಡಗೆಯು ತೂಕದ ಕಲ್ಲ ಹೊರಲು
ಹಾಲುಕಲ್ಲುಗಳೆರಡೂ ಒಂದೆಯಹವೆ?
ಮಲಯಜಗಳು ಬರಿಮರಗಳ ತೂಗೆ
ಮಲಯಜಗಳು ಬರಿಮರಗಳು ಸಮವೆ?
ಶಿವಮಂತ್ರಲೇಖೆಯು ಜಿನಮಂತ್ರಲೇಖೆ-
ಯನು ಜೊತೆ ಕೂಡಿಸೆ ತತ್ತುಲ್ಯವಹುದೆ?"
ಎನ್ನುತ 'ಶಿವ'ನೆಂಬುವಕ್ಷರದ್ವಯವ
ಪಂಚವರ್ಷಾಢ್ಯನು ಪತ್ರದಿ ಬರೆಯೆ

ಮಂಡಲಾಧೀಶನು ಎರಡೂ ಲೇಖಗಳ
ಜೋರಾಗಿ ಉರಿಯುವ ಉರಿಯಲಿ ಹಾಕೆ
ಕರವೆತ್ತಲಾ ಮುಂಚೆ ಸುರಸುರ ಕಮರಿ
ಪರವಾದಿ ಜಿನಮಂತ್ರ ಪತ್ರ ಸುಟ್ಟಿತ್ತು
ಹರಮಂತ್ರಪತ್ರವದರ್ಕನ ಕಂಡ
ಸರಸಿಜದಲದಂತೆ ಕರವೊಪ್ಪಿಯಿರಲು
ಜಿಮುಮುನಿಗಳು ತಲೆ ಸತ್ತರೂ ಬಾಲ
ಸಾಯದೆಂಬಂತೆ "ಮೂಸಲ ನೋಡಬೇಕು
ಶಿವಮಂತ್ರಲೇಖೆಯು ಜಿನಮಂತ್ರಲೇಖೆ
ಜೊತೆಗೆ ಕಾವೇರಿ ಮಧ್ಯದೊಳಗೆ ಹಾಕೆ

ತೊರೆಯಲೋಡುವ ಪತ್ರ ತಾ ಸೋತ ಪತ್ರ
ತೊರೆಗೆದುರಾದುದು ನಿಜಪತ್ರ"ವೆನಲು
"ಹಿಡಿದು ಕೋಮಟಿಯನು ಎಳೆಯಲು ಮತ್ತೆ
ಎಳೆಯೆಳೆಯೆನ್ನುವ ಕ್ರಿಯೆ ಮಾಣದಿರದು
ಸುಮ್ಮನೆ ಹೋಗಲೀಯದಿರು ಸೋತವರು
ಧಾರುಣೀಜನರೆಲ್ಲ ತಲೆಯೆತ್ತಿ ನೋಡೆ
ಕೆಂಪಗೆ ಕಾಸಿದ ಲೋಹದ ಶೂಲ-
ಗಳೊಡನೆ ತಿವಿಯಿಸಿ ಕುವಲಯೇಶ್ವರನೆ"
ಎನಲಾಗಲೆನ್ನುತ ಜಿನಮುನಿವೃಂದ
ಜನಪತಿಯೊಡನೆ ತಾವೈತಂದು ಪತ್ರ-

ಗಳನು ಕಾವೇರಿಯ ಮಧ್ಯದಿ ಹಾಕೆ
ಮುಳುಗದಲೆದ್ದಿತು ಶಿವಮಂತ್ರಲೇಖೆ-
ಯವರ ಮಂತ್ರದ ಪತ್ರ ಸೇರಿತು ನದಿಯ
ನೆರವೇರುವುವೆ ಚಮತ್ಕಾರಮಂತ್ರಗಳು?

ಎನೆ ಪಿಳ್ಳೆನೈನಾರು ಭೂನಾಥನನ್ನು
ಸಂತೋಷವಲರೆ ಸದ್ಭಕ್ತನಾಗಿಸುತ
ಹದಿನೆಂಟು ಸಾವಿರವಿತರ ಜೈನರನು
ಒಂದಾಗೆ ಸೇರಿಸಿಯೆಲ್ಲರ ಹಿಡಿದು
ಅಚ್ಚರಿಯೊಂದೆ ಕುಲಚ್ಚರಿಯಾರು
ಚೆಚ್ಚರದಿಂದಲ್ಲಿ ಮಾಡಿಸಿದಂಥ

ಕಾದಿದ್ದ ಲೋಹದ ಶೂಲಗಳಲ್ಲಿ
ಕ್ರಮದಲ್ಲಿ ತಿವಿಸುತ್ತ ಮರಳಿಯೀ ಧರಣಿ-
ಯರಿಯಲು ತಿರುಪೂರ ನೆರಪಿದ ಕೇಳು
ಉರುಭಕ್ತಿಯುಕ್ತಿಯಿಂ ಓ ಮಹಾಜೈನ!

## ನಿಡುಮಾರನ ಕಥೆ

ಪೊಡವಿಯಲೆಲ್ಲ ಪ್ರಸಿದ್ಧವು ಮತ್ತೆ
ನಿಡುಮಾರನೆಂಬೊಬ್ಬನು ನಿಖಿಲೇಶ್ವರನು
ತಾ ಪಾಲಿಸುವ ಭೂಮಿ ಬಿಟ್ಟು ಮಿಕ್ಕಲ್ಲಿ
ಜಿನಮಾರ್ಗವರ್ತನರಾಗಿರೆ ಜನರು
ಮದ್ದಿಗು ಕೂಡ ಭಸ್ಮತ್ರಿಪುಂಡ್ರಾಂಗಿ-
ಯೊಬ್ಬನುಯಿರದಿರೆ ಏಗೆಯ್ವೆನೆನುತ

ಮನದಿ ಚಿಂತಿಸುತಲಿ ಮನುಜೇಶನಿರುವ
ಅವಸರದಲ್ಲಿ ತಾ ಮದನಾರಿಭಕ್ತಿ
ಮಾನಸನಹ ಶಿವಜ್ಞಾನಸಂಬಂಧಿ-
ಯೆನಿಸುತ್ತ ಪಾಂಡ್ಯಭೂನಾಥನ ಧರೆಗೆ
ಎಯ್ತಂದು ವೀರಮಾಹೇಶ್ವರೋದ್ಯುಕ್ತಿ
ಭಾತಿಯಿಂ ಪ್ರಭವಿಸಿಪರವಾದಿಗಳಹ
ಜಿನಮಾರ್ಗವರ್ತಿಗಳನು ಶೂಲದಲ್ಲಿ
ಕನಲುತ ತಿವಿಸಿದನೆನುವ ವಾರ್ತೆಯನು
ಕೇಳಿದ ನಿಡುಮಾರವಿಶ್ವಂಭರೇಶ-
ನನಘನು ತನ್ನದೇಹದಲಿದ್ದಯೆಲ್ಲ

ಜಿನಪದಾಚಾರ್ಯರ ಜಿನಮಂತ್ರಯುತರ-
ನೆನಲೇನು ಅವರಿವರೆನ್ನದೆ ಕರೆಸಿ
"ಕ್ಷಿತಿಯವಾಂತರಶಾಸ್ತ್ರಮತಗಳನೆಲ್ಲ
ಶ್ರುತಿಬಾಹ್ಯದಿ ಚರಿಪ ಮತಿಹೀನರುಗಳೆ!

ಪಶುಕರ್ಮಿಯೊಬ್ಬನು ಪರಮೇಶನೆನುತ
ಪಶುಪತಿಗೆರಗದ ಪಶುಜೀವಿಗಳಿರೆ
ಹೊಸಪರಿ ಶೂನ್ಯದುರ್ಬೋಧೆಯ ಕೇಳಿ
ಭಸಿತವ ಪೂಸಿಕೊಳ್ಳದಿಹ ಪಾತಕರೆ
ಅದ್ವೈತಕರ್ಮಮಾಯಾಕುಯುಕ್ತಿಗಳ
ಸದ್ವಿಧಿಯಿರದ ಚಂಡಾಲರು ನೀವು

ಅಜ್ಞಾನ ಬೋಧೆಗೆ ಆಲಯವಾದ
ವಿಜ್ಞಾನವಿರತಿಯ ವಿದ್ವೇಷಿಗಳಿರೆ!
ಹೇಗೆನ್ನ ಪ್ರಜೆಗಳ ನೀವಿಷ್ಟುಕಾಲ
ಹಿಡಿದು ದುರ್ಬೋಧೆಗೆ ಪಾಲುಮಾಡಿದಿರಿ
ಅಂತು ನೋಡನು ಈಗಲಭವಸದ್ಭಕ್ತ
ಪಿಳ್ಳನೈನಾರನಾ ಪಾಂಡ್ಯಭೂಮಿಯಲಿ
ಸರ್ವಪ್ರಮಾಣದೃಷ್ಟಪ್ರಯತ್ನಗಳ
ಶರ್ವನೆ ಕರ್ತನೆಂಬುದ ಪ್ರತಿಷ್ಠಿಸುತ
ಜಿನಬೌದ್ಧಸಮಯಗಳನು ಹುಡಿಗುಟ್ಟಿ
ಮುನಿಗಳ ತಿವಿಯಿಸಿದನು ಶೂಲದಿಂದ-

ಲದರಿಂದಲೋಲೈಸಿ ಶ್ರೀ ನೀಲಗಳನ-
ನಲ್ಲದಿರೆಲ್ಲರ ಕಾದಶೂಲದಲಿ
ತಲಕೆಳಗಾಗಿಸಿ ತಿವಿಸುವೆ"ನೆನುತ
ಶಿವಭಕ್ತವರ್ಯನಾಗಲೆ ಶಿಷ್ಟೇಶ್ವರನು
ನಿಶಿತಖಡ್ಗಾಯುಧಾನ್ವಿತಹಸ್ತನಾಗಿ
ಹಿಡಿಯುತಲೆಲ್ಲರ ಶೂಲದಲಿಕ್ಕಿ
ಶಿವಭಕ್ತರಾದಂಥ ಜಿನಮುನಿಗಳನು
ಸಂತೋಷಚಿತ್ತದಿಂದಲಿ ಕಾಯ್ದನಲ್ಲ!
ನಿಡುಮಾರ ಭೂನಾಥನಾ ಭಕ್ತಿಮಹಿಮೆ
ಮೆರೆದುದನರಿಯೆಯಾ ಓ ಜೈನಕಷ್ಟ!

## ನಮಿನಂದಿಯ ಕಥೆ

ಮತ್ತೆಯು ನಮಿನಂದಿಯೆಂಬೊಬ್ಬ ಭಕ್ತ
ಮೆರೆದು ಚೆಲ್ಲತ್ತಿರುವಾಲೂರಿನಲ್ಲಿ
ತಿರಿದಾರ್ಜಿಸುತ್ತಲಿ ತಂದು ಭರ್ಗನಿಗೆ
ಸಾವಿರದೀಪಗಳನ್ನು ಹೊತ್ತಿಸುವ

ವ್ರತತತ್ಪರತೆಯ ಪ್ರೀತಿಯಲಿಗೈಯುತಿರೆ
ಕುತ್ಸಿತರಾದ ಜೈನರು ಸೇರಿವೂರ
ಭಕ್ತನೀತನೆಯೊಬ್ಬನವನನೋಡಿಸಲು
ಯುಕ್ತಿಯಾವುದು ಎನ್ನುತೂಹಿಸಿ ಕಂಡು
ಹಾಳುಗುಡಿಯಲೆಲ್ಲ ಸಾವಿರದೀಪ-
ವೆಲ್ಲೆಡೆ ಹೊತ್ತಿಸುವುದವನ ವ್ರತವು

ಈವೂರಲವನಿಗೆ ತುಪ್ಪವನಾರು
ನೀಡದಿರಲು ತಾನೆ ಹೋಗುವನವನು
ಎಂದಾಲೋಚಿಸುತಲಿ ಘೃತವನವನಿಗೆ
ಇಷ್ಟಾದರೆರೆಯಲೀಯದಿರಲು ಬಂದು
"ಪ್ರಾಣೇಶ, ತುಪ್ಪವೆಲ್ಲೆಲ್ಲಿಯು ಇಲ್ಲ
ಪ್ರಾಣವ ಬಿಡುವೆ ದೀಪಗಳಾರಿದಾಗ"
ಎಂದು ಪರಿಚ್ಛೇದಿಯಾಗಲಾ ದೇವ-
ನಂಚಿತಪ್ರೀತಿಯಿಂ ಪ್ರತ್ಯಕ್ಷನಾಗಿ
"ವರದ ಸೋಮವೆಯರ್ಘ್ಯಪಣ್ಯಗಳಿಂದ
ಕ್ರಮದಲಿ ಹಿಂದೆ ದೀಪವ ಹೊತ್ತಿಸಿದೊಲು

ಸಜ್ಜನಲೀಲ, ಮಜ್ಜನಬಾವಿಯಿಲ್ಲಿ-
ದ್ದಾ ಜಲಗಳ ಹಾಕಿ ಬೆಳಗು ದೀಪಗಳ
ಕಾಣದನ್ಯಾಯಕಾರಿಗಳೆನಿಸಿರುವ
ಜೈನರ ಪಶುಗಳು ಸಾಯುವುವಿಂದೆ"-
ನುತ ದೇವದೇವೇಶನಾಣತಿಯೀಯೆ
ತಾ ಮಹಾನಂದಸಂಜನಿತ್ಯಾಸನಾಗಿ
ಕೊಳದ ನೀರಿಂದಲೆ ಕೋಟಿದೀಪಗಳ-
ನಲರಲು ಹೊತ್ತಿಸಿಯಾಡುತ್ತಲಿರಲು
ಅರಚಲೊಂದಾದರೂ ಕರುವಿಲ್ಲದಂತೆ
ಬೇಗ ಪಶುಗಳೆಲ್ಲ ಸತ್ತುದ ಕಂಡು

"ಏನಿದು ಚೋದ್ಯವಿಷ್ಟರಲಿ ಪಶುಗಳು
ಮಿಸುಕದೆ ಕದಲದೆ ಸತ್ತಿವೆಯೆಲ್ಲ
ತಪಸಿ ದೇವರ ಕೈಲಿ ಪಡೆದು ದೀಪಗಳ
ಕೋಟಾನುಕೋಟಿಯ ಕೊಳದ ನೀರೆರೆದು
ಹೊತ್ತಿಸಿರುವನಂತಿದೆಂತಹ ಚೋದ್ಯ-
ವಿರುವುದೊ ಶಿವಭಕ್ತರೆಂಥವರಿಹರೊ!

ಇಲ್ಲಿ ತುಪ್ಪವನೆರೆಯಲು ನೀಡದಿರಲು
ಕಟಕಟಾ ಶಪಿಸಿದನೇನೊ ಆ ತಪಸಿ-
ಯಿಲ್ಲದಿರಿದ್ದಕಿದ್ದೊಲೆ ಪಶುವೇಕೆ
ಸತ್ತವು, ಅವನೆಡೆ ಹೋಗೋಣ ನಾವು"

ಎನುತಲೈತಂದು ಸಾಷ್ಟಾಂಗದಿ ಮೊಕ್ಕಿ
ವಿನುತಿಸುತಿರಲು ಆ ಘನಕೃಪಾಮೂರ್ತಿ
ಪಶುಗಳ ಪ್ರಾಣವನಿತ್ತು, ಜೈನರಿಗೆ
ಶಿವದೀಕ್ಷೆಯನು ನೀಡಲಿಲ್ಲವೆ ಜೈನ?"

**ಸಾಂಖ್ಯತೊಂಡನ ಕಥೆ**

ಮತ್ತೆಯು ಕೇಳ್ಸಾಂಖ್ಯತೊಂಡನು ಚೋಳ-
ಮಂಡಲದಲಿ ಶಾಂತಮಂಗವೆಂಬೂರ
ಬೌದ್ಧನ ಬಸುರಲಿ ಹುಟ್ಟಿ ಮತ್ತೆಯು ಪ್ರ-
ಬುದ್ಧನಾಗಲು ಬೌದ್ಧಪ್ರತಿರೋಧದಿಂದ
ಪೂರ್ವಜನ್ಮದ ತನ್ನ ಪುಣ್ಯಗಳಿಂದ
ಶಿವಭಕ್ತಿ ವಾಸನೆಯವನನಾವರಿಸೆ

"ಭಕ್ತನಾಗಿರಲೆನ್ನ ಬದುಕಲು ಬಿಡನು
ಭಕ್ತನಾಗದಿರಲು ಬದುಕಲೇತಕ್ಕೆ?
ಈ ಯೋಜನದಲಿ ಲಿಂಗಾರ್ಚಕನೆನುವ
ನಾಮವ ಕೇಳಲಾರೆನಿದೆಂಥ ಕರ್ಮ?
ಇಂಥ ಭವದ್ಭಕ್ತಿಹೀನನುದರದಿ
ಹುಟ್ಟಿಸಬಹುದೇನಯ್ಯಾ ಭೂತೇಶ್ವರನೆ?
ಏಕಯ್ಯಾ, ಈಶ್ವರ, ನನ್ನಂತು ಕರುಣೆ-
ಯಿಲ್ಲದೆ ಮಲಧಾರಿಗೃಹದಲ್ಲಿರಿಸಿದೆ?
ಅತಿಶಯ ಸದ್ಭಕ್ತಿಯಲಿ ನಿನ್ನ ಭಜಿಸ-
ಲೊಂದುಪಾಯವು ನನಗಿಲ್ಲವಲ್ಲದಲೆ

ಸಿದ್ಧವು ವೇದ ವಿರುದ್ಧದ ಜೈನ
ಬೌದ್ಧಚಾರ್ವಾಕ ದುಷ್ಪಥ ಸಮಯಗಳು
ಈ ಮೂರು ನಿರ್ಮೂಲಗೈಯದವರೆಗೆ
ಮೂರುಕಲ್ಲುಗಳಿಂದ ಮೂಹೊತ್ತು ನಿನ್ನ
ಹೊಡೆವೆನು ವ್ರತವಿದೆ"ನ್ನುತ ವರ್ತಿಸುತಿರೆ
ನದಿ ಮೀರಿ ಹರಿಯಲು ತಾನೈದುದಿವಸ

ಗುಡಿ ಸೇರಲಾರದೆ ಗುರಗುರವೆನುತ
ತಾನ್ಶೈದು ದಿನಗಳ ಕಳೆದ ಬಳಿಕ್ಕ
ಪೂರವದಿಳಿಯಲು ಗುಡಿಗೈದು "ಲೆಕ್ಕ-
ವನ್ನಿಡಲೇಕೆ ಕಲ್ಲುಗಳೆಷ್ಟೆಸೆದರು

ಆಲಸ್ಯದಿಂದಿಹೆ ಮೃಡ, ದೇವ, ನಾನು
ಬೇಸರಿಸಿದೆನಿವನೆಸೆಯಲಿನ್ನೇಕೆ
ಈಯೊಂದೆ ಸಾಕು ಹೋಗೆ"ನ್ನುತ ದೊಡ್ಡ
ಕಲ್ಲನೆತ್ತುತ ತಂದು 'ಕೋ'ಯೆಂದೆಸೆಯಲು
ಶಿವಲಿಂಗವಾಗಲೆ ಕೈಗಳ ಚಾಚಿ
ತಲೆಗೆ ಬೀಳದ ರೀತಿ ಹಿಡಿದು ನಗುತ್ತ
"ಮೆಚ್ಚಿದೆ ವರವನೀಯುವೆ ನೀನು ಕೇಳು
ಈಯುವೆ"ನೆನ್ನಲು ಸಾಷ್ಟಾಂಗ ಮೊಕ್ಕಿ
"ಹರಿಬ್ರಹ್ಮರುಗಳೆಲ್ಲ ನಿಮ್ಮಾದಿಯಂತ್ಯ-
ಗಳ ನೋಡಿ ಕಾಣದ ಉರುಲಿಂಗಮೂರ್ತಿ

ನಾನಾ ಬಗೆಯಲಿ ವೇದಗಳೆಲ್ಲವರಸಿ
ಕಾಣದೆ ಹುಡುಕುವ ಘನಲಿಂಗಮೂರ್ತಿ,
ಸಕಲಸಿದ್ಧಾಂತಶಾಸ್ತ್ರಪುರಾಣಯುಕ್ತಿ-
ಗಳಿಗೆ ಕಾಣಿಸದಿಹ ನಿಜಲಿಂಗಮೂರ್ತಿ,
ಸನಕಸನಂದನ ಮುನಿ ಮುಖ್ಯತತಿಯ
ಮನಗಳ ತುಂಬಿಹ ಘನಲಿಂಗಮೂರ್ತಿ
ಶೇಷವಾಸುಕಿ ಬಹುಜಿಹ್ವೋಕ್ತ ವಿನುತಿ
ಭಾಷೆಗಳಡಗಿಸಿ ಪಟುಲಿಂಗಮೂರ್ತಿ,
ನಿಮ್ಮ ಶ್ರೀ ಪಾದಕಮಲಗಳ ಕಂಡೆ,
ಮರ್ತ್ಯವು ಸಾಲದೆ, ಮತ್ತಿರಲೇಕೆ?

ಮೊಲ್ಲೆಮೊಗ್ಗೆಸೆಯುವ ಮದನನ ಬೇಡಿ
ಬೆಳ್ಳಗೆ ಮಾಡಿದೆನೆಲ್ಲರರಿಯಲು
ಕಲ್ಲನೆಸೆಯೆ ಕರುಣಾಲೋಕನದಲಿ
ಪಾಲಿಸಿದೆಯೊ, ಭಕ್ತಿಪರನೆನಿಸೆನ್ನ,
ಅನ್ಯಾಯದಲಿ ನಿನಗಹಿತವ ಮಾಡೆ
ಧನ್ಯತ್ವವಿತ್ತೆ, ಚೋದ್ಯವು ತಾನೆ ಜೀಯ!
ಸ್ತುತಿನಿಂದೆಯೆರಡು ತಾ ಹಿತವಹಿತಗಳು
ಮನದಲಿ ಯೋಚಿಸೆ ಸಮವಲ್ಲವೇನು?

ಭಕ್ತವತ್ಸಲ, ಭಕ್ತಿಪರತಂತ್ರ, ಭರ್ಗ
ಮುಕ್ತಿವಲ್ಲಭ, ದಯಾಮೂರ್ತಿಯು ನೀನು

ನಿಂದಿಸಿ ನಂಬಿಯು, ಗುಣಕೀರ್ತಿಗಳನು
ಹೊಗಳಿ ಮಲುಹಣನು, ಸೇರರೇ ನಿನ್ನ!
ಅದರಿಂದಲೆನ್ನ ಕಟಾಕ್ಷಪ್ರೇಕ್ಷಣದಿ
ಭಾವಿಸಿಯೀ ಕಲ್ಲ ಹೂಗಲ್ಲಾಗುತ್ತ-
ಲಳವಡೆ ನಿನ್ನುತ್ತಮಾಂಗದ ದೆಸೆಯ-
ಲಿವನೆಲ್ಲವ ಗುಡಿಯಲ್ಲಿರುವಂತು ಮಾಡು"
ಎನ್ನುತಾ ವೇದಬಾಹ್ಯದ ಮಾರ್ಗಗಳನು
ಸಾಂಖ್ಯತೊಂಡನು ಹುಡಿಗುಟ್ಟನೆ, ಜೈನ!

**ಕೋವೂರ ಬ್ರಹ್ಮಯ್ಯನ ಕಥೆ**

ಮತ್ತೆ ಕೋವೂರ ಬ್ರಹ್ಮಯ್ಯನೆಂಬೊಬ್ಬ
ಕರಕಂಠಭಕ್ತನಖಂಡಿತ ಕೀರ್ತಿ

ಜಿನಮುನಿಗಳ ಕೂಡೆ ತರ್ಕವೊದಗಲು
ಜಿನಸಮಯಿಯು ವಾದದಲಿ ಸಿಗ್ಗುವಡೆದು
ವಟಮಹೀಜಾತವಲ್ಲಿದ್ದುದ ಕಂಡು
"ಅಂತೆನೆ ದೃಷ್ಟವೀ ವಟವ ಸುಡುವೆಯೊ
ಪಡೆವೆಯೋ ಹೇಳಯ್ಯ ಭಕ್ತನೆ" ಎನಲು
"ಸುಡಬಹುದೆ ಮರವ, ಪಡೆಯುವೆ"ನೆನಲು
ಮಂತ್ರತಂತ್ರಗಳಿಂದ ಮರವನು ಸುಡಲು
ಮಂತ್ರಕುತಂತ್ರ ಕುಮಾಯಾಪಕಾರಿ
ಬೂದಿಯಾಗಲ್ಲಿದ್ದ ವಟದ ಮೇಲಾಗ
ಭಸಿತವ ಚೆಲ್ಲುತೆಂದಿನ ರೀತಿ ನಿಲಿಸಿ

ಮೆರೆದು ಕೋವೂರ ಬಸದಿಗಳನೆಲ್ಲ
ಕೆಡಿಸನೇ ಬ್ರಹ್ಮಯ್ಯ, ಸಿಗ್ಗೆಲ್ಲಿ ಜೈನ!

**ಜೇಡರ ದಾಸಯ್ಯನ ಕಥೆ**

ಮತ್ತೆಯು ಕೇಳ್ ಪೊಟ್ಟಚೆರುವೆಂಬ ಪುರಿಯು-
ಲಿದ್ದವೇಳ್ನೂರು ಬಸದಿಗಳ ಕಟ್ಟಿ
ಮೆರೆಯುವಿಪ್ಪತ್ತು ಸಾವಿರ ಜಿನಮುನಿಗ-
ಳೋಲೈಪ ಜಿನಕುಲಗುರುವೊಬ್ಬನವನು

ಆ ಭೂಪತಿಗೆ ಮುಖ್ಯಾಚಾರ್ಯನೆನಿಸುತ
ಬುದ್ಧಿಯ ಹೇಳುತಲಲ್ಲಿ ಪ್ರಬೋಧಿಸಲು
ಕ್ಷಿತಿಪತಿಯಾಗಿದ್ದಾ ಸಿಂಗಭೂಪತಿಯ
ಸತಿಯು ಸುಗ್ಗಲದೇವಿಯಕಲಂಕ ಚಿತ್ತೆ

ತಾನೆನೆ ಜೇಡರದಾಸನ ವರದ–
ಯಾನೂನಸದ್ಭಕ್ತಮಾನಸೆಯಾಗಿ
ತಮ್ಮ ಗುರುಸ್ವಾಮಿಯಹ ದಾಸಿದೇವ–
ನಿಗೆ ಸತಿಯೀ ಸ್ಥಿತಿಯನ್ನು ಬಿನ್ನವಿಸಿ
ಹಿತರನು ಕಳಿಸಲಾ ಪೊಟ್ಲಚರುವಿಗೆ
ಅಚ್ಚರಿಯೊಂದಲು ಬಂದನಾಯೆಡೆಗೆ.
ಜಿನಮುನಿಗಳು ನೆರೆ ಕುತ್ಸಿತಗೈಯೆ
ಕಂಡು ನೂಕುತ ಲೆಕ್ಕವಿಡದೈದುತಿರಲು
ತದ್ಗುರು ಶ್ರೀಚರಣಾಂಬುಜಂಗಳಿಗೆ
ಸುಗ್ಗಲದೇವಿಯುತ್ಸುಕಳಾಗಿ ಮೊಕ್ಕಿ

ಭಾಮೆ ಗುರುಪ್ರಸಾದಾಮೃತಾಂಬೋಧಿ–
ಯಲಿ ಮುದವಾರೆ ತೇಲುತ ಮುಳುಗುತಲಿ
ಬೇರೊಂದು ಠಾವಿನಲಿರಿಸಲು ಆತ
ಮೀರಿ ತಾ ಬರಲದರಿಂದಲೇನಹುದೊ
ಎನ್ನುತ ಜಿನಮುನಿಗಳು ಹೇಳೆ ರಾಜ
ಜಿನಸಮಯಿಯು ತಾನು ವನಿತೆಗಿಂತೆಂದ:
"ಸತಿಗೊಂದು ಗತಿಯು ತಾ ಪತಿಗೊಂದು ಗತಿಯು
ಯಾವ ಲೋಕದಲಾದರಿಹುದೇನು, ಸತಿಯೆ?
ಎಲ್ಲಿಯ ಗುರುಗಳು ಎಂದಿನ ಬುಧರು
ಬೇಗನೆ ಕಳುಹಿಸು ಜೈನರು ಕೇಳೆ

ವಿಪರೀತವಹುದಿನ್ನು ಹೆಚ್ಚು ಮಾತೇಕೆ?
ಚಪಲಾಕ್ಷಿ, ನಿಮ್ಮ ಸ್ವಾಮಿಗಳ ಕಳಿಸೆ"ನ–
ಲಧಿಕ ಕೋಪೋದ್ರಿಕ್ತಳಾಗುತ "ಬಂದ–
ರಧಮಜೈನರ ಕೊಬ್ಬನಿಳಿಸಬೇಕೆಂದ.
ಪುರುಷಗೆ ಸತಿಗಾದರೂ ಮಾರ್ಗವೊಂದೆ,
ಗುರುಶಿಷ್ಯರಿಗೆ ಬೇರೆ ಮಾರ್ಗಗಳುಂಟೆ
ಮದುವೆಯ ದಿನವೆನಗಿತ್ತ ಭಾಷೆಯನು
ನೀನೆಯಾಲೋಚಿಸು, ಹೆಚ್ಚಿನದೇಕೆ?

ಮಾಡಿಕೋ ಮತ್ತೊಬ್ಬ ಭಾರ್ಯೆಯ ನೀನು
ಬಿಡು ನನ್ನ, ಮೃಡನ ಬಿಟ್ಟೊಲ್ಲೆನು ನಾನು,

ಇಲ್ಲದಿರೋಡಿಸು ವೇದ ಶಾಸ್ತ್ರಾದಿ
ವಾದರ್ತಕಪ್ರತಿವಾದಗಳಿಂದ"-
ಲೆಂದ ಸುಗ್ಗಲದೇವಿ ಜೋರುಮಾತಾಡೆ
ಕುತ್ಸಿತರಹ ಜೈನಖೂಳರನೆಲ್ಲ
ಕರೆಸುತ್ತ ಭೂಪತಿಯೋಲೈಸುವವರ
ಕೆಲದಲಿ ನವರತ್ನಖಚಿತವಾಗಿದ್ದ
ಸಿಂಹಾಸನಾಸೀನರನುಗೈದು ಜೈನ
ಸಂಹಾರನೆನಿಸಿದ ಸದ್ಗುರುದೇವ
ದಾಸಯ್ಯನಾ ಪಾದಗಳನೊತ್ತುತಲ್ಲಿ
ಸುಗ್ಗಳವ್ವೆಯುಯಿರಲು ಜಿನಮುನಿಗಳು

ಮಂತ್ರತಂತ್ರಾನೇಕಮಾಯಾದಿಗಳ ಕು-
ಯಂತ್ರಮಹೇಂದ್ರಜಾಲಾದಿವಿದ್ಯೆಗಳ-
ನದ್ವೈತಶೂನ್ಯಮಾಯಾವಾದಕರ್ಮ
ವಿದ್ವೇಷದಲಿ ಜೈನವಿತತಿ ತರ್ಕಿಸಲು
ವೇದವೇದಾಂತಾದಿವಾದಸಿದ್ಧಾಂತ
ವಾದ ತರ್ಕಗಳ ಸಂಪಾದಿಸಿಮಿಗಿಲು
ನ್ಯಾಯವೈಶೇಷಿಕಾದ್ಯಖಿಲ ವಾಗ್ದೃಷ್ಟ
ಧೀಯುತೋಕ್ತಿಗಳಲಿ ಪರಿಣತಿ ತೋರಿ
"ಅದ್ವಿತೀಯನು ರಾಮನಾಥನೆ ತರ್ಕ
ಸದ್ವಿಧಿ ಸರ್ವವು ಸರ್ವೇಶ್ವರನೆನೆ

ಶ್ರುತಿ 'ಯೇಕ ಏವರುದ್ರೋ'ಯೆನೆ ತತ್ವ
ಗತಿ 'ಲಿಂಗ ಮಧ್ಯೇಜಗತ್ಸರ್ವ' ವೆಂದು
ಶ್ರುತಿ 'ಲಿಂಗಬಾಹ್ಯತ್ಪರಂ ನಾಸ್ತಿ'ಯೆಂದು
ಸತತವೀ ಬಗೆ ಶ್ರುತಿ ಹೇಳುತ್ತಲಿರಲು
ಈಕ್ಷಿಸಲಿಲ್ಲವೂ ಉತ್ತರ[illegible]
ದಕ್ಷತೆಯಿಂ [illegible]
"ಇನ್ನು ತರ್ಕಿಸಲೆಮಗಿಹುದೇನು? [illegible]
ಶಂಕರನೆನ್ನುವೆ ಸಚರಾಚರಗಳು
ತಿಳಿದಿಹ ಗುಡಿಗೈದು ಪೂಜಿಸ ಬಗೆಯು-
ಲಿರುವನಲ್ಲಿಯು ಕರಕಂಠನೆ ಮತ್ತೆ-

ಯಂಗಹರನು ಚರಾಚರಗಳಿಗೆ
ಅಂಗವೊ ಜೀವವೊ ಆತ್ಮವೊ ಹೇಳು"
ಎನಲು "ಶ್ರಮಣರಿರಾ, ನಿಮ್ಮಾದಿ ಪ್ರಶ್ನೆ-
ಗಿನ್ನುತ್ತರವ ಕೇಳಿರೆ"ನುತಲಿಂತೆಂದ:
"ಈ ರಾಜ್ಯಕೆಲ್ಲಕೀ ರಾಜನಲ್ಲದೆಯೆ
ಧಾರುಣಿಯಲಿ ಹೇಳಲಾರಿಲ್ಲವೆಂಬ
ರೀತಿ, ಸಮಸ್ತಪಿಪೀಲಿಕಾದಿಗಳ
ಹೊಲೆಯ ಕಿರಾತರ ರಾಜನೆಂದಂತೆ.
ಸರ್ವೇಶ ಸುಗುಣವಿಚಾರಿತ ವೃತ್ತಿ
ಸರ್ವದರಲ್ಲಿಯೂ ಸಂಕೀರ್ಣಪದವೆ-

ಯಲ್ಲದೆ ಕೇಳೀಶ್ವರಾದ್ವೈತವೆನಲು
ಇದುವೆ ಸರ್ವಾದ್ವೈತವೇ, ಅದಲ್ಲದೆಯೆ
ಗುಡಿಗೈದು ನೀವಿನ್ನು ಭಜಿಸಲೇಕೆಂಬ
ಮೂರ್ಖಪ್ರಶ್ನೆಗೆ ನೀವು ಕೇಳಿರುತ್ತರವ:
ಸರ್ವಗತವೆನಿಪ ಚಂದ್ರಾತಪದಲಿ
ಸರ್ವಶಿಲೆಗಳಲಿ ಚಂದ್ರಕಾಂತವದು
ಸ್ರವಿಸುವುದೆರಡರ ಸಾಮರಸ್ಯದಲಿ
ಸ್ರವಿಸುದೇನೆಲ್ಲವಿತರ ಶೈಲಗಳು
ಶಿಲೆಗಳ ಮೇಲೆ ತಿಂಗಳಿರದೇ, ಇದ್ದು
ಫಲವೇನು? ಅದು ಪ್ರಾಣಪದವಲ್ಲದಂತೆ

ಚಂದ್ರಿಕೆಯಿಲ್ಲದೆ ತಚ್ಚಂದ್ರಕಾಂತ
ಚಂದ್ರಾಶ್ಮವಿರದೆ ಚಂದ್ರಿಕೆಯರೆಯಹುದು,
ಸರ್ವಗತನೆನಿಪ ಶರ್ವನೊಳಗೆಯೆ
ಸರ್ವವು ತಾನಿರೆ ಶರಣನ ಮನಸು
ಕರಗುವುದೆರಡಕ್ಕೆ ಸಮಕಾಂತಿಯಿಂದ,
ಕರಗುವುದೇ ಮಿಕ್ಕ ನರರ ಚಿತ್ತಗಳು?
ಅಖಿಲವು ಲಿಂಗಮಧ್ಯದಲಿಲ್ಲವೇನು
ಅಖಿಲವಿದ್ದರು, ಅದರಿಂದೇನು ಫಲವು?
ಶರಣನಿಂದಾಗಿ ಶಂಕರನ ಲೀಲೆಗಳು
ಶರಣನ ಹೃದಯ ಶಂಕರನಿಗಾಗಿಹುದು

ಹಸುವ ಶೂದ್ರನು ತನ್ನದೆಂದು ಬಗೆವನು
ಹಸುವಿಗೆ ಪ್ರಾಣಪದವಹುದಾ ಕರುವು

ಎರಡರ ಪರಿಣಾಮದಲಿ ಬಾಳ್ವ ಶೂದ್ರ
ಹಸು ಶೂದ್ರನರಿವುದೆ ಕರುವಿನ ಹೊರತು?
ಮನದಲಿ ಲಿಂಗಭಕುತನ ಸನ್ಮಥನ-
ದಿಂದ ಬದುಕು ಪ್ರಾಣಪದವಾಗಿರುವುದು.
ಸ್ವಾತಿಮಳೆ ಸುರಿವ ಜಲದೊಳಗೆಲ್ಲ
ಏಪರಿ ಕರೆಗೊಳ್ಳದೋ ಹನಿಗಳಿಗೆ
ಅದಕೆ ಬಾಯ್ದೆರೆಯದು ಕರಿಯ ಚಿಪ್ಪೊಂದು
ತಾನೆಲ್ಲ ಮಳೆಯಲ್ಲಿ ನೆನೆಯುತ್ತಲಿದ್ದು

ಉಭಯ ಸಂಗದಲುದಯಿಸುವುದು ರತ್ನ-
ವಭವನ ಶರಣನ ಅನುವೂ ತಾನಂತೆ-
ಯದರಿಂದ ಲಿಂಗಭಕ್ತಸ್ನೇಹಲೀಲೆ-
ಯನು ತಿಳಿಯಲು ನಿಮ್ಮ ವಶವೆ, ಗಾವಿಲರೆ?
ರಮಣವಾದಾಡಂಬರವಿರದ ಲಿಂಗ
ಸಮಥನಸುಖಗಳ ಯೋಚಿಸಲೇಕೆ?
ಅಂಗವೊಜೀವವೊ ಆತ್ಮವೊ ಎಂಬ
ಮೌಢ್ಯದ ಪ್ರಶ್ನೆಗೆ ಕೇಳಿರುತ್ತರವ:
ಅಂಗವು ಪೂರ್ವದ ಕರ್ಮಾವಶೇಷ-
ವಂಗವು ಸುಖದುಃಖಸಂಗದ ನೆಲೆಯು

ಅಂಗವು ಪುಣ್ಯಪಾಪಾಲಯದಂತೆ
ಅಂಗವು ಶಿವನಲ್ಲವದು ಹೋಹ ಮನೆಯು
ಜೀವನ ಶಿವನೆಂದು ಭಾವಿಸಬೇಡಿ
ಜೀವನು ಮಲಿನನು ಶಿವನು ನಿರ್ಮಲನು
ಜೀವನು ದುಷ್ಕರ್ಮಿ ಶಿವನು ನಿಷ್ಕರ್ಮಿ
ಜೀವನು ಸಕಲನು ಶಿವನು ನಿಷ್ಕಲನು
ಜೀವನು ಪಶುಮೂರ್ತಿ ಶಿವನು ಪಶುಪತಿ
ಜೀವನಮುಕ್ತನು ಶಿವನು ತಾ ಮುಕ್ತ
ಜೀವನು ಸಭವನು ಶಿವನು ತಾನಭವ
ಜೀವನನಿತ್ಯನು ಶಿವನು ತಾ ನಿತ್ಯ

ಜೀವನಶುದ್ಧನು ಶಿವನು ತಾ ಶುದ್ಧ
ಜೀವನು ಮೃತದುಃಖಿ ಶಿವನು ತಾನಮೃತ
ಜೀವನು ಸಂಸಾರಿ ಶಿವನಸಂಸಾರಿ
ಜೀವನು ಸಂದೇಹಿ ಶಿವನಸಂದೇಹಿ-

ಯದರಿಂದ ಜೀವನೆ ದೇವ ತಾನಲ್ಲ
ಹೋಗುವುದದರಿಂದ ಸ್ಥಿರವಲ್ಲವಿನ್ನು
ಆತ್ಮನ ಪರಮಾತ್ಮನೆನದಿರೇಕೆನಲು
ಆತ್ಮ ತಾ ಪಂಚಭೂತಾತ್ಮಕವಾಗಿ
ಆತ್ಮ ತಾ ಪಂಚೇಂದ್ರಿಯಾತ್ಮಕವಾಗಿ
ಆತ್ಮ ತಾ ದೇಹಗುಣಾತ್ಮಕವಾಗಿ–

ಯಿರುವುದರಿಂದಲಾತ್ಮವು ಶಿವನಲ್ಲ.
ಖಂಡಿತಸೂಕ್ಷ್ಮವಿಕಸ್ವರಲೀಲ
ಸಕಲವು ಕಪಟನಾಟಕಸೂತ್ರಗಳನು
ಪ್ರಕಟಿಪ ಚೈತನ್ಯಭಾವವೆ ಶಿವನು
ಅದರ'ಲಣೋರಣೀಯಾನೆ'ನೆ ಸೇರಿ–
ದೆಡೆಯಿಲ್ಲದಂತಹ ಶಂಭುವು ಶಿವನು
ಎಳ್ಳಿನೊಳಗಿರುವ ಎಣ್ಣೆಯ ರೀತಿ
ಭಾವಿಸೆ ಕಾಷ್ಠದ ಪಾವಕನಂತೆ
ಪಾಷಾಣದಲ್ಲಿಹ ಕಬ್ಬಿಣದಂತೆ
ತಾ ನೇತ್ರಗಳಲಿಹ ತದ್ರೂಪದಂತೆ

ಯಳವಡೆ ಹಾಲಿನಲ್ಲಿಹ ತುಪ್ಪದಂತೆ
ಜಲಕುಂಭದೊಳಗಿಹ ಚಂದ್ರನ ರೀತಿ
ಹೊಳೆವ ಕನ್ನಡಿಯಲ್ಲಿರುವ ನೆರಳಂತೆ
ತಿಳಿಯಲು ಮಣಿಗಳಲಿಹ ದಾರದಂತೆ
ಘಟಪಟಾದಿಗಳಲಿಹ ಗಗನದಂತೆ
ಪಟಿಕದ ಶಿಲೆಯಲ್ಲಿ ಬಿಂಬದ ರೀತಿ
ಮೆರೆಯೆ ಬೀಜದಲಿಹ ವೃಕ್ಷದ ರೀತಿ
ಶಬ್ದಗಳಲ್ಲಿರುವರ್ಥದ ರೀತಿ
ಪರ್ವತಗಳಲಿಹ ಪ್ರತಿಶಬ್ದದಂತೆ
ಎಲ್ಲದರಲ್ಲಿಹ ಶರ್ವನ ರೀತಿ

ಮುಳ್ಳು ಚುಚ್ಚಲು ಕೂಡವೆಡೆಯಿಲ್ಲದಂತೆ
ಎಲ್ಲದರಲಿ ತಾನಾಗಿರುತಿಹನವನು
ಈಶನು ಸಕಲಲೋಕೇಶನು ಕರ್ಮ
ನಾಶನು ನನ್ನ ರಾಮೇಶ ತಾ"ನೆನಲು
"ಅಹುದೇನು ದಾಸಯ್ಯ, ಎಲ್ಲದರಲ್ಲು
ಶಿವನಿಗೆ ಇರುವುದದಾವ ವಿಶೇಷ?

ಶಿವ ನಿತ್ಯನಾಗಿರಲವು ಅನಿತ್ಯಗಳು
ಶಿವನನಿತ್ಯನೊ, ಶಿವನಲ್ಲಿಲ್ಲವೇನು?
ಶಿವು ದೈವವಾಗಿರಲವು ಅದೈವಗಳು
ಶಿವನದೈವವೊ, ಶಿವನಲ್ಲಿಲ್ಲವೇನು?

ಶಿವನು ತಾ ಪಶುಪತಿಯವು ಪಶುರಾಶಿ
ಶಿವನು ಪಶುವೊ, ಶಿವನಲ್ಲಿಲ್ಲವೇನು?
ಅವುಗಳಲೊಂದರಲ್ಲಿಯು ಹರನಗುಣ-
ವಿರಬೇಡವೇನಿಷ್ಟರಲ್ಲಿಯು"ಯೆನಲು
ಅನ್ಯಾಯವಾದಿಗಳವರನು ಕಂಡು
ಧನ್ಯನು ಜೇಡರದಾಸಿಯಿಂತೆಂದ:
"ಎಣ್ಣೆಯಿಂದಲಿ ತಾನು ಬೆಳಗುವ ದೀಪ-
ವೆಳ್ಳಿನಿಂದಲಿ ತಾನಲರುವುದೆ ಹೇಳಿ?
ಎಳ್ಳಿನಲಿಹುದೇನು ಎಣ್ಣೆಯ ಗುಣವು
ಎಳ್ಳಿನೊಳೆಣ್ಣೆಯು ತಾನಿಲ್ಲವೇನು?

ಈಶನ ಗುಣಗಳೇಕಿವುಗಳಲ್ಲಿಹವು
ಈಶನು ತಾನೆಂತು ಇವುಗಳಲಿಲ್ಲ?
ಎಳ್ಳಿನೊಳೆಣ್ಣೆಯು ತಾನಿರುತಿಹುದು
ಎಳ್ಳದಿರುವುದೇನು ಎಣ್ಣೆಯ ಒಳಗೆ?
ಸರ್ವಜ್ಞನಲ್ಲಿಯೆ ಸರ್ವವದಿಹುದು
ಸರ್ವಜ್ಞನಿರುವನೇನೆಲ್ಲದರೊಳಗೆ?
ಈ ಹೇತುಗಳಿಗೆಲ್ಲನೋಡಬೇಕಿಂತು
ಊಹಿಸಲಿಲ್ಲದುಂಟಾಗುವ ರೀತಿ
ಮಥನಪಕ್ವಕ್ರಿಯಾಮಾನಗಳಲ್ಲಿ
ಪ್ರಥಿತದಿಂದಲಿ ಮುಂದೆ ಪಥ ಕಾಣಿಸುವುದು;

ಇರಲೇಬೇಕೆನ್ನಲು ಇಹ ಜ್ಞಾನಿಗಳಿಗೆ
ತಿಳಿಯದಜ್ಞಾನಿಗೆ ಬೇಕೆನಲಿಲ್ಲ
ಸರ್ವಜ್ಞ ನಿಂತಿಹ ಸರ್ವದರಲ್ಲಿ
ಸರ್ವಪ್ರಮಾಣದಿ ಸಂಸಿದ್ಧವಿದುವು"
ಎನಲು ಜಿನಮುನಿಗಳಪಹಾಸ್ಯಗೈದು
ಮನದಲಾಲೋಚಿಸಿ ಹೇಳಿದರಿಂತು:
"ಹೆಚ್ಚು ತಿಳಿದುದಕ್ಕೆ ಹೆಚ್ಚು ಮೇಲಾಯ್ತು
ಇಂತೆಲ್ಲದರಲಿರೆ ನಿಟಿಲಾಕ್ಷ ತಾನು

ಇರುವುದೆ ಮಲಮೂತ್ರ ಬಿಡಲು ತಾ ಠಾವು
ಇಳೆಯ ಮೆಟ್ಟಬಹುದೆ ಹೇಳಿದ"ನೆನಲು

ಕೂಡೆ ಜೈನರನೆಲ್ಲ ಖೂಳರ ಮಾಡಿ
ದವಡೆಯೊಡೆವ ರೀತಿ ದಾಸಿಯಿಂತೆಂದ
"ಅರಿಯಿರೇ ಜೈನರೆ, ಯಾವತ್ತು ನೀವು
ತಿಳಿಯದ ಕಾರ್ಯವೆ, ಹೊಸದೇನು ನಿಮಗೆ?
ಮೃಡನಿಲ್ಲದಿರುವೆಡೆ ಜಡಕರ್ಮವಾದಿ
ನಡುದೆಲೆ ಮುಟ್ಟಿ ನಡೆವೆವು ನಾವೆಂದು
ಮನಸಿಜಹರನಿಲ್ಲವೆಂದೆನುವಧಮ
ಮನುಜರ ಬಾಯ್ಗಳು ಮರವಡಗಳಿಗೆ
ಕಿಂಕರಿಪಡದಿರಿ ನಾ ಬೊಂಕಲಾರೆ–
ನಿನ್ನು ಕೇಳಿದರಾನಿಂತೀಗ ಹೇಳುವೆನು:

ಭಾವಿಸಲೆರಡು ಠಾವುಗಳನು ಬಿಟ್ಟು
ದೇವದೇವನಿರದ ಠಾವದೆಂತಿಹುದು
ಸಕಲವು ತಾನಾಗಿ ತಾ ಸಕಲವನು
ಹೊಂದದೆಯಿರುತಿಹನವನು ನಿಶ್ಚಯದಿ
ಸಕಲವ ಹುಟ್ಟಿಸಿ ತಾ ಸಕಲದಲಿ
ಹುಟ್ಟದೆಯಿರುತಿಹನವನು ನಿಶ್ಚಯದಿ
ಸಕಲವ ನಡೆಸುತ್ತ ತಾ ಸಕಲದಲಿ
ಅಡಗದ ನಿರ್ಗುಣಿ ನಿಶ್ಚಯವವನು
ಸಕಲವ ತೊಡೆಯುತ ತಾ ಸಕಲದಲಿ
ನಶಿಸದ ನಿತ್ಯನಾತನು ನಿಶ್ಚಯದಲಿ

ಸಕಲವ ತನ್ನೊಳಗೆಡೆಯಿಲ್ಲದಿರಿಸಿ
ಸಕಲವ ನಡೆಸುವ ಜಾಣನು ತಾನು
ಸಕಲವ ತನ್ನಾಜ್ಞೆಯ ಪ್ರಭಾವದಲಿ
ಪ್ರಕಟಿಪ ಚೈತನ್ಯಭಾವಕನಾತ
ಸಕಲದಿ ಲೀಲೆಯಿಂದಿಚ್ಛಾಮಾತ್ರದಲಿ
ವಿಕೃತವಗೈವ ನಿರ್ವಿಕೃತಿಯು ತಾನು
ಸೇರಿಯೆಲ್ಲದರಲ್ಲಿ ಸೇರದಿರುವವನು
ಇರುವನೆನ್ನುವರಿಗೆ ತಾನಿರುವವನು
ತಿಳುವಿಗೆ ತಿಳಿಯದ ತತ್ವವೆ ತಾನು
ತಿಳಿದವರಿಗೆ ತನ್ನನೀಯುವನವನು

ಒಲವಿಗೆ ಮೀರಿಹ ಗುಣಗಣಿಯವನು
ಒಲಿದು ತಿಳಿಯುವನ ಜೊತೆಯಿರುವವನು
ಒಲಿಸಲುಬಾರದ ಸುಂದರನವನು
ಒಲಿದರೆ ಬಿಡದಲೆ ವರವೀಯುವವನು
ಗಮಿಸಲು ಬಾರದ ಗಮಕನೆ ತಾನು
ಗಮಿಯಿಸುವವರಿಗೆ ಕಡೆ ತೋರುವವನು
ಹಿಡಿಯಬೇಕೆಂದರೆ ಪ್ರಭೆ ತೋರುವವನು
ಹಿಡಿಯೆ ಮತ್ತೆಯು ಬಟ್ಟಬಯಲಾಗುವವನು
ನುಡಿಗಳ ಮೀರಿದ ವೇಷಿಯಾಗಿಹನು
ನುಡಿಯಲ್ಲಿಯೇ ತಾನು ವಿಹರಿಸುವವನು

ದೃಷ್ಟಿಗೆ ಮೀರಿದ ತೇಜಸ್ವಿಯವನು
ದೃಷ್ಟಿಸಿ ನೋಡಲು ತಿಳಿಯುವನವನು
ವಾಸನೆಯಿಲ್ಲದೆ ವರ್ತಿಸುವವನು
ವಾಸನೆಯಿಂದಲು ವರ್ತಿಸುವವನು
ಕಿವಿಗಳ ಮೀರಿದ ಸಾರವುಳ್ಳವನು
ಕಿವಿಗೆ ಬೀಳಲು ತಾ ಪ್ರಸನ್ನನಾಗುವನು
ನುಡಿಗಳ ಮೀರಿದ ಭಾಷೆಗಳವನು
ನುಡಿಗಳನರಿದರೆ ಫಲಿಯಿಸುವವನು
ಭಕ್ತವತ್ಸಲನೆಂದು ಮೆರೆದಿರುವವನು
ಶಕ್ತಿಗತೀತನೆಂದೆನಿಸಿರುವವನು

ಯುಕ್ತಿಗೆ ಮೀರಿದ ಯುಕ್ತಿಗಳವನು
ವ್ಯಕ್ತ ಸಾಕ್ಷಾಲ್ಲಿಂಗವಾಗಿರುವವನು
ಅದರಿಂದೆಮ್ಮಯ ಲಿಂಗದೇವನ ಮಹಿಮೆ-
ಯನು ತಿಳಿಯಲು ಪ್ರಾಪ್ತಿ ನಿಮಗದೆಲ್ಲಿಹುದು?
ರಾಮನಾಥನು ಸರ್ವದಲ್ಲಡಗಿದ್ದು
ಭೂಮಿಯ ಭಕ್ತರು ಹೊಂದದೆಯಿರಲು
ಅಪ್ರಸಿದ್ಧದ ಮಾತನಾಡವೇಕೀಗ
ಸುಪ್ರಸಿದ್ಧದಿ ದೃಷ್ಟಪ್ರತ್ಯಯದಿಂದ
ತೋರಿಸುವೆನು ಕೇಳಿದರೆ ನೀವು ಈಗ:
ಈ ಪೊಟ್ಟಚೆರುವಲ್ಲಿ ಗಣಿತವಾಗಿರುವ

ಬಸದಿಯೇಳ್ನೂರ ನಾನೊಡೆಸಿ ಹಾಕುವೆನು
ಪಶುಗಳೆ ನಿಮ್ಮನೇನೆಂದು ಸೋಲಿಸಲಿ"

ಎನಲೆಷ್ಟು ಮಾರ್ಗದಲಿವವನು ಕೆಡಿಸ-
ದಿರಲಾಗದೆಂದು ಜೈನರು ಯೋಚಿಸುತ್ತ
"ದೃಷ್ಟಾಂತವೀಗಲೆ ಆಗಲಿ ದೃಷ್ಟ
ದುಷ್ಟೋರಗವನೀಗ ಹಿಡಿಸುವೆ"ನೆನುತ
ವಾಸುಕಿಯಂತಹ ಪಟುನಾಲಿಗೆಗಳ
ವಿಷದಿಂದ ಕೊಲ್ಲುವ ಘೋರಸರ್ಪವನು
ಗಡಿಗೆಯೊಂದರಲಿಟ್ಟು "ಇಹನೇನಿದರಲಿ?
ಮೃಡ ಸರ್ವಗತನೆಂದು ಹೇಳುವೆ"ಯೆನಲು

"ಇಹನನುಮಾನವೇತಕೆ ಘಟದೊಳಗು
ಇಹನೆಲ್ಲರಲಿ ಸರ್ವಗತನು ರಾಮಯ್ಯ"-
ನೆನುತ ನೂತನ ಪುರಾತನ ಮಹಾಭಕ್ತ
ಜನಪಾದ ಪದ್ಮಸಂಸ್ಮರಾಣಾತ್ಮನಾಗಿ
ನಿರ್ಭಯದಲಿ ಹೋಗಿ ನಿಂತು ತತ್ಕುಂಭ
ಗರ್ಭಸ್ಥವಾಗಿದ್ದ ದುರ್ಭರೋರಗವು
ಉಸಿರುತ್ತ ಹೊಂಗುತ್ತ ಮೊರೆಯುತ್ತಲೊಳಗೆ
ತಾ ಚಪ್ಪರಿಸುತಲಿ ದವಡೆಯಾಡಿಸುತ-
ಲೆಡೆಯೆಡೆ ಗಡಿಗೆಯಲಡಬಡಿಸುತ್ತ
ಗಡಬಡಿಸುತ ಭುಜಂಗವು ವಿಜೃಂಭಿಸಲು

"ರಾಮನಾಥನು ಸರ್ವಗತನು ಅವ್ಯಯನು
ರಾಮೇಶಭಕ್ತರೇ ಬುವಿಯಲುತ್ತಮರು
ಪರಮಗೊಲಿಯದರು ಪರಮಪಾತಕರು
ಜನರೆಲ್ಲ ಕೇಳಿದಿರೇನೆನ್ನ ಶಪಥ?"
ಎನ್ನುತ ಘಟದಲ್ಲಿಹಸ್ತವನಿಟ್ಟು
ಹೊಂಚಿದ್ದ ಸರ್ಪವ ಹಿಡಿದು ತೆಗೆಯಲು
ಪಟಿಕಲಿಂಗವದಾಗಿ ಸ್ಫುಟಕಾಂತಿ ಸುರಿಸಿ
ಚಟುಲಭಾಸ್ಕರಕರಪಟಲವೆಲ್ಲವನು
ತಾರುಮಾರಲಿ ದಿಶಾತಟಗಳ ಕವಿಯೆ
ಕುಟಿಲಾನ್ಯಸಮಯ ವಿಘಟನ ತದೀಯ

ಪಟುತರ ಕರತಲಘಟಿತದಿಂ ಬೆಳಗ-
ಲಲ್ಲಿದ್ದ ಜನರುಘೇಯೆಂದು ಜಯವಿಡೆ
ತಟ್ಟನೆ ಜೈನರ ಕುಟಿಲತೆಯಡಗಿ
ಘಟಿತಫಾಲಸ್ಥಲ ಕರಕಂಜರಾಗಿ

ಸುಗ್ಗಲದೇವಿಯೌತ್ಸುಕ್ಯವು ಹೆಚ್ಚ-
ಲಾಗುರುದೇವನನಗ್ಗಿಸುತ್ತಿರಲು
ಬಲ್ಲಹನಾದಿಯಾಗೆಲ್ಲ ಜೈನಜನ
ತಲ್ಲಣಗೊಳ್ಳುತ ಮೈಚಾಚಿ ಮೊಕ್ಕ-
ಲಲ್ಲಿ ಜೇಡರ ದಾಸಿಮಯ್ಯ ಬಲ್ಲಹನ
ಸಂತೋಷದಲಿ ಲಿಂಗಸಹಿತನ ಮಾಡು-

ತಿಂತು ತರ್ಕವನುತ್ತರಿಸುತಲಿ ಎಲ್ಲ
ಪಟಿಕಲಿಂಗಗಳನಾ ಪಟ್ಟಣದಲ್ಲಿ-
ಯುತ್ತರೇಶ್ವರನೆಂದು ತಾ ಪ್ರತಿಷ್ಠಿಸುತ-
ಲಾ ಸಮಯದಿ ದಾಸಿಮಯ್ಯನೇಳ್ನೂರು
ಬಸದಿಗಳನು ಹುಡಿಗುಟ್ಟಿ ಜೈನರಿಗೆ
ನೀಡನೆ ಶಿವದೀಕ್ಷೆಯನ್ನೆಲೊ ಜೈನ!

**ಹಿರಿಯ ನಾಚಯ್ಯನ ಕಥೆ**

ಮಾರುಡುಗೆ ಪುರದಿ ಮತ್ತೊಬ್ಬ ಭಕ್ತ-
ನಾರಯ್ಯೆ ಹಿರಿಯ ನಾಚಯ್ಯನೆಂಬುವನು
ಪರರರಿಯದ ರೀತಿ ಭಕ್ತನಾಗಿರಲು
ಪರವಾದಿ ಜೈನರು ದುರುಳತನದಲಿ

ಎಲ್ಲಿ ನೋಡಲು ತಾವೆಯಾಗಿ ಸಾವಿರದ
ಏಳ್ನೂರು ಬಸದಿಗಳಿರೆ ಸ್ಪರ್ಧಿಯಂತೆ-
ಯೊಂದು ಶಿವಾಲಯವಿರೆ ಹಾಳುಮಾಡಿ
ಚಕ್ಕನಲ್ಲಿಯ ಪೂಜಾರಿಯ ಬಾಧಿಸಿರಲು
"ಪರವಾದಿ ಜೈನರ ನಾಶಗೈಯದಲೆ
ಪರಮಗಾರೋಗಣೆಗಿಡಬಾರದಿನ್ನು
ತಪ್ಪಾಗುವುದು ತಡೆದರೆಯಿಲ್ಲ"ಯೆನುತ-
ಲಾಗಲೆ ನಾಚಿದೇವಯ್ಯನು ಹೊರಟು
ಹತ್ತುದಿನದಲಿ ಹನ್ನೆರಡುಸಹಸ್ರ
ಮದನಾರಿ ಸದ್ಭಕ್ತಮಂಡಲಿಯೊಡನೆ

ಮಾಡಿಸಿ ಸಾವಿರದೇಳ್ನೂರು ಲಿಂಗ-
ಗಳ ಬಂಡಿಗಳಲ್ಲಿಟ್ಟು ಬಲುವೇಗದಿಂದ-
ಲೈತಂದು ಸುತ್ತ ಮಾರುಡುಗೆಯ ಮುತ್ತಿ
"ಬಣಗು ಬ್ರಾಹ್ಮಣನಿಂದ ಪರದೇಶಿ ಮೊದಲು
ತಡೆಯದೆ ಜೈನರ ಬಿಟ್ಟು ಮಿಕ್ಕೆಲ್ಲ

ಹೋಗಿರೈ"ಯೆನುತೆಲ್ಲ ಕೇಳೆ ಸಾರಿಸುತ-
ಲದರಲಿ ತೇರಸರನೆ ಹದಿಮೂರು
ಜನರ ವಾರಿಸುತಲಿ ಹರಭಕ್ತಲಲರ-
ಲೆದುರಿಸಿ ತಾಕಿ ಜೈನರ ಕೂಡ ಕಾದಿ
ತಲೆಪಟ್ಟೆವಿಡಿದು ಯುದ್ಧವನು ಮಾಡುತ್ತ

ತಮ್ಮ ಕತ್ತಿಗಳಲಿ ತಮತಮ ಶಿರವ-
ನಮಿತಕೋಪೋದ್ರಿಕ್ತರಾಗಿ ಕತ್ತರಿಸಿ
ಕೊಳುತಲಾ ತಲೆಗಳನೆಡೆದ ಕೈಗಳಲಿ
ಬಲಗೈಲಿ ಕರವಾಳಗಳ ಝುಳಪಿಸುತ
ಕೆಲೆಯುತತ್ಯಂತ ವಿಜೃಂಭಿತರಾಗಿ-
ಯಲರಿ ತೂಗಾಡುವಲಗುಗಳು ಹೊಳೆಯೆ
ಕುಣಿಯುತ್ತಲಾಡುತ್ತಲೋಯೆಂದರಚಲು
ಜಿನಮುನಿಗಳು ಭೀತಿಯಿಂದ ಮೂರ್ಛಿಸಲು
ಒರಲುವ ಜಿನಮುನಿಗಳನು ಹಿಂಡುತ್ತ
ಕಂಡೆಲ್ಲ ಶಿರಗಳ ತರಿದುಹಾಕುತ್ತ

ರೂಢಿಯಿಂದಾಡಿ ಪಾಡುತ್ತ ಸಹಸ್ರ-
ದೇಳ್ನೂರು ಬಸದಿಗಳನ್ನು ಲೆಕ್ಕಿಸುತ
ಜಿನರೂಪಗಳ ತಲೆಗಳ ಛಿದ್ರಗೈದು
ಜಿನಬಸದಿಗಳ ಮೇಲಣ ಧ್ವಜ ನೂಕಿ-
ಯೊಂದೊಂದು ಲಿಂಗವನೊಂದೊಂದು ಬಸದಿ-
ಯಲ್ಲಕ್ಕಜದಿ ನಿಲ್ಲಿಸಖಿಲರು ತಿಳಿಯ-
ಲಾರಯ್ಯೆ ತಲೆಗಳಲಟ್ಟೆಗಳಿಟ್ಟು
ಧಾರುಣಿಯರಿಯದೆ ತೇರಸರೆನಲು
ನಾಚಿ ದೇವಯ್ಯನನಶ್ವರನಮಹಿಮೆ;
ನೀಚನೆ, ತಿಳಿಯೆಯ ನಿನ್ನಿನ ವಾರ್ತೆ!

ಪಾಟಿಪ್ರವವದೆಂದು ಪಾಟಿಪ ಜನನ
ನಾಶವಗೈಯುವೆ ಹೇಳಲೇಕಿನ್ನು
ಕಡಿಪುದು [illegible]ಪ್ರವೆ ಪಶುಗಳ ನಿಮ್ಮ?

## ಸೋಮಣ್ಣನ ಕಥೆ

ಮತ್ತೆಯು ಹುಳಿಗರವೆಂಬ ಪುರದಲಿ
ಶೂಲಿಯ ಭಕ್ತನು ಸೋಮಣ್ಣನೆನೆ ತ್ರಿ-

ಕಾಲದಿ ಮಾಡುವ ಲಿಂಗಸ್ಪರ್ಶನದ
ನೇಮವ ಹೊಂದಿ ಭೂಮಿಯಲಿ ವರ್ತಿಸುತಿ-
ರಲು ಮತ್ತೊಂದು ದಿವಸ ಕಂಗಳು ನೋಯೆ
ಕಡು ಸಂಕಟಪಡುತ ಕಾಣಲಾರದೆಯೆ
ಗುಡಿಗೈದಲಾರದೆಯೂಟ ಮಾಡಿದರೆ

ತನ್ನೊಬ್ಬನನು ಬಿಟ್ಟು ತತ್ಪುರಿಯೆಲ್ಲ
ಜೈನರಿರುತಿರಲಸಹ್ಯಭಾವದಲಿ
"ಉಣ್ಣದೆಯಿರಲೇಕೆ ಗುಡಿಯೆಡೆಗಾವು
ಕರೆದೊಯ್ಯುವೆವು ನಿನ್ನನೀಗಲೆ ಮುದದಿ"
ಎನುತ ಜೈನರು ಕರೆದೊಯ್ದು ತತ್ಕಾರ್ಯ
ವಂಚಕರ್ ಸುರಹೊನ್ನೆ ಬಸದಿಗೆ ಬಂದು
"ಮೊಕ್ಕಯ್ಯ ನಿಮ್ಮ ಮುಕ್ಕಣನೀತನೆ"ನಲು
ಜಿನನ ತಲೆಯ ಮೇಲೆ ಕರಗಳನಿಟ್ಟು
ಹುಡುಕಿ ಲಿಂಗಾಕೃತಿಯಂತೆಯೆ ಇರಲು
ಬೆರಳು ಮಡಿಸಿ ಮೂರು ಬಾರಿ ತಾ ಮೊಕ್ಕಿ

ಬಲಗೊಂಡು ಸರ್ವಾಂಗಗಳನೆಲ್ಲ ನೆಲದಿ
ಕಡು ಚಾಚಿ ಮೊಕ್ಕಲು "ಇನ್ನೇಳು ಸಾಕು
ಜಿನಪ್ರಸನ್ನತೆಯೊಂದಿಯೊಲಿದುದನೀವ-
ನಿನ್ನೆಮ್ಮ ಬುದ್ಧಿಯ ಪಡೆದಿನ್ನು ಬದುಕು"
ಎನ್ನಲು ಸೋಮಣ್ಣನಾಗ್ರಹದಿಂದ
"ಜಿನನಿಗೆ ಗಿನನಿಗೆ ಕೈಯನೆತ್ತುವೆನೆ
ಛೀ, ದುಷ್ಟರಿರ ಸಾಕ್ಷಾಲ್ಲಿಂಗಮೂರ್ತಿಯನು
ತೋರುವೆ ಬನ್ನಿರೆ"ನ್ನುತಲೊಳಗೈದು
ಕಣ್ಣಲ್ಲಿ ಕಟ್ಟಿದ್ದ ಮುಸುಕನು ಬಿಚ್ಚಿ
ಮುಂದೆದ್ದು ಬಲವಾಗಿ ಕಂಗಳ ತೆರೆಯ-

ಲಲ್ಲಿದ್ದ ಜಿನಮೂರ್ತಿಯಲ್ಲಿಲ್ಲಿ ಜರುಗಿ
ಪಟಪಟನೊಡೆಯುತಲಲ್ಲಿಯೆ ಬೀಳೆ
ನಿಟಿಲತಟಾನಲೋತ್ಕಟ ಚಟುಲಾಕ್ಷ-
ನಾ ಜಿನ ಪ್ರತಿಮೇ ಮಧ್ಯದಲಾಗ ನಿಲ್ಲೆ
ವ್ಯಾಪಿತಾರ್ವಾಜಿನ ರೂಪವು ಬೆಳಗೆ
ಗೋಪತಿವಾಹನ ಮೂರ್ತಿಯನು ಸುರ-
ಹೊನ್ನೆ ಬಸದಿಯಲಿ ಸೋಮೇಶನೆನಲು

ನಮ್ಮ ಸೋಮಣ್ಣನ ಭಕ್ತಿಗೆ ಮೆಚ್ಚಿ
ಮುಂಗೈಯ ಕಂಕಣಕೇಕೆ ಕನ್ನಡಿಯು
ಭಂಗಗೊಂಡಿಹ ಜಿನಪ್ರತಿಮೆಯೆ ಸಾಕ್ಷಿ-

ಯಿಂದು ಪ್ರಸಿದ್ಧವು ತಿಳಿಯದೆ ನಿನಗೆ
ಹುಳಿಗರೆಯೊಳಗಿರುವುದೆಲವೊ ಜೈನ!

**ವೈಜಕ್ಕವ್ವೆಯ ಕಥೆ**

ಮತ್ತೆ ಪರವಳಿಗೆ ಸತಿಯು ವೈಜವ್ವೆ
ಖಂಡೇಂದುಧರಪಾದಕಮಲಾಂತರಂಗೆ
ಪತಿಯಾದಿಯಾಗಿ ಪುರಿಯ ಜನರೆಲ್ಲ
ಜಿನಮಾರ್ಗವರ್ತಿಗಳಾಗಿ ನಡೆಯಲು
ಆಕೆಯ ಗಂಡನೊಂದುದಿನ ಜೈನರಿಗೆ
ಪ್ರೀತಿಯಿಂ ಪರ್ವವನಿಡುವೆಡೆಯಲ್ಲಿ
ತರಳಾಕ್ಷಿಯಿಂದ ಪಡಿಪದಾರ್ಥಗೈಸಿ
ತಾನು ಜೈನರ ಕರೆಯಲ್ಕೆ ಹೋಗಿರಲು

ತರುಣಿ ತಾನಾಪದಾರ್ಥಗಳ ವೀಕ್ಷಿಸುತ
"ಹರಮೂರ್ತಿಯೊಬ್ಬನಾದರರಿಯನೇನು
ಪರಿಕಿಸೆ ತಾಗ್ಯೆದ ಪಾಯಸಾನ್ನಗಳು
ಪರಮೇಶ, ಇತರರ ಪಾಲಾಯ್ತೆ"ನುತ್ತ
ಕಡುಕಡು ದುಃಖಾಗ್ನಿಯಲಿ ಬೇಯುತಿರಲು
ತಾ ತಪೋವೇಷಿಯಾಗುತ ಮೃಡ ಬರಲು
ಸುದತಿಯು ಕಡುಭಯದಿಂದ ಗಾಬರಿಯ
ಬೀಳುತ ಸಂತೋಷದಿಂದ ಸಾಷ್ಟಾಂಗ-
ದಲಿ ಹಲಬಾರಿ ಮೊಕ್ಕುತ ಪಾದಧೂಳಿ-
ಯಲಿ ಬಿದ್ದು ಹೊರಳಿ ಬೀಳುತ ವೈಜಕವ್ವೆ-

ಯಾದಿದೇವನ ಮೂರ್ತಿಯಾದ ತಾಪಸಿಯ
ಪಾದಗಳ ತೊಳೆದು ಪ್ರಾಶಿಸಿ ಮೊಕ್ಕಿ-
ಯುಚಿತಸತ್ಕಾರಸಂಪದದಿಂದ ತಣಿಸಿ-
ಯಮಲದೇಹನ ಸುಖಾಸೀನನಾಗಿಸುತ
ಪಡಿಪದಾರ್ಥಗಳನು ಪಕ್ವಾನ್ನಗಳನು
[illegible]
ಬಡಿಸೆ ತಾಪಸಿಯೊಡನಾರೋಗಿಸುತಿರೆ

ಸಪ್ಪಳಗೈಯುತ ಚಪ್ಪರಿಸುತಿರೆ
ಸಂತೋಷದಿಂದುಣಬರುತಲಿ ಜೈನ–
ರಂತಕಾಂತಕಮೂರ್ತಿಯನ್ನು ಕಾಣುತ್ತ–

ಲವರು ಮರಳಿ ಹೋಗೆ ಗಂಡನು ಬರುವ–
ನಿತರಲಿ ತಪಸಿಯಂತೆಯದೃಶ್ಯವಾಗೆ
"ಪಾತಕಿ ವೈಜಿ, ತಾಪಸಿಯೆಲ್ಲಡಗಿದ?
ಗಾಸಿಪಡದೆ ತೋರು ಕ್ಷಪಣರ ಕೈಲಿ
ಕಣ್ಣಿಂದಲೂ ನೋಡಬಾರದು ತಪಸಿ–
ಯನೆನಲು ನೀನಿಂತು ಉಣಲಿಡಬಹುದೆ?
ಸರಿಯೇನು, ನಮ್ಮ ಮನೆಯ ಹಾಳುಗೈದೆ.
ಎಲ್ಲಿ ಬಚ್ಚಿಟ್ಟೆಯಾ ಬೂದಿಗೊರವನ
ಗಂಡನಾಜ್ಞೆಯ ಮೀರಬಹುದೆ ನೀನಿಂತು?
ನಂಟಿಹುದೇನು ಆ ತಪಸಿಗು ನಿನಗು?

ಸಮ್ಮತವಹುದೇನು, ನಡೆ"ಯೆಂದು ಸತಿಯ
ಚಮ್ಮಟಿಯಲಿ ಚಾಟುಚಾಟೆನೆ ಹೊಡೆಯೆ
ಮಡದಿ ಲೆಕ್ಕಿಸದಲೆ ಶಿವನನು ನೆನೆಯೆ
ಪತಿಯಯೇಟುಗಳೆಲ್ಲ ಸತಿಯ ತಾಕದಲೆ
ಹಿಟ್ಟನಾರೋಗಿಸಲೆಂದಿಡೆ ಶಂಭು
ಪಿಟ್ಟವ್ವೆಗಾಗಿ ರಾಜನ ಬಿಟ್ಟಿಗೈದು
ಸೋಲುತ್ತಲೋಲಾಡಿ ತಾ ತಪಿಸುತ್ತ–
ಲಾಲಸ್ಯಗೈಯಲು ಕೋಲುಗಳವರು
ರೇಗುತ್ತ 'ವಟು ಹೋಗೆ'ನ್ನತ ಹೊಡೆವೇಟು
ಆಗ ಚೋಳನ ನಿಯೋಗಕೆ ಬೀಳುವಂತೆ

ಬಸದಿಗಳಲಿ ತುಂಬಿ ಬೀದಿಗಳಲ್ಲಿ
ತಿರುಗುವ ತಮ ಜೈನ ಪಶುಗಳ ತಾಕೆ
ದದ್ದುಗಳನು ಕಟ್ಟಿ ಮೂಬಾರಿ ಸುತ್ತಿ
ಹೊಡೆತಗಳಿಂ ಬೆನ್ನ ಮುರಿದುಕೊಳುತ್ತ
ಭಯದಿಂದ ಬೆನ್ನನು ತುರಿಸಿಕೊಳುತ್ತ
ಕೆಲಕೆ ಬಾಗುತ ಕೈಗಳನು ಚಾಚಿಕೊಳುತ
ಎಗರೆಗರುತ ಬಿದ್ದೇಟನು ಮಾಣಿಸೆಂದು
ತಲ್ಲಣಗೊಳುತಲಿ ವಿಭ್ರಾಂತರಾಗಿ

ಹೋಯೆಂದರಚುತಲಿ ಉಪತಪಿಸುತ್ತ
ಬಾಯೆತ್ತಿಯಳುತ ಬಸದಿಗಳನೇರಿ

ಅಲ್ಲಿಂದಲಿಳಿಯುತಲೋಟವಕಿತ್ತು
ಸಂದಿಗಳಿಗೆ ಹೋಗಿ ಕೆಳಗೆ ಹೊಗುತ್ತ
ಕೆರೆಗಳಲಿ ಮುಳುಗಿ ಮರಗಳನೇರಿ
ಬೀಳುತ್ತಲೊಂದೊಂದು ಠಾವನು ಸೇರಿ
ಹೊಡೆತಕ್ಕೆ ಸಿಲುಕುತ್ತ ವಿಹ್ವಲರಾಗಿ
ತಟ್ಟುಗಳನು ಕಂಡು 'ತಮ ಕರ್ಮ' ವೆನುತ
ಹಿಂದೆಯೆ ಜಿನನಾಗಿ 'ಸಿಕ್ಕಿದೆ'ವೆನುತ
ನೋಡುತ್ತ ಹೋಗಿ 'ಎಲ್ಲಿಯ ಸೊತ್ತೆ'ನುತ್ತ
'ಬಂತು ಸಾವೆ'ನುತ 'ದೈವವರಿವುದೆ'ನುತ
'ನೊಂದೆವೆ'ನುತ್ತ ತಾಪವನನುಭವಿಸಿ

ತಲೆಗಳ ಬಂಡೆಗೆ ತಾಕಿಸಿಕೊಳುತ
ನಿಲ್ಲುತ ಹೊರಳುತ 'ಹೇಗೊ'ಯೆಂದೆನುತ
ಸುರಿಯುವ ಮೈಯಿನ ನೆತ್ತರಂಟಂಟಿ
ನೋಡಿಯಡಿಗಡಿಗೆ 'ಸತ್ತ'ವೆನುತ್ತ
'ಹೋಗಲು ತಾವಿಲ್ಲ'ವೆಂದು ಮೂರ್ಛಿಸುತ
'ಹರಕೃತ್ಯವಲ್ಲದಿರದು'ಯೆಂದೀ ರೀತಿ
ಸಂತಾಪದಲಿ ಜೈನರೊರಲುತ್ತಲಿರಲು
ಅನಿತರಲೊಬ್ಬನು ಮತಿವಂತ ನೋಡಿ
'ಚಟ್ಟೆಂದು ಒಂದೇಟ ಸತಿಗಿಡೆ ಚಾಟು
ಚಾಟೆನ್ನುತೀ ಜೈನಕೋಟಿಗೆ ತಾಕೆ-

ಯಕ್ಕಜದಿಂದಿನಾಂಶುಗಳನು ಹೋಲ-
ಲೊಂದೊಂದೇಟನು ಹೊಯ್ಯೆ ಮುಖಗಳಿಗಾಗ
ಶ್ರೀಚಂದ್ರಮುನಿಯೈದು ಕೆರೆಯಪಾಲಾದ-
ನಾಚಾರ್ಯಮುನಿ ಹೋಗಿಯಗುಳಲಿ ಬಿದ್ದ
ವರಚಂದ್ರಮುನಿ ಬಸದಿಯನೇರಿ ಬಿದ್ದ-
ನರಹತಮುನಿ ಹೋಗಿಯಡವಿ ಸೇರಿದನು
ಕ್ಷಪಣೇಂದ್ರಮುನಿ ಪ್ರಾಣದುಪತಾಪವಡೆದ
ವಿಪುಲೇಂದ್ರಮುನಿಯ ಬೆನ್ ಬಿಕ್ಕನೊಡೆಯಿತು
ರಾಜೇಂದ್ರಮುನಿಯು ತಾ ಪ್ರಾಣವ ಬಿಟ್ಟ
ಜಿನಕುಲಗುರುಗಳಿನಿತರಲಿ ಕೆಟ್ಟು

ಕೆಲವರಲ್ಲಿಯೆ ಕೃಶರಾಗಿ ಮಡಿದರು
ಕಂತುಸಂಹರಚೇಷ್ಟೆಯಂತಿದೆ"ಯೆನುತ
ಮಡದೆಗಡ್ಡವು ಬರುತವನ ವಾರಿಸಲು
ದುಷ್ಪರ ಮೇಲಿನೇಟುಗಳೆಲ್ಲವುಡುಗೆ
ಭಾರ್ಯೆಯು ಸದ್ಭಕ್ತಿ ತಾತ್ಪರ್ಯೆಯೆಂದು
ಆರ್ಯೇತರನರಿದು ಹಿಂಜರಿಯುತ್ತ
"ಅನ್ನವನಿಟ್ಟೆ ನೀನಬ್ಬಬ್ಬ ಮುನ್ನ
ತಾನರಿಯದಲಿದ್ದ ತಪಸಿಯೊಬ್ಬನಿಗೆ
ಅಲ್ಲದೀಗಲು ಶಿಕ್ಷೆಗೈದಿಹೆಯೆಲ್ಲ-
ರಿಗೆ ಮುನೀಂದ್ರರಿಗೆಲ್ಲವೆಗ್ಗು ಮಾಡಿರುವೆ

ಮುದಿಗೊರವರ ತಂತ್ರಮಂತ್ರಗಳೆಲ್ಲ
ನಿಶ್ಚಿಂತೆಯಿಂದೆಂತು ಬದುಕಬಿಡುವುವು?
ಹೆದರಿದೆವಿನ್ನೆಮ್ಮ ಮನೆಯ ಬಿಡೆ"ನುತ
ಭರದಿಂದ ನೂಕಲು ಆ ವೈಜಕವ್ವೆ
ಹೋಗುತ್ತ ಹೋಗುತ್ತ ಜೈನಾಲಯವನು
ಕಂಡು ಶಿವಾಲಯವಿರಬಹುದೆನುತ
ವನಿತೆ ಮನೆಯ ಬಿಟ್ಟು ತಿಳಿಯದೆ ಮುನ್ನ-
ವಿದು ಬಸದಿಯೊ ಗುಡಿಯೋ ತಾನರಿಯದೆ
'ಮುಕ್ಕಣ್ಣ ಶರಣೆ'ಂದು ಕೈಗಳ ಮುಗಿದು
ಮೊಕ್ಕುತ ಬಸದಿಯ ಬಳಿ ಸತಿ ಬರಲು

ಜಿನಪ್ರತಿರೂಪವು ತಾನಾಗಲೊಡೆಯು-
ತಲ್ಲಲ್ಲಿ ಬೀಳೆ ತದಭ್ಯಂತರದಲಿ
ಉದಯಿಸಿತದ್ಭುತಾಸ್ಪದಲಿಂಗಮೂರ್ತಿ
ಮುದಿತ ಸಮುದಿತಸಮ್ಮದಲೀಲೆಯೊದವೆ
"ಪುರುಷನು ಶಿವಭಕ್ತಿವಿರಹಿತನಾಗೆ
ಪುರುಷನ ಮೀರುವ ತರುಣಿಗೆ ಪಥವು
ದುರ್ಗತಿಯೊಂದನು ಪತಿಯನು ಬಿಟ್ಟು
ಭರ್ಗನ ಕೊಂಡಾಡುವ ಸತಿ ತಾನಂತೆ
ಮೆರೆಯೆ ನಾಲಾಯನಿಯೆನೆ ಮುನಿಭಾರ್ಯೆ-
ಯನಸೂಯೆಯು ಪುರುಷನಭಕ್ತನಾಗೆ

ಬಿಟ್ಟು ಶಂಭುವ ಮೆಚ್ಚಿ ಪಡೆಯರೆ ತಾವು
ಭಾಸುರವಹ ಮೋಕ್ಷಪದವಿಯ. ಮತ್ತೆ-

ಯಿಂತಿಲ್ಲರರಿಯಲು ತಿಲಕವ್ವೆಯೆಂಬ
ತರುಣಿಯೀಶ್ವರಭಕ್ತಿ ವಿಮುಖನಾಗಿದ್ದ
ಪತಿಯ ತೊರೆಯಲವ ಕೊಲ್ಲುವೆನೆನುತ
ಬರಲು ಶಿವಾಲಯವನು ಸತಿ ಹುಗಲು
ಹಿಂದೆಯೆ ತಾ ಬಂದು ಗಂಡನು ಶಿವನ
ಹಿಂದಡಗಿದ ಸತಿಗೆ ಕಿನಿಸಿ ಸೆರಗ
ಹಿಡಿದೆಳೆಯೆ ಪುರುಷಭಾವದಲಿದ್ದು
ನೆಟ್ಟನೆ ಶಿವಭಕ್ತಿನಿಷ್ಠೆಯಾಗಿದ್ದ-

ಳೆನುತ ಹೇಳಲು ಕೇಳ್ದವಾದ್ಯೋಕ್ತಿಯಂತೆ
ತೋರಿದುದಿಂದು ಕಾಂತೆಯ ಸದ್ಭಕ್ತಿಯದು"
ಎಂದಸಂಖ್ಯಾತ ಭಕ್ತಾವಳಿ ಹೊಗಳೆ
ಜನನಿಕಾಯವು ಉಘೇಯೆಂದು ಜಯವಿಡ-
ಲಾ ಜಿನಮುನಿಗಳತ್ಯಾಶ್ಚರ್ಯಗೊಳಲು
ವೈಜಕವ್ವೆಗೆ ಮೊಕ್ಕಿ ಪ್ರಸ್ತುತಿಸುತಿರೆ
ವೈಜವ್ವೆಯಾಭಾವೋದ್ಭವನಾದ್ದರಿಂದ
ವೈಜನಾಥನೆನುತ್ತಲಿಳೆಯಲ್ಲಿ ಮೆರೆದು
ಭ್ರಾಜಿಸಿದ್ದರಿಯೆಯ ಪರವಳಿಗೆಯಲಿ
ವೈಜಕವ್ವೆಯ ಮಹಿಮೆಯ ಜೈನ ಖೂಳ!

ಸಮದ ಸದ್ಭಕ್ತರ ಶೌರ್ಯಾತಿಶಯುಗ-
ಳೆಣೆಸಲನಂತವದಿಷ್ಟೆಲ್ಲವೇಕೆ?
ಅಂದಿನ ಲಿಂಗವು ಸವೆವುದೇನಿಂದು
ಅಂದಿನ ಭಕ್ತರ ಮಹಿಮೆ ನವೆವುದೆ
ಕಿರಿಯ ಸಮಯಗಳನೀರೀತಿ ಕೆಡಿಸ-
ಲಂಥಹಿರಿಯರೇಕೆ ನಾನೆಯೆ ಸಾಕು;
ಗರ್ವಿಸಿ ಜೈನಮಾರ್ಗವೆಯಾದಿಯೆನುತ-
ಲಿಬ್ಬಂದಿ ಜಿನಮುನಿಗಳು ಅಬ್ಬಲೂರ
ಮೆಟ್ಟೆಮ್ಮ ಜೊತೆ ಪ್ರತಿಘಟ್ಟಿಸಾಡುತಿರೆ
ನೆಟ್ಟನೆ ವಾದವನಿಂತು ಗೆಲ್ಲುತಿರೆ

"ಅಂತಾಗದಿನ್ನು ಪ್ರತ್ಯಕ್ಷಪ್ರಮಾಣ-
ವಿನ್ನು ತೋರ್ರೈ"ಯೆಂದು ಮೂದಲಿಸುತಿರೆ
"ಓಬಯ ಬಸದಿಯೆನ್ನುತೂರಿಗೆಲ್ಲಕ್ಕು
ಉರುಜಿನಾಲಯವಿನನುದಯಕ್ಕೆ ಮುನ್ನ-

ವೊಳಗಿನ ಗೋಡೆಗಳೊಡನೆಯೆ ಬಿದ್ದು
ಅವು ನಿಮ್ಮ ದೇವರ ತಲೆಯನೊಡೆಯುತ
ನೆಲಕೆ ಬೀಳಿಸಿದಾಗಲೀಶನ ಬಂಟ-
ನಾಗುವೆನಿದುವೆ ದೃಷ್ಟವು ನೋಡೆ"ನುತ್ತ
ಬರುವಷ್ಟರಲ್ಲಿಯೆ ಬಸದಿಯ ಸಹಿತ
ಸೀಳಿ ಬಿಸುಡುವ ರೀತಿಯಲಿ ತಾ ಬೀಳೆ

ಜಿನರೂಪವೆಲ್ಲ ತುತ್ತುಣುಕಾಗಿ ಬಿತ್ತು
ಜನರು ಜೈನರು ಕೂಡೆಯಾಶ್ಚರ್ಯಪಡಲು
ಬೀಳ್ವವೂರಿನಲಿದ್ದ ಮಿಕ್ಕೆಲ್ಲ ಬಸದಿ-
ಗಳು ಹೀಗೆ ಹೇಳಲೇಕಿಷ್ಟೆಲ್ಲವಿನ್ನು
ಮುದಿಸೂಳೆಯಾ ಪಾಡು ಮುಂದಣ ಕಥೆಯ-
ನೊರೆದು ತೋರುವ ಶಂಕಿತದ ಮನದವನೆ
ವರಕೀರ್ತಿ ಮೊರಟದ ಬಂಕಯ್ಯನವರ
ದಾಸನು ಬಿರುಸೆನ್ನಬಹುದೇನು ನಾನು
ಈಗಲೆ ಶಿರವನೀಯುತ್ತೀಗ ಮತ್ತೆ-
ಯೊಪ್ಪದಿಂ ಪಡೆಯುವೆನೆಲವೆಲೊ ಜೈನ!

ಈಗಲೆ ಶಿರವೀಯುತೇಳುದಿನಗಳು
ಈ ಪುರವೀಥಿಗಳಲ್ಲಿದ ಮೆರೆಸಿ
ತಲೆಯ ಪಡೆಯುವೆನು ಜಗವೆಲ್ಲವರಿಯೆ;
ತಲೆ ತಲೆ ನೋಡಲು ದೊರೆಯದಾ ಶಕ್ತಿ-
ಯಾಮೇಲೆಯೀ ಕಲ್ಯಾಣಕಟಕದಲ್ಲಿ
ಕಾಣಲು ಔಷಧಕಾದರಿಲ್ಲದಲೆ
ಬಸದಿಗಳನ್ನೆಲ್ಲ ಹಾಳುಗೆಡವುತ-
ಲಾ ಜಿನಪ್ರತಿಮೆಗಳ ಬಿಸುಡುವೆನಿದು
ಭಾಷೆ, ನಿಮ್ಮಿರ್ಗಾಲಿ ಪಶುಗಳ ಕೊಂಡು
ಮಾಡಲದಿನ್ನೊಂದು ಸಿದ್ದಿಯೇನಿಹುದೆ"

ಎನ್ನಲು ಅಂತಾಗಲೆನ್ನುತೊಂದೆಸೆಗೆ
ಜಿನಸಮಯಸ್ಥರು ಸೇರಿ ನೋಡುತಿರೆ
ಬಸವನ ಸಹಿತವೆ ಭಕ್ತನಿಕಾಯ-
ವೆಸೆಯುತ್ತಲೋಲಗವಿತ್ತು ಕುಳ್ಳಿರಲು
ಬಿಜ್ಜಳ ತಂತ್ರದೊಡನೆ ಪುರಾಂತರದ-
ಲಾಬಾಲವೃದ್ಧರೆಲ್ಲರು ನೋಡುತಿರಲು

ಅಚ್ಚರಿಯಾಗಲೇಕಾಂತರಾಮಯ್ಯ-
ನಂಕಕಾರನ ರೀತಿ ಕಚ್ಚೆಯ ಕಟ್ಟಿ
ದರಹಾಸಕಾಂತಿ ವಸ್ತ್ರದಲಿ ತುಳ್ಕಾಡೆ
ತಾ ಬಂದು ಭಕ್ತಗಣಾಳಿಗೆ ಮೊಕ್ಕಿ

ಬೊಬ್ಬಿರಿದಾರ್ದು ಪೊಂಗಲುಗ ಕಂಠಕ್ಕೆ
ಸೇರಿಸಿ ಮುಡಿಯೊಂದು ಕೈಯಲಿ ಹಿಡಿದು
ಆಸುರದಿಂದಾಗಲಟ್ಟೆಯ ತರಿದು
ಶಿರವು ಕೈಯಿಗೆ ಬರೆ 'ಭಾಪು ಭಾಪೆ'ನಲು
ಬಸವ ಕೀರ್ತಿಸುತಿರೆ ಭಕ್ತಸಮೂಹ-
ವಸಮಲೀಲಗುಘೇಯೆನ್ನುತ ಹೊಂಗಿ ಕೂಗೆ
ಕ್ಷ್ಮಾತಲೇಶನು ಶಿರಃಕಂಪಪೂರ್ವಕದಿ
ಕೈಗಳನೆರಡನು ಶಿರದ ಮೇಲಿಡಲು
ಬಿಡದಲೆ ಜಯಜಯಧ್ವನಿಯ ಘೂರ್ಣಿಸಲು
ಪುರಜನರೆಲ್ಲ ವಿಭ್ರಾಂತಿಯಿಂ ನೋಡ-

ಲವಿಕಲಸಕಲವಾದ್ಯಧ್ವನಿಯಾಗೆ
ವಿವಿಧನಾಟಕಮಹೋತ್ಸವಗಳೊಪ್ಪುತಿರೆ
ಬಲಗೈಯಲಲುಗದೆಡದ ಕೈಲಿ ಶಿರವು
ತುಳುಕಾಡೆ ಬೀದಿಬೀದಿಗಳಲ್ಲಿ ಮೆರೆಸಿ
ಜತಿಯಿಡುತಿರೆ ತಾಳಗತಿಗಾಡುತಿರಲು
ಕ್ಷಿತಿ ಕಟಾರದ ಮೇಲೆ ಸೇರಿ ನಿಲ್ಲುತ್ತ
ಶರಣಾರ್ಥಿಯಿಡುತಲಿ ಜಯವಿಡಿರೆನುತ
ಬಿರುಸಾಗಿಯಾರುತ್ತ ಪೆಡಬೊಬ್ಬೆಯಿಡುತ-
ಲೀ ರೀತಿ ಕಳೆಯಲು ಏಳುದಿನಗಳು
ಆ ಪುರದಿ ಮೆರೆದೇಕಾಂತರಾಮಯ್ಯ

ಬಂದೆಂದಿನ ಗುಡಿ ಬಾಗಿಲ ಮುಂದೆ ನಿಂತು
'ಸಂದಿತೆ ಭಾಷೆ ಶ್ರಮಣದಿರಾ'ಯೆನುತ-
ಲೇಕಾಂಗವೀರನಲೋಕಾನುಸಾರ-
ನೇಕಾಂತರಾಮನಪಾಕೃತಕರ್ಮಿ
ಚಕ್ಕನೆ ಶಿರವನಟ್ಟೆಯಲಿ ಸಂಧಿಸಲು
ತಾನೊಂದಿಷ್ಟೊಂದೆಸೆಗೋರೆಯಾಗಿತ್ತು;
'ಹರ ದೈವವೆನ್ನಲೇಕಾಂತರಾಮಯನ
ಶಿರವು ಲೋಕಕ್ಕೆಲ್ಲ ಗುರಿಯಾಯಿತೆ'ನ್ನ-

ಲೇಕಾಂತರಾಮನ ಶ್ರೀಕರಮಹಿಮೆ
ಲೋಕಾಂತವಾಯ್ತು ತ್ರಿಲೋಕಗಳಲ್ಲಿ

ಪ್ರತ್ಯಕ್ಷವೀತನೆ ಪರಮೇಶನೆನುತ-
ಲತ್ಯದ್ಭುತಾಕ್ರಾಂತರಹ ಜನ ಹೊಗಳೆ
'ಕಡು ದುರಾತ್ಮರ ನೋಡಬಾರದು ತಾವು
ಮುಖಕಡ್ಡವಿಟ್ಟರು ಭೀತಿಯಿಂದೆ'ನಲು
ಜನಪಾಲನ ಕೈಲಿ ಜಯಪತ್ರವಿತ್ತು
ಜಿನಸಮಯಗಳೆಲ್ಲ ಶಿವಭಕ್ತಗಣದ
ಮುಂದೆ ಮೈಚಾಚುತ ಮೊಕ್ಕುತಲಿರಲು
ಎಲ್ಲರ ಮೊಗಗಳಲಂದಚ್ಚನೊತ್ತಿ-
ಯಾರುತ್ತ ಪೆಡಬೊಬ್ಬೆಯಾಗಾಗಲಿಡುತ
ವೀರಮಾಹೇಶ್ವರವಿತತಿಯುಪ್ಪೊಂಗಿ

ಬಂದು ಬಸದಿಗಳ ಬೀಳೆ ಕುಟ್ಟುತ್ತ
ಜಿನಪ್ರತಿಮೆಗಳ ತಲೆಗಳನೊಡೆಯುತ-
ಲಸಮಾನಲೀಲೆಯಿಂ ಕಲ್ಯಾಣದಲ್ಲಿ
ಬಸದಿಯು ಜಿನನೆಂಬ ವಾರ್ತೆಯಿರದೊಲು
ವಿಜೃಂಭಿಸುತ ಕೊಂದು ಗಾಸಿಮಾಡುತ್ತ
ಧರೆಯಲ್ಲಿ ಜಿನರೆನಿಸಿದವರನೆಲ್ಲ
ಮಣ್ಣಪಾಲನು ಮಾಡಿ ನಿಖಿಲರು ತಿಳಿಯೆ
ಕಾಲಕಂಧರಭಕ್ತಗಣಸಮೂಹವದು
ಅನುಪಮಶೌರ್ಯನೇಕಾಂತರಾಮಯ್ಯ-
ನನುರಾಗಲೀಲೆಯಿಂ ಕೊಂಡಾಡುತಿರಲು

ಅನಯ ಬಸವನು ತನ್ನಯ ಸಂಗಮೇಶ-
ನೆನೆ ಭಕ್ತಿಯಿಂದಿರಲೇಕಾಂತರಾಮ
ವರಕೀರ್ತಿಯಿಂದಿಂತು ವರ್ತಿಸುತಿದ್ದ;
ವರ ಲಸದ್ಭಕ್ತಿವಿಸ್ಫುರಣದಿ ಮತ್ತೆ
ಪ್ರಥಿತನೀ ಏಕಾಂತರಾಮನ ದಿವ್ಯ
ಕಥೆಯನು ಕೇಳಿ ಬರೆದು ವಿಸ್ತರಿಸಲು
ಜಲಹಾಲಾಹಲವಹ್ನಿಶಸ್ತ್ರಾಸ್ತ್ರಬಾಧೆ
ಮೃಗರೋಗಗಳ ಭಯವಣಗುವುದೆಲ್ಲ,
ವಿಪುಲದೃಷ್ಟಾದೃಷ್ಟವಿವಿಧ ಸೌಖ್ಯಗಳು
ಅಪವರ್ಗಗಳು ಹರಕೃಪೆಯಿಂದಲಹವು

## ಸೊಡ್ಡಳದೇವ ಬಾಚಯ್ಯನ ಕಥೆ

ಧೀರರು ಸೊಡ್ಡಳದೇವ ಬಾಚಯ್ಯ-
ನವರು ಮತ್ತೆಯು ತಾವು ಕರಕಂಠಮೂರ್ತಿ
ನಿರ್ಗತೇಂದ್ರಿಯವೈರಿವರ್ಗದುರ್ಗುಣನು
ಭರ್ಗನಿರರ್ಗಳಾಂತರ್ಗತಧ್ಯಾನಿ-
ಯುಗ್ರಾಕ್ಷ ಭಕ್ತಗಣಾಗ್ರಗಣ್ಯನೆನೆ
ನಿಗ್ರಹಾನುಗ್ರಹೋದಗ್ರಶೌರ್ಯನೆನೆ
ಕಷ್ಟಗುಣಾಶ್ಲಿಷ್ಟ ದುಷ್ಟಜನಾರಿ
ಶಿಷ್ಟ ಜನಾನಂದ ಪುಷ್ಟಿಪಾಲಕನು
ದುರ್ಭಾವರಹಿತನಗರ್ಭಸಂಭವನು
ನಿರ್ಭವಾಶ್ರಯನಪುನರ್ಭವಶಾಲಿ

ಶಾಂತನು ದಾಂತನು ಸದಮಲಭಕ್ತಿ
ಕಾಂತನು ನಿರ್ಜಿತಾವಾಂತರಸಮಯ
ಪರದೈವ ಪರ್ವತಪ್ರಥಿತದಂಭೋಳಿ
ಪರದೈವಸಂದೋಹತರುಕುಠಾರನವ
ಪರದೈವಶುಂಡಾಲಪಂಚಾನನನವ
ಪರದೈವವಾರ್ಧಿಶುಂಭತ್ಕುಂಭಜನವ
"ತ್ರಿನಯನನತುಲಿತೋದ್ರಿಕ್ತ ಶೌರ್ಯವದು
ಘನನಂದಿಕೇಶ್ವರನಾ ಸರ್ವಜ್ಞತೆಯು
ಭೃಂಗಿನಾಥನ ಏಕಲಿಂಗನಿಷ್ಠೆಯದು
ಭೃಂಗಿಯಿಂದಾ ವೀರಭದ್ರನ ರೌದ್ರ

ಭೃಗುದಧೀಚ್ಯಾದಿಯ ಪೃಥುಶಾಪಶಕ್ತಿ
ಗೌತಮಮುಖ್ಯರು ತರ್ಕಪ್ರಯುಕ್ತಿ
ಗುರುನಾಥನಿನಿತ ರೂಢಿಸಿ ಬಾಚಾಂಕನನು
ವರದಿವ್ಯಮೂರ್ತಿಯೆನಿಸೆ ವಿರಚಿಸಿದ-
ನಲ್ಲದಿರಲು ಇಂಥ ಕಲಿಯುಗರುದ್ರ
ಮಾನಿತಪೃಥುದಿವ್ಯಮಹಿಮೆಯೆಂತಹುದು"
ಎನುತ ಲೋಕವದರ್ಥಿಯಿಂದ ಕೀರ್ತಿಸಲು
ಅನುರಾಗಲೀಲೆಯಿಂ ಭಕ್ತಿಯುಕ್ತಿಯಲಿ
ಸಿದ್ಧಾಂತಗಳ ಶ್ರುತಿಸ್ಮೃತಿಮೂಲಗಳನು
ಬದ್ಧವೇದಾಂತ ಸಂಪಾದಿತೋಕ್ತಿಗಳ

ನ್ಯಾಯವೈಶೇಷಿಕಾದ್ಯಖಿಲಶಾಸ್ತ್ರಗಳ
ಆಯತ ಬಹುಪುರಾಣಾಗಮಾರ್ಥಗಳ
ಸಹಜಾನುಮಾನಾದಿ ಸರ್ವಪ್ರಮಾಣ
ಬಹುತರ್ಕವಾದ ಜಲ್ಪವಿತಂಡಗಳನು
ಮೆರೆಯಲುತ್ಪತ್ತಿಸ್ಥಿತಿಲಯಕಾರಣನು
ಅಲರೆ ನಿತ್ಯಾನಂದನಂಬಿಕಾಧವನು
ಪಶುಪತಿಯೇ ಕರ್ತನಿತರ ದೈವಗಳು
ಪಶುಗಳೆನ್ನುತ ಪ್ರತಿಪಾದನೆ ಮಾಡಿ
ಜಿನಸಮಯಸ್ಥಲ ಶಿರಗಳ ತುಳಿದು
ವಿಷ್ಣುಸಮಯಿಗಳ ಮುನ್ನ ಮೂಗರಿದು

ಅದ್ವೈತಿಗಳ ಹತಾಹತದೊಳೋಡಿಸುತ
ವಿದ್ವೇಷವಾದಿಗಳನ್ನು ಧಿಕ್ಕರಿಸಿ
ಚಾರ್ವಾಕರುಗಳ ಗರ್ವವನಡಗಿಸುತ
ಸರ್ವೇಶಭಕ್ತಿಯನಿಳೆಯಲಿ ಮೆರೆಸಿ
ಧೈರ್ಯದಿ ಸೊಡ್ಡಳದೇವ ಬಾಚಯ್ಯ-
ನಿಂಥ ಸದ್ಭಕ್ತಿಮಹಿಷ್ಠೆಯಿಂದಿರಲು
ಆಗಾಗ ಸೌರಾಷ್ಟ್ರಕ್ಕೈದು ಹೋಗುತ್ತ
ಕಟ್ಟರ್ಥಿಯಿಂದ ಜಾಗರವ ಸಲ್ಲಿಸುವ
ದಿನವು ಬರಲು ಸಂತಸದಲಿ ಸೌರಾಷ್ಟ್ರ-
ದಲಿ ಜಾಗರವ ಮಾಡೆ ಹೋಗಬೇಕೆನುತ

ಬಿಜ್ಜಳನಿಗೆ ಹೇಳಲಾಗಿದನಾತ
"ಕಜ್ಜವೆಷ್ಟೊಂದಿದೆ, ಹೋಗದಿರೀಗ
ಕೊಟ್ಟಾರದಿ ಪಡಿಗಳನಳೆಯಬೇಕು
ಇಂತೇಕೆ ಸಲ್ಲದೈಯೆರಡರೋಲಗವು
ಬಾಣಂತಿ ಸೂಳೆಯ ಕೆಲಸವು, ರಾಜ-
ನೂಳಿಗವನು ಭಕ್ತಿಯನು ಕೂಡಿ ನಡೆಯೆ
ನೀನು ಸೌರಾಷ್ಟ್ರಕ್ಕೆ ಹೋಗಲ್ಲದಿರಲು
ಸೌರಾಷ್ಟ್ರನಾಥನ ಬರಿಸಿಕೊ ನೀನು
ಶಿವರಾತ್ರಿಗಿವರಾತ್ರಿಗೈವುದ ಮಾಣು
ತಪ್ಪಿಸಬಾರದು ಹಿಡಿದೂಳಿಗವನು"

ಎನ್ನುತ ಪರವಾದಿಗಳನುಮತದಲಿ
ಜನಪತಿಹೋಗಗೊಡದಲೆ ವಾರಿಸಲು

“ಮೂದಲಿಸಾಡಲು ಮೂರ್ಖತೆಯಿಂದ
ಹೋಹುದಲ್ಲವೆ ಕಷ್ಟವಾತನೆಂದೆಂತೆ
ಬರುವನಲ್ಲವೆ ತಾನು ವರದನು ನನಗೆ
ಈಗಲ್ಲಿ ಹೋಗುವಂತಾಗುವದಲ್ಲ-
ವಿದರಿಂದ ತಪ್ಪೇನು ನಿಜವ್ರತವೆನ್ನ
ನಾನೆಂತು ಶಿವನಿಗೆ ತಪ್ಪಿಸಬಹುದು?”
ಎಂದು ನಿಶ್ಚಿಂತಾತ್ಮನಾಗಿರುತಿರಲು
ಘನನು ಸೋಮೇಶ್ವರನಾ ಮರುದಿವಸ

ಮಡಿಸಿದೋಲೆಯ ನಂದಿ ಹಳವಿಗೆ ಹಿಡಿದು
ಪಡಿಹಾರಿಯೊಲು ಹಾಡುಹಗಲಲಿ ಬಂದು
ಕೊಟ್ಟಾರದಲಿ ಪಡಿಗಳನಳೆಸುತಿರ-
ಲಾಗಲ್ಲಿ ಬಾಚಯ್ಯಗಾತನಿಂತೆಂದ:
“ಸೌರಾಷ್ಟ್ರನಾಥ ತಾನೈತರುತಿಹನು
ಭೋರೆಂದು ಮುಂದೆ ಕಳುಹಿಸಿದ ಮುಂಚೆ
ಶಂಕರನಾಜ್ಞೆಯಿನೋದಿಕೋ ಲೇಖ-
ವನು ನಾಳೆಯಾತನೆ ಐತಹನಿಲ್ಲಿ;
ಆಸಕ್ತಿಯಿಂದಲನಿಶವು ನಿನ್ನಯ ನಿ-
ವಾಸದಲ್ಲಿಯೆ ಇರಬೇಕಾದ್ದರಿಂದ

ನೀ ದೊಡ್ಡ ಕಣಜವನಳೆಯಬೇಕಾದ
ದವಸವ ಕಳುಹಿಸು ಮುಂದೆ ಸೋಮೇಶ-
ನಾಯೆಡೆ ಪ್ರತ್ಯಕ್ಷನಾಗುವ”ನೆನುತ-
ಲೊಲವಿಂದ ಹೇಳುತ್ತ ಕಣ್ಮರೆಯಾದ;
“ಬರುವ ತಾನಿಲ್ಲಿಗೆ ಸೌರಾಷ್ಟ್ರನಾಥ-
ನನುಮಾನವುಡುಗಿಸಲೆಂದೆನ್ನುವಂತೆ
ಬಂದನೇ ಮುನ್ನ ರಾವಣನ ಮನ್ನಿಸುತ-
ಲಲ್ಲಿಯೇ ನಿಂದನಲ್ಲವೆ ನೀವೆನ್ನದಿರಿ;
ಭಕ್ತನೆಯಾತ ತಪಃಫಲೋನ್ನತಿಯ
ಶಕ್ತಿವಂತನು ತಾನೆ ಚರ್ಚಿಸಿ ನೋಡೆ

ಭಕ್ತರ ಕೈಯಿಗೆ ಸಿಕ್ಕದೆ ಶಿವನು
ಭಕ್ತಹೀನರಿಗೇಕೆ ಸಿಕ್ಕುವನವನು
ವಿಲಸಿತಭಕ್ತಿಸದ್ವಧಿಯನು ಮೆಚ್ಚಿ-
ಯಲ್ಲವೆ ಗುಡ್ಡವ್ವೆಗೆದುರಾಗಿ ಬಂದು

ಕದಲದಲ್ಲಿಯೆ ಸಿಕ್ಕಿದನು ತಾ ಸೋಮೇಶ-
ನದುಮೇಕಾವಿಂದೆಗವೆಂಬ ಪುರದಲಿ;
ಅದರಿಂದ ನೋಡುವೆ ತಪಸುವೀಪುರಕೆ
ದೇವನ ಬರವಿಗೆ ದೃಷ್ಟವೀಯೆಡೆಗೆ
ಪಡಿಹಾರಿಯಾಗುತ ಬಂದನು ತಾನು
ಅವನೆ ಸೌರಾಷ್ಟ್ರನಾಯಕನಾಗದಿರನು.

ಸಕಲನಿಷ್ಕಲಭಾವಸನ್ನುತಶಕ್ತಿ-
ಗಳ ಮೆಟ್ಟಿ ಪಡಿಹಾರಿಗಳಿರುವುದೆಂತು
ಬಂದನಿಂತಾಣತಿಯಿತ್ತು ಲೋಗರಿಗೆ
ಅಚ್ಚರಿಯಾಗಲಲ್ಲಿಂದ ಹೋಗಿಂತ-
ದೃಶ್ಯನು ತಾನಾದನೀಶನೆ"ನುತ್ತ
ಕಟಕವು ನರರು ವಿಖ್ಯಾತಿಗೈಯುತಿರೆ
ತನಗೆ ಸಮ್ಮುದಸಮುದ್ಭವವಾರಿ ಸುರಿಯೆ
ಶಿವನಾಣತಿಯ ಲೇಖವ ಶಿರದಿ ಧರಿಸಿ
ಪುರವನು ಶೋಭೆಯಿಂ ವಿರಚನೆಗೈಸಿ
ಕರಮನುರಕ್ತಿಯಿಂ ಬಾಚಯ್ಯ ಮತ್ತೆ

ಬಸವಯ್ಯ ಮೊದಲಾದ ಭಕ್ತರ ಜೊತೆಗೆ-
ಯಸಮವೊಡ್ಡೋಲಗದಲ್ಲಿರುವಾಗ-
ಲತಿಶಯದಾನಂದ ವಿಭ್ರಮವೆಸೆಯ-
ಲೆಡೆಯೆಡೆಗಾಡುತ್ತಲೆಡೆಯೆಡೆ ಹಾಡಿ-
ಯದೊ ಬಂದ ಬಂದ ವಿಯನ್ಮಂಡಲದಲಿ-
ಯಿದೋ ಬಂದ ಬಂದನು ಸೋಮೇಶನೆನಲು
ನೀರಧಿಗಳು ತಾವು ಘೂರ್ಣಿಸುವಂತೆ
ಸಾರಗಂಭೀರವಾದ್ಯಾರವವೆಸೆಯೆ
ಭೋರೆಂದು ಕೂಗುವ ಧ್ವನಿಕೇಳಿ ಬರಲು
ಸೌರಾಷ್ಟ್ರನಾಥನಾಶ್ಚರ್ಯವದಲರೆ

ದೊಡ್ಡ ಕೊಟ್ಟಾರವನೊಡೆದುಕೊಳುತ್ತ
ಬುವಿಯಲಿ ನೆಲಸಿದ ಧರಣಿಯು ನಡುಗೆ
ಸಿದ್ಧರಾಮಯ್ಯ ತಾ ಶ್ರೀಗಿರಿಗೈದು
ಶುದ್ಧಾತ್ಮ ಮಲ್ಲಿಕಾರ್ಜುನಗೆ ಪ್ರಾರ್ಥನೆಯ
ಗೈಯುತ್ತಲಾ ಸೊನ್ನಲಿಗೆಯೆಂಬ ಪುರಕೆ
ತಾನೆಂತು ಕರೆತರೆ ಸಾಮರ್ಥ್ಯವಡೆದ-

ನೀಗಲೀಯೆಡೆಯಿಂದಲೇ ಬಾಚಿತಂದೆ
ಕರೆಸಿಕೊಂಡನು ಬಳಿ ಸೋಮನಾಥನನು,
ಇಂಥ ಧನ್ಯನು ದೊರೆವನೆ"ಯೆಂದು ಭಕ್ತ-
ರೆಲ್ಲರು ಸೇರುತ ನುತಿಯಿಸುತಿರಲು ೧೩೫೦

ಆಶ್ಚರ್ಯವಡೆವುತ್ತಲಲ್ಲಿ ಬಿಜ್ಜಳನು
ಬಂದು ಸಾಷ್ಟಾಂಗದಿ ಬಿದ್ದು ನಮಿಸುತ
ಸಕಲ ನಿಯೋಗವು ಜಯವಿಡೆ ಬಸವ-
ನಕಲಂಕಲೀಲ ಬಾಚಯ್ಯನಂಕಿಸಲು
ವಾಯುವೇಗದಿ ಕಣಜಗಳನ್ನೊಡೆಸುತ
ನೆಲಗಟ್ಟು ಕಟ್ಟಿಸಿ ನಿಮಿಷಮಾತ್ರದಲಿ
ವರರತ್ನ ಖಚಿತಸುವರ್ಣಾಲಯಗಳ
ವಿರಚಿಸಿ ಕೋಟೆಗೋಪುರಗಳೆತ್ತಿಸುತ
ಪ್ರವಿಮಲೋದ್ಯಕ್ತಿಯಲಿ ಬಾಚಿರಾಜ
ಶಿವರಾತ್ರಿ ನಿಯಮವ ಸಲಿಸಿದನಲ್ಲಿ; ೧೩೬೦

ದೇವನು ಕೊಟ್ಟಾರಿ ಸೋಮನಾಥನೆನೆ
ನೆಲಸಿದ ಲೋಕವು ವಿನುತಿಸುತಿರಲು
ಸೊಡ್ಡಳದೇವ ಬಾಚಯನ ಸಲ್ಲೀಲ
ಸದ್ಭಕ್ತಿಧವಳವದೆಲ್ಲೆಡೆ ಹರಡ-
ಲವನನ್ಯಸಮಯ ಕೋಲಾಹಲ ಮಹಿಮೆ-
ಗಾ ಬಿಜ್ಜಳನು ಸಹಿಸದಲೆಯೆ ಮತ್ತೆ
ಕುಮತಿಯಿಂದಾಪುರಸಮಯಿಗಳೊಡನೆ
ರಮಣ ಪ್ರತಾಪನಾರಾಯಣಪುರದಿ
ಗೋವಿಂದ ಪ್ರತಿಮೆಯ ಸದ್ಭಾವವಲರೆ
ಮಾಡಿಸಿಯೊಂದು ಗುಡಿಯ ಕಟ್ಟಿಸಿ ಶುಭ ೧೩೭೦

ದಿನದಲಾತನನು ಪ್ರತಿಷ್ಠೆ ಮಾಡಿಸುತ-
ಲನುರಾಗಲೀಲೆಯಿಂದೆಲ್ಲರೋಲಗದಿ
ಸೇರಿರಲಖಿಲನಿಯೋಗವೋಲೈಸೆ
ತನ್ನರೇಂದ್ರನು ಆಗಲೆಲ್ಲರ ನೋಡಿ
"ಬಾಚಿರಾಜನು ಇಲ್ಲವೇ, ಭಕ್ತನೆಂದೊ
ಹೆಮ್ಮೆಯೊ ಈಕಾರ್ಯವರಿಯನೊ ಅರಿತು
ತಾ ಲೆಕ್ಕಗೈಯದೆ ತಮ್ಮೋಲಗವನು
ಒಲ್ಲನೊ ಲೀಲೆಯಿಂದೊಡ್ಡೋಲಗಕ್ಕೆ

ಬಾರದಿರುವನೇತಕೆಂ"ದಾಗ್ರಹಿಸಲು
ಮನುಜೇಶಗಿಂತೆಂದ ಬಸವಣ್ಣಮಂತ್ರಿ:

ನಿನ್ನೂಳಿಗವನು ತಾ ತಪ್ಪಿಸಿದಾಗ
ಬವರವು ನಡೆಯಲು ತಾನೋಡಿ ಹೋಗೆ
ತಪ್ಪೆಂದು ದಂಡಿಸಬರುವುದಲ್ಲದೆಯೆ
ಪರದೈವಗಳಿರುವ ಮನೆ ಮನೆಗಳಿಗೆ
ಬರಲಿಲ್ಲವೆನಬಹುದೇ ಪತಿ ನೀವು?
ಜೋಳವಾಳಿಯ ವಿನಾ ವೇಳೆವಾಳಿಗನೆ
ಬರುವರೇನನ್ಯದೈವಗಳಾಲಯಕ್ಕೆ
ಹೊಗುವರೆ ಭಕ್ತರು ನೋಡಿ ಕೇಳುವರೆ
ಲಿಂಗೈಕನಿಷ್ಠಾವಿಲೀನನು ಭೃಂಗಿ-
ಯಂಗಜಾರಾತಿಯ ಮಡದಿಯಾದಂಥ

ಅರ್ಧನಾರಿಗೆ ಮೊಕ್ಕದಭವನ ದಕ್ಷಿ-
ಣಾರ್ಧಕೆ ಬೇರೆಯಾಗಿಯೆ ಮೊಕ್ಕಿದನೆನ-
ಲಿಂತೆನಲೇಕೆ ಮಾಹೇಶ್ವರವಿತತಿ
ಚಿಲ್ಲರೆದೈವಗಳನು ಲೆಕ್ಕಿಸುವರೆ
ಕೇಳೆಯಾ ಘಂಟಾಕರ್ಣನೆನುವ ಪ್ರಮಥ
ಪರಶಬ್ದವನು ಕೇಳೆನೆಂಬ ನೇಮದಲಿ
ಗಣಗಣವೆನ್ನುತ ಮೊರೆವ ಗಂಟೆಗಳ
ತನ್ನ ಕಿವಿಗಳಲಿ ಹಲವನು ಧರಿಸಿ
ಲೋಕಗಳಲ್ಲಿ ಘಂಟಾಕರ್ಣನೆನುತ
ಪ್ರಾಕಟದಲಿ ಹೆಸರಾಂತನು ಮತ್ತೆ

**ಅರಿಯಮನ ಕಥೆ**

ಅದರಂತೆ ತಿಳಿಯೆಯಾ ಅರಿಯಮನೆಂಬ
ಮೊದಲಲ್ಲಿಯರುವತ್ತು ಮೂವರೊಳಗೆಯೆ
ಮೆರೆವ ಮಹೇಂದ್ರ ಮಂಗಳವೆಂಬ ಪುರದಿ
ನೆಲಸಿದ್ದ ಸದ್ಭಕ್ತಿನಿಷ್ಠೆಯಧಿಕದಿ
ತನ್ನಿದಿರೊಳು ಬೇರೆದೈವದ ಹೆಸರ
ನುಡಿವರ ತಲೆಯನು ಕಡಿಯುವೆನೆನುತ-
ಲಿರುತಿರೆ ಮನೆಗೊಬ್ಬ ಬ್ರಾಹ್ಮಣ ಸನ್ನು-
ತಿಯಲಿ ತಾ ರುದ್ರವನೋದುತ ಬಂದು

ಭಿಕ್ಷವ ಬೇಡಲು ಪ್ರೀತಿಯಿಂ ತಾನೆ
ಭಿಕ್ಷವ ತಂದು ಹಾಕುತಲಿರಲಲ್ಲಿ

ಅದರಲ್ಲೊಂದಗುಳು ನೆಲದ ಮೇಲೆ ಬೀಳೆ
ಸಂದಣಿಸುತಲನ್ಯಶಬ್ದವ ನುಡಿಯೆ
ಕಟ್ಟುಗ್ರದಲಿ ಕೈಯ ಸಟ್ಟುಗದಿಂದ
ಭೂಸುರನ ಹಿಡಿದು ಹೊಟ್ಟೆಗೆ ಹೊಡೆಯೆ
"ಕನಿಕರವಿಲ್ಲದಲರಿಯಮನೆಂಬ
ಭಕ್ತನು ಕೊಂದ ವಿದ್ವಾಂಸನೊಬ್ಬನನು
ಇರೆ 'ಬ್ರಾಹ್ಮಣೋನಹಂತವ್ಯ'ವೆಂಬ ನುಡಿ
ಮೆರೆಯುವ ವೇದೋಕ್ತಿಯನು ಕಡೆಗಣಿಸಿ
ಸ್ವಾಧ್ಯಾಯಪರನಾಗಿದ್ದಾ ಸದ್ಬ್ರಾಹ್ಮಣನು
ವಧ್ಯನೆ, ಸುಮ್ಮನೆ ವಧಿಸಲುಬಹುದೆ?

ಕೇಳಲು ಭಿಕ್ಷವನಿಡುವುದಲ್ಲದಿರೆ
ಕಳಿಸುವುದದ ಬಿಟ್ಟು ಕೊಲ್ಲುವರೇನು?"
ಎನುತ ಭೂಸುರರಾಗ್ರಹದಲೆಲ್ಲ ಕೂಡಿ
ಜನನಾಥನಿಗಿದನು ಹೇಳಿದ ತಡವೆ-
ಯಾಗಲೆ ಕರೆಸಿಯರಿಯಮರಾಜುವನು
"ತಪ್ಪೇನು ಮಾಡಿದನಾ ವಿಪ್ರ, ಹೇಳು
ಏಕೆ ಕೊಂದಿಹೆ ನೀತಿಯೇನಿಷ್ಟು ಬುದ್ಧಿ-
ಯಿಲ್ಲದಿರುವರೇನು, ಭಕ್ತಿಯ ಫಲವೊ
ಹೇಳು ಕಾಯುವೆನೇನ ಮಾಡಿದನಾತ
ಹೇಳದಿರಲು ಸರಿಮಾಡುವೆನಿಂತು

ಗೈವುದೆ?"ಯೆನ್ನಲು ಕಿರುನಗೆ ನಗುತ
"ಹೇಳಬಾರದು ಮಾತುಗಳವೆಲ್ಲವೇಕೆ?"
ಕೊಂದೆನಷ್ಟಾದರೂ ಕೊಂದಿಹ ರೀತಿ
ಕೊಲ್ಲವೇಕಿಹ ತಪ್ಪ ಶಂಭುವೆ ಬಲ್ಲ,
ಕಾಯೆ ಕೊಲ್ಲಲು ಕರ್ತದೇನಲ್ಲದೆಯೆ
ಕಾಯೆ ಕೊಲ್ಲಲು ನೀವು ಕರ್ತರೇ"ಯೆನುತ
"ಭವಿಕೀಟಕದ ಜೊತೆ ಶಿವಭಕ್ತಿಪರನ
ಬುವಿಯಲಿ ಸರಿಗೈವುದವಿನೀತಿ"ಯೆನೆದೆ
ಧರಣೀಶ್ವರನು ಮದಗ್ರಹಸ್ಥನಾಗುತ್ತ
ಸರಿಗೈಯೆ ಕಳಿಸಲಾ ಅರಿಯಮ ಮತ್ತೆ

ಬರುವೆಡೆಯೊಂದು ಶಿವಾವಾಸದಲ್ಲಿ
ಹೊಕ್ಕು ಸೀತಾಳವನೀಯುತ "ಲಿಂಥ
ಪರಮಪಾತಕನಾದ ದ್ರೋಹಿಯ ಜೊತೆಗೆ
ಸಮಸಾವು ಎನಗಾಯ್ತೆ, ಪರಮಾತ್ಮ"ಯೆನ್ನ-
ಲರಿಯಮರಾಜನ ಲಿಂಗೈಕನಿಷ್ಠೆ
ಪರಮನಿರ್ಮಲಭಕ್ತಿಗಳಿಗೆ ತಾ ಮೆಚ್ಚಿ
ಪರದೈವ ನಾಮದುರ್ಭಾಷಣನೊಡನೆ
ಸರಿಮಾಡಬಹುದೇನು ಶರಣನನೆನುತ-
ಲಾಕ್ಷಣ ಮಾತ್ರವೆ ಸ್ನೇಹದಿ ತನ್ನ
ವಕ್ಷವ ತೆರೆಯಲಾ ವರಲಿಂಗಮೂರ್ತಿ

'ಸೊರೆಸೊರ'ವೆನ್ನಲಾ ಅರಿಯಮರಾಜು
ಕರಮರ್ಥಿಯಿಂ ಲಿಂಗಗರ್ಭ ಸೇರುತಿರ-
ಲದಕಂಡು 'ಅದೋ ಹೋದನದೊ ಹೋದನೆ'ನುತ-
ಲಾ ತಳವಾರನು ಹೋಗುವ ಮುನ್ನ
ಹೊರಗಡೆ ಮಾರುದ್ದ ಸೀರೆಯ ತುದಿಯು
ಹೊಳೆಯಲು ಲಿಂಗದೊಳಗೆ ಪ್ರವೇಶಿಸಿದ;
ಭೃಂಗಿಯಿಂದೆಮ್ಮ ಶಿವಭಕ್ತರೆಂದು
ಕ್ಷುದ್ರದೈವಗಳನು ಪೂಜಿಸರೆನಲು
ಅರಿಯಮನುಟ್ಟಿದ್ದವಂಬರ ತಾನು
ಸಾಕ್ಷಿಯಾಗಿಂದು ಕಾಣುತಿರುವುದಿಲ್ಲಿ

## ವೀರಶಂಕರನ ಕಥೆ

ವೀರಶಂಕರನೆಂಬ ಮತ್ತೆಯಿನ್ನೊಬ್ಬ
ಮಾರಾರಿಭಕ್ತನ ಚರಿತೆಯ ಕೇಳು:
ಕನಸಿನಲ್ಲಿಯು ಪರಸಮಯದೈವಗಳ
ನೆನೆಯನು ಮುಟ್ಟನು ನುಡಿಯನು ಜೊತೆಗೆ
ಅದೆ ನೇಮವಾಗಿ ಸಮ್ಮದಲೀಲೆಯಲಿರೆ
ತಾನೊಂದು ದಿವಸ ಸ್ವಪ್ನಾವಸ್ಥೆಯಲ್ಲಿ
ಬೌದ್ಧನೊಬ್ಬನ ಮುಟ್ಟಿದ ಕನಸ ಕಂಡು
ಕೋಪಿಸಿ ನಿದ್ದೆಯಿಂದೆದ್ದಾಲೋಚಿಸುತ
"ನಾಯಿ ಮುಟ್ಟಿದ ಮಡಕೆಯ ವಿಧಿಯೇನು
ತಕ್ಷಣ ಸುಟ್ಟರೆ ಸಾಕಿದಕೆ"ಂದು

ಕೃತನಿಶ್ಚಯದಿ ತಾನು ಬಂದು ಶ್ರೀಗಿರಿಗೆ
ಹಾಟಕೇಶ್ವರದೇವ ಸನ್ನಿಧಿಯಲ್ಲಿ
ವಿಸ್ಫುಲಿಂಗಗಳನು ಹೊರಸೂಸುವಗ್ನಿ
ಪ್ರಸ್ಫುರಿಸಲು ಭಗಭಗವೆಂಬ ಕಾವ-
ಲಿಯ ಮೇಲೆ ಕೂರುತ್ತ ಭೀಕರೋದ್ವೃತ್ತಿ-
ಯಿಂದ ಕಾದಿಹ ಕಾವಲಿಯ ತಾಪವನ್ನು
ಹೆಚ್ಚಿಸುತ್ತಾ ಮೂವತ್ತೆರಡಾಯುಧಗಳ
ಧೈರ್ಯದಿ ಕೆಲಸವ ತಾನಾಚರಿಸುತ
ಮದನಾರಿಯನೊಲಿಸಿ ಮಹಿತಸಾಯುಜ್ಯ
ಪದವಿಯ ತತ್‌ಕ್ಷಣ ಪಡೆದದ್ದರಿಂದ-

ಲಂತಕಾಂತಕಭಕ್ತರ್ಗನ್ಯದೈವಗಳ
ಗೊಡವೆ ತಾನಿರದದು ಸಹಜವೆ, ಕೇಳು

**ಶಿವಲೆಂಕ ಮಂಚಯ್ಯನ ಕಥೆ**

ಶಿವಲೆಂಕ ಮಂಚಯ್ಯ ಶ್ರೀ ಕಾಶಿಯಲ್ಲಿ
ತಪ್ಪದೆ ವಿಶ್ವೇಶ್ವರಸ್ಥಾನದಲ್ಲಿ
ಶಿವಗೆ ತನ್ನಯ ಹತ್ತು ಬೆರಳುಗಳನ್ನು
ಮೂಹೊತ್ತು ಪೂಜಿಸಿಯಾಗಲೆ ಪಡೆದು
ಜನರದ್ಭುತವನೊಂದಿ ವಿನುತಿಸುತಿರಲು
ಸತತ ವರ್ತಿಸುತಿರೆ ರೂಢಿಯಿಂ ಮರೆಯ-
ಲಕ್ಕಜವೊಂದಲು ಪರದರ್ಶನಗಳ
ಮೂಗ ಮೇಲಣ ಕತ್ತಿಯೆಂಬ ಟೆಕ್ಕೆಯನು

ಪುರದಲೆತ್ತಿಸಿ 'ವೀರಮಾಹೇಶ್ವರ ಪದ-
ವುತ್ತಮವೀಶ್ವರನೊಬ್ಬನೆ ಕರ್ತ'-
ನೆಂದು ಪ್ರತಿಷ್ಠಿಸೆ ಪರಸಮಯಿಗಳು
ವಾರಣಾಸಿಯೊಳು ಸೇರುತ ಗದಾಧರನ
ಗುಡಿಯ ಸಮೀಪದಿ ಕುಳ್ಳಿರ್ದು ಗರ್ವ-
ವಡರೆ ತರ್ಕೋನ್ಮುಖರಾಗಿ ಕರೆಸಲು
ಶರಣ ಮಂಚಣ್ಣಭಟ್ಟಾರಕನಲ್ಲಿ-
ಗಸದೃಶಮಹಿಮೆ ತುಳ್ಕಾಡಲೈತರಲು
ಸಮಯಿಗಳಾ ತಮ್ಮ ಶಾಸ್ತ್ರಗಳೆತ್ತಿ
ಭ್ರಮೆಗೊಳ್ಳುತೊಂದೊಂದು ಪ್ರಶ್ನೆಯ ಮಾಡ-

ಲವಕೆಲ್ಲ ಶಾಸ್ತ್ರಸೂಕ್ತ್ಯರ್ಥಗಳಿಂದ-
ಲಾಯಾ ಸಮಯಿಗಳನಹುದಹುದೆನಿಸಿ
ನಿಪುಣತೆಯಿಂ ಸಕಲ ಪುರಾಣಶಾಸ್ತ್ರ
ವಿಪುಲಾರ್ಥವಾದಗಳ್ವಿಖ್ಯಾತಿಯೆಸೆಯೆ
ತೋರಿಸೆ ಮತ್ತೆಯು ಶ್ರುತಿಸಂಹಿತಾದಿ
ರೂಪಿತಾರ್ಥಗಳನು ರೂಢಿಯಿಂ ಪ್ರಶ್ನೆ
ಮಾಡಲು ಲೆಂಕಮಂಚಣಪಂಡಿತರಿಗೆ
ಅನ್ಯಸಮಯಿಗಳು ಬಾಯೆತ್ತೆ ಹೆದರಿ
"ಓದುಗೀದುಗಳೆಲ್ಲ ಸಾಕು ಹೋಗೆ"ಂದು
"ಅದುವೇಕೆ ದೃಷ್ಟವೇನಾದರೂ ಇಹುದೆ"

ಯೆನ್ನಲು "ತನಗೆ ತಾ ಹೋಗಲಾ ವಿಷ್ಣು
ವನ್ನೊಯ್ದು ವಿಶ್ವೇಶ್ವರನಿಗೆ ಮೊಕ್ಕಿಸುವೆ-
ನಿನ್ನು ನೋಡೆ"ನುತಲಿ ಲೆಂಕಮಂಚಯ್ಯ-
ನಂಕಿಸಿ ನರರೆಲ್ಲರಂತೆ ಪ್ರಸ್ತುತಿಸೆ
ಮಾರಾರಿಭಕ್ತಮಂಡಲಿಯನು ನೆನೆದು
"ಎಲೆವೆಲೊ ವಿಷ್ಣು ನಿನಗೊಡೆಯನಾದ
ವಿಶ್ವೇಶನಿಗೆ ಮೊಕ್ಕು ಬಾ ಹೊರ"ಗೆನಲು
ನಶ್ವರಪರದರ್ಶನಸ್ಥರು ನಡುಗೆ
ಶ್ರೀರಮಣನು ಆ ಮಂಚಣಪಂಡಿತಯ್ಯ-
ನವರಾಣತಿಯ ಕೇಳಿ ಗಡಗಡ ನಡುಗಿ

ಮೊಕ್ಕುತಲಾ ತಿರುಮುಟ್ಟವ ಬಿಟ್ಟು
ಆ ದಾರಿಯಲಿ ಪಾದಚಾರಿಯಾಗಿ ಬರೆ
ಶಿವಲೆಂಕ ಮಂಚಯ್ಯ ಶಿವಭಕ್ತವಿತತಿ
ಬರಲು ಮುಂದಕೆ ಮಹೋತ್ಸವಲೀಲೆಯಿಂದ-
ಲಾ ಗದಾಧರನ ಹಿಂದನ್ಯದರ್ಶನರು
ತಮ್ಮಗ್ಗಳಿಕೆ ಕೆಟ್ಟು ಹೋಗುತ್ತಲಿರಲು
ಅಕ್ಕಜವೆನೆ ಹರಿಯನು ಕರೆತಂದು
ಮೊಕ್ಕಿಸಿದನು ವಿಶ್ವೇಶ್ವರಗೆ ಮಂಚಯ್ಯ-
ನೀ 'ಶಿವಭಕ್ತಃ ಪ್ರಭುರ್ಮಮ'ಯೆಂಬು-
ದವಿರಳವಾಯ್ತು ಕೇಶವನ ವಾಕ್ಯವದು;

ಮತ್ತೆ ಮಂಚಣ ಪಂಡಿತನು ತನ್ನ ಕರೆಯೆ
'ಹಂಚಿದ ಕೆಲಸವ ಮಾಡಿ ಬದುಕುವೆ'-

ನೆನುತ ಚಕ್ಕನೆ ಬಂದು ಮೊಕ್ಕುವಷ್ಟರಲಿ
'ಸಿಕ್ಕಿದ'ನೆನುತೆಲ್ಲ ಶಿವಭಕ್ತರಲರೆ
"ಅದೆಯಲ್ಲವೇನಿಂದು ಹರಿ ವಿಶ್ವನಾಥ-
ನೆದುರು ಮೊಕ್ಕಿದ ರೀತಿಯಲ್ಲಿರುತಿಹನು:
ಯಾವ ವಾದಿಗಳು ತಾ ವಿಷ್ಣುವನೆತ್ತೆ
ಶಕ್ತಿಯಿಲ್ಲದಲಿಂತು ನೋಡುತ್ತಲಿಹರು;
ಹರನಿಗೆ ಪ್ರತಿಯಿಲ್ಲದುದಕೆಯಿನ್ನೇನು
ಧರೆಗೆ ಮೈಚಾಚಿದ ಹರಿರೂಪ ಸಾಕ್ಷಿ;

ಭಕ್ತರಾಜ್ಞೆಗೆ ಒಳಗಾಗಿಹ ಹರಿಯು
ಭಕ್ತರು ಬಿಡೆ ಕೆಟ್ಟು ಬದುಕುವನೊಲಿಯೆ
ಧರೆಯಲೆಂತೆನಲು ಶಂಕರದಾಸಿಯೆಂಬ
ಪರಿಕಿಸಲೆರಡನೆ ಫಾಲಲೋಚನನು
ತಾನು ಕೋಪದಿ ನೋಡಲಿತರದೈವಗಳು
ಸೀಳುತ ಬೀಳ್ವುವು, ಪರದರ್ಶನಗಳು
ಹಿಂದೆಯೆ ಜಕದೇಕಮಲ್ಲನೆಂಬೊಬ್ಬ
ಬಲ್ಲಹನಿದಿರು ಸಂಪಾದನೆಗೈಯೆ
ವಿಲಿವಿಲಿ ಪರಸಮಯಿಗಳದುರಿದರು;
ಮುಳಿದು ಶಂಕರದಾಸಿಮಯ್ಯನು ನೋಡೆ

ಫಾಲಕರಾಳವಿಶಾಲನೇತ್ರಾಂಕ
ಕೀಲಾವಳೀಸ್ಫುರತ್ಕಾಲಾಗ್ನಿ ಹೊಮ್ಮೆ
ಗಕ್ಕನಲ್ಲಿಯ ನಾರಾಯಣನ ಪ್ರತಿಮೆಯು
ಒಡೆಯಲಿಲ್ಲವೆ ಜಗವೆಲ್ಲ ತಾನರಿಯೆ?
ಅದಕೆ ಶೂನ್ಯಾಲಯದಾ ಮೇಲಿರುತಿಹ
ತಿರುಮುಟ್ಟವೇ ಸಾಕ್ಷಿಯಾಗಿದೆ ನೋಡು,
ಅದಕೆ ಎಮ್ಮಯ ಭಕ್ತಗಣಗಳ ಮಹಿಮೆ
ನಿನಗೇನು ತಿಳಿದಿದೆಯ್ಯೆ ನಿಖಿಲೇಶ!
ಎನಲೇನು ಹೇಳುವುದಾ ಬಾಚರಸನ
ಘನಮಹತ್ವವ ನೀನು ಕಾಣೆಯ ಮುನ್ನ-

ವಣಕಿಸಿ ನುಡಿಯೆ ತತ್‌ಕ್ಷಣಮಾತ್ರ ನೀನೆ
ಪ್ರಣುತಿಸೆ ಸೋಮೇಶನನ್ನು ಬರಿಸನೆ
ಕೊಟ್ಟರಿ ಪಡಿಗಳು ಕೋಟಾನುಕೋಟಿ
ಪೆಟ್ಟಿಯ ಮನುಜರ ಹೆಸರನು ಬರೆಯ-

ದಲೆ ಪಂಚಾಕ್ಷರಿಯನು ಕಡತದಿ ಬರೆದು
ಲೆಕ್ಕವೋದುಗಳ ಬೆರಸಿ ತಪ್ಪದಿಹುದು
ತಿಳಿದಿಹುದಲ್ಲವೇ ಹೇಳಲೇಕಿನ್ನು?
ತಿಳಿದಿರದೇನಿನ್ನಿದನು ಬಿಟ್ಟ ಕೆಲಸ?"
ಎನ್ನುತ ವೃತ್ತಾಂತವೆಲ್ಲವ ಬಸವ-
ನಂಚಿತ ಮತಿಯಲಿ ಹೇಳಿ ಕರೆಸಲು

'ವಾದವೆನ್ನಲು ಹೋಗುವುದು ತಕ್ಕುದದುವೆ
ತಾನೆ'ಯೆನ್ನುತ ಸಮುದ್ಗತ ಕೋಪದಿಂದ
ಬಂದು ಭಕ್ತರ ಕಂಡು ಮೊಕ್ಕಿ ತಾ ನಿಲಲು
ಜನನಾಥನಾಗ್ರಹದಿಂದಲಿಂತೆಂದ:
"ಅರಿದೆನಿಪಖಿಲಲೋಕಾಧೀಶನಾದ
ಹರಿಯ ಪ್ರತಿಷ್ಠೆಗಮಾತ್ಯವ್ರಾತವದು
ಬಂದಿರೆ ನೀನೇಕೆ ಬರಲಿಲ್ಲವೆಲ್ಲಿ?"
ಎನಲು ಕೋಪೋದ್ದೀಪಿತಾಂಗನಾಗುತಲಿ
"ಹುಟ್ಟು ಸಾವುಗಳಲ್ಲಿ ಸುತ್ತಾಡುತಿರುವಿ-
ವೆಲ್ಲವು ದೈವಗಳೆಂತು ನರೇಂದ್ರ?

ಕರ್ತರೆನ್ನುವೆ ಕರ್ತನಿದರೊಳಗಾರು?
ಕರ್ತರ ಕರ್ತನು ಮತ್ಕರ್ತ ತಾನೆ?
ಕರ್ತವ್ಯವೆಲ್ಲವು ಕರ್ತನು ಶಂಭು
ಕರ್ತವ್ಯವೆಂಬುದು ಕರ್ತಗೆ ಸರಿಯೆ?
ಕರ್ತ ಪ್ರಧಾನನಲ್ಲದೆ ಮಿಕ್ಕೆಲಕ್ಕೆ
ಕರ್ತನು ಹರ್ತನಿರುವನೆ ಬೇರೊಬ್ಬ?
ಹರಿಗಿರಿಗಳು ತಾವು ಅಜಗಿಜರೆಲ್ಲ
ಸುರರು ಗಿರರು ತಾವು ಹರನಿಗೆ ಸಮವೆ?
ತಾ 'ಮಮಕರ್ತಾ ಮಹೇಶ್ವರ' ನೆನುತ
ಹೇಳಿದ ವಿಷ್ಣುವು ಪರಮೇಶನಹನೆ?

ಅಲ್ಲದೆ ಸ್ಥಿತಿಕರ್ತನಾದರೆ ವಿಷ್ಣು
ತನ್ನ ಪುತ್ರನನೇಕೆ ರಕ್ಷಿಸಲಿಲ್ಲ?
ನಾಲ್ಮೊಗ ದೈವವೆಂಬುವ ನುಡಿ ಮುನ್ನ-
ಲುಡುಗಿತಲ್ಲವೆ ತಲೆ ಕೆಳಗೆ ಬಿದ್ದಾಗ?
ಆಗಿದ್ದರುತ್ಪತ್ತಿಕರ್ತನು ಅಜನು
ಒಡನೆ ತನ್ನಯತಲೆ ಹುಟ್ಟಿಸಿಕೊಳನೆ?

ಧರೆಯ ಬೌದ್ಧಜಿನರು ದೈವಗಳೆನಲು
ನರರೂಪದಿಂದಿರುವರೆ ಮಹತ್ತಣಗಿ?
ಪಶುಕರ್ಮಿಗಳು ವೇದಬಾಹ್ಯರು ತಾವು
ಪಶುಪತಿಗಳಹರೆ ಪ್ರತ್ಯಕ್ಷವಿದುವೆ;

ಎನಲೇಕೆ 'ಹಸ್ತಿನಾಹನ್ಯಮಾನೋಪಿ'-
ಯೆನೆ ನಿರೀಶ್ವರನ ವಿಶ್ವಾಲಯನೆನಲು
ಆನೆ ಹಿಂಬಾಲಿಸಿ ಬರೆ ತರುಮುತ್ತ-
ಲಾಗಲು ಬಸದಿಯ ಹೊಗರದೆಂಥವರು?
ಮಾಯೆಯ ದೈವವೆಂದೆನ್ನುವುದೇಕೆ
ತನ್ನ ಹೆಸರೆ ಮಾಯೆ, ದೈವ ತಾನಹುದೆ?
ಹರನಧಿಕಾರಿಗಳಜನು ಹರಿಗಳು
ಆರಯ್ಯೆ ಶ್ರುತಿಬಾಹ್ಯರಾ ಮೂರು ಜನರು
ಯಾರು ಕರ್ತನು ತಾನೀ ದೇವರುಗಳಲಿ?
ಯಾವ ದರ್ಶನಗಳು ತಾವಿಂತೆನ್ನುತಿವೆ?

ಶ್ರುತಿ 'ಯೇಕ ಏವರುದ್ರೋ'ಯೆಂದ ಬಗೆಯ-
ಲಿತರ ದೈವಗಳಿಗೇತಕೆ ಹೇಳಲಿಲ್ಲ?
ವೇದವು ದೈವವೇ ಹೆಚ್ಚಿಗೆಯೇಕೆ?
ಆದಿಸೋಮಕನಿಂದಲಪಹೃತವಹುದೆ?
ಚಲಿಸುವುದೇ ಪೃಥ್ವಿ ದೈವವಾಗಿರಲು
ನಿಲಯವಾಗಿರುವುದೆ ಮಲಮೂತ್ರಗಳಿಗೆ?
ದೈವವೆನ್ನಲು ನೀರು ಹೆಚ್ಚು ಕುಂದುಗಳು
ಹರಿವುದೆ, ಅಡಗುವುದೇನಂಗೈಯಲ್ಲಿ?
ಅನಲ ದೈವವೆನಲು ಭಂಗಪಡುವನೆ,
ಸರ್ವಭಕ್ಷಕನಾಗಿ ಚರಿಪನೆ ಲೋಕ?

ಆ ವಾಯುವನು ದೈವವೆಂಬರೆಯೊಂದು
ದಿಕ್ಕಲಿರುವನೇನು ದಿಕ್ಪಾಲನಾಗಿ?
ತಿಳಿಯಲಾಕಾಶವೆ ದೈವವೆನ್ನುವರೆ
ಲಯವ ಹೊಂದುವುದೇನು ಪ್ರಮಥರ ಕೈಲಿ?
ನಿಲುಗಾಲು ನಿಲ್ಲದಲೆಂದೆಂದು ತಿರುಗು-
ವೀ ದಿನೇಶನು ತಾ ಸರ್ವೇಶ್ವರನಹನೆ?
ಆ ನಿಶಾಪತಿ ದೈವವೆಂತೆನಬಹುದು?
ದಿನದಿನಕಾತನ ಕಳೆ ನಷ್ಟವಹುದು.

ಅಖಿಲಕೆಲ್ಲಕು ಕರ್ತನಾತ್ಮನಾಗಿರಲು
ಸುಖದುಃಖಗಳ ಹೊಂದಿ ಸೊಗಸುತಿರುವನೆ? ೧೬೩೦

ಅದರಿಂದ ಮುನ್ನಿಂತು ಒಂದೊಂದಕೊಬ್ಬ
ದೈವಗಳಾಗಿ ಹುಟ್ಟುವುವೇನು ತಾವು?
ಕರ್ಮವನೆಲ್ಲಕು ಕರ್ತನೆನ್ನುವರೆ
ಕರ್ಮವಚಿತ್ತು ತತ್ಕರ್ತನು ಜಡನು
ನೆಟ್ಟನೆಯನ್ಯಾಯವೇನೇನಗೈವ–
ನಂತಹವನು ಕೊಲ್ಲುವಧಿಕಾರಿಯಿಹನೊ
ತನ್ನ ತಾ ವಧಿಸುವುದೇ ಕರ್ಮಫಲವು
ತನ್ನ ತಾ ಬಂಧಿಸಿಕೊಳುವನೆ ಕರ್ತ–
ನದರಿಂದ ಕೊಲುವನೊಬ್ಬನು ಕರ್ತನಿಹನು
ಭಾವನೆ ತತ್ಕರ್ಮಫಲವನೀಯುವುದು. ೧೬೪೦

ಇಂತು ಕರ್ಮಾಧೀಶನೀಶನು ಕರ್ಮ
ಫಲದಾತನೆಮ್ಮಯುಮಾಪತಿ ದೈವ
ಕರ್ಮವು ಕರ್ತನೇ ಕ್ರತುವಿನ ಪುಣ್ಯ
ಕರ್ಮಿ ದಕ್ಷನನೇಕೆ ದಡವ ಮುಟ್ಟಿಸದು?
ಪಿತೃವಧೆಮಾಡಿದ ಯತಿಯ ಕರ್ಮಫಲ–
ವವನನು ಸೇರದು ಅಖಿಲವರಿಯಲು
ಮೇಟಿ ಕರ್ಮದ ಕರ್ತ ಮೃಡನಲ್ಲದಿರಲು
ಕಾಟಕೋಟನಿಗೇಕೆ ಕೈಲಾಸವಿತ್ತ?
ಈ 'ಕೃತಂಕರ್ಮಶುಭಾಶುಭ'ವೆನುವ
ಮೊಂಡುವಾದವು ಸಲ್ಲದೆಲ್ಲೆಡೆಯಲ್ಲಿ; ೧೬೫೦

ಕೋಯೆಂದು ಶ್ರುತಿಯು 'ಏಕೋರುದ್ರ ಉಚ್ಚ–
ತೇ'ಯೆನುತಿರಲೆಮ್ಮ ದೇವನೆ ಕರ್ತ;
ಹರಿಮುಖ್ಯರೀಶ ಪಂಚಾವರಣ ಪರಿ–
ಚರರಾಗೋಲೈಸುವ ಪಶುಗಳೆ ಹೊರತು
ಕರ್ತರೆ? ಒಂದೊಂದು ಕಾರ್ಯಕಾರಣವಿ–
ವರ್ತನ ಮಾತ್ರವೇಯವರದೆಂತೆನಲು
ಕೆಲಸದ ಬಂಟರು ಗೈದು ಕೆಲಸಕೆ
ಕರ್ತರಲ್ಲದೆ ತಾವು ಫಲಕರ್ತರೆಂತು?
ಅದಕೆ ಕರ್ತರ ಕರ್ತ ನಮ್ಮ ನೀಲಗಳ–
ನಿದಕೆ ಮತ್ತಿನ್ನೊಂದು ದೃಶ್ಯವದೇಕೆ ೧೬೬೦

ಪರಮೇಶ್ವರನ ಸುತ್ತಲೂರೂರುಗಳಲಿ
ಪರಿಚರರೆನೆ ಹರಿಮುಖ್ಯರೋಲೈಸು-
ವಪ್ರತಿಮಾಕಾರನಹ ಲಿಂಗಮೂರ್ತಿ-
ಗೀ ಪ್ರತಿಮಾಕಾರಿಗಳು ಸಮರೆಂತು?
ನಿರ್ಮಲನಿತ್ಯನಿಷ್ಕರ್ಮದೇಹನಿಗೆ
ದುರ್ಮಲ ದುಷ್ಟ ದುಷ್ಕರ್ಮರು ಸರಿಯೆ?
ಶುದ್ಧಪ್ರಸಿದ್ಧನಿರುದ್ಧ ದೇಹಿಗೆ ಅ-
ಸಿದ್ಧ ಬೌದಾಶುದ್ಧ ಜೀವರು ಸರಿಯೆ?
ಹುಟ್ಟು ಸಾವಿರದಂಥ ದೇವದೇವನಿಗೆ
ಹುಟ್ಟು ಸಾವುಗಳಿಹ ದೈವವು ಸರಿಯೆ?

ಬ್ರಹ್ಮಮಾಯಕಾರ ಪಶುಪಾಶಪತಿಗೆ
ಬ್ರಹ್ಮೇಂದ್ರ ಹರಿಮುಖ ಪಶುಗಳು ಸರಿಯೆ?
ಶಂಕರನಿಗೆ ಧೃತಕಂಕಾಳಧರಗೆ
ಶಂಕಿತರಾದ ಕಿಂಕರರೆಲ್ಲ ಸರಿಯೆ?
ಪ್ರಳಯವೊಂದಿಸುವಂಥ ಪ್ರಳಯರುದ್ರನಿಗೆ
ಪ್ರಳಯವೊಂದುವ ಕಿರುದೈವಗಳೆಣೆಯೆ?
ಮುನಿಗಣಾರ್ಚಿತ ಪಾದವನಜಾತಯುಗಗೆ
ಮುನಿಶಾಪದಗ್ಧರು ಬಿನುಗುಗಳೆಣೆಯೆ?
ಪೂಜಿತನಾದಂಥ ಲಿಂಗಪುಂಗವಗೆ
ಪೂಜಿಸಿಯೋಲೈಸುವರ್ಚಕರೆಣೆಯೆ?

ಸಿರಿಮಹಾದೇವನು ಸಿರಿಗಿರಿಪತಿಗೆ
ಸಿರಿವಾಸುದೇವಾದಿ ಸುರರೆಲ್ಲ ಸರಿಯೆ?
ಮೂರುಕಣ್ಣುಗಳಿರುವಾ ತ್ರಿನೇತ್ರನಿಗೆ
ಎರಡೆ ಕಣ್ಣುಗಳಿರುವ ತಗರು ಸರಿಯೆ?
ಹಾಲಾಹಲಾಗ್ನಿ ಸಂಹಾರಶೌರ್ಯನಿಗೆ
ಹಾಲಾಹಲಾಗ್ನಿಹತಾಂಗರು ಸರಿಯೆ?
ತ್ರಿಪುರ ದೈತ್ಯಾಂತಕೋದ್ರಿಕ್ತವೀರ್ಯನಿಗೆ
ತ್ರಿಪುರ ದೈತ್ಯೋಪದ್ರವ ಪತಿತರೆಣೆಯೆ?
ಅಂಧಕಾದ್ಯಸುರ ದರ್ಪಾಪಹಾರನಿಗೆ
ಅಂಧಕಾದ್ಯಸುರಭಯಭ್ರಾಂತರೆಣೆಯೆ?

ಹರಿಕಮಲಜ ಕಪಾಲಾಸ್ಥಿಧಾರನಿಗೆ
ಹರಿಕಮಲಜಸುರಾಸುರತತಿಯೆಣೆಯೆ?

ಆವಿರ್ಭವಿಸದಿರುವಭವಗಾರಯ್ಯೆ
ದೇವಕೀಪುತ್ರಾದಿದೈವಗಳೆಣೆಯೆ?
ಲಿಂಗ ಮೂರ್ತಿಗೆ ಜಂಗತ್ಸಂಗತಾತ್ಮನಿಗೆ
ಲಿಂಗಮಧ್ಯದಲಿಹ ಲೆಂಕರು ಸರಿಯೆ?
ಸರ್ವಜ್ಞನೊಡನೆಯಸರ್ವಜ್ಞರೆಣೆಯೆ?
ಸರ್ವೇಶನೊಡನೆಯಸರ್ವೇಶರೆಣೆಯೆ?
ಸೊಡ್ಡಳ ದೇವನಾ ಸೋಮೇಶನೊಡನ-
ಸಡ್ಡಾಳ ದೇವರನರ್ಚಿಸೆ ಸರಿಯೆ?

ಹರನು ಸರ್ವೇಶ್ವರನಭವನು ಶಿವನು
ಪರಮನು ಪಶುಪತಿಯು ಪರಮೇಶ್ವರನು
ಶ್ರೀಮಹಾದೇವನೆನ್ನುವ ನಾಮಗಳಿಹ-
ವೇ ಮಹಿಯಲ್ಲಿದಂಥವಿತರ ದೈವಕ್ಕೆ?
ರಮಣ 'ತದ್ವಿಷ್ಣೋ ಪರಂ ಪದ'ವೆನಲು
ಅಮರ ವಿಷ್ಣುವಿಗೆ ಪರಮವಾದ ಪದವು
ಶ್ರುತಿ 'ಸದಾ ಪಶ್ಯಂತಿ ಸೂರಯೋ'ಯೆನಲು
ಗತಕರ್ಮನೀಶನೆ ಬೇರಲ್ಲವೆನಲು
ಕುಮತಿಯಂ ಕರ್ಮಶಾಸ್ತ್ರಗಳ ಬೆಂಬಿಡದು
ಭ್ರಮಿಸಿಂತು ನಾಯಿಯ ಹಾಲುಕುಡಿದರೋ

ನಾಮುವ ಮೇಯ್ದರೊ ಮತಿಹೀನರಂತೆ
ದುಷ್ಟ ಹಾರುವರ ಮಾತುಗಳ ಕೇಳದಿರು
ಅಪುನರ್ಭವತ್ವವು ಅಚ್ಯುತತ್ವವದು
ಉಪಮಿಸಲಿಹುದೇನು ವಿಷ್ಣುಗೆಂದೆಂದು
ಪೂರ್ಣ್ದೆಮ್ಮ ಭೃಗುಶಾಪದಿಂದಲಚ್ಯುತನು
ಉದಯಿಸನೇ ತಾನು ದಶಜನ್ಮಗಳಲಿ
ಸಾಮವು 'ವಿಷ್ಣು ಪಿತಾಮಹ'ನೆನೆ ಪಿ-
ತಾಮಹನಿಗೆ ಹರಿ ಜನಿಸಿದ ತಾನೆ-
ಯಜನ ಗುದದಿ ಹರಿ ಹುಟ್ಟಿದ್ದರಿಂದ
ನಿಜ ನಾಮವದು ಅಧೋಕ್ಷಜವಾಯ್ತು ತಾನೆ?

ಅಲ್ಲದೆಯದಿತಿಗಿಂದ್ರಾನುಜನೆನಲು
ಉದಿಸಿದನಲ್ಲವೇನು ಪಯೋಜನಾಭ
ಪ್ರೇಮದಿಂದಲಿ ವಿಷ್ಣು ದ್ವಾಪರದಲ್ಲಿ
ಬಾದರಾಯಣನೆಂದು ಹುಟ್ಟಿದ ತಾನೆ

ಆ ಯುಗದಲೆ ಮುನ್ನವಚ್ಯುತನುದಯ-
ವಾಯ್ತಲ್ಲವೇ ಕೃಷ್ಣನೆಂಬ ನಾಮದಲಿ
ವಿಷ್ಣುವೊಂದೊಂದೆಡೆ ವಿಲಯವನೊಂದೆ
ವಿಷ್ಣುತ್ವವರ್ಥಿಸಿ ವಿಶ್ವೇಶಗೊಲಿಯು-
ತೊಬ್ಬೊಬ್ಬನುದಯಿಸಿದನು ವಿಷ್ಣುವೆನಲು
ಎಲ್ಲಿ ಹುಟ್ಟಿದನೊ ಇನ್ನೆಷ್ಟು ಜನ್ಮಗಳು ೧೭೩೦

ಅವನ ಹುಟ್ಟುಗಳ ಕೇಳವನಿಪಾಲಕನೆ
ಶ್ರುತಿಮೂಲದಿಂ ನೋಡು ಪ್ರತಿವಾದವೆನದೆ
ಹಿಂದೆಯೆ ದೂರ್ವಾಸನೊದೆದುದರಿಂದ-
ಲಗಧರನೆಯಲಿ ಮಚ್ಚೆಯುಂಟಾಯ್ತು
ಹರಿಯು ರುಕ್ಮಿಣಿ ಕೂಡಲಂತಲ್ಲದೇನೆ
ಕರಮರ್ಥಿಯಿಂ ಬಂಡಿಗಟ್ಟಿಯೋಡಿಸನೆ
ಅಮೃತಾಬ್ಧಿಸೇವನೆಯಾದುಪಮನ್ಯು-
ವುಗುಳನೆ ಗಂಟಲಲ್ಲಿದ್ದ ಕೇಶವನ
ಹರಿಯ ಜಲಂಧರನೆಂಬೊಬ್ಬನಸುರ
ಭಂಗಿಸದಿರನೆ ನಭೋಮಾರ್ಗದಲ್ಲಿ ೧೭೪೦

ಚಲಗಾರನಾದ ಜರಾಸಂಧಗಂಜಿ
ದುರ್ಗವ ನಿರ್ಮಿಸನೇನು ಕೇಶವನು
ವಿಷ್ಣುವನಿಭದಾನವಾದಿ ರಾಕ್ಷಸರು
ಮೂವರು ನೀರುಗ್ಗಿದುದನಾರರಿಯರು?
ಭರದಿ ವಿಷ್ಣುವು ದಧೀಚಿಗೆ ಚಕ್ರವನ್ನು
ಬಿಡೆ ಬೆನ್ನು ಬಾಗುತಲಾ ಚಕ್ರವಾಗ
ತುಣುಕಾಗೆ ಹೊಡೆಯಲಾತನು ಹಿಂದಕಟ್ಟೆ
ಹೆದರುತ್ತ ದೂರಕ್ಕೆ ಹೋಗನೆ ತಾನು
ಮೃಗಚಂಡಾಲವೆನುವ ಗಾರ್ದಭ ಮುನ್ನ
ವನಜಾಕ್ಷನಾ ಪ್ರಾಣವನು ಕಾಯ್ದಿತಲ್ಲ ೧೭೫೦

ಹರನು ವಿಷವ ನುಂಗಿಯಮೃತವ ಪಡೆಯೆ
ಹರಿ ಗಂಡುತನ ಬಿಟ್ಟು ಹೆಣ್ಣಾಗದಿಹನೆ
ಬಲಿಯಿಂದ ಬುವಿಕೊಂಡ ಪಾಪದ ಕತದಿ
ತಾ ಕೆಟ್ಟು ಹರಿ ಜಲಧಿಯ ಹುಗನೇನು?
ಸತಿಯ ಕಾರಣದಿ ರಾಮನು ಬ್ರಹ್ಮಹತ್ಯೆ-
ಗೊಳಗಾಗಿ ಧರೆಸುತ್ತ ಭ್ರಮರಿಸದಿಹನೆ?

ಬಲವಂತ ವಿಷ್ಣು ಕಿರಾತನು ಹೊಡೆದ
ಶರದಿಂದ ಸಾಯನೇನಿಂತೆಲ್ಲವರಿಯೆ
ಗೊಲ್ಲವಾಡಗಳಲಿ ಬೆಣ್ಣೆಯ ಕದಿವೆ-
ಡೆಗೆ ಹೋಗಿ ರಮಿಸನೆ ಗೋಪಿಯರೊಡನೆ

ನಂದೀಶ್ವರನ ನಿಡಿದುಸುರಲಿ ಸಿಕ್ಕಿ
ಹೋಗಲಾರದೆ ಬಂದು ಹೋಗುತಲಿರನೆ?
ಹರಿ ತಾನೆ ದೈವವೆನ್ನುತ ಜಗವರಿಯ-
ಲುರುಲಿಂಗಮೂರ್ತಿಯಿಂದಲೆ ಭಂಗಗೊಳನೆ?
ಮೃಡನ ನಾನಾಯುಗ ಮೇಘರೂಪದಲಿ
ಮಗನನರ್ಥಿಸಿಯೋಲೈಸದಿಹನೆ ಶಾರ್ಙ್ಗ
ಮತ್ಸ್ಯಾವತಾರದಿ ಮಡಿಯಿಸಿ ತಾನೆ
ಮತ್ಸ್ಯಕೇಶ್ವರವೈರಿ ತಲೆಗೆ ಸುತ್ತಿದನು,
ಮೆರೆಯೆ ತತ್ಕೂರ್ಮಕಪಾಲವು ತಾನು
ಹರಹಾರ ಮಧ್ಯದಲ್ಲಿರುವುದು ತಾನೆ?

ಪೂರ್ವದಲಾದಿವರಾಹದಂಷ್ಟ್ರವದು
ಖ್ಯಾತಿಯಿಂದೀಶನ ಕೈಯಲಿರುವುದು
ಶರಭ ರೂಪವ ತಾಳಿ ಕೊಲ್ಲುತ ತಾನೆ
ನರಸಿಂಹನಾ ಚರ್ಮ ಶಂಕರನುಟ್ಟ
ಕುಳ್ಳ ತ್ರಿವಿಕ್ರಮ ನೆಟ್ಟೆಲ್ಬು ತಾನೆ
ಹಿಡಿದನು ಖಟ್ವಾಂಗವಾಗಿ ಶಂಕರನು?
ಅಗ್ರಜನಹ ವಿಷ್ಣುವಿನ ಕಳೇಬರವು
ಉಗ್ರಾಕ್ಷನಾ ಭುಜದಲ್ಲಿಹುದಲ್ಲ;
ನಮ್ಮಯ ದೇವ ದೇವನ ಪಾದಪೀಠ-
ದಲಿ ತಾನೆ ಲಕ್ಷ್ಮೀಶ್ವರನ ಕಣ್ಣಿರುವುದು?

ಮೃಡನು ವಿಷ್ವಕ್ಸೇನನನಿರಿದೆತ್ತುತ್ತ
ಕಡಗಿ ಶೂಲದಲಲ್ಲವೇ ತಾನಿರುವುದು
ಆಗಲೆ ಕಲಕೇತನಾಗಿ ಕೇಶವನು
ನೆತ್ತರ ಸುರಿಸನೆ ನಿಟಿಲಾಕ್ಷನೆದುರು?
ಸಂತತದಲಿ ಶ್ರುತಿ 'ಹರಿಗಂ ಹರಂತ'-
ಮೆಂದು ಮೊರೆಯುವುದು ರೌದ್ರಭಾವದಲಿ
ಹರಿಯನು ಹರಿಸುತ್ತ ಹರಿಹರನಾದ
ಹರನು ಚೇತೋಜಾತ ಹರನಘಹರನು

ಶ್ರುತಿಯು 'ಯಜ್ಞಸ್ಯಶಿರೋಭಿನ್ನ'ವೆನಲು
ಕ್ರತುಪುರುಷನ ಕೊಂದು ಕಡುಕೋಪದಿಂದ

ಬೆಂಬತ್ತಿ ಖಂಡಿಸನೇ ವೀರಭದ್ರ?
ಹೋಗಿ ಕೇಶವನ ತಲೆಯು, ಜನ್ನದಲ್ಲಿ-
ಯವಲೇಪವನು ಹೊಂದಿ ದಿವಿಜಾಧ್ವರದಲಿ
ವಿಷ್ಣುವು ತಲೆ ಬೀಳೆ ಹೊಡೆಯಿಸಿಕೊಂಡ,
ಅವನೇಕೆ ಯಾರಂಹಕರಿಸಿದರೂನು
ರತಿಪತಿಹರನಿಂದ ಬದುಕಿ ಬರುವರೆ?
ಹರಿಯು ದೇವತೆಗಳನೆತ್ತಲಾರದೆಯೆ
ಕಸುವುಡುಗರೆ ಯಕ್ಷಪನಿಹಿತತೃಣವ
ಹೆಚ್ಚಾಗಿ ಬ್ರಹ್ಮಗರ್ವಿಸೆ ಮುನ್ನ ಶಿವನು
ಚಿವುಟಿಹಾಕನೆ ತನ್ನ ಪಂಚಮ ಶಿರವ

ಹರಿಣವಾಗುತ ಮಗಳ ವರಿಸುವಜನ
ಹರಿಯಿಸನೇ ಮೃಗವ್ಯಾಧನು ರುದ್ರ-
ನವನ ಪುತ್ರನು ಅಹಂಕಾರಿಯಾಗಿರಲು
ಕ್ಷಿತಿಯಲುಷ್ಟ್ರವದಾಗಿ ಮಾಡನೆ ಹರನು
ವಾಸುದೇವನೆ ದೈವವೆನ್ನುತಲೆತ್ತೆ
ವ್ಯಾಸನ ಕೈಯು ನಿಹಿತವಾಗದೇನು
ಅಲ್ಲದೆ ಗರ್ವಿಸಿದಂಥ ರಾವಣನ-
ನದುಮನೆ ಶಿವನು ಪಾದಾಂಗುಷ್ಠದಿಂದ?
ಮಲಹರನೊಡನೆ ಮಾರ್ಮಲೆತಾಗ ಕಾಮ-
ನಿಳೆಯೆಲ್ಲವರಿಯೆ ಸುರ್ರನೆ ಸೀಯದಿಹನೆ?

ಕಾಲನ ಶ್ವೇತನಿಗಾಗಿ ಭಂಜಿಸನೆ?
ಶೂಲದಿಂದಿರಿಯುತ ಸುರರೆಲ್ಲವದುರೆ
ದಕ್ಷನು ಗರ್ವಿಸೆ ತಲೆಹೋದುದಲ್ಲಿ
ಸಾಕ್ಷಿಯಾಗದದೆಂತು ಮೇಷದ ಶಿರವು
ಆದಿಯಿಂದಖಿಲಲೋಕಾಧ್ಯಕ್ಷನೆನಲು
ಆ ಭಗಾದಿತ್ಯನ ಕಂಗಳೊಡೆಯುವೆ?
ದೂಷಿಸಿ ನುಡಿಯೆ ರುದ್ರನೆನುವ ಗಣವು
ಪೂಷನ ಹಲ್ಲುಗಳುದುರಿಸನೇನು?
ತಾನೆಯೆ ಈ ಜಗತ್ತ್ರಾಣನೆನ್ನುತಿರೆ
ಕಡಿಯನೆ ಪವಮಾನನಾ ಕಾಲುಗಳನು?

ದ್ರೋಹಿಯಿಂದಂದು ಕೊಂಡಾಹುತಿ ಕುಡಿದು
ಬಾಹುಜಿಹ್ವೆಯ ಕಡಿವಡೆದ ಪಾವಕನು?
ಅನಿಮಿಷಾಧಿಪನ ಕೈಯದಿತಿ ನಾಸಿಕವ
ಕಡಿಯನೆ ವೀರಭದ್ರನು ರೌದ್ರದಿಂದ?
ಅಮೃತಾಂಶನಾ ಮೈಯ ಪಾದಾಂಗುಷ್ಠವನು
ಸಮರನೇನಾತನು ಯಜ್ಞಕ್ಕೈತರಲು
ಸಯ್ಯನೆನುತ ಸರಸ್ವತಿಯ ಮೂಗರಿದು
ಮುನ್ನವೆಸೆಯನಂದಿನಧ್ವರದೊಳಗೆ
ಮತ್ತೆ ಕೊಬ್ಬಿದ ದೇವರುಗಳನೆಲ್ಲವನು
ದಂಡಿಸುತಲಿ ಜಗದ್ರಕ್ಷಣಾರ್ಥದಲಿ ೧೮೩೦

ಮೂಲೋಕಗಳ ಮುಳುಗಿಸಿದ ಗಂಗೆಯನು
ಮಲ್ಲಿಕಾದಳದಂತೆ ಮೌಳಿ ಧರಿಸನೆ?
ತ್ರಿಪುರಗಳತಿದುರ್ನಿರೀಕ್ಷ್ಯದಿ ತಿರುಗೆ
ತ್ರಿಪುರಾರಿ ಬೇಗೆಯ ಸುಡುವಂತೆ ಸುಡನೆ?
ನೆಲವೆಲ್ಲವನ್ನು ಹೊತ್ತಿರುವ ಶೇಷನನು
ಬೆರಳ ಮುದ್ರಿಕೆಯಂತೆ ಧರಿಸಿದ ತಾನು,
ಜೊತೆ ಬಂದ ವಿಷವಹ್ನಿಯನು ಜಂಬೂಫಲವ
ನುಂಗಿದ ಬಗೆಯಲಿ ನುಂಗನೆ ಹರನು?
ಅಂಧಕ ಸಿಂಧುರ ವ್ಯಾಘ್ರ ಲಾಲಾಜ–
ಲಂಧರಾದಿಯ ನಿರ್ದಳನಗೈಯನೇನು? ೧೮೪೦

ಇಂಥ ಕೆಲಸಕೆಲ್ಲವೀಶ್ವರನೇಕೆ
ಕಂತುಸಂಹರನೊಂದು ಗಣ ಸಾಲದೇನು?
ಶಿವನೊಂದು ಗಣದಿಂದ ಸಕಲಲೋಕಗಳು
ಪ್ರಕಟದ ಕೆಡುಗು ಪ್ರಭವಿಸುಗು ವರ್ಧಿ-
ಸುವುದು ಮಹಾದೇವನಾ ಮಹತ್ವಕ್ಕೆ
ಎಣೆಯಿಹುದೇಯಿನ್ನು. ಇಷ್ಟಿಲ್ಲವೇಕೆ
ನಿತ್ಯ ತಾನಾಗಿಯು ನಿತ್ಯರೆಲ್ಲರನು
ಸತ್ಯವಿಂತೆನುತ ಸಜ್ಜನ ಸಾಕ್ಷಿಯಾಗಿ
[illegible]
[illegible] ೧೮೫೦

[illegible]
[illegible]

ಅಲ್ಲದೆಯುಪಮನ್ಯುವೆಂಬುವ ಮುನಿಗೆ
ನಮಿಸುತ ಶಿವದೀಕ್ಷೆಯ ಪಡೆದು ವಿಷ್ಣು
ಸೊಂಪಿನಲಿಂದ್ರನೀಲದ ಲಿಂಗವನ್ನು
ಪೆಂಪಿನಿಂ ಸೆಜ್ಜೆಯಲಿಟ್ಟು ಪೂಜಿಸನೆ?
ಪ್ರತಿನಿತ್ಯ ಸಾವಿರತಾವರೆಯಿಂದ-
ಲುನ್ನತಿಯರ್ಚಿಸಿಯೊಂದಿಲ್ಲದಿರಲು
ಕಣ್ಣನು ತೆಗೆದು ಶ್ರೀಕಂಠಗರ್ಪಿಸುತ
ಕಣ್ಣನಾದಿನವೆ ಚಕ್ರವನು ಪಡೆಯನೆ?

ಮತ್ಸ್ಯಾವತಾರಿಯಾಗಂದು ಲಂಕೆಯಲಿ
ಮತ್ಸ್ಯಕೇಶ್ವರನ ಸ್ಥಾಪಿಸುತ ಪೂಜಿಸನೆ?
ಮುಂದೆ ದೋರಸಮುದ್ರದಲಿ ಕೂರ್ಮನಾಥ-
ನನುಗೈದು ಕೂರ್ಮನೋಲೈಸನೆ ಮುದದಿ?
ಶ್ರೀರಾಮನಂದು ಸೇತುವೆಯನು ನಿಲಿಸಿ
ಶ್ರೀರಾಮನಾಥನನರ್ಚಿಸಿದ್ದರಿಯೆ-
ಯಾದಿ ಕ್ಷೀರಾರಾಮದಲ್ಲಂದು ವಿಷ್ಣು
ಭಜಿಸದೆ ರಾಮೇಶ್ವರನನರ್ಥಿಯಿಂದ,
ದ್ವಾರಾವತಿಯಲಿಟ್ಟೊಲಿಸನೇನು ತಾನು?
ಗೋವಿಂದೇಶನನು ಗೋವಿಂದನರ್ಥಿಯಲಿ?

ಬ್ರಹ್ಮನಲಂಪೂರದಲಿ ಭಕ್ತಿಯಿಂದ
ಬ್ರಹ್ಮೇಶ್ವರನನೆಡೆವಿಡದೆ ಪೂಜಿಸನೆ?
ಇಂದ್ರನು ಪುಷ್ಪಗಿರೀಂದ್ರದ ಮೇಲೆ
ನಿಲ್ಲಿಸಿಂದ್ರೇಶನ ಭಜಿಸನೆ ತಾನು?
ವಾರಣಾಸಿಯಲಿ ಸ್ಥಾಪಿಸಿ ವ್ಯಾಸ ತಾನು
ವ್ಯಾಸೇಶ್ವರನನು ಪೂಜಿಸನೆ ಸಂತತವು?
ಪ್ರವಿಮಲ ವಾರಣಾಸಿಯಲಿ ಮುನೀಂದ್ರ
ದನುಜಾಮರಾದಿಗಳ್ ತಮ್ಮ ಹೆಸರಲಿ-
ಯೊಂದೊಂದು ಲಿಂಗವನಲ್ಲಿ ಸ್ಥಾಪಿಸುತ-
ಲಕ್ಕಜದಿಂದೋಲೈಸಿದುದನರಿಯೆಯ?

ತ್ರಿಭುವನ[illegible] ಮ[illegible]ನಿಯಂತ್ರೆ
[illegible]
[illegible]
[illegible]

ಹರಿವಿರಿಂಚಿಪ್ರಮುಖಾಮರದೈತ್ಯ
ನರಗರುಡೋರಗವರಮುನೀಂದ್ರರಿಗೆ-
ಯೀಶ್ವರನೊಸಗಿದನೀಪ್ಸಿತಾರ್ಥಗಳ
ಶಾಶ್ವತಲೀಲ ಸಜ್ಜನಸಾಕ್ಷಿಯಿಂದ-
ರಿತ್ತಿಹ ಸಕಲಲೋಕೇಶ್ವರ ಮಹಿಮೆ-
ಯನು ಪಡೆದ ಗಣಗಳಿಂದ ನೀ ಕೇಳು;

ಕೈಗಳನೆರಡ ಸಂಪ್ರೀತಿಯಿಂ ಕಡಿದು
ಅರ್ಪಿಸೆ ಕೈಗಳ ಬಾಣನಿಗಿತ್ತ
ಕಂಗಳೆರಡ ಸಮುನ್ನತಿಯಿಂದಲೀಯೆ
ಕಂಗಳನೀಯನೆ ಕಾಳಿದಾಸನಿಗೆ
ಸಕ್ತಿಯ ಶಿವನಾಗಮಯ್ಯಗೆ ಕಣ್ಣು-
ಗಳ ಸೋಮವಾರಗಳಂದೀಯನೇನು?
ಭಾನುವಿನಿಂ ಹೋಗದಾ ಕುಷ್ಠವನ್ನು
ಪೂಣ್ದ ಮಯೂರನಿಗವನೀಯನೇನು?
ಹರಿಯಿಂ ಹೋಗದ ದುರ್ಭರದ ಕುಷ್ಠವನ್ನು
ಹರಿಯಿಸನೇ ದಂಡಿಯರ್ಥಿಯಿಂ ಭಜಿಸೆ?

ಧರಣಿಯ ಜನರೆಲ್ಲ ಹೊಗಳುತ್ತಲಿರಲು
ತವನಿಧಿಯಿತ್ತ ದೇಡರದಾಸಯ್ಯನಿಗೆ
ಧೂಪವೇಳೆಗೆ ಗಂಟೆಯೊಡನೊಯ್ಯನೇನು?
ಅಧಿಕ ಮೆಚ್ಚುತ ಲೋಹಿಲನು ತನ್ನಪುರಿಗೆ
ಕರಿಕಾಲಚೋಳಗೆ ಕನಕವರ್ಷವನು
ನರರೆಲ್ಲರರಿಯಲು ಸುರಿಯಿಸನೇನು?
ನಿಷ್ಠೆಯ ಭಾಷೆಗೆ ಮೆಚ್ಚಿ ಪ್ರಾಯವನು
ಈಯನೆ ಮರಳಿ ಕುಂಬರಗುಂಡಯ್ಯನಿಗೆ?
ತಾವಲ್ಲಿ ಪ್ರಮಥರೆಲ್ಲಕ್ಕಜವೊಂದೆ
ತನ್ನ ಗದ್ದುಗೆಯೀಯನೇ ಚೇರಮನಿಗೆ?

ನಿಮ್ಮವ್ವೆಗೇಳುದಿನಗಳಲಿ ಸೂರೆ-
ಗೊಡನೇನು ಪ್ರಮಥಲೋಕವ ಬಿಡನೇನು?
ಸೆಣಸಿ ಜೊಮ್ಮಯ್ಯನು ಕೊಂದ ಮೃಗಗಳ
ಪ್ರೀತಿಯಿಂ ಕೈಲಾಸಕೊಯ್ಯನೆ ತಾನು?
ಪೂರ್ಣ್ವೇಳು ದಿನಗಳ ಹೆಣಬದುಕನ್ನು
ಮಾಣಿಸಲಿಲ್ಲವೆ ಕದಿರ ರೇಮಯಗೆ?

ಮಲಯರಾಜನನು ನಿರ್ಮಲ ವಿಮಾನದಲಿ
ನಲವಿಂದಲೊಡನೆ ಕೊಂಡೊಯ್ಯನೆ ತಾನು?
ನಿರ್ಜಿತ ಸಂಸಾರನ ಕುಮಾರಪಾಲ
ಘೂರ್ಜರ ತಂತ್ರವನೊಡನೊಯ್ಯನೇನು?

ಊರವರೊಡನೆ ಪಿಳ್ಳೆಯನಯನಾರ
ಮೆರೆಯುತ ತನ್ನಲಿ ಸೇರಿಸಿಕೊಳನೆ?
ವರಗೊಂಡು ಪೆರುಮಾಣಿಯನ್ನೆಲ್ಲರರಿಯ–
ಲರ್ಥಿಯಿಂದೊಯ್ಯನೆ ಕೈಲಾಸಪುರಕೆ?
ಮೊರೆದು ಹಾಡಲು ತಾಳಗಳೊಡನೆ ನಂಬಿ–
ಯನು ಕೈಲಾಸಕೆ ಕರೆದೊಯ್ಯನೆ ಶಂಭು?
ನಲಿಯೆ ಷೋಡಶ ಗಣಗಳ ನಿರುತದಲಿ
ಮೆರೆದು ಪೀಠಗಳಲಿ ನೆಲಸನೆ ಮತ್ತೆ?
ತೇರಸಗಣಗಳ ವೀರಸದ್ಭಕ್ತಿ–
ಗಾದರಿಸುತ ಮೆಚ್ಚಿ ಕರುಣಿಸನೇನು?

ಹೊಂಚಿ ಮೃಗಾರ್ಥಿಯಿಂ ತಾನಿದ್ರವೋಗೆ
ಬೇಡನಿಗೊಸೆಯನೆ ಶಿವರಾತ್ರಿಫಲವ?
ಸಂದ ಸದ್ಭಕ್ತರ ಚರಿತೆಯನಂತ–
ಗಳ ಹೇಳಲೇಕೆ ನೀನರಿಯಲು ಧರೆಗೆ
ಶಿವನೆನಿಸಿದ ಮಡಿವಾಳ ಮಾಚಯ್ಯ–
ನಸದೃಶರಹ ಕಿನ್ನರಯ್ಯನಾದಿಯಹ
ನಚ್ಚೆನಿಂ ಭಕ್ತರಿಗಭಿಮತಫಲವ–
ನೀಯುತ್ತಲಿರುವನಿಂತಾದುದರಿಂದ
ಕಂತುಸಂಹರಗೆಣೆಯಿಹರೆಂಬ ನುಡಿಗ–
ಳಿನಿತೆಲ್ಲ ಶಿವನೆನ್ನುವೇಕಾತ್ಮಮತವು

ಕೇಳ್'ಯಥಾಶಿವಮಯೋ ವಿಷ್ಣು'ವೆಂಬ ನುಡಿ–
ಯಾತ್ರಿಮೂರ್ತಿಗಳೊಬ್ಬನೆಂಬ ದುರುಕ್ತಿ–
ಯಷ್ಟಮೂರ್ತಿಯೆ ರುದ್ರನೆಂಬ ಕುಯುಕ್ತಿ–
ದುಷ್ಟಮಾನವರ ಭಕ್ತರಿಗೆಣೆಗೈದು
ನುಡಿವುದ ಕೇಳಲು ಪಾತಕವಹುದು;
ಕೆಲಸವದೇನು ನೀ ಕರೆಸಿದುದೆ"ನಲು
ಭೂಮಿಯ ನೋಡುತ್ತ ಮುಖವ ಬಾಗಿಸುತ
ಗರಬಡಿದಂತೆ ತಮ್ಮನು ತಾವೆ ಮರೆತು

ಧೈರ್ಯವರತು ಭಯದಿಂದುಸಿರುಡುಗಿ
ಪಕ್ಕೆ ಕೀಲ್ಮುರಿದಂತೆ ಗಕ್ಕುಮಿಕ್ಕೆನದೆ–

ಯಿದ್ದವರನು ನೋಡಿಯುತ್ತರವಡಗಿ–
ಯಾ ನರೇಂದ್ರಾಧಮನಂತು ಲಜ್ಜಿಸಲು
ಕೊಬ್ಬಡಗಿದರು ತಾರ್ಕಿಕರು ನಾಯನ್ನು
ಕೂಗಿಸಿ ಹುಲಿಯ ಬರಿಸಿದಂತಾಯಿತ್ತು;
ಕ್ಷಿತಿಯಲ್ಲಿ ಬಾಚಯ್ಯ ಮರ್ತ್ಯನೇನಿತರ
ಸಾಕ್ಷಾತ್ತ್ರಿನೇತ್ರನು ಸತ್ಯವಿದೆನುತ
ಧಿಗ್ಗೆನುತವರೆದ್ದು ಪಿಳಿಪಳಿ ತಾರ್ಕಿ–
ಕರ ಜೊತೆಗೆಯ್ದೆ ಬಿಜ್ಜಳನು ತಕ್ಷಣವೆ;
ಬಾಚಿರಾಜಯ್ಯನು ಬಸವಯ್ಯ ಮುಖ್ಯ–
ರಾದಂಥ ನಿಖಿಲಭಕ್ತಾವಳಿಯೈದಿ–

ದರು ಶೀಲಸದ್ಭಕ್ತಿಸೌಭಾಗ್ಯಮಹಿಮೆ–
ಯೆಸೆಯಲು ಜನರೆಲ್ಲ ಘನಕೀರ್ತಿಗೈಯ–
ಲತಿಶಯ ಸದ್ಭಕ್ತಿಗೋಚರನಾಗಿ
ಬಾಚಿರಾಜಯ್ಯ ತಾನೆಂದಿನಂತಿದ್ದ
ಬಾಚಿರಾಜಯನ ವಿಭ್ರಾಜಿತಚರಿತೆ–
ಯನಧಿಕ ವೀರಮಾಹೇಶ್ವರಸಭೆಯ–
ನೋದಲು ಕೇಳಲು ಸಂಸ್ತುತಿಗೈಯೆ
ಸದಮಲ ಸದ್ಭಕ್ತಿಸೌಖ್ಯಸಾರಗಳು
ಸಹಜೈಕಲಿಂಗನಿಷ್ಠಾಪರತ್ವಗಳು
ಮಹಿತ ಶಿವಾಚಾರ ಮಹಿಮೆಗಳಹವು.

ಆತತ ಸಕಲಪುರಾತನ ಚರಿತ
ಗೀತಾನುಭವಸುಖಕೇಳೀವಿಲೋಲ!
ವಿಹಿತಶಾಸ್ತ್ರಪುರಾಣವೇದವೇದಾಂತ
ಮಹಿತರಹಸ್ಯಾರ್ಥಮಾರ್ಗಾನುಪಾಲ
ತನುಮನೋಧನ ನಿವೇದನ ಭಕ್ತಿವಿನಯ
ಜನಿತಾನುರಾಗಾತ್ಮಸದ್ಭಕ್ತಿ ಜಾಲ!
ವಿದಿತ ಪ್ರಸಾದಸವಿನಯಸೌಖ್ಯಪ್ರ
ಮುದಿತಾಂತರಂಗಸಮುನ್ನತ ಲೀಲೆ
ಹೃನ್ಮಂದಿರಾಂತರ್ನಿಹಿತಗುರುಧ್ಯಾನ!
ಮನ್ಮಿತ್ರ, ಸಂಗನಾಮಾತ್ಯ, ಸುಶೀಲ!

ಇದುವಸಂಖ್ಯಾತಮಾಹೇಶ್ವರದಿವ್ಯ
ಪದಪದ್ಮಸೌರಭ ಭ್ರಮರಾಯಮಾಣ
ಜಂಗಮಲಿಂಗಪ್ರಸಾದೋಪಭೋಗ
ಸಂಗತ ಸುಖಸುಧಾಶರಧಿನಿಮಗ್ನ
ಸುಕೃತಾತ್ಮ ಪಾಲುಕುರಿಕಿ ಸೋಮನಾಥ
ಸುಕವಿ ಪ್ರಣೀತವಾಗಧಿಕ ಶೋಭಿಸುವ
ಚರಲಿಂಗ ಘನಕರಸ್ಥಲಿವಿಶ್ವನಾಥ
ವರ ಕೃಪಾಂಚಿತ ಕವಿತ್ವಸ್ಫೂರ್ತಿಯಿಂದ
ಮೆರೆವ ಬಸವಪುರಾಣದ ಕಥೆಯಲ್ಲಿ
ಅನುಪಮದಿಂದ ಷಷ್ಠಾಶ್ವಾಸವಾಯ್ತು ೧೯೯೦

## ಸಪ್ತಮಾಶ್ವಾಸ

ಶ್ರೀ ಶ್ರಿತಕಂಧರ ಶ್ರೀ ಪಾದಯುಗ ಸ-
ಮಾಶ್ರಿತ ಸಂಗನಾಮಾತ್ಯ ಸತ್ಕೃತ್ಯ
ಮತ್ತೆಯು ಭಕ್ತಿಧೀಮಣಿ ಲಸತ್ಕೀರ್ತಿ
ಕರಕಂಠಭಕ್ತಾಗ್ರಗಣ್ಯನುತ್ತಮನು
ಅಧಿಕನು ಶಿವನಾಗಮಯ್ಯ ಸಂಪ್ರೀತಿ-
ಯಿಂ ಬಸವನ ಪ್ರಣಿಪತ್ತಿಕೈಗೊಳ್ಳು-
ತತಿಶಯ ಭಕ್ತಸುಖಾಮೃತಾಪಾರ
ವನಧಿಯಲಿ ನಿಮಗ್ನನಾಗಿ ವರ್ತಿಸಲು
ಸಡಗರದಿಂದಲಿ ಭೂಸುರರೆಲ್ಲ
ಪೊಡವೇಶನಾಸ್ಥಾನಕೈದು ಹೇಳಿದರು:

"ಕೇಳು ರಾಜನೆ ದೊಡ್ಡ ಭಕ್ತರು ದೊಡ್ಡ
ಭಕ್ತರೆನುತಲೆಮ್ಮ ಬಸವಯ್ಯನವರ
ಹಿಡಿದು ಕೊಂಡಾಡಿ ಬೀಳುವ ಕಾಲಮೇಲೆ
ಉಂಡುಮಿಕ್ಕುದನೆ ತಾ ತಿನ್ನುವ ಮತ್ತೆ
ಹೆದರದೆ ಸಭ್ಯನಂತೆಯೆ ನಿಮ್ಮ ಬಳಿಗೆ
ಬರುತಲಿ ಹೋಗುವನಂತರ್ನಿವಾಸಗಳ-
ನವರ ಬೀದಿಗಳಲಿ ಬರುವಾಗಲೆಮ್ಮ
ಕಡೆಗೆ ಲಕ್ಷ್ಯವಿಡರು ಸಂಭೋಳಿಯವರು
ಕಥೆಯೇಕೆ ಕಲ್ಯಾಣಕಟಕವಿದೆಲ್ಲ
ಪ್ರಥಿತದಿ ಹೊಲೆಯರ ಪಾಲಾಯಿತಿನ್ನು;

ಎಲ್ಲಿಯ ವರ್ಣಗಳೆಲ್ಲಿಯ ನೀತಿ-
ಯೆಲ್ಲಿಯ ಧರ್ಮಗಳಿನ್ನೆಲ್ಲುಳಿವುವು?
ರಾಜನ ಹೊದ್ದುವುದಾ ರಾಷ್ಟ್ರ ಪಾಪ
ಓಜೆಯಿಲ್ಲದವರ ಪರಿಹರಿಸದಿರೆ
ಕೇಳಹೇಳದೆ ಜನನಾಥನ ಪಾಪ-
ವನಘ ಪುರೋಹಿತರನವಶ್ಯವಾಗಿ

ಸೇರುವುದದಕೆ ಹೇಳಿದೆವು ಭೂಪೇಶ;
ಹೊದ್ದದು ಪಾಪವದೆಮ್ಮನು ಈಗ;
ಧ್ರುವವು 'ರಾಜಾನುಮತೋಧರ್ಮ'ವೆಂದು
ಧರಣೀಶ, ಅರಿಯೆಯಾ"ಯೆಂದು ಕೋಪಿಸಲು

ವಸುಧೇಶ್ವರನು ಬಸವಗೆ ಹೇಳಿಕಳಿಸ-
ಲಸಮಾನನಂದಣವೇರಿಸರ್ಥಿಯಲಿ
ಶಿವನಾಗಮಯ್ಯಗೆ ಕೈಗೊಟ್ಟು ತಾನು
ಜೊತೆಗೈತರುತಿರೆ ತದ್ವಿಜರೆಲ್ಲ ಕಂಡು
"ಅದೆಕೋ, ಮಹಾರಾಜ, ಸರಿಯದೆ ಬಳಿಯೆ
ಬರುತಿರುವನು ಹೊಲೆಗಲೆಸಲೀಯೆಡೆಗೆ
ಹೃದಯದಿ ಭಯವಿಂತು ಪಡದಲೆ, ನೋಡು
ಅಂದಣವೇರಿಸಿ ಕರೆತಂದನವನ-
ನಿನ್ನಾರಿಗೂ ಈತ ಶಂಕಿಸನೆ"ನಲು
ಕೋಪದಿ ನಗರದ್ವಾರವ ಹೊಗದಂತೆ

ಹೊರಗಡೆಯೋಲಗವಿತ್ತನಿದ್ದೆಡೆಯೆ
ಹೆದರದೆ ಬಸವಯ್ಯನುನ್ನತವಾದ
ಶಿವನಾಗಮಯ್ಯಗೆ ಸಿಂಹಾಸನದೊಲು
ನೆಲದ ಮೇಗಡೆ ತನ್ನ ಚೀರವ ಹಾಸಿ
"ಕರೆದ ಕೆಲಸವೇನು, ಪೃಥಿವೀಶ"ಯೆನಲು
ಕಲುಷದಿಂದಲಿ ಬಿಜ್ಜಳನು ತಾನಿಂತೆಂದ:
"ಆದಿಯಿಂದಿರುವ ವರ್ಣಾಷ್ಟದಶಗಳ
ಭೇದಗಳನ್ನಿಂದು ಬದಲಿಸಬಹುದೆ?
ಕುಲಸಂಕರವಗೈದು ಕೂಡುವರೆ ಹೊಲೆ-
ಗಲಸಿದೆ ಕಲ್ಯಾಣಕಟಕದಲ್ಲೆಲ್ಲ;

ತಲೆಗೇರಿತೇ ನಿನ್ನ ನಿಟಿಲಾಕ್ಷಭಕ್ತಿ?
ನೀತಿಹೀನನೆ, ಸುರಿವುದೆ ಮಳೆಯಿನ್ನು
ಫಲಬಿಡುವುದೆ ನೀವು ನಿಂತ ಭೂಮಿಯಲಿ
ಇನ್ನೇನು ನಿಮಗೆ ನಾವಂಜುವು"ವೆನಲು
ವಸುಧೇಶ್ವರನಿಗಾಗಲನಿವಾರ್ಯವೀರ್ಯ
ಬಸವನು ಸದ್ಭಕ್ತಿಪಂಡಿತನೆಂದ:
"ಮನುಜೇಶ, ಬಡಗಿಯ ಮಾಚಲದೇವಿ-
ಯನ್ನು ಉತ್ತಮವಂಶ್ಯೆ ಮಾಡುವುವೆನುತ

ಸ್ವರ್ಣಧೇನುವಿನಲ್ಲಿ ಸತಿಯನಿರಿಸುತ
ನಿರ್ನಿಮತ್ತವೆ ಹಾಲು ತುಂಬಲು ಹಾಕಿ

ಆ ಹೋಯ್ತು ಪೂರ್ವಾಶ್ರಯವೆನುತ ತರುತ-
ಲಾ ಮಡದಿಗೆ ಮೊಕ್ಕಿ ಸುಮ್ಮನೆಯಿರದ-
ಲಂಗದಲಿದ್ದ ಗ್ರಾಮಾಂತ್ಯಜರಾಳಿ-
ಯೆಂಜಲು ಹಾಲಕುಡಿದರೇಕವಿರದೆ;
ಅದುವೇಕೆ ಸಾವಿರ ಕಥೆಗಳನಿನ್ನು
ಸಂದೇಹವೇತಕಾ ಕನಕಧೇನುವನು
ಹಣ್ಣು ಸೀಳಿದ ರೀತಿ ಖಂಡಗಳಾಗಿ
ಕಡಿಯುತ್ತ ತಮ್ಮಲ್ಲಿ ಕೈಹಾಕಿಕೊಳುತ
ಹೆಣೆದು ಸೋಮಾದಿ ಪರಿಜನರ ಪಾಲು
ಹಿಂಭಾಗ ಚತುರ್ವೇದಿಗಳದಯ್ಯ ಪಾಲು

ಬೆನ್ನಮೂಳೆಯು ತಾನುಪಾಧ್ಯರ ಪಾಡು
ಬಾಲವು ಬ್ರಹ್ಮವಿದ್ವಾಂಸರ ಪಾಲು
ಹಿಂದೆ ಷಡಂಗರ ಪಾಲು ಮುಂಬದಿಯು
ಉರವು ಪ್ರಭಾಕರಭಟ್ಟರ ಪಾಲು
ಸಮಹೊಟ್ಟೆ ಸಣ್ಣನೆಮಕೆಗಳು ಪಕ್ಕ-
ದೆಲುಬೆಲ್ಲ ವ್ಯಾಕರಣದವರ ಪಾಲು
ಸುಳಿವ ಕುಚ್ಚದು ತ್ರಿವೇದಿಗಳಿಗೆ ಪಾಲು
ಬಲುಕಿರುಗೊರಸುಗಳಿತರವವೆಲ್ಲ
ಪರದೇಸಿ ವಿದ್ಯಾರ್ಥಿಗಳ ಪಾಲೆನುತ್ತ
ತೆರಳುತ್ತ ಗೋಹತ್ಯೆ ಮಾಡಿದ ಊರ

ಹೊಲೆಯರ ಹಗ್ಗವ ಹೊಲೆಯರ ಹಸಿಯ
ಹೊಲೆಯರ ನುಡಿಗಳ ಹೋಲ್ವುವೆ ಕೇಳೆ?
ವೇದಗಳಾದಿಯೊ ವಿಧಿಕಲ್ಪಿತಗಳು
ಆದಿಯೊ ಜಾತಿಗಳಿಗದೆಂತೆಂದಾಗ
ಘನವೇದಚೋದಿತ ಜಾತಿಗಳೆರಡು
ಕೇಳು ಪ್ರವರ್ತಕನು ನಿವರ್ತಕನೆನೆ
ಭವಕರ್ಮಸಂಸ್ಕಾರಿ ಭುವಿಪ್ರವರ್ತಕನು
ಶಿವಕರ್ಮಸಂಸ್ಕಾರಿ ಭುವಿನಿವರ್ತಕನು
ಸನ್ನುತ ವೇದಾರ್ಥಚರಿತಗಳಿರಲು
ಮೊನ್ನೆ ಹುಟ್ಟಿದ ಕುಲಗಳ ಮಾತದೇಕೆ?

ಸ್ಮೃತ್ಯುಕ್ತವಾದ ಜಾತಿಗಳಲ್ಲವೇನ-
ದಷ್ಟಾದಸಂಗಳು ತಾವೇತಕಿನ್ನು
ಹೆಚ್ಚಿನ ಹದಿನೆಂಟು ವರ್ಣಗಳೆಲ್ಲ
ಮಾರಯ್ಯನಾ ಭಕ್ತನಿಚಯದ ಕುಲವು;
ಭಾಗ್ಯಹೀನನು ತಾನು ಚಿನ್ನವಿಡಿಯೆ ಅ-
ಯೋಗ್ಯದ ಲೋಷ್ಟವಾದಂತೆಯೆ ಶಿವನ
ಪ್ರತಿಬಿಂಬರೂಪಾದ ಭಕ್ತನು ಭವಿಗೆ
ಮಾನವಾಕೃತಿಯಂತೆ ಧರೆಯಲಿರುವನು.
ಅದರಿಂದ ಶಿವಭಕ್ತಗಣಗಳ ಮಹಿಮೆ-
ಯನ್ನಾಲೋಚಿಸೆ ನಿನ್ನ ಪ್ರಾಪ್ತಿಯೆ ಹೇಳು

ಕರಿವೈರಿಯೊಡನೆ ನಾಯಿಯು ಸರಿಯೇನು
ಆನೆಗೆ ಗ್ರಮಸೂಕರಗಳು ಸರಿಯೆ
ಜಲಧಿಗೆ ನೆಲದ ಮಡುಗಳವು ಸರಿಯೆ
ಸುರಗಂಗೆಗಾ ಬಡಹಳ್ಳಗಳೆಣೆಯೆ
ತಪನಗೆ ಖದ್ಯೋತತತಿಯೆಲ್ಲ ಸಮವೆ
ಉಪಮಿಸೆ ಚಂದ್ರನಿಗುಡುಪಂಕ್ತಿ ಸಮವೆ
ಮೇರುವಿಗಿತರ ಬೆಟ್ಟಗಳವು ಸರಿಯೆ
ಪಾರಿಜಾತಕ್ಕೆ ಬೊಬ್ಬಿಲಿಯದು ಸರಿಯೆ
ಶಿವನಾಗಮಯ್ಯಗೆ ಸಮನೆಯೀ ದ್ವಿಜರು
ಅವನೀಶ, ಸರಿಯಲ್ಲರೆಂತು ಹೇಳೆನಲು

ಭಕ್ತನು ಶ್ರೀಪತಿ ಪಂಡಿತನೀಶ
ಭಕ್ತನು ಕೋಟಿಬ್ರಾಹ್ಮಣರೆಣೆಯೆಂಬ
ಜನರ ನಾಲಗೆಯನು ಸೀಳಿ ಹಾಕುವೆನು
ಎನ್ನಲನಂತಪಾಲನ ಸಭಾಸ್ಥಲದಿ
ತಾವರೆಗಳವು ಕೆಂಡಗಳಾದುವಲ್ಲ,
ಚಕ್ಕನೆ ಪೊತ್ತಿಪಚ್ಚಡದಲಿ ಸುತ್ತಿ-
ದನು, ಹೇಳೆ ಭಕ್ತಾನೀಕರ ಸದನಗಳ
ಶ್ವಾನಗಳಿಗೆ ದ್ವಿಜರಸಮರು ಕೇಳು

## ಕಲ್ಲಿದೇವಯ್ಯನ ಕಥೆ

ಅಲ್ಲಿ ಹಾವಿನಹಾಳವೆಂಬ ಪುರದಲಿ
ಕಲ್ಲಿದೇವಯ್ಯನೆನ್ನುವ ಮಹಾತ್ಮನವ

ಶ್ರೀರುದ್ರನಪರಾವತಾರನೆ ಹೊರತು
ಧರಣಿಯ ಮನುಜಾವತಾರಿ ತಾನಲ್ಲ-
ವಿರುಳಲಿ ಪರದೇಶಿ ಬಂದರಾವೂರ್ಗೆ
ಹಾವೊಂದು ಕೊಲ್ಲುತಲಿತ್ತು ಸಂತತದಿ.
ಒಮ್ಮೆ ತಾ ಕಲ್ಲಿದೇವಯ್ಯನ ಕಚ್ಚಿ-
ಯಾ ಹಾವು ಸತ್ತಿತು ಜನರೆಲ್ಲರರಿಯೆ;
ಕರುಣೆಯ ಸಾಕಾರ ಕಲ್ಲಿದೇವಯ್ಯ-
ನುರಗವ ಬದುಕಿಸಾವೂರಿನಲಿದ್ದ.
ಸಹಜ ಸನ್ನುತ ಶೀಲಸಂಬಂಧಯುಕ್ತಿ
ಮಹಿಮೆ ತುಳ್ಕಾಡುತ್ತಲಿರಲೊಂದು ದಿವಸ

ದಾಸಿಯು ಅರ್ಘ್ಯಪಣ್ಯಗಳಿಗೆ ಹೋಹ
ಸಮಯದಲ್ಲೊಬ್ಬ ಸದ್ವಿಜನ ಕೈಯದುವೆ
ತನ್ನ ಸೋಕಲು ತಲೆ ಮೇಲಿದ್ದ ಮಡಕೆ
ನೆಲದ ಮೇಲಕೆ ಹಾಕುತಲ್ಲಿಯೆ ಹೂಳಿ-
ಯಾಕೆಯು ಭಸಿತಾಂಗಿಯಾಗಿ ಬೇರೊಂದು
ಹೊಸ ಬಿಂದಿಗೆಯ ಹೊತ್ತು ಹೋಹುದ ಕಂಡು
"ನೀಚಳ ನೋಡೆನಿತಿರುವುದು ಕೊಬ್ಬು
ಉತ್ತಮದ್ವಿಜ ಮುಟ್ಟಿದನು ತನ್ನನೆನುತ
ಭಾಂಡವನಲ್ಲಿಯೆ ಬೀಸಿಹಾಕುತ್ತ
ಬೇರೆ ಭಾಂಡವ ಕೊಂಡು ತಾ ಹೋಗುತಿಹಳು.

ಎಲ್ಲೆಡೆ ಬ್ರಾಹ್ಮಣನಿತರರು ಮುಟ್ಟ-
ಲುಚಿತವಾಗದೆ ವಿನಾ ಇತರರ ದ್ವಿಜರು
ಮುಟ್ಟಬಾರದು ಎನ್ನುವಿಂತಹ ಧರ್ಮ
ಹುಟ್ಟಿರೆ"ಯೆನುತೆಲ್ಲ ಭೂಸುರರಾಗ
ಕಲಿಯುಗ ರುದ್ರನ ಕಲ್ಲಿದೇವಯ್ಯ-
ನ ಕರೆಸಿ ಕೌಟಿಲ್ಯಕಲಿತ ವಾಕ್ಯದಲಿ
"ತಲೆ ಹೋದರೂರಿನೊಳಗೆಯೊಂದು ಬಾರಿ
ನುಡಿದರು ಕೇಳದಿರುವರು ನಿಮ್ಮಿಂದ
ಕಲ್ಲಿದೇವಯ್ಯನವರು ದುಷ್ಟರಲ್ಲ-
ವೆಂಬುವ ಕೇಳಿಹೆವಂದು ಸರ್ಪವನು

ನೀವು ಬದುಕಿಸಿದುದನು ಕಂಡೆವೀಗ
ಕಂಡೆವೆಂದೆಂದು ಕಾಣಲುಬಾರದುದನು;

ಒಳ್ಳೆಯವರೆನುತ ನಿಮ್ಮ ಮನ್ನಿಪೆವು
ಕೀಳ್ದೊತ್ತು ನಮ್ಮನು ಕೀಳುಮಾಡಿದಳು,
ಬರಿವಿಪ್ರನಲ್ಲವು ಸಾಕ್ಷಾದ್ವಸಿಷ್ಠ-
ನಂಥವುತ್ಕೃಷ್ಟ ವಿದ್ವಾಂಸನಾಗಿರಲು
ವೇದಿಗಳವರು ದಾಮೋದರ ಯಜ್ಞ
ನಾಗಿರುವಾ ತ್ರಿವಿಕ್ರಮ ಸೋಮಯಾಜಿ
ಸಮಿಧೆಗೆ ಹೋಗುವೀ ಗುಡಿಯೊತ್ತಿನಲ್ಲಿ
ಭ್ರಮಿಸುತ್ತಲೋಯೇನೊ ತಾನಲ್ಲಿ ಬರುತ

ತನು ಸೋಕಿತಿವರದೆನ್ನುತ ನಿಮ್ಮ ದಾಸಿ
ತಲೆಯ ಮೇಲಿದ್ದ ಗಡಿಗೆಯನ್ನೊಡೆದಳು;
ಕೇಳು, ಶೂದ್ರರು ಮುಟ್ಟಿದರೆ ಬ್ರಾಹ್ಮಣರಿಗೆ
ತಾ ಸಚೇಲಸ್ನಾನವಾಗಬೇಕೆಂದು
ಇರುವುದಲ್ಲದೆಯೀಯಧಮವಂಶಜರಿಗೆ
ದ್ವಿಜರನು ಮುಟ್ಟಲು ಬಾರದೆಂದಿದೆಯೆ?
ಯಾವ ನೀತಿಯು ಧರ್ಮವಾವ ಪುರಾಣ-
ದುಕ್ತಿಯೆಂತಹ ಭಕ್ತಿ ಸಹಿಸಲುಬಹುದೆ
ಈ ಸ್ತ್ರೀಯನಲ್ಲಿಯೆ ಕೊಲ್ಲುವುದಾಗ
ತಕ್ಕದಲ್ಲವುಯೆಂದು ದಂಡಿಸಲಿಲ್ಲ.

ಭೂಮಿಯಲ್ಲಿರುವ ಮಾರ್ಗವ ಮೆಟ್ಟಬಹುದೆ?
ನಮ್ಮೆದುರೆದುರಿಗಿನ್ನೇನನೆನ್ನುವಿರೊ?"
ಎನ್ನಲು ಕಲ್ಲಿದೇವಯ್ಯನಿನ್ನೇತ-
ಕನುಮಾನವೆನುತಲಿಂತೆಂದನವರಿಗೆ:
"ಮನೆಯ ದಾಸರಿಗೆಂತಹುದು ಭಕ್ತರುಗಳ
ಮನೆಯ ನಾಯಿಯು ನಿಮ್ಮ ಮುಟ್ಟಲಾಗದೆನೆ
ಬ್ರಾಹ್ಮಣರೇ ನೀವು? 'ಬ್ರಹ್ಮಾಚರಂತಿ
ಬ್ರಾಹ್ಮಣಾ'ಯೆನ್ನಲು ನಿಮಗೆಲ್ಲಿ ಬ್ರಾಹ್ಮ್ಯ?
ಸಂದೇಹವೇಕೆ ಪರಬ್ರಹ್ಮವೆಂಬು-
ದಕ್ಕರ್ಥವನ್ನು ತಿಳಿಸಿದರೆ ಸಾಕು.

ಪರಮೇಶ್ವರನೆನಲು ಪರಮಾತ್ಮನೆನಲು
ಪರಿಕಿಸಲಾ ಪರಬ್ರಹ್ಮವೆಂದೆನಲು
ಹರನಲ್ಲದನ್ಯರ್ಗೆ ಪರಶಬ್ದವೆಲ್ಲಿ?
ಪರಶಬ್ದವುತ್ಕರ್ಷಪರವಾದ್ದರಿಂದ-

ಲನ್ಯರ್ಗೆ ದೊರೆವುದೇನುತ್ಕರ್ಷಪದವು?
ಹರಿಯು ಬ್ರಹ್ಮರುಗಳು ಪರಮಾತ್ಮರೆಂತು
ಆರಯ್ಯೆ ವೇದಶಾಸ್ತ್ರಾರ್ಥಗಳಲ್ಲಿ
ಹರಿಮುಖ್ಯರೆಲ್ಲ ಜೀವಾತ್ಮರೆ ಹೊರತು
ಧರೆಯಲ್ಲಿ ಪರಬ್ರಹ್ಮ ಹರನು, ಬ್ರಹ್ಮವನು
ಚರಿಯಿಸುವವರೆಲ್ಲ ಸದ್ಭಕ್ತವರರು

ಹರಿಬ್ರಹ್ಮನಮರವಲ್ಲಭರು ತಾವೆಲ್ಲ
ಪರಮನರ್ಚನೆಗೈವ ಭಕ್ತರು ತಾನೆ?
ದೃಢದಿ 'ಬ್ರಹ್ಮಾಧಿಪತಿರ್ಬ್ರಹ್ಮಣೋಧಿ-
ಪತಿ'ಯೆನ್ನುತಿಹುದಲ್ಲಾ ಶ್ರುತಿಸಮೂಹಗಳು;
ಅದರಿಂದ ಬ್ರಹ್ಮಮಾರ್ಗವದೆಲ್ಲಿ ನಿಮ್ಮ
ಮುಟ್ಟೆ ಸಂಭಾಷಿಸೆ ಸರಿಯೆ ಭಾವಿಸಲು?
ಏತೆರದಿಂದಾಯ್ತೆಂದರಿಯಿರೆ ನೀವು
ಜಾತಿಶೂದ್ರತ್ವವು ಪ್ರೇತವಿಮುಕ್ತಿ
ರುದ್ರೇತರಕ್ರಿಯೆ ರೂಪಿಸಲಹವೊ
ರುದ್ರಗೆ ಸಮನಾದ ಶ್ರುತಿಕರ್ತನಿಹನೊ

ಮೃಡನ ಭಕ್ತರ ಜೊತೆ ನೀವೆಲ್ಲ ಸರಿಯೆ?
ನುಡಿಗಳೊಳವೆ ನಿಮ್ಮ ಬಾಯ್ತೆರೆಯಿ"ರೆನೆ
"ಅಕ್ಕಟಾ, ಏನಿದು ನಮ್ಮೆಲ್ಲರನ್ನು
ನಾಯಿಗಳಿಗು ಕೀಳು ಮಾಡಿ ನುಡಿವೆಯ?
ನಿಮ್ಮ ಕೂಸದು ಗೈದ ಕೃತ್ಯಗಳೆಲ್ಲ
ಕಡಿಮೆಯೆ? ಮೊದಲಿಗೇ ಗುದ್ದಲಿ ಕೊಂಡೆ
ಮೂದಲಿಕೆಯ ಮುಳ್ಳ ತೆಗೆದು ದಬ್ಬಳದಿ
ಚುಚ್ಚಿದಂತಾಯಿತು ಹೇಳಲೇಕಿನ್ನು?
ಓದಿಸುವೆಯ ನಿಮ್ಮ ಶ್ವಾನದಿಂದೊಂದು
ಪದಖಂಡವರ್ಗದ ಭಾಗವನೀಗ"-

ಲೆನೆ ವಿಪ್ರರೆಲ್ಲರಾಗ್ರಹಿಸುತಲಿರಲು
ಕಲ್ಲಿದೇವಯ ಕೇಳಿ ವಿಪ್ರರ ನೋಡು
ತೆಂದ"ನೊನಕೆವಾಡಿನಂತೆ ವೇದಗಳು
ನಮ್ಮಯ ಶಿವಭಕ್ತರುಗಳ ಮನೆಗಳ
ಸಾರಮೇಯಗಳಿಗೆ ಧರಣಿಯ"ಲೆನುತ-
ಲಾರಯ್ದು ಕಲ್ಲಿದೇವಯ್ಯನು ನಗುತ

ಕರೆಯಲು ವೇದಪಿತಾಮಹಾಖ್ಯನನು
ಬಂದಿತು ಶುನಕವು ಚಿಟಿಕೆಯ ಹೊಡೆಯೆ:
"ಉಚ್ಚಿಚ್ಚಿರೇ ಶಂಕರೋಚ್ಚಿಷ್ಟ ಭೋಗಿ-
ಯುಚ್ಚುಚ್ಚಿರೇ ಪ್ರಣವೋದಾತ್ತಯೋಗಿ-

ಯುಚ್ಚುಚ್ಚಿರೇ ಆಗಮೋತ್ಕೃಷ್ಟಭರಿತ
ಉಚ್ಚುಚ್ಚಿರೇ ಮಹಾಂಹೋದೂರಚರಿತ
ಉಚ್ಚುಚ್ಚಿರೇ ವೀರಸಚ್ಚರನಿರತ
ಉಚ್ಚಿರೇಯಪುನರ್ಭವೋನ್ನತಸ್ಥಿರತ"
ಎಂದಿಂತು ಕೂಗಿದ ಕ್ಷಣಮಾತ್ರದಲ್ಲಿ-
ಯೈತಂದು ಶುಕನವು ತನಗೆ ನಮಿಸಲು
ವರದಯಾಂಚಿತಸುಧಾವಾರ್ಧಿಯ ಸುರಿಸಿ
ನಗುತಲಿ ಕಲ್ಲಿದೇವಯ್ಯನಿಂತೆಂದ
"ಯಾವ ವೇದದೊಳಾದರೂ ಒಂದನೆತ್ತಿ
ತಾವನನುಷ್ಠಿಸು ಈ ವಿಪ್ರರೆದುರು"

ಎನ್ನಲು ಶುನಕಚರ್ಮಾವೃತರುದ್ರ-
ನನುಷಕ್ತಿಯಿಂ ಪದ್ಮಾಸನದಲಿ ಕುಳಿತು
ಕರಕಂಠನಾತ್ಮಾಬ್ಜಕರ್ಣಿಕೆಯಲ್ಲಿ
ನಿಲಿಸಾದಿಶಕ್ತಿಯಾಕುಂಚನಗೈದು
ಸೂರ್ಯನ ಮೆಟ್ಟಿ ಸುಧಾಸೂತಿ ಕಟ್ಟಿ
ನಾಸಾಗ್ರದಲಿ ದೃಷ್ಟಿಯನ್ನು ನಿಲ್ಲಿಸುತ-
ಲಕಲಂಕ ಮೃದುಮಧುರಕಳಾ ನಿಯುಕ್ತಿ-
ಯಿಂದ ಸುಕರನಾದೋಕ್ತಿ ವಿಶುದ್ಧಸ್ವರದಿ
ತ್ರ್ಯಕ್ಷರಬಿಂದು ನಾದಪ್ರಯುಕ್ತಾಂಚಿ-
ತಾಕ್ಷರದೋಂಕಾರವಂತೆಯುಚ್ಚರಿಸು-

ತಪ್ಷರಲ್ಲಿಯೆ ತದ್ಧರಾಮರಾನೀಕ-
ವಡಿಗಡಿಗದಕೆ ಸಾಷ್ಟಾಂಗವನಿಡಲು
ಮೆರೆವುದಾತ್ತಾನುದಾತ್ತ ಸ್ವರಿತಪ್ರ-
ಚಯಗಳು ಸಾಂಗದಿಂ ಸಂಧಿಸಲಲ್ಲಿ
ಪದವನು ಕ್ರಮವನು ಪಾಠವ ಜಟವ
ವಿದಿತದಿಂದಲಿ ನಾಲ್ಕು ವೇದಗಳಿಂದ-
ಲೊಂದೊಂದು ತಾವೆತ್ತಿ ತಾನುನುಷ್ಠಿಸಲು
ಗಕ್ಕನೆ ತಾನೆದ್ದು ಕಲ್ಲಿದೇವಯ್ಯ

"ಹೋ ಮಾಣು ವೇದಪಿತಾಮಹ"ನೆನಲು
ನಿಲಿಸಿತು ಶುನಕವಧ್ಯಯನವನಲ್ಲಿ.

"ವಿಪ್ರರೆಲ್ಲರು ಕಿವಿಯಾರ ಕೇಳಿದರೆ
ಕಂಡಿರೇ ವಿಪ್ರರ ಘನಮಹತ್ವವನು"
ಎನುತಲಾ ಕಲ್ಲಿದೇವಯ್ಯ ವೇದಗಳ-
ನೋದಿಸಿದನು ನಾಯಿಯಿಂದಲಿ ಮತ್ತೆ-
ಯಘವೈರಿ ಸಿದ್ಧರಾಮಯ್ಯನಾಲಯದ-
ಲುಘೆಕಾಳಿಕಾಡನೆನ್ನುವನಾಯಿಯಿತ್ತು,
ಇದಕೆ ಗುರುವು ಅದು, ಅದರ ಮಹತ್ವ-
ವೆನಲೇನನಾದರೂ ಅರಿವುದು ಒಂದೆ
ಸಲಕೆ, ಮತ್ತೆಯು ಮಹಾಕಾಳಯ್ಯನವರ
ಸಾರಮೇಯವದಂದು ಜಂಬೂರಿನಲ್ಲಿ

ವಾದಗಳಲ್ಲಂದು ವೇದವನೋದ-
ಲಿಲ್ಲವೇನೀ ಮರ್ತ್ಯಲೋಕ ತಾನರಿಯ-
ಲದಕೆ ವಿಪ್ರರು ಭಕ್ತಗಣಗಳ ಮನೆಯ
ಶ್ವಾನಗಳಿಗೆ ಎಂತು ಸರಿಯೆನಬಹುದು?
ಶಿವಚಿತ್ತನೆಂಬೊಬ್ಬ ಶಿವಭಕ್ತಿಪರನು
ಸೇರುತ ವಿಪ್ರರ ಭಕ್ತನೊಬ್ಬನಿಗೆ
ಸರಿಬಾರರೆನೆ ವೇದಶಾಸ್ತ್ರಗಳಿಂದ
ವಿರಚಿಸಿ ಹೇಳಲು ದ್ವಿಜರಿರದಲ್ಲಿ

'ಚರ್ಚೆಯೋದುಗಳಲಿ ಪರಿಣತಿವಡೆದು
ಕೂಡಿಯಾಡುವ ಶಬ್ದಕೋವಿದ ನೀನು
ಆದರಿಷ್ಟೆಲ್ಲವೇಕಿಹುದೆ ಪ್ರತ್ಯಯವು
ಇದಕಿಂತ ಹೆಚ್ಚೇನ ಬಲ್ಲೆಯೈ'ಯೆನಲು
ವಿದ್ಯಾಪಾರಗನಾದ ದ್ವಿಜನೊಡನೊಬ್ಬ
ಹಿರಿಯ ಭಕ್ತನ ಚಪ್ಪಲಿಯನಿಟ್ಟು ತೂಗ-
ಲೂರಭೂಸುರರೆಲ್ಲವೊಂದಾಗಿ ನಿಂತು
ಬಾರದಾದರು ಪಾದರಕ್ಷೆಯ ಸಮಕೆ
ಅದಕೆ ವಿಪ್ರರು ಭಕ್ತಗಣಗಳ ಚಪ್ಪ-
ಲಿಗು ಸಮನಲ್ಲವಿದಕ್ಕೆ ಸಂಶಯವೇ?

## ಬಿಬ್ಬಬಾಚಯ್ಯನ ಕಥೆ

ಗೊಬ್ಬೂರಿನೊಳಗೆ ನಿಬ್ಬರದಿಂದಲಿದ್ದ
ಬಿಬ್ಬ ಬಾಚಯ್ಯನ ಪೃಥುಮಹತ್ವವನು
ಬಣ್ಣಿಸೆ ಶಿವನಿಗೂ ವಶವಲ್ಲವೆನಲು
ಬಣ್ಣಿಸಬಲ್ಲನೆ ಯಾರಾದರೂನು.
ಈ ಮಹಾಜನರೆಲ್ಲರವನಿಂದ ಪಟ್ಟ
ಕಷ್ಟವ ಮಹಾಜನರೆಲ್ಲರವನಿಂದ ಪಟ್ಟ
ಕಷ್ಟವ ಹೇಳುವೆ ಭೂಮೀಶ ಕೇಳು.
ಜಂಗಮಲಿಂಗಪ್ರಸಾದವು ತನ್ನ
ಅಂಗಪ್ರಾಣಗಳಂತೆ ತಾ ಚರಿಸುತ್ತ-
ಲಗ್ರಹಾರದಲೆಂದು ತಾನೊಂದು ಭಾಗ-
ದಗ್ರಗಣ್ಯನದೆಂಬನಾಶ್ರಮಧರ್ಮ

ಮತಲೋಕಪಥವಿವರ್ಜಿತನಾಗೆ ವೇದ
ಮತಭಕ್ತಿಪಥವ ಸುಸ್ಥಿತಿಯಲಿ ಭಜಿಸಿ
ಎರಡು ನಾಲಕು ಹತ್ತುಯೋಜನವೆಲ್ಲಿ-
ಯಾದರೂ ಘನದೇವಕಾರ್ಯಗಳಾಗ-
ಲರ್ಥಿಯಿಂ ಬಾಹುಕಂಧರಕರ್ಣವಿತತಿ-
ಯಲ್ಲುರಶಿರಗಳಲುಪವೀತವೆನಿಸೆ
ಚೆಂದದಿ ಭಕ್ತರ ಚಪ್ಪಲಿಗಳನು
ಸರವಾಗಿ ಧರಿಸುತ್ತ ಭಸ್ಮವ ಪೂಸಿ
ಬಂಡಿಯ ಕುಣಿಕಲ ಬಚ್ಚಣೆಯಿಟ್ಟು
ಬಂಡಿಯೆಲ್ಲೆಡೆ ನಂದಿಧ್ವಜಗಳ ಕಟ್ಟಿ

ಘಲಿಘಲಿರೆನ್ನಲು ಹಿರಿಕಿರಿಗೆಜ್ಜೆ-
ಗಳ ಗಂಟೆಯಂದುಗೆಗಳ ಚಾಮರಗಳ
ಭಾಸುರರುದ್ರಾಕ್ಷ ಬಹುವಲಯಗಳ
ಬಾಸಿಗಗಳ ಸ್ವರ್ಣಪಟ್ಟವ ರಚಿಸಿ
ಗೋರಾಜಮೂರ್ತಿ ಕೈಕೊಂಡ ಕರುಗಳ
ಪ್ರೇಮದಿ ಬಂಡಿಯ ಮುಂದಕೆ ಕಟ್ಟಿ
ಚಾಗು ಬಳಾಯೆಂಬ ನುಡಿಗಳು ಮೊರೆಯು-
ತಿರೆ ಕೇಳಿಕೆಗಳೊಡನರ್ಥಿಯಿಂದ್ಯೆದು
ಶರಣ ಪದಾಂಭೋಜ ಸಂಸ್ಪರ್ಶಫಾಲ
ಸುರುಚಿರಭಕ್ತಿಯಿಂದಲಿ ನಲವಿಂದ

ಸ್ಫುಟಚರಣಾಬ್ಜಸಂಘಟರೇಣುಪಟಲ
ಘಟಿತೋತ್ತಮಾಂಗನಾಗುತ ಹರ್ಷದಿಂದ
ತತ್ಪಾದಸಲಿಲಸುಧಾವಾರ್ಧಿಯಲ್ಲಿ
ಕೇಳೀ ವಿಲೋಲೈಕಮೇಳನವಾಗೆ
"ಘನತರ ದಿವ್ಯಲಿಂಗಪ್ರಸಾದಸದ-
ಯ ನಮೋನಮಸ್ತೇ ಮಹಾಲಿಂಗ"ವೆನುತ
ಶ್ರೀಗುರುಪ್ರತಿಬಿಂಬ ಸಿದ್ಧಲಿಂಗೋಪ-
ಭೋಗೋಪಭೋಗಾನುರಾಗದಿ ಮತ್ತೆ-
ಯೊಕ್ಕುಮಿಕ್ಕಿರುವ ಪ್ರಸಾದವನೆಲ್ಲ
ಬುಟ್ಟಿಗೆ ತುಂಬುತ ಬಂಡಿಗೆ ಹಾಕು-

ತಪ್ರತಿಲೀಲೆಯಿಂ ಗಣಪ್ರಸಾದವನು
ಸುಪ್ರಸನ್ನಾತ್ಮದಲೌತ್ಸುಕ್ಯ ತುಳುಕ-
ಲೆಂದಿನ ಕೇಳಿಕೆ ಚಂದಗಳಿಂದ-
ಲೊಪ್ಪುತ ತರುತಲಿ ಗೊಬ್ಬೂರಿನೊಳಗೆ
ಸುಪ್ರಸಿದ್ಧದಲಿ ತಾನಾಪ್ರಸಾದವನು
ಮೂಹೊತ್ತು ಸೇವಿಸುತಿರೆ ವಿಪ್ರವರ್ಗ
ಗುಜುಗುಟ್ಟುತಿರುವೆಡೆಯೊಳಗೊಬ್ಬ ಭಕ್ತ-
ನಡರೆ ಹಬ್ಬವ ಮಾಡಲಾವೂರಿನಲ್ಲಿ
ಪರಿತೋಷಮತಿಯಿಂದ ಬಿಬ್ಬಬಾಚಯ್ಯ-
ನರ್ಥಿಯಿಂ ಮೊದಲಿನ ರೀತಿಯೆ ಹೋಗಿ

ಜಂಗಮ ಶ್ರೀಪಾದಜಲಜಸೌರಭ್ಯ-
ಸಂಗತರುಚಿರೋತ್ತಮಾಂಗನಾಗುತ್ತ-
ಲಲರುತ್ತಲುಬ್ಬುತ ಪುಳಕಗೊಳ್ಳುತ ಪ್ರ-
ಸಾದಾಮೃತದ ವನಧಿಯೊಳಗೋಲಾಡಿ
ತುಂಬಿಕೊಳ್ಳುತ ತದ್ಗತಪ್ರಸಾದವನು
ಕೆಳಬೀಳದೊಲು ಬುಟ್ಟಿಯಲಿ ತುಂಬಿ ಹಾಕಿ
ಮೊದಲಿನಂತೆಯೆ ಬಂಡಿ ಮುಂದಿರೆ ಹಿಂದೆ-
ಯಾನಂದದಿಂದಲಿಂತಂತು ನಟಿಸುತ
ಕೊಡೆಗಳು ಕೊಡೆಗಳು ಕೂಡಿ ಕಿಕ್ಕಿರಿಯೆ
ಹಳವಿಗೆ ಹಳವಿಗೆ ತಗುಲುತ ವಾಲೆ

ಮಂಗಳಾರವಗಳು ಮಧುರವಾಗಿರಲು
ಸಂಗೀತರೀತಿ ಸರಸವಾಗುತುಲಿಯೆ

ಸತತದಿ ಚಾಗುಬಳಾಯೆಂಬಾರವವು-
ಘೇಯೆನಲೊಡಗೂಡಿ ಮೊರೆಯುತಲಿರಲು
ಬೊಬ್ಬೆಗಳನ್ನಿಡುತುಬ್ಬಿಯಾಡುತಲಿ
ಬಿಬ್ಬಬಾಚಯ್ಯನು ಗೊಬ್ಬೂರ ಸೇರೆ
ಕೇಳ್ದವು ಮುನ್ನೆಲ್ಲವಿವರ ದುರ್ಜನತೆ-
ಯನು ಕಂಡೆವಾವಿಂದೆನುತ್ತ ಭೂಸುರರು
ಎಯ್ತಂದು 'ಹೋ ನಿಲ್ಲಿ, ನೀವೆಲ್ಲಿ ಬಹಿರಿ?
ನಿಮ್ಮ ರೀತಿಯಿದೇನು ವಿಪರೀತವಹುದು

ಮದುವೆಗೆ ಹೋಹಿರೆ ಬಂಡಿಯಿದೇನು?
ದಂಡು ಬಂದಿಹುದೇನು ಸಡಗರವೇಕೆ?
ಅಂಕಕೆ ಹೋಹಿರೇ ಬೊಬ್ಬೆಗಳೇಕೆ?
ಶಂಕರಭಕ್ತನು ಸತ್ತನೇಯಿಂತು
ಜೃಂಭಿಸಿ ಶತ್ರುವ ಹೊಡೆದಾಳಿನಂತೆ
ವಾಲದೆಯಿಳಿಯುವಿರೇತಕೆ ಬಿಂಕ?
ಸಡಗರಗಳು ಬರಿ ಚಾಗುಬಲಗಳ
ಕೊಡೆಗಳು ಹಳವಿಗೆ ದಡಬಡಗಳನು
ಚೇರಮನಂತಿರೆ ಶಿವಪುರದೊಳಗೆ
ಭೋರೆಂದು ನೀವೀಗ ಹೋಗುತಿರುವಿರೆ?

ಭಯವುಳಿದಿಹ ರೀತಿಯಗ್ರಹಾರಕ್ಕೆ
ಚಕ್ಕನೆ ನೀವೆಂತು ಮುನ್ನುಗ್ಗಬಹುದು?
ಈ ಕುಲಭ್ರಷ್ಟರ ಮನೆಯೆಂಜಲನ್ನು
ಕುಲಹೀನರೆಂಜಲ ಕೂಳನ್ನು ಬೆದಕಿ
ಬಂಡಿಯ ತುಂಬಿ ಮೇಲಕೆ ವಸ್ತ್ರ ಹೊದಿಸಿ
ದಂಡ ಕೊಳ್ಳುತ ದೊಡ್ಡ ಬೆಟ್ಟಗೈದಿಹಿರಿ
ಪ್ರಕಟಿಸಲಿಂತೇಕೆ ಹಿಡಿದು ನೋಡಿದರೆ
ಒಂದು ವಿಶೇಷವಿರುವುದೇನಿದರಲಿ
ವಿದ್ಯೆಯಾಡದಲೂರ ತೊರೆಯರಿಂತಿಷ್ಟು
ದೊಡ್ಡಸ್ತಿಕೆಯನೇಕೆ ತೋರುವಿ"ರೆನಲು

"ಛಾ, ಗಾರನೇತಕೆ ಒದರುತಿರುವಿರಿ?
ನಿಮ್ಮಳತೆಯೆ ನಮ್ಮ ಮೀರಿ ನುಡಿಯಲು
ಪನ್ನಗಧರಭಕ್ತಿಪರರಿಗೆ ನಿಮಗ-
ದೆಷ್ಟು ಸಮಾನವದೆಣಿಸಿ ನೋಡಿದರೆ

ನಿಮ್ಮ ಬಾಯಿಗೆ ತಕ್ಕ ತುತ್ತ ಕೊಳ್ಳುವಿರಿ
ರಾಶಿಯಾಗದೆ ಗುಡ್ಡೆಯಳತೆ ಮೀರಿದರೆ?
ನೀವೆಲ್ಲಿ ನಾವೆಲ್ಲಿ ನಿಮಗೆಯು ನಮಗು
ಕಾರಣವೇನು ಈಯೂರೇಕೆ ನಮಗೆ?
ಜಂಗಮಲಿಂಗಪ್ರಸಾದವ ಭ್ರಮಿಸಿ–
ಯೆಂಜಲೆಂಜಲುಯೆಂದು ಕೀಳ ಕಾಣುವಿರಿ

ಶರಣಪ್ರಸಾದದೂಷಕರತಿಘೋರ
ನರಕಾಗ್ನಿ ಹೊಗುವುದು ಕೇಳಿರೇ ಮುನ್ನ–
ವದರ ಮೇಲಿನ ಗತಿ ಹೇಳಲೇಕಿನ್ನು?
ಬರಲಿಹ ಮರಣವನರಿಯರಿ ನೀವು
ಪ್ರಣುತ ಪ್ರಸಾದಪ್ರಭಾವಪಶಕ್ತಿ
ಗಣುತಿಸಿ ನೋಡೆ ಸಮೀಪಿಸೆ ವಶವೆ
ಭಕ್ತರ ಪಾಲಿಗೆ ಪರಮಾಮೃತವದು
ಭಕ್ತಹೀನರಿಗಿದು ಪ್ರಳಯಾಗ್ನಿಯಹುದು
ಬೆಂಕಿಯೊಳಗಿರುವ ಮಿಡತೆಗಳಂತೆ
ಬೆಂದುಹೋಗುವರಲ್ಲದಿರಬಲ್ಲಿರೇನು

ನಿಮ್ಮ ಮಾತುಗಳೆಲ್ಲ ನಿಮಗಿರಲ್ಲಿನ್ನು
ಹಾರ್ವರ ಕೊಲುವುದು ಕಡುಪರಾಕ್ರಮವೆ"
ಎನ್ನಲು ಬಿಬ್ಬಬಾಚಯ್ಯನನಾಗ
ಕಾಣುತಲಾ ವಿಪ್ರಜನರಾಗ್ರಹಿಸುತ–
"ಲೆಂಜಲಕೂಳಿದು ಭುಜಗವೊ ಹುಲಿಯೊ
ಶೃಂಗಿಯೊ ಭೂತದಂತಿದನು ಮಾಡಿದಿರಿ
ಭಟ್ಟರ ಪಿನ್ನನಪ್ಪಣ್ಣನ ಮಂಚ
ಚಟ್ಟಣ ಪೆದ್ದಿ ವಿಶಸ್ತರ ಕೂಚಿ
ದುಷ್ಟದಾಮೋದರ ಧೂರ್ತ ಭಾಸ್ಕರನೆ
ಶಿಷ್ಟರ ಬಲಭದ್ರ ಚಿಮ್ಮಿಕೇತಪ್ಪ

ಹೋಗಿರಿ ನಮ್ಮದೋವತಿ ದರ್ಭೆಸಂಬ–
ಳಿಗೆಗಳನಿಟ್ಟು ಯುಷ್ಟಿಗಳನು ತನ್ನಿ
ಹಿಡಿಯಿರೆತ್ತುಗಳನು ಹಗ್ಗವು ಹರಿಯೆ
ಹೊಡೆಯಿರಿ ತರುಮಿಕೊಂಡೊಯ್ಯುವುದೇಕೆ
ಹರಿಯಿರಿ ಮೊಗವಾಡವೆಸೆಯಿರಿ ಕೆಳಗೆ
ನಿಲ್ಲಿಸಿ ಬಂಡಿ ಹೋಗದ ರೀತಿ ನೋಡಿ"–

ಯೆಂದು ಗದ್ದಲಿಸುವಧಮ ಹಾರುವರನು
ನೋಡುತ ಬಿಬ್ಬಬಾಚಯ್ಯ ಕೋಪಿಸುತ
"ಓಡುಗಳಾ, ಏಕವಸರ ಪಡುವಿರಿ
ನೋಡಲು ಶಕ್ಯವೆನಲು ನೋಡಿ ನೀವು

ತೊಲತೊಲಗಿರಿಯೆಂದು ವಿಪ್ರರ ಬೆದರಿ-
ಸುತ ಪ್ರಸಾದದ ಮೇಲುಹೊದಿಕೆಯ ನೂಕಿ
ಬೊಗಸೆಯಿಂ ತೆಗೆದೆತ್ತಿದಾ ಮಾತ್ರದಲ್ಲಿ
ಕೆಂಜಾಜಿಯೊ ಕೆಂಪುಸಂಜೆಯೊ ಮಿಂಚೊ
ಹಾ, ಅಲ್ಲವಿದು ಉರಿಯೋ ಕೆಂಡವೆಂದು
ಆಕುಲತನು ವಿಪ್ರರತಿಭೀತಿಯಿಂದ-
ಲದೊ ನೋಡೆನ್ನುತಲಿ ಚೆಲ್ಲಿದ ಮಾತ್ರದಲ್ಲಿ
ಬೆಳೆದು ಭುಗಿಲ್ಭುಗಿಲ್ಭುಗಿಲೆಂದು ನೆಗೆದು
ನಿಟಿಲತಟಾಂಬಕೋತ್ಕಟ ಚಟುಲಾಗ್ನಿ
ದೃಷ್ಟಿಯಿಂ ಪುರಗಳು ಕೂಡಿ ಸುಟ್ಟಂತೆ-

ಯಲ್ಲಲ್ಲಿ ವಿಪ್ರಾಲಯಗಳನೆಲ್ಲವನು
ಒಮ್ಮೆಗೆ ಉರಿಸುತ್ತಲಾಹುತಿಗೊಳಲು
ಶ್ರೀಧರ ಭಟ್ಟನ ಮನೆ ಸೇರಿತಗ್ನಿ
ಮಾಧವಪ್ಪನ ಮನೆ ಬೆಂಕಿ ಪಾಲಾಯ್ತು
ಕುರುಡುಗೋವಿಂದನ ಗುಡಿಲು ಕಮರಿತು
ದೊಡ್ಡ ಭಾಸ್ಕರನದು ಸುಟ್ಟಿತು ಬೇಗ
ಕೊಮ್ಮದ ಘಟಶಾಳಿ ಕೊಂಪೆಯುರಿಯಿತು
ಬಮ್ಮ ಭಟ್ಟನ ಮನೆ ಭುಗ್ಗನುರಿಯಿತು
ವಾಮನಪ್ಪನ ಮನೆಗುಳಿದವು ಜಂತೆ
ಸೋಮಯಾಜಿಯ ಮನೆಯುರಿಯಿತು ಸುರಸು-

ರನೆ ತ್ರಿವೇದಿಯ ಮನೆ ದಾರಿ ಸೇರಿತ್ತು
ಆದಿತ್ಯಕೂಚಿಯ ಮನೆಯಾಗ ಬಿತ್ತು
ಮಚ್ಚತಾಡನ ಮನೆ ಮಣ್ಣಪಾಲಾಯ್ತು
ಬಚ್ಚಲಿಕೇಶನ ಗುಡಿಸಲು ಬಿತ್ತು
ವಾಸುದೇವನ ಮನೆ ವಹ್ನಿಕೊಂಡಿತ್ತು
ಮಾಸಕಮ್ಮೆಯ ಮನೆ ಮಸಿಮಸಿಯಾಯ್ತು
ಭರದಿಂದ ಸನ್ಯಾಸಿವಾಮನ ಮಠವು
ಬಸದಿ ಮಂಟಪಗಳೆಲ್ಲವು ಭಸ್ಮವಾಯ್ತು

ಕುಶದರ್ಭೆ ಪಿನ್ನಯ್ಯನ ಮನೆಯ ಬೆಂಕಿ-
ಯಶನದವರ ಮನೆಯನ್ನು ತಾಕಿತ್ತು

ಇಲ್ಲಲ್ಲಿಯೆನಲೇಕೆ ನಶಿಸಿದುವೆಲ್ಲ-
ವೊಟ್ಟಾಗಿ ಶಿವದೂಷಕರ ಮನೆಯೆನುತ
ಪ್ರಳಯಾಗ್ನಿಯಾಲಿ ಬಿದ್ದ ಪ್ರಮಥರ ರೀತಿ-
ಯಲರಿ ಭಕ್ತಾನೀಕವರಚಲು ದ್ವಿಜರು
ಹೋಗಿ ಮನೆಗಳಲಿ ಸಿಕ್ಕಿ ಮಡಿದರು
ಭರದಿಂದ ಹೊರಬಂದು ಮರಣಿಸುವವರು
ತಲೆ ಹೊತ್ತಿಕೊಳೆ ಕಾಲ ತಲ್ಲಣದಿಂದ
ಮನೆಗುಡಿಯೊಳಗಡೆ ಹೋಗಿ ಸೇರುವರು
ಗಡ್ಡಮೀಸೆಗಳೆಲ್ಲ ಕಮರುತ್ತಲಿರಲು
ಗಡಿಗೆ ಭಾವಿಗಳಲಿ ಹಾರಿಕೊಳ್ಳುವರು

ಸೀರೆಗಳುರಿಯಲು ಗಡಿಬಿಡಿಯಿಂದ
ಮಾರಾರಿಭಕ್ತರ ಮೊರೆವೊಗುವವರು
ಪೂರ್ತಿ ಸುಡುವ ಮುನ್ನ ಮೃಡಭಕ್ತರುಗಳ
ಮನೆಗಳ ಹಿತ್ತಲುಗಳ ಸೇರುವವರು
ತನುಗಳು ಶಿಖಿಗೊಳ್ಳುತುರಿಯುತ್ತಲಿರಲು
ನಡೆತಂದು ಭಕ್ತರ್ಗೆ ಶರಣೆನ್ನುವವರು
ಬೀಳುವ ಮುನ್ನವೆ ಬಿಬ್ಬಬಾಚಯನ
ಹಿಂದಕೆ ನಿಲ್ಲುತ ಭರದಿ ಮೊಕ್ಕುವರು
ಸಾಯುತ್ತ ತಾ ಸ್ವಲ್ಪ ಬೇಯುತ್ತಲರ್ಧ
ಸಾಯುತ್ತಲೀ ರೀತಿಯರ್ಧ ಸಾಯದಲೆ

ಬಪ್ಪ ಕೇಶವಭಟ್ಟ ದೊಪ್ಪಣಪೆದ್ದಿ
ತಪ್ಪಾಯಿತೆನ್ನುತ ಬೊಪ್ಪಣತ್ರೇದಿ
ಸಿಂಗರಾಜನು ಮತ್ತೆ ಚಿಪ್ಪಣಕೂಚಿ
ಮಂಗಣ್ಣಘಡಿಸಾಸಿ ನಂಗಣಪಿನ್ನ-
ದಬ್ಬರಾದಿತ್ಯನು ಆ ಸಬ್ಬಣಯ್ಯ
ಗಬ್ಬುಮೈಲಾರನು ಸುಬ್ಬಣಮಂಚಿ-
ಯಡ್ಡಗಾಲಿನಲಿ ದೊಡ್ಡಣ ಕೂಚಿ ತಾನು
ಬೊಡ್ಡು ರಾಘವಭಟ್ಟ ಗಡ್ಡದ ಪೆದ್ದಿ
ವೀರನಾದಿಯ ಗೊಬ್ಬೂರಿನ ಗ್ರಾಮಣಿಗಳು
ಮಾರಾರಿಭಕ್ತರೆ ನಮಗೆ ದಿಕ್ಕೆನುತ

ಪಶುಗಳೆನುತ್ತಲಬ್ರಹ್ಮಣ್ಯವೆನುತ
ದೆಸೆದೆಸೆಗಳಿಗೆ ಬಾಯ್ಬಿಟ್ಟು ಗೋಳಿಡುತ
ಬಿಕ್ಕಳಿಸುತಲಡಗಡಿಗೆ ಕೂಡುತ್ತ
ಹೆದರುತ್ತ ಸಾಷ್ಟಾಂಗ ಮೊಕ್ಕುತ ಸೇರಿ
ದೀನರನಪಗತಜ್ಞಾನಿಗಳನು ದು-
ರಭಿಮಾನಿಗಳ ಪುಣ್ಯಹೀನರ ಖಳರ
ಭ್ರಷ್ಟರನವಗುಣಾಶ್ಲಿಷ್ಟರನಧಿಕ
ದುಷ್ಟರನೀ ಕಡುಕಷ್ಟರ ಜಡರ
ಕ್ರೋಧರನತ್ಯಪರಾಧಿಗಳನು ವಿ-
ರೋಧರ ಜ್ವಲನನಿರೋಧಿಗಳೆಮ್ಮ

ಕಾಯಿರೈ ಹರಸಿ ಕಾಪಾಡಿರೈ ತಪ್ಪು-
ಗಳ ನುಂಗಿ ಮಾರ್ಗವ ತೋರಿರೈಯಿನ್ನು
ಜನಮೇಜಯನು ಮುನ್ನ ಕಟ್ಟಿಸಿದಗ್ರ
ಹಾರವನೀಗಲೆ ನೀವುದ್ಧರಿಸುತ
ಕ್ರಮದಿ ಪುನರ್ಧಾರೆಯರೆಯಿರೈ ನೀವು
ಕರುಣಿಸಿ ನಿಮ್ಮ ಧರ್ಮಪುರಿಯನೆನುತ-
ಲಾ ವಿಪ್ರಜನರು ಸಾಷ್ಟಾಂಗದಿ ಮೊಕ್ಕಿ-
ಯೇಳದಿರಲು ಕೇಳಿ ಏಳಿರೆನುತ್ತ-
ಲಾ ಪ್ರಸಾದಕ್ಕೆಯಂಜಲಿಬದ್ಧನಾಗಿ
ಸುಪ್ರಸನ್ನಾತ್ಮನಾಗುತ ನೋಡಲೊಡನೆ

ಗಹನ ಪ್ರಸಾದಾಗ್ನಿ ಗಕ್ಕನೆಯಾರಿ
ಸಹಜಸಂಸಿದ್ಧ ಪ್ರಸಾದಭಾವದಲಿ
ಪ್ರಸ್ತುತಿಸಲು ಬಿಬ್ಬಬಾಚಯ್ಯನವರ
ಹಸ್ತಗಳಲಿ ನೆಲಸಿತು ಪ್ರಶಸ್ತದಲಿ;
ಇಂತು ಬ್ರಾಹ್ಮಣರಿದ್ದ ಮನೆಗಳವೆಲ್ಲ-
ವೆಂದಿನಂತಾಯಿತು ಅರಿಯರೆ ಜನರು"
ಎನ್ನಲು ಧರಣೀಶ ಬಹುಹಿಂದೆಯಲ್ಲ
ಹಿಂದಿನ ವಾರ್ತೆಯಿಂತಿನ್ನೆಲ್ಲವೇಕೆ
ಅಸಮಾಕ್ಷನನ್ನೋಲೈಸರಿರೆಯಗ್ರಜನು
ಧರೆಯ ಹೊಲೆಯರ ಹೊಲೆಯನಾಗನೇನು?

ಶಿವನನ್ನೋಲೈಸೆ ಹೋಹುದು ಹೊಲೆತನವು
ಹೊಲೆಯನು ಜಾತಿಯ ಹೊಲೆಯನೀರೀತಿ

ಹೊಲೆಯನೆಯೀತನ ಹೊಲೆಯನ ನೇಣು
ಹೊಲೆಯರು ಹೊಚ್ಚಹೊಲೆಯರಲ್ಲವೇನು?
ಎಂಜಲಿದೆಂದೆನೆ ಚೆನ್ನಯನ ಮನೆ-
ಯಂಬಳಕವ ಹೀರುವಾಗಲಾ ಶಿವನು
ಮಾದರ ಚೆನ್ನನ ಮಹಿಮೆಯನರಿತು
ಮಾದೇವ ಭಕ್ತರ ಹೊಲೆಯರೆನ್ನುತ್ತ
ನುಡಿವರೆ, ಬ್ರಾಹ್ಮಣಖೂಳರರಚಿಗೆ-
ಯಲ್ಲವೆನುತ ನೀಚಗತಿ ವಿರೋಧಿಸಲು

**ಮಾದಾರ ದೂಡಯ್ಯನ ಕಥೆ**

ಅವನೀಶ, ಕೇಳು ನೀನು, ಶಿವನ ಭಕ್ತ
ಧ್ರುವಕೀರ್ತಿಯಿಂದ ಮಾದರದೂಳಯ್ಯನೆನ-
ಲೊಪ್ಪಿದನಾತನ ಮಹಿಮೆಯೆಂತೆನಲು:
ಅಂದೊಮ್ಮೆ ಮೈಕೆಟ್ಟ ಕಠಿಣಹಾರುವನು
ನಡುರಾತ್ರಿ ಹಸುವಿನ ಹಿಂದೆಹೋಗುತ್ತ
ಕಾಣದೆ ದೂಡಯ್ಯನಾ ಮನೆ ಕೆಲದ
ಸಾರಮಜ್ಜನಜಲಪೂರಿತಪಂಕ-
ದಲ್ಲೊರುಗಳು ಸಿಕ್ಕಿ ನೆನೆಯೆ ಬಂದೀಚೆ
ಕೂಡೆ ಕಾಲ್ಗಳ ತೊಳೆಯುತ ಪ್ರಭಾತದಲಿ
ನೋಡೆ ಪೂರ್ವಚ್ಛಾಯೆ ಶೋಭಿಸುತಿರಲು

ಆ ವಿಪ್ರನತ್ಯದ್ಭುತಾಕ್ರಾಂತನಾಗಿ
ಭಾವಿಸುತಾಗಲೆಯೋಡುತ್ತ ಹೋಗಿ
ಮಾದಾರದೂಳನ ಮಜ್ಜನೋದಕದಿ
ಬೀಳುತ್ತ ಕೆಸರಲಿ ಹೊರಹೊರಳುತ್ತ-
ಲಾಡಲು ತನುವು ದಿವ್ಯಾಂಗವಾಗಿರಲು
ತಾನಲ್ಲಿ ಮಾದರ ದೂಳಯ್ಯನವರ
ಪಾದಾಬ್ಜಗಳ ಮೇಲೆ ಬೀಳುತ್ತ ಕೃಪೆಯ
ಪಡೆದು ಭೂದೇವನು ಮನೆಗಾಗ ನಡೆದ;
ಕಂಡೆಯಾ ಮಾದರ ದೂಳಯ್ಯನಿಂತು
ಮಿಂದೆಡೆ ನೀರಿನಲಪ್ಪಯ್ಯನವರು

ಮುಳುಗೆದ್ದು ಕೆಸರನ್ನು ತೊಳೆಯಲು ವಾಸಿ-
ಯಾಯ್ತು ಕಷ್ಟವ್ಯಾಧಿ, ಹರಹರ, ಮುನ್ನ-

ವಾದಿತ್ಯನಾ ಮನೋಹರನೆಂಬ ಗಣನ
ಪಾದೋದಕದಲಿ ಪಡೆದ ತನ್ನ ಮೈಯು-
ನೆಂಬುದ ಕೇಳುವೆಯಾದ್ಯೋಕ್ತಿಗಳಲಿ
ಕಂಡೆವು ನಿಶ್ಚಯವಾಗಿಂದುಯೆನುತ
ವಿನುತಿಸುತಿರಲೆಲ್ಲ ವಿಭ್ರಾಂತಿಯೊಂದೆ
ಕೇಳುವರಿವರೆಲ್ಲ ಹೋಗಿ ತಾವಲ್ಲಿ
ಹೊರಳಿಯೇಳ್ನೂರ್ವರು ಭೂಸುರೋತ್ತಮರ
ಕುಷ್ಟವ್ಯಾಧಿಯು ಗುಣವಾಯಿತು, ಕೇಳು

**ಬಾಸನ ಭೀಮಯ್ಯನ ಕಥೆ**

ಧರೆಯಲಿ ಬಾಸನ ಭೀಮಯ್ಯನೆಂಬ
ಪ್ರಥಿತನು ಮೈಕೆಟ್ಟ ಹಾರುವರ್ಗೆಲ್ಲ
ಮೈಗಳ ಕೃಪೆಗೈದನೆಂಬುದರಿಯೆಯ?
ಭೂನಾಥ, ಜನರೆಲ್ಲ ಹೊಗಳಲು ಮತ್ತೆ
ಚಕ್ಕನೆ ಮೂಹೊತ್ತು ನಡೆಸಲರಿಯದ
ಈ ಕರ್ಮಚಂಡಾಲರೆಂತಹ ಜನರು.

**ಶ್ವಪಚಯ್ಯನ ಕಥೆ**

ಸಾಮವೇದಿಯೆನುವ ಸದ್ಬ್ರಾಹ್ಮಣ ಶ್ರೀ-
ಮತಿಯಿಂದ್ರಲಾಕಾಶಗಾಮಿಯಾಗೇರೆ
ಶ್ವಪಚಯ್ಯನೆಂಬುವೀಶ್ವರ ಭಕ್ತನೊಬ್ಬ
ವಿಪಿನಾಂತರದಲಿ ಸದ್ವಿಧಿಯಿಂದೋಗರವ-

ನನುಗೈಯುತಿರೆ ಮೇಲೆಯ್ದುವ ಸಾಮವೇದಿ-
ಯನು ಕಂಡು ಬೀಳ್ವುದಿವನ ಕರ್ಮದೃಷ್ಟಿ-
ಯೆನುತಲೋಗರವ ಚಪ್ಪಲಿಯಿಂದ ಮುಚ್ಚಿ
ಸಾಮವೇದಿಯು ಕಂಡು ಕಲಕಲ ನಗುತ
ಶ್ವಪಚನು ತಾನು ಮಾಂಸವನಟ್ಟು ಕಪಟಿ-
ಯೆಮ್ಮನು ಕಂಡು ಮುಚ್ಚಿದನು ಚಪ್ಪಲಿಯ-
ನಿಂಥ ದುರ್ಜನನಾದನೇಯೆಂದು ತಿಳಿಯೆ
ಚಟ್ಟನೆ ತನ್ಮಂತ್ರಶಕ್ತಿಯಣಂಗಿ-
ಯಂತರಿಕ್ಷದಲಾಡುತಿದ್ದ ದೇವತೆಗ-
ಳಾಗ ಬುವಿಗೆ ಬೀಳಲವನಾಗ ಬಂದು

ಶ್ವಪಚಯ್ಯನವರ ಶ್ರೀಚರಣಾಬ್ಜಗಳಿಗೆ
ಅಪರಿಮಿತ ಪ್ರೀತಿಯಿಂದ ತಾ ಮೊಕ್ಕಿ
ಶಿವದೀಕ್ಷೆಯವರಿಂದ ಶಿಷ್ಯತ್ವವಡೆದು
ಸವಿಶೇಷವಹ ತತ್ಪ್ರಸಾದದ ಮಹಿಮೆ-
ಯಿಂದ ಕೊಂಡೊಯ್ಯನೆ ಶಿವಲೋಕ ಸಾಕ್ಷಿ-
ಯೊಡನೆ ಮೂವತ್ತಾರೂರಿನವರನೆಲ್ಲ
ಅದಕೆ ಪುರಾತನಗಣಗಳನಂದು-
ಯಿರದ ಮಾರ್ಗದಿ ಹುಟ್ಟದೇನಿಂದು ಭಕ್ತಿ
ಶ್ವಪಚನಾದರು ಲಿಂಗಸಹಿತನಾಗಿರಲು
ಉಪಮಿಸೆ ಸದ್ಬ್ರಾಹ್ಮಣೋತ್ತಮೋತ್ತಮನು,

ತ್ರಿಪುರಾರಿಗೊಲಿಯದ ದ್ವಿಜಮುಖ್ಯ ಕೂಡ
ಸ್ವಪಚಾಧಮರಿಗಿಂತಲಮಿತದಿ ಕೀಳು.

**ಉದ್ಭಟನ ಕಥೆ**

ಅಲ್ಲದೆ ಬಲ್ಲಕಿಯೆಂಬ ಪುರದಲಿ-
ಯುದುಭಟನೆಂದೊಪ್ಪುತಿರುವೊಬ್ಬ ಭಕ್ತ
ವರಭೋಜರಾಜನು ನರನಾಯಕನಿಗೆ
ಗುರುವಾಗಿ ಶಿವದೀಕ್ಷೆ ಕರುಣಿಸಿ ಮತ್ತೆ
ವೇದಶಾಸ್ತ್ರಾರ್ಥಸಂಪಾದಿತಯುಕ್ತಿ-
ಯಿಂ ದೇಶದನ್ಯವಾದಿಗಳನಡಗಿಸಿ
ಕ್ಷೋಣೀಶನಿಗೆ ಹಾಡು ಜೊಮ್ಮವ್ವೆಯೆಂಬ
ಹೊಲತಿಯು ಸದ್ಭಕ್ತಿಪರಳಾದ್ದರಿಂದ

ಮಡದಿಯು ತಾನು ಸಮುಂಚಿತಭಕ್ತಿ-
ಗತಿನಿರಂತರ ಸುಖಸ್ಥಿತಿಯಲಿ ತೇಲೆ
ಮನುಜರತ್ಯದ್ಭುತಮಾನಸರಾಗಿ
ಗೊಣಗುತ್ತಲಿಂಥ ಸದ್ಬ್ರಾಹ್ಮಣೋತ್ತಮನು
ಕುಲಹೀನೆಯನು ತಾನು ಕೂಡಿಕೊಂಡಿರುವ-
ನಾರಯ್ಯೆ ಹಿರಿಯನಾಗಿರುತಿದ್ದೀ ಭುವಿಗೆ
ಎನುತಲಾ ಭೋಜರಾಜನಿಗೆ ಹೇಳಲ್ಕೆ
ಕೇಳಿ ಮೊದಲ ರೀತಿ ಕೊಂಡಾಡುತಿರಲು
ಪರಮೇಶ್ವರನೆ ತಾನು ಉದ್ಭಟಯ್ಯಗಳ
ವರಭಕ್ತಿ ಮಹಿಮೆಯ ವಸುಮತಿಯಲ್ಲಿ-

ಯಧಿಕದಿ ಮೆರೆಸುವೆನೆಂದಾ ಮಹಾತ್ಮ-
ನತ್ಯರ್ಥಿಯಿಂ ವಟವಿಟಪಿಯೊಂದರಲಿ
ದಹನಕ್ರಿಯೆಯ ಗೈಯೆ ತತ್ಸಮೀಪದಲಿ
ಮಹಿಯನೆದುರುನೋಳ್ಪ ವಟದ ಭೂತಗಳು
ತಾನೊಂದನುಳಿಯುತಲೇಳ್ನೂರು ಅಲ್ಲಿ
ಹೊಗೆ ತಾಕಿ ಕೈಲಾಸಪುರಕಾಗಲೈದ-
ಲಂದೊಂದು ಭೂತವಿಹಾರಾರ್ಥವಾಗಿ-
ಹೋಗಿದ್ದು ಮರುದಿನ ಬಂದು ಭೂತಗಳ
ಕಾಣದೆಯಳುತಲಿ ಕಟಕಟಾಯೆನುತ
ಮಾಣದೆ ಕಾಡಿನ ಮಹಿಯೆಲ್ಲವದುರೆ

ಕೂಗಿಡಲಿದುವೇನೊಯೆನ್ನುತ ಜನನಿ-
ಕಾಯದ ಜೊತೆ ಭೋಜ ಗಕ್ಕನೆ ಬಂದು
ಅಳುತಿಹರಾರಿದಕೇನು ಕಾರಣವು
ಯಾವ ರೀತಿಯಲಿದ ಪರಿಹರಿಪುದೆನೆ
"ಕೇಳು, ಹನ್ನೆರಡು ಸಾವಿರ ವರ್ಷದಿಂದ
ಮನುಜೇಶ, ಉದ್ಭಟನಿಗೆ ಸಾವಕೋರಿ-
ಯೇಳ್ನೂರು ಆಲದಲಿದ್ದ ಭೂತಗಳು
ಎಲ್ಲಿಗೂ ಹೋಗದಲೆದುರು ನೋಡುತ್ತ-
ಲಿರಲಾನು ಹೋಗಿದ್ದೆನುದರಾಗ್ನಿ ತಣಿಸ-
ಲದರಿಂದ ಜಾಲಕೆ ಸಿಕ್ಕಿದೆನೊಬ್ಬ.

ಕೂಳಿಲ್ಲದವನಿಗೆ ಹಾದಿ ತಪ್ಪಿತ್ತು
ಎಂಬಾಡುಮಾತದೆನ್ನಲಿ ಸಂಧಿಸಿತ್ತು.
ನಾನೊಬ್ಬನಲ್ಲದೇಳ್ನೂರು ಭೂತಗಳು
ಉದ್ಭಟನ ಸುಡುವ ಹೊಗೆತಾಕಲೊಡನೆ
ಕೈಲಾಸಕೈದಿದವಾನು ಕೆಟ್ಟು ಗತಿ
ಭೂಲೋಕದಲಿ ಸಿಕ್ಕಿ ತಪಿಸಿದೆ, ತಂದೆ!
ಹಸುವೀಯುವುದ ಕಾಯ್ದು ಬೇಗನೆ ಕರುವ
ನರಿಗಳಿಗಿತ್ತಂತಾಯಿತು ಧೃತಕೀರ್ತಿ.
ಮತ್ತೇಕೆ ಹೆಚ್ಚುಗೆ? ಚೆನ್ನಾದ ಬೆಳೆಯ-
ನುರಿಗಿತ್ತ ರೀತಿಯಾಯಿತು, ಧರಣೇಶ!

ಬೆಳಗಾಗುವವರೆಗೆ ತಿಣುಕಿ ಸತ್ತಮಗು-
ವನು ಹೆತ್ತ ಬಗೆಯಾಯ್ತು, ಜನಪಾಲತಿಲಕ!

ತುಂಬಿ ಗಡಿಗೆ ಮುಚ್ಚಿ ಬೀಳ್ವಂತೆ ನಡೆಯು–
ವವಿವೇಕಿಯಾದೆನು ಹಿರಿಯಾಸೆಯಿಂದ–
ಲಿಷ್ಟು ಕಾಲದಯಿರವದು ವ್ಯರ್ಥವಾಯ್ತು.
ಚಿಂತಿಸದೆಂತು ಸೈರಿಸಲಿ, ಭೂನಾಥ!
ಇನ್ನಾದರೂ ಕಟ್ಟಿಗೆಯ ರಾಶಿ ತರಿಸು
ಸುಳ್ಳಲ್ಲವೇರುವೆ ಹೊಗೆ ತಾಕಿದೊಡನೆ
ಕೇಳು ನಾ ಕೈಲಾಸಪುರಕ್ಕೆದುವುದಕೆ
ಜನರೆಲ್ಲರಿಗು ದೃಷ್ಟವೆನಲಿಲ್ಲಿಯಿರುವ

ವಟವ ಬೇರುಗಳೊಡಕಿತ್ತು ಬೀಳಿಸುತ–
ಲಿಂತೆಲ್ಲರೂ ನೋಡಲಲ್ಲಿಗೈದುವೆನು
ಎನ್ನಲು ಪೌರರತ್ಯದ್ಭುತವೊಂದೆ
ಜನನಾಥನಿರುವನೆಂದೆಲ್ಲ ಹರ್ಷಿಸುತ–
ಬೇಗ ಮಲಯಜಕಾಷ್ಠಗಳ ಸೇರಿಸುತ–
ಲಕ್ಕಜವೊಂದೆ ದಿವ್ಯಾಂಬರಾವಳಿಯ
ಹೆಣೆದು ಮುಪ್ಪುರಿಗೈದು ಹೆತ್ತ ತುಪ್ಪದಲಿ
ಅದ್ದುತಲದನಗ್ನಿಗರ್ಪಣೆಗೈಯೆ
ಭುಗಿಭುಗಿಲ್ಲನೆ ಹೊಗೆಯಾಲದ ಮೇಲ–
ಕೊಗೆಯುತಿರಲು ಧಡಧಡ ಪರಿತಂದು

ಭೋಜನು ತನ್ಮಿತ್ರಪುತ್ರ ಬಾಂಧವರು
ಆ ಜನಾವಳಿಯೆಲ್ಲವಾಲದಲಿದ್ದ
ಭೂತದ ಮೇಲಕೆ ಹೊಗೆಹಾಯ್ದ ತಡವೆ
ಖ್ಯಾತಿಯಿಂದಾಲದಮರವನು ಕಿತ್ತು
ಕೊಳ್ಳುತಾ ಕೈಲಾಸಕೇರಿದ ಭೋಜ
ಜನನಾಥ ಜನಯೂಥಸಹಿತವೆ ತಾನು.
ಧವಳವೀಯುದ್ಭಟದೇವನ ಮಹಿಮೆ
ಮೂಲೋಕದಲಿ, ಧರಾವಲ್ಲಭ, ಕೇಳು

ಕಕ್ಕಯ್ಯನ ಕಥೆ

ನಿಶ್ಚಯವ್ಯೆ, ನಿಖಿಲೇಶ್ವರ ಮತ್ತೆ
ಮುಕ್ಕಣ್ಣಗಣವು ತಾ ಕಕ್ಕಯ್ಯನೆಂಬ–

ನೀದ್ವಿಜರಿಗೆ ವೈರಿಯರಿಯೆಯ? ಒಬ್ಬ
ವಿದ್ವಾಂಸನೀ ನಗರದ್ವಾರದಲ್ಲಿ

ನಿಜದಿ ಪುರಾಣಭಟ್ಟನ ರೀತಿಯಲ್ಲಿ
ಹೇಳೆ ಕೆಲವರಕ್ಕಜವನೊಂದಿ ಕೇಳೆ
ಮೆರೆಯುತ ಬ್ರಹ್ಮಕಪಾಲವ ಹಿಡಿದು
ಹರನು ಭಿಕ್ಷಿಸಿದ ಮುನ್ನೆಂದನೆ ಹೊರತು
ನಿಶಿತಶೂಲದಿ ವಿಷ್ವಕ್ಸೇನನ ಮೆಟ್ಟಿ
ಮತ್ತೆ ವಿಷ್ಣುವನಿರಿದುದ ಹೇಳನವನು
ಹೊಂಚಿ ಬಲಿಯ ಕಟ್ಟಿ ಮತ್ತೆ ತಾ ಬೆಳೆದು
ಹರಿ ಮೇಲೆತ್ತಿದ ಕಾಲನೆಂದನೆ ಹೊರತು

ಆ ತ್ರಿವಿಕ್ರಮನ ನಿಟ್ಟೆಲಲುವನು ಮುರಿದು
ಹಿಡಿದನೀಶ್ವರನೆಂದು ಕುಟಿಲನು ಹೇಳ
ವ್ಯಾಸ ಕೈಯೆತ್ತಿದನೆನುವನೆ ಹೊರತು
ವ್ಯಾಸನ ತೋಳು ನಿಹಿತವಾದುದೆನ್ನ
ಹರನು ಯಜ್ಞದಿ ತಾನು ಹಿಡಿದು ಕೇಶವನ
ಶಿರವ ಮುರಿದ ಭಾಗವನ್ನೋದಿ ಹೇಳ
ನರಸಿಂಹರೂಪದಿ ಹರ ಹಿರಣ್ಯಾಕ್ಷ-
ನನ್ನು ಸಂಹರಿಸಿದನೆನುವನೆ ಹೊರತು
ಶರಭರೂಪದಿ ನರಸಿಂಹನ ಕೊಂದು
ಹರನು ತಿದಿಯನೂದಿದಾ ಭಾಗವೋದ

ಬಿಡದೆ 'ಸರ್ವಂ ವಿಷ್ಣುಮಯ'ವೆಂಬ ವಿಷಯ-
ವನ್ನೋದುವನೆ ವಿನಾ ಅಸಮಲೋಚನನು
ಭರದಿಂದ ಸರ್ವಸಂಹಾರವಗೈಯೆ
ಹರಿಯ ಸರ್ವವು ಹಾಳಾಯ್ತೆಂದೋದನವನು
ಹರಿಕರ್ತ ಜಗಕೆಲ್ಲವೆನುವನೆ ಹೊರತು
ಹರಿಗೆ ತಾನೊಡೆಯನೀಶ್ವರನೆಂದು ಹೇಳ
ಹರಿ ವಿಶ್ವನಾಮಾಂಕವೆನುವನೆ ಹೊರತು
ಹರನು ವಿಶ್ವೇಶ್ವರನೆಂಬುದ ನೋಡ
ಹರಿ ಪರಾಶಕ್ತಿ ತಾನೆನುವನೆ ಹೊರತು
ಹರನು ಪರಾಪರನೆಂಬುದನೋದ

ಹರಿ ಮಹಾಮಾಯ ತಾನೆನುವನೆ ಹೊರತು
ಹರನು ಮಹಾದೇವನೆಂಬುದನೋದ
ಹರಿಹರವೆಂಬ ಶಬ್ದಾರ್ಥವರಿಯದೆ
ಹರಿಹರನೆನಲೊಬ್ಬನೆನುವನೆ ಹೊರತು

ಹರನ ಹರಿಸಿದುದ ಕಾರಣದಿಂದ
ಹರಿಹರನೆನೆ ಮಾರಹರನೆಯೆಂದೆನ್ನ
ಪಕ್ಷಪಾತಿಪುರಾಣಭಟ್ಟ ಯಥಾರ್ಥ
ವೀಕ್ಷಿಸದರಚುವನಿತರೇತರಗಳ
ಶಿವನಿಂದೆಯನುಗೈಯುವೀ ನೀತಿಯನ್ನು
ಕೊಲಬಹುದವನ ಪುಸ್ತಕ ಸುಡಬಹುದು

ಅದೆ ಪಥವೆಂದೆಮ್ಮ ಕಕ್ಕಯ್ಯ ಶಿವನ
ದ್ರೋಹಿಯ ಡೊಂಕಣಿಯಿಂದ ತಾನಿಂದು
ತಲೆಯ ತರಿದು ಹೊಟ್ಟೆಯೊಳಗಿಟ್ಟು ನಗುತ-
ಲಲರುತಲಿರುತಿರಲಾಕ್ಷಣದಲ್ಲಿ
ಫಕ್ಕನೆ ನೋಡೆ ಪೌರಾಣಿಕನ ತನು
ಬಿಕ್ಕನೆ ಬಿರಿಯುತ್ತ ವಿಲವಿಲನೆಂದು
ಹುಳುಗಳ ಗುಂಪಾಗಿ ರೂಪಳಿದುದನು
ಈ ವಿಪ್ರರರಿವರೇನಿಷ್ಟೆಲ್ಲವೇಕೆ?
ಡೋಹರ ಕಕ್ಕನ ಮಾಹಾತ್ಮ್ಯವರಿತು
ಊಹಿಸೆ ಭಕ್ತರಿಗರಿದಹುದೇನು?

## ಭೋಗಯ್ಯನ ಕಥೆ

ಮತ್ತೆ ಕೆಂಬಾವಿಯಲೊಪ್ಪುತಲಿದ್ದ
ಕರಕಂಠ ಭಕ್ತನಕಲ್ಮಷಕೀರ್ತಿ
ಭೋಗಯ್ಯನೆನುವನು ತಾ ಪರಮಾನು-
ರಾಗದಿಂ ಜಂಗಮಾರ್ಚನೆಯ ಮಾಡುತಿರೆ
ಕರಕಂಠನವನನು ಮೆರೆಸಲು ಬಗೆದು
ಕೀಳು ಕುಲಜನಂತೆ ಕರುವಿನ ಶವವ
ಹೊತ್ತಿಕೊಳುತ ರುದ್ರಮುದ್ರಾಸಮೇತ-
ನಾಗಿ ತೋರುತ್ತಲದ್ಭುತವೊಂದೆ ಬರಲು
ಕಾಣುತ್ತ ಸರ್ವಾಂಗಗಳ ಚಾಚಿ ಮೊಕ್ಕಿ
ಹೆಗಲ ಕರುವ ತನ್ನ ಹೆಗಲಮೇಲಿರಿಸೆ

ಜೊತೆಗೊಂಡು ಬರುತಲುತ್ಸುಕಲೀಲೆಯಿಂದ-
ಲಡಿಗಳ ತೊಳೆಯಲಾ ಮೃಡಮೂರ್ತಿಯೆಂದ:
"ಸತ್ತ ಕರುವಿನ ಮಾಂಸವನಾರೋಗಿಪುದು
ನಿತ್ಯ ನೇಮವನೊಂದಿ ನಿನ್ನೆ ನಾ ಹೋಗಿ

ಧೀಯುತ ಕೇಳು ದೇಡರದಾಸಿಯನ್ನು
ಕರುವ ಪಾಕವ ಮಾಡಿ ಹಾಕೆಯಯೆನಲು
ಕೇಳಿ ಬರುವೆ ದುಗ್ಗಳೆಯನು ತಾನೆನುತ
ತಡಗೈದ ಹಸಿದೆನು ನೀನಾದರಿನ್ನು
ಅಟ್ಟಿಬಡಿಸೆಯ ಕರುವನೆನಗೆ"ನಲು
'ಆಗಲಿ'ಯೆನ್ನುತಲಾಗ ಭೋಗಯ್ಯ

ಕ್ಷಾರಾಮ್ಲಲವಣಯುಕ್ತದಲಿ ಮಾಂಸವನು
ಸಾರದಿಂದಟ್ಟಿ ಬೇಗನೆ ಮತ್ತೆ ಶಾಕ-
ಗಳನೆಲ್ಲ ಬೇಯಿಸಿ ಸಂಧಿಸಿ ಹೆಚ್ಚು
ಪಾಕಗಳನು ಮಾಡಿ ಭದ್ರರೂಪನಿಗೆ
ಆರೋಗಿಸಲು ನೀಡಲಾಗಲಾ ಅಗ್ರ-
ಹಾರದ ಭೂಸುರರೆಲ್ಲರು ಸೇರಿ
ಕಲ್ಲು ಬಡಿಗೆಗಳ ಕೊಳ್ಳುತಲೋಡಿ-
ಯೊಬ್ಬರೊಬ್ಬರು ಭರದಿಂದಲುದ್ವೃತ್ತಿ-
ಯಿಂ ಕಡಿಯಲು ತಲೆ ಬಡಿಯಲು ಗುಡಿಲ
ಕೆಡವಲು ಭೋಗನ ಹೊಡೆಯಲು ಹುಡುಕಿ

ಹಿಡಿಯಿರಿ ತಲೆಯ ಹಚ್ಚನೆ ಬಡಿಗೆಯಲಿ
ಬಡೆಯಿರಿ ಮಾದಿಗನನು ಹೋಗಬಿಡದೆ,
ಅಗ್ರಹಾರವಿದಾಯ್ತು ಮಸಣವೆನುತ್ತ-
ಲಾಗ್ರಹದಲಿ ವಿಪ್ರರೆಲ್ಲರು ನುಡಿಯೆ
ಹರಮೂರ್ತಿಯಾಗಲದೃಶ್ಯನಾಗಿರುತ
ವರಕೀರ್ತಿ ಭೋಗದೇವಯ್ಯನು ಮುಳಿದು
"ಅಂತ್ಯಜರಂತ್ಯಜರೆಂದರಚುವಿರಿ-
ಯಂತ್ಯಜನಿಗೆ ಹುಗಲೆಂತು ಬರುವುದು
ಅಧಿಕದ ನಿಮ್ಮಂತಹಗ್ರಜನ್ಮರಿಗೆ
ಹರಭಕ್ತರಾಲಯ ಹೊಗಬಾರದೆನುತ

ನಿಟಿಲಾಕ್ಷಭಕ್ತರ ನಿಂದಿಸಿ ನೀವು
ಪಟುರೌರವವ ಹೊಂದೆ ಪ್ರಾಪ್ತಿಯೆ ಹೇಳಿ?
ಕೂಡದು ಶಿವದೂಷಕರೆ ನಿಮ್ಮ ನಂಟು
ನೋಡಲು ಪ್ರತಿಮಾತನಾಡಿದರೆಮಗೆ
ಖಳರೆ, ಮನೆಗಳ ವೃತ್ತಿಗಳೂರ ನಿಮ್ಮ
ತಲೆಗಿಟ್ಟುಕೊಳ್ಳಿರೆಮ್ಮಯ ದಾತರಾವು

ಹೋಗುವೆವೆ”ನುತಲಾ ಭೋಗಯ್ಯ ಹೊರಟು
ಆವೂರ ಮುಂದಕೆ ಬರಲಾಯೆಡೆಯಲಿ
ಶೈವರ ಮನಗಳ ಶೈವಲಿಂಗಗಳು
ದೇವಾಲಯಗಳ ಪ್ರತಿಷ್ಠಲಿಂಗಗಳು

ಅಮಿತ ಸ್ವಯಂಭು ಲಿಂಗಾದಿಲಿಂಗಗಳು
ತಮ್ಮಯ ಸಿಂಹಾಸನಗಳನು ತೊರೆದು
ಕದಗಳ ತೆರೆದು ಹೋಗುತಿಹ ಲಿಂಗಗಳು
ಜಲಹರಿಗಳ ತೂರಿ ಬರುವ ಲಿಂಗಗಳು
ಹೂಕಲ್ಲುಗಳ ನೂಕಿ ಹೋಹ ಲಿಂಗಗಳು
ಬಾವಿಯೊಳಗದೃಶ್ಯವಾಗುತ್ತ ಹೋಹ
ಲಿಂಗವೆಲ್ಲವು ಸೇರಿ ಮೇಲೆ ನೆಗೆಯುತ-
ಲಲರುತ್ತಲಾಡುತ್ತ ನಡೆವ ಲಿಂಗಗಳು
ಉರವಣಿಸುತಲೆಲ್ಲವೊಂದೊಂದರೊಡನೆ
ಸ್ಫರ್ಧೆಯಿಂ ಭರದಲ್ಲೋಡುತಿಹ ಲಿಂಗಗಳು

ಎಲ್ಲರು ನೋಡಲಿವುಗಳ ಮೇಲೊಂದು
ನಾಲ್ವೆರಳುದ್ದದ ಉರುಳು ಲಿಂಗಗಳು
ಖೇಚರತ್ವದಲೈದುತಿರುವ ಲಿಂಗಗಳು
ಭೂಚರತ್ವದಿ ಹೋಗುತಿರುವ ಲಿಂಗಗಳು
ಅನಿಲವೇಗದಲಿ ಹಾರುತಿಹ ಲಿಂಗಗಳು
ನಡೆಯಲಾರದ ಮೆಲುನಡೆಯ ಲಿಂಗಗಳು
ಈ ವಿಧದಲಿ ಕೆಂಭಾವಿಯ ಲಿಂಗಗಳವು
ಒಲಿದು ಭೋಗಯ್ಯನ ಹೆಜ್ಜೆಯ ತುಳಿಯೆ
ಲಿಂಗಪರ್ವತವೆ ತಾನೈದುವ ತೆರದಿ
ಲಿಂಗಭಕ್ತಾಳಿಕೇಳಿಕೆಗಳಗೈಯ-

ಲಾಡುತ್ತ ಹಾಡುತ್ತ ನಡೆಯಲಿಕ್ಕೆಡೆಗೆ
ಶೂನ್ಯವಾಯಿತು ಪುರಭಾಗ್ಯ ಹೋಯಿತ್ತು
ಅವನಿಯದುರಿ ಸಸ್ಯಾವಳಿಯೊಣಗಿದವು
ಧರೆ ವೃಕ್ಷಗಳು ಬಾಗಿ ಚಿಕ್ಕೆ ಮೂಡಿದವು
ಪುರವೆಲ್ಲ ತುಂಬುವಂಥಂಧಕಾರವದು
ಕವಿಯಿತೆಲ್ಲೆಡೆಯಡುಗೆಗಳು ಕೊಳೆತವು
ಕೆರೆ ಬಾವಿ ಪದ್ಮಾಕರಗಳು ತಾವೆಲ್ಲ-
ವಂತೆಯೇ ಭರದಲಿ ಪೂರ್ಣ ಬತ್ತಿದವು.

ವನ ಫಲಪುಷ್ಪಪವಾಟಿಕೆ ಕಮರಿದವು
ನೋಡಲು ಪಶುಪಕ್ಷಿಗಣವರಚಿದವು

ನೆಲವ ತುಳಿಯೆ ಜಾಗ ಕಾಲಬೇಯಿಸಿತು
ಬೀಸುವ ಗಾಳಿಯು ಧೂಳನೆಬ್ಬಿಸಿತು
ಎಲ್ಲೆಡೆಯೀರೀತಿಯುತ್ಪಾತವಾಗಿ
ಬುವಿಯ ಜನರು ಮತ್ತಾ ಭೂಸುರಾವಳಿಯು
ಭೋಗಯ್ಯ ಹೋಗಲು ಪುರದ ಲಿಂಗಗಳು
ಭೋಗಯ್ಯನನ್ನನುಸರಿಸಿದ ಕತದಿ-
ಯಿಷ್ಟೆಲ್ಲವುತ್ಪಾತವೀಗಾಯಿತೆನುತ
ಸಂತಾಪಚಿತ್ತರಾಗುತ ಬೇಗ ಬಂದು
ಶರಣುವೊಕ್ಕೆವುಯೆಂದು ಜಯಜಯವೆಂದು
ಬಲಗೊಳುತೆಲ್ಲ ಸಾಷ್ಟಾಂಗಗಳಿಡುತ

ಕಾಯಯ್ಯ, ಪಾಪಿಕರ್ಮಿಗಳೆಮ್ಮ ಭೋಗಿ-
ದೇವಯ್ಯ, ದೆಸೆದಿಕ್ಕು ನಮಗೆ ನೀನಿನ್ನು-
ತವಿಧೆಯನಿಡುತಯ್ಯ, ನಿಮ್ಮಯ ಧರ್ಮ
ಕವಿಲೆಗಳಾವೆಂದು ಕಡುದೈನ್ಯದಿಂದ
ಸಭಯಾತ್ಮರಾಗಿದ್ದ ಚಂಡಿವಿಪ್ರರಿಗೆ
ಅಭಯವನೊಸಗಿ ಭೋಗಯ್ಯನಾಕ್ಷಣವೆ
ಮರಳಿ ಕೆಂಭಾವಿಗೆ ಬರುತಿರೆ ಲಿಂಗ
ಪರಿಕರನಾಗುತಾ ನರರು ಕೀರ್ತಿಸಲು,
ಆ ಲಿಂಗಗಳು ಭಕ್ತಿ ಕಡು ಶಾಸನದಲಿ
ಬರುತಲನ್ಯೋನ್ಯ ಶಿವಾಲಯಗಳಲಿ

ದೊಡ್ಡ ಪೀಠಗಳಲಿ ಚಿಕ್ಕಲಿಂಗಗಳು
ಚಿಕ್ಕ ಪೀಠಗಳಲಿ ದೊಡ್ಡಲಿಂಗಗಳು
ರಾಮಪೀಠಗಳಲಿ ಭೀಮಲಿಂಗಗಳು
ಭೀಮಪೀಠಗಳಲಿ ರಾಮಲಿಂಗಗಳು
ಬಾಣಪೀಠಗಳಲಿ ಸ್ಫಟಿಕಲಿಂಗಗಳು
ಸ್ಫಟಿಕ ಪೀಠಗಳಲಿ ಬಾಣಲಿಂಗಗಳು
ನೋಡಲೀ ರೀತಿಯಿಂದಲಿ ನಿಂತುವೊಡನೆ
ಜನರಿಗಿದನು ದೃಷ್ಟಪ್ರತ್ಯಯವಾಗಿ
ತೋರುತ್ತ ಕೆಂಭಾವಿ ಭೋಗಿದೇವಯ್ಯ-
ನನ್ನನುಸರಿಸಿ ಮರಳಿ ಪೀಠಗಳಲಿ

ನೆಲಸಿದ ಲಿಂಗಮೂರ್ತಿಗಳವೇ ಸಾಕ್ಷಿ
ಮಲಹರ ಭಕ್ತರು ಕುಲಜರೆಂಬುದಕೆ.

## ಗುಡ್ಡವ್ವೆಯ ಕಥೆ

ನರನಾಥ, ಗುಡ್ಡವ್ವೆಯೆಂಬಳು ಮತ್ತೆ
ಪರರು ತನ್ನನು ದೊಡ್ಡ ಭಕ್ತೆಯೆಂದೆನಲು
ಮುಟ್ಟಿದಷ್ಟಕೆ ಕರಿಕಾಗುತ್ತ ಕುಷ್ಠ-
ವಿಡಿದು ರೂಪವಳಿಯಲು ಅಲ್ಲಿರುತೊಂದು
ದಿವಸ ನಾವಿಂದಿಗೆಯೆಂಬೂರ ಬೀದಿ-
ಯಲ್ಲಿ ಗುಡ್ಡವ್ವೆಯು ಹೋಗೆ ಭೂಸುರರು
"ರೋಗಗಳಿರದಯೀಯಗ್ರಹಾರಕ್ಕೆ
ನೀಚ ಹೊಲತಿ, ಬಾರದಲ್ಲೆ ನಿಲ್ಲೆ"ನಲು

ಪಾಪಿಷ್ಠರಾದ ಹಾರುವರನು ನೋಡಿ
ಶಾಪವನೀಯುತ್ತ ಸೌರಾಷ್ಟ್ರಕೈದು
ರೂಪವ ಪಡೆಯದೀ ಗ್ರಾಮವ ಹೊಗುವೆ-
ನೇಯೆಂದಾತ್ಮದಿ ಪ್ರಾಣೇಶ್ವರನನು ನಿಲಿಸಿ
ಮುದದಿ ಸೌರಾಷ್ಟ್ರಾಭಿಮುಖಿಯಾಗಿ ಹೋಗೆ
ಪದಯುಗವು ಬಿರಿದು ಕದಲದಂತಿರಲು
ಮೊಣಕಾಲೂರುತ ಬಾಗಿ ತಾ ಮುಂದೆ ನಡೆಯೆ
ಮೊಣಕಾಲು ಕೈಗಳು ಬಿರಿದುಹೋಗಿರಲು
ಗಕ್ಕನೆ ಮಾರ್ಗದಿ ಹೊರಹೊರಳುತ್ತ
ಪಕ್ಕದಿ ಮೈಯೆಲ್ಲ ಬಿಕ್ಕನೆ ಬಿರಿಯ-

ಲನಿತರಲಧಿಕ ದಯಾರ್ದ್ರಭಾವದಲಿ
ಕಂತುಸಂಹರನು ಸ್ವಾಕಾರವ ತಾಳಿ
ಪಡಿಯಾಗಿ ಸೌರಾಷ್ಟ್ರದಲ್ಲಿರುತೆದುರು
ಬಂದು ಸೋಮೇಶನು ಸತಿಯ ದೇಹವನು
ದಿವ್ಯಾಂಗವಾಗಿಸೆ ವನಿತೆಯು ಮೊಕ್ಕೆ
ಭವ್ಯನು ಪಟುದಯಾಮತಿಯಿಂದ ಮತ್ತೆ
"ಕೇಳು ನೀ ನಿನ್ನೀಪ್ಸಿತಾರ್ಥವನೀವೆ
ಸುದತಿ, ಮೆಚ್ಚಿದೆ ನಿನ್ನ ಭಕ್ತಿಗೆ"ಂದೆನಲು
"ಮನ್ಮನೋಗಮ್ಯ, ನಿರ್ಮಲಭಾವಗಮ್ಯ
ಸನ್ಮತಿ ನಿಮ್ಮ ಪದಾಬ್ಜಪ್ರೇಕ್ಷಣದಿ

ಜನ್ಮವು ತಾ ಸಫಲತೆಯೊಂದಿತಿಂದು
ಉನ್ಮದವ್ಯಾಧಿಗುಣೋದ್ವೃತ್ತಿಯಡಗಿ-
ತಸಮಾಕ್ಷ, ಬೇರೆಯಿನ್ನಭಿಮತಾರ್ಥಗಳ
ಬಯಸಲೇತಕೆ, ಹಿರಿನಿಧಿ ದೊರಕಿರಲು
ಜಲಗವ ತೊಳೆಯುವ ಮರುಳರಿರುವರೆ?
ವರದ, ನೀನಿಂತು ಸುಸ್ಥಿರಲೀಲೆಯಿಂದ-
ಲಿಲ್ಲಿಯೆ ನೆಲಸಯ್ಯ, ನನಗಷ್ಟೆ ಸಾಕು
ಮಿಕ್ಕೆಲ್ಲ ವರಗಳ ಸಿಕ್ಕನಾನೊಲ್ಲೆ"-
ನೆನಲು ನಾವಿಂದೆಗೆಯೆಂಬ ಪುರದಲ-
ಧಿಕದಿ ಸೋಮೇಶನತ್ಯದ್ಭುತಲಿಂಗ

ಮೂರ್ತಿಯಾಗಿರುತಿದ್ದ; ಮುದಿತ ಗುಡ್ಡವೆಯ
ಕೀರ್ತಿ ಲೋಕಗಳಲಿ ತೀವಿ ಶೋಭಿಸಿತು.
ಅಲ್ಲದಾಕೆಯ ಪಟುಭಕ್ತಿ ಮಹಿಮೆಯ
ಹೊಗಳಲೀಶ್ವರನಿಗಸಾಧ್ಯವೆಂದೆನಲು
ಸತಿಯ ಮುನ್ನಪಹಸಿಸಿದ ದ್ವಿಜಾಧಮರ
ತನುಗಳು ಕೆಟ್ಟವು ಕುಷ್ಠರೋಗದಲಿ
ಗುಡ್ಡವ್ವೆಯನುಧರೆ ಕೊಂಡಾಡುತಿರಲು
ಗುಡ್ಡವ್ವೆಯಾ ಭಕ್ತಿ ಗುಡ್ಡವೆ ಆಯ್ತು
ಅದರಿಂದ ಕುಲಹೀನರೆಂತೆನಬಹುದು
ನಿಟಿಲಾಕ್ಷಭಕ್ತರನು, ನಿಖಿಲೇಶ್ವರನೆ!

ತಾನು ಪ್ರತಿಷ್ಠಾಪೂರ್ವಕವೆನಿಸಿರಲು
ಲಿಂಗವದಲ್ಲದೆ ಶಿಲೆಯೆನಬಹುದೆ?
ಅತಿಶಯ ಲಿಂಗದೀಕ್ಷಿತ ತಾನಾಗಿರುವ
ವ್ರತಿಯನಂತ್ಯಜನೆಂದು ಕರೆಯಲುಬಹುದೆ
ಹರಸನ್ನಿಹಿತಪೂರ್ವವ ವಿಚಾರಿಸುವುದು
ಹರನನು ಶಿಲೆಯೆಂದಂತಧಿಕ ಪಾತಕವು
ಮೇದಿನೀವಲ್ಲಭ, ಮೇರುವ ಸೋಕಿ
ತಾನೆ ಕಾಗೆಯು ಮೆರೆವುದು ತಚ್ಛಾಯೆಯಲಿ
ಭೃಂಗ ಸಂಸ್ಪರ್ಶಪತಂಗವು ಮೊದಲಿ-
ನಂಗಕ್ಕೆ ಬರುವುದು ತಾನಿದು ಸ್ಪಷ್ಟ

ವಾರಿಧಿ ತಟನೀಪ್ರವಾಹವ ಸೇರೆ
ಹೆಸರಿಹುದೇ ಬೇರೆ, ಹೆಚ್ಚಿನದೇಕೆ?

ಸಿದ್ಧರಸಸ್ಪರ್ಶದಿಂದಾಗದಿಹುದೆ
ಶುದ್ಧಸುವರ್ಣವಾಗುತ ಶುದ್ಧ ತಾಮ್ರ
ಗುರುಕರಸ್ಪರ್ಶದಿಂ ಕುಲಜನಾಗುವುದು–
ದರಿದೇನು ಆಂತೆಯಂತ್ಯಜನಗ್ರಜನೆನೆ
ಧರೆ'ಯುಮಾ ಮಾತಾಪಿತಾರುದ್ರ'ನೆನಲು
ಒಬ್ಬ ತಾಯಿಯೆ ಪ್ರಜೆಗಳಿಗೆ ಬೇರೆಲ್ಲಿ
ಹೊಳೆವ ಮಾಣಿಕ್ಯಕೆ ಮಸಿಯಿಡಿದೊಂದು
ವಸ್ತ್ರವ ಹೊದಿಸಲು ಕಾಂತಿ ಕುಂದುವುದೆ?

ಹರಭಕ್ತನಧಮಜಾತ್ಯಾವೃತನಾಗಿ–
ರುತಿರಲೇನವನಿಗೆ ಪ್ರಾಪ್ತಿಕೆಡುವುದೆ?
ರಾಜೀವ ಮತ್ತೆ ಪಂಕೇಜವು ತಾನೆ,
ಪೂಜೆಗೆ ತಾನೆಂತು ಪೂಜ್ಯವೆನಿಸಿತು?
ಕಾಷ್ಠೋದ್ಭವವದಲ್ಲವೇನು ಪವಿತ್ರ,
ನಿಷ್ಠಿತನಾಗನೇನನಲನೆಲ್ಲರಿಗೆ?
ಎಂಥ ದುರ್ಜಾತಿಯಲುದಿಸಿದರೇನು
ಎಂದಿಗೂ ಶಿವಭಕ್ತರಿಂತೆ ಪವಿತ್ರ
ಈಯಗ್ರಜನ್ಮರಿಗೆಲ್ಲರ್ಗೆ ಗುರುವು
ಬೋಯಿತಿಗಲ್ಲವೆ ಹುಟ್ಟಿದ ವ್ಯಾಸ

ಪೂರ್ವದ್ವಿಜಾಚಾರ್ಯನಿಳೆಗೆ ವಸಿಷ್ಠ
ಸೂಳೆಯೂರ್ವಶಿಗುದಯಿಸಲಿಲ್ಲವೇನು?
ಮಾತಂಗನೆನ್ನುವ ಬ್ರಹ್ಮರ್ಷಿಯೊಬ್ಬ
ಮಾತಂಗಿಗಲ್ಲವೇನುದ್ಭವಿಸಿದುದು?
ಶುನಕ ಗಾರ್ದಭ ಮುಚ್ಚ ಶುಕ ದರ್ದುರಾದಿ
ಜನಿತಮುನೀಂದ್ರಾದಿಜಾತಗಳೆಲ್ಲ
ಶಿವಭಕ್ತಿಯಿಂ ತಾನೆ ಶಿಷ್ಟವಾದದ್ದು?
ಅವನೀಶ, ತಿಳಿಯೆಯಾ ನೀನೆಲ್ಲರನೆನೆ
ಕೇಳಿ ಬಿಜ್ಜಳ ರೋಷವಿಹ್ವಲನಾಗಿ
ನೋಡುತ್ತ ಬಸವರಾಜನಿಗೆ ತಾನೆಂದ:

"ಕೆಲಸಕ್ಕೆ ಬಾರದ ಕಥೆ ಹಾಡು ಮಾತು
ಕೇಳಿ ವಿರುದ್ಧವನಾಡಲೇತಕ್ಕೆ
ಭಕ್ತರ ಚಿವುಟಲು ಹಾಲು ಸುರಿವುದೆ
ನೆತ್ತರು ಸುರಿವುದೇನಿತರರ ಚಿವುಟ–

ಲಿಂಥ ಮಾರ್ಗಗಳ ಮುನ್ನರಿಯೆವಾ"ವೆನಲು
ಥಟ್ಟನೆ ಬಸವಯ್ಯ ತಾನಾಗಲೆದ್ದು
"ಭರ್ಗನನಲ್ಲದೆ ಹಲವೆಡೆ ಹೋಹ
ದುರ್ಗುಣರಹ ಶಿವದ್ರೋಹಿಗಳೊಡನೆ-
ಯಡರುವ ವೇದಭರಾಕ್ರಾಂತರಾದ
ಕೀಳಾದ ಬ್ರಾಹ್ಮಣಗಾರ್ದಭರೊಡನೆ

ಮಹಿತ ಪ್ರಣವ ದಿವ್ಯಮಂತ್ರೋಪದೇಶ
ರಹಿತರಾಗಿರುವ ವ್ರತಭ್ರಷ್ಟರೊಡನೆ
ಜಾಲದಧೀಚ್ಯಾದಿ ಶಾಪಾಗ್ನಿ ಶಿಖಿಯ-
ಲಂದು ಬೆಂದಿಹ ಕರ್ಮಚಂಡಾಲರೊಡನೆ
ಹಿಡಿದು ಪ್ರಾಣದ ಕೂಡೆ ಪಶುವ ವಧಿಸುವ
ಕ್ರೂರಿಗಳಹ ಪಶುಕರ್ಮಿಗಳೊಡನೆ
ಜನ್ನವಗೈಯಲು ಬಲಿಗಳನೀಯು-
ವಂತಹ ಅಧಿಕ ಪಾಪಾತ್ಮರಕೂಡೆ
ವೀಸವೊಂದಕ್ಕೆಂಥ ದೋಷಕ್ಕೂ ಕೂಡ
ಕೈಚಾಚಿ ಬಹ ಕರ್ಮಜೀವಿಗಳೊಡನೆ

ಮಾಣದೆ ಸುರಪನೊಲರ್ಥಿಯಿಂ ಸೋಮ
ಪಾನಕಾಶಿಸುವಂಥ ಹಾರುವರೊಡನೆ,
ಇಷ್ಟೆಲ್ಲ ಹೇಳಲೇತಕೆ ತಾನು ಕೊಂದು
ಜನ್ನಿ ಕೊಂದಿತು ಎಂಬ ದುರ್ಜಾತರೊಡನೆ
ಪ್ರತಿಮಾತನಾಡಲು ಪಾಪವೊಂದುವುದು,
ಪ್ರತಿ ತೋರದಿರೆ ಭಕ್ತಿ ಸೇರುವೆಯಲ್ಲ
ಶಿವನಾಗಮಯ್ಯನ ಶ್ರೀಹಸ್ತದಿಂದ
ಸುರಿಸಿ ತೋರುವೆ ಹಾಲ ನೀನೆಂದ ರೀತಿ
ಈ ಮಹೀಸುರರಲ್ಲಿ ಯಾವನಾದೊಬ್ಬ
ಸೋಮಯಾಜಿಯ ಕೊಯ್ದು ನೀರ ತೋರುವೆಯ?

ತಾನಾಗದಿರಲಿದು ಕಟಕದ ಸುತ್ತ
ಕುಟಿಲಾತ್ಮರನು ಮುಳ್ಳ ಮೇಲೆಳೆಸುವೆನು"
ಎನುತ ಬಿಜ್ಜಳ ಭೂಸುರಾನುಮತದಲಿ
ಆ ಸದಾಸಿದ್ಧ ಬಸವ ಚಕ್ರವರ್ತಿ
ಶಿವನಾಗಮಯ್ಯನ ಶ್ರೀಪಾದಗಳಿಗೆ
ಬುವಿ ಸಮಸ್ತಾಂಗಗಳೊಂದಲು ಮೊಕ್ಕಿ

ಸನ್ನುತಲಿಂಗಪಸಾಯತ ಶಸ್ತ್ರ
ಸನ್ನದ್ಧನಾಗಿಯಾನಂದ ತುಳ್ಕಾಡೆ
ಸರಸವಾಡಿದ ರೀತಿ ಶಿವನಾಗಮಯನ
ಕರತಲಾಂಬುಜಗಳ ಕೈಯಲಿ ಹಿಡಿಯು-

ತೊತ್ತಲು ಚಿಮ್ಮಿತದುಡುವೀಥಿ ತಾಕಿ-
ತಾಗಲೆ ಕ್ಷೀರಧಾರಾವಳಿ ಹೊಮ್ಮಿ
ಶಿವಭಕ್ತಿ ಕಾಮಧೇನುವು ಬಸವನಿಗೆ
ತನ್ನ ಮೊಲೆತೆರೆದೀ ಬುವಿಗೆರೆದಂತೆ
ಕರುಣಿಸಿ ಶಂಭುವು ಕನಕವರ್ಷವನು
ಕರಿಕಾಲಚೋಳಗೆ ಸುರಿಸಿದ ರೀತಿ-
ಯಧಿಕದಲಿಂದು ದಿವ್ಯಾಮೃತವೃಷ್ಟಿ
ಬಸವಗೆ ಕರೆಸಿದ ಭಕ್ತವತ್ಸಲನು
ದುರ್ಮಲತ್ರಿತಯ ವಿಧೂತವೆನಿಸಿದ
ನಿರ್ಮಲದೇಹವು ನಿಜವಲ್ಲದೇನೆ

ರುಧಿರಮಾಂಸಾದಿ ನಿರೂಪಿತವಹುದೆ?
ಅಧಮದೇಹಿಗಳಿಗಾಗದುಯೆಂದು ಹೊಗಳೆ
ದಿವ್ಯಾಮೃತಾಂಗ ದೀಧಿತಿಯು ಪ್ರಜ್ವಲಿಸೆ
ಪ್ರವ್ಯಕ್ತದಿಂ ಜಗತ್ತ್ರಯವಾಗ-
ಲಖಿಲ ಭಕ್ತೌಘವದಸದೃಶಲಿಂಗ
ಸುಖಸಮೇತಾತ್ಮದಿಂ ನೋಡೆ ಬಿಜ್ಜಳನ-
ಡಿಗಡಿಗೆ ನಾಗಿದೇವಯ್ಯ ಪಾದಾರ-
ವಿಂದಗಳಿಗೆ ದೀರ್ಘವಿನಮಿತನಾಗಿ
ಸಕಲಲೋಕಗಳೆಲ್ಲ ಜಯಕಾರವಿಡಲು
ಅಕುಟಿಲಭಕ್ತಿಯಿಂದೆಲ್ಲರು ಮೊಕ್ಕಿ-

ಯಜ್ಞಾನ ಜೀವಿಗಳಪಗತಮತಿಗ-
ಳಜ್ಞರನಧಿಕ ಗರ್ವಾಪರಾಧಿಗಳು
ಶರಣೆನೆ ಕಾವ ಬಿರುದು ನಿಮ್ಮದಿನ್ನು,
ಪರಮಾತ್ಮ, ಮರೆಯಲು ಸಾಧ್ಯವೇನೆಂದು
ಶರಣು ಬೇಡುತಲಿದ್ದ ಚಂಡಿವಿಪ್ರರನು
ಕರುಣದಿಂ ಕಾಯ್ದವರನು ನೋಡಿ ನಗುತ
ಬಸವನುದ್ಯತ್ಸಮುಲ್ಲಸವಲರುತಿರ-
ಲಸಮಗಜಕೆ ನಾಗಯ್ಯನನೇರಿಸುತ್ತ

ತಾನೂ ಹಿಂದೆಯೆಯೇರಿ ತನ್ನ ನಿವಾಸ-
ಕಾನಂದಲೀಲೆಯೊಪ್ಪುತಿರೆ ತಾನೆಯ್ದ

ಶಿವನಾಗಮಯ್ಯನ ಪ್ರವಿಮಲ ಚರಿತೆ-
ಯನವಿರಳಪ್ರೀತಿ ತುಳ್ಕಾಡಿ ಕೇಳ-
ಲೋದಲು ಬರೆಯಲು ಸದ್ಭಕ್ತಿಮಹಿಮೆ-
ಯೊದಗಿ ಚತುರ್ವರ್ಗಪದಗಳೊಂದುವುದು.

**ಕಲ್ಯಾಣಪುರದ ಭಕ್ತರು**

ರುದ್ರಗೆ ಪ್ರತಿಯಾದ ರೂಪಗಳೆನಲು
ಭದ್ರೇಭಸಂಹರ ಪ್ರತಿನಿಧಿಗಳೆನೆ
ಕಲ್ಯಾಣದಲಿ ನಿತ್ಯಕಲ್ಯಾಣದಲ್ಲಿ
ಲೌಲ್ಯನಿರರ್ಗಳ ಲಾಲಿತ್ಯದಿಂದ
ಮಡಿವಾಳ ಮಾಚಯ್ಯ ಮಾದಿರಾಜಯ್ಯ
ಬಡವರ ಬ್ರಹ್ಮಯ್ಯ ಬಾಚಿರಾಜಯ್ಯ

ಕಿನ್ನರ ಬ್ರಹ್ಮಯ್ಯ ಕೇಶಿರಾಜಯ್ಯ
ಕನ್ನದ ಬ್ರಹ್ಮಯ್ಯ ಕಲ್ಲಿದೇವಯ್ಯ
ಮೋಳಿಗೆ ಮಾರಯ್ಯ ಮುಸಿಡಿ ಚೌಡಯ್ಯ
ಶೂಲದ ಬ್ರಹ್ಮಯ್ಯ ಸುರಿಗೆ ಚೌಡಯ್ಯ
ಕಲಿಕೇತ ಬ್ರಹ್ಮಯ್ಯ ಕಕ್ಕಯ್ಯನವರು
ತೆಲುಗೇಶ ಮಸಣಯ್ಯ ತೆಲುಗುಜೊಮ್ಮಯ್ಯ
ಶಾಂತಿದೇವನುಯೆಂಬ ಜಮ್ಮಯ್ಯ ಭಾಷೆ-
ವಂತಕೇಸಯ್ಯನೇಕಾಂತರಾಮಯ್ಯ-
ನುತ್ತಮಾಂಗದ ಕೇಳಿ ಹೊನ್ನಯ್ಯ ಗಂಡ-
ಗತ್ತರಿ ನಾಚಯ್ಯ ಕಾಲಾಗ್ನಿರುದ್ರಿ

ಶೃಂಗಿ ಬೊಪ್ಪಯ್ಯನು ಸಿಗುರು ಚಂದಯ್ಯ
ಡಿಂಗರಿ ಮಲ್ಲಯ್ಯ ಸಂಗಮೇಶ್ವರನು
ಕದಿರ ರೆಮ್ಮಯ ಮಹಾಕಾಳಯ್ಯನವರು
ಪದುಮರಸನು ಪುರಾಣದ ಮಾಯಿಭಟ್ಟ-
ನುದರದ ರಾಮಯ್ಯ ಯೋಗಿದೇವಯ್ಯ-
ನುದಯಮರಸುಗಳು ಹೊನ್ನಯ್ಯನವರು
ಧವಳಯ್ಯವನರು ಬೊಂತಾದೇವಿಯವರು
ಚವರದ ಚಿಕ್ಕಯ್ಯ ಸಾರೆನಾಯನನು

ಶಿವಮುದ್ದು ದೇವನು ಚಿಕ್ಕಿದೇವಯ್ಯ
ಶಿವರಾತ್ರಿ ಸಂಗಯ್ಯನವಿಮುಕುತಯ್ಯ

ಚಂಡೇಶರಾಮಯ್ಯ ಮುಂಡ ಬ್ರಹ್ಮಯ್ಯ
ಬಂಡಿಯ ರೇವಣ್ಣನಿಂಡೆ ಸೋಮಣ್ಣ
ಹಾಟಕೇಶ್ವರದ ಬ್ರಹ್ಮಯ ಮಹಾಬಲನು
ಕೋಟೇಶ ಚಾಮಯ್ಯ ಗೊಗ್ಗಯ್ಯನವರು
ದುಮ್ಮದ ಬ್ರಹ್ಮಯ್ಯ ಧೂರ್ಜಟಿ ಕೇಳಿ-
ಯೆಮ್ಮೆ ಸಂಗಯ ಕಪಿಲೇಶ ವಿಸ್ಸಯ್ಯ-
ನೋಣಿಮೇಶ ಚಿಕ್ಕಯ್ಯ ನುಲಿಯ ಚಂದಯ್ಯ
ಗಣದಾಸಿ ಮಾದಣ್ಣ ಗಂಟಿ ಮಲ್ಲಯ್ಯ
ಘುರಹಾಟ ಕೇತಯ್ಯ ಹರವಿ ಹೊಲ್ಲಯ್ಯ
ಗಿರಿಗೀಟು ಸಿಂಗಯ್ಯ ಗುರುಜ ಕಾಳವ್ವೆ

ಬಾನಸ ಭೀಮಯ್ಯ ಭಾಸ್ಕರಯ್ಯಗಳು
ಗೋಣಿಯ ಮಲ್ಲಯ್ಯ ಗೊಗ್ಗಯ್ಯನವರು
ಅಲ್ಲಯ್ಯ ಮಧುಪಯ್ಯನನಿಮಿಷಕೇಳಿ
ಹೊಲ್ಲಯ್ಯ ಗೋಡಲಮಲ್ಲಯ್ಯನವರು
ಓಲೆ ಬ್ರಹ್ಮಯ ಕರಹಾಳ ಮಲ್ಲಯ್ಯ
ಬಾಲಬ್ರಹ್ಮಯಗಳು ಪಣಿಹಾರಿ ಬಾಚಿ
ಕವಿಲೆ ಬ್ರಹ್ಮಯ ಬಂದಿಕಾರ ಮಲ್ಲಯ್ಯ
ಅವಸರ ಕೇತಯ್ಯ ಶಿವನಾಗಮಯ್ಯ
ನಿಜಲಿಂಗ ಚಿಕ್ಕಯ್ಯ ನಿರ್ಲಜ್ಜ ಶಾಂತಿ
ನಿಜಭಾವನದ ನಿತ್ಯನೇಮದ ಮೈಲಿ

ಅಂಕ ಬ್ರಹ್ಮಯ ಕರಹಾಳ ಬ್ರಹ್ಮಯ್ಯ
ಸುಂಕೇಶ ಬಂಕಯ್ಯ ಲೆಂಕಮಂಚಯ್ಯ
ಏಲೇಶ ಬ್ರಹ್ಮಯ್ಯನೀಡೆ ಬ್ರಹ್ಮಯ್ಯ
ಮೈಲನ ಬ್ರಹ್ಮಯ್ಯ ಮಾಯಿದೇವಯ್ಯ
ಸಕ್ಕರೆ ಬ್ರಹ್ಮಯ್ಯ ಶರಣಯ್ಯನವರು
ಚಿಕ್ಕ ಬ್ರಹ್ಮಯ್ಯನು ಸಿರಿಗಿರಯ್ಯಗಳು
ವೀರಮಾರಯ್ಯನು ವೀರಲಿಂಗಯ್ಯ
ವೀರಬ್ರಹ್ಮಯ್ಯನು ವೀರಭಾವಯ್ಯ
ವೀರನಾಗಯ್ಯನು ವೀರಕಲ್ಲಯ್ಯ
ವೀರ ಭೋಗಯ್ಯನು ವಿಮಲದೇವಯ್ಯ

ಕಕ್ಕಯ್ಯ ಕಲ್ಲಯ್ಯ ಕಾಟಕೋಟಯ್ಯ
ಚಿಕ್ಕಯ್ಯ ವೀರಯ್ಯ ಶ್ರೀ ಸೂರಸಾನಿ
ಕೊಂಡುಗುಳಿಯ ಕೇತಯ್ಯನು ಗುಂಡಯ್ಯಗಳು
ಚಂಡೇಶ ಬ್ರಹ್ಮಯ್ಯ ಶಂಕರಯ್ಯಗಳು
ಅಮೃತ ದೇವಯ್ಯನು ಅನಿಮಿಷಯ್ಯಗಳು
ವಿಮಲದೇವಯ್ಯನು ವೀರಾದಿಯಾಗಿ
ಶಿವಭಕ್ತಿಸಂಪದ ಸಂದಣಿಸಿರಲು
ಸವಿಶೇಷಭಕ್ತಿ ದೃಷ್ಟಪ್ರತ್ಯಯಗಳ
ನೋಡುತ ಸದ್ಭಕ್ತಿ ಸುರುಚಿರಮಹಿಮೆ
ತಾವೆಂದು ವೀರಮಾಹೇಶ್ವರಾವಳಿಗೆ

ಭಕ್ತಮಹತ್ವವು ಭಕ್ತಾಭಿವೃದ್ಧಿ
ಭಕ್ತಚರಿತ್ರ ಪ್ರಭಾವವೈಭವವು
ನೋಡಿದವರು ಹೇಳೆ ಕೇಳಿದವರನು
ಉನ್ನತ ಶಿವಭಕ್ತಿಯುಕ್ತಿ ಮೈತಗಿಲಿ
ತಮ್ಮಡಿಗಳ ಮಂತ್ರದೀಕ್ಷಾನ್ವಿತರನು
ಶೈವಪಾಶುಪತಾದಿ ಶಾಸನಧರರು
ತಾವೆಲ್ಲ ಲಿಂಗವಂತರೆಯಾಗಿ ನೋಡಿ
ತಾವೆಲ್ಲ ಲಿಂಗವಂತರೆಯಾಗಿ ಕೂಡಿ
ವೀರಮಾಹೇಶ್ವರಾಚಾರ ನಿರೂಢಿ
ಭೂರಿ ಪ್ರಸಾದದೋಪಭೋಗದಿಂ ನಡೆಯೆ

**ಬೇಡರ ತಕರಾರು**

ಬೇಡರ ಕುಲವೆಲ್ಲ ಭೂಮೀಶನೆಡೆಗೆ
ಹೋಗಿ "ಯುತ್ಪಾತವಾಯಿತ್ತೀ ಪುರದಲಿ
ಶ್ರೀಕಂಠಶೈವ ಗೌರೀನಾಥಶೈವ
ಲೋಕೇಶಶೈವ ತ್ರಿಲೋಚನ ಶೈವ-
ರೀಶಾನಶೈವ ಮಹೇಶ್ವರ ಶೈವ
ಪಾಶಮೋಚನಶೈವಪರ್ಪರಮಾತ್ಮ ಶೈವ
ಶಾಶ್ವತಶೈವ ಗಣೇಶ್ವರಶೈವ
ವಿಶ್ವೇಶಶೈವರು ವಿಮಲಾತ್ಮಶೈವ
ತ್ರಿಪುರಾಂತಕಶಿವರು ತ್ರಿಣಯನಶೈವ
ದ್ವಿಪದೈತ್ಯಹರಿಶೈವದೇರ್ವೇಶಶೈವ_

ರುರುಲಿಂಗ ಶೈವರು ಉಗ್ರಾಕ್ಷಶೈವ
ಹರಶೈವರಾ ಪರಮಾನಂದಶೈವ
ಧರ್ಮಶೈವರು ಆ ವಿದ್ಯಾಧರಶೈವ
ನಿರ್ಮಲಶೈವರು ನಿಷ್ಕಲಶೈವ
ಮೊದಲಾಗಿರುವ ಶೈವಮುಖ್ಯರೆಲ್ಲರನು
ಏನು ಮತಗಳೋ ಅರಿಯಲಾಗದಿವನು
ಬಸವಯ್ಯನೊಡತಣ ಭಕ್ತರ ಕಂಡು
ಧರೆಯಲಾವಾಗಲು ಲಿಂಗವಂತರೆನು-
ತೆಲ್ಲ ಪ್ರಸಾದವ ಸೇವಿಸುತಿಹರು.
ತಾವೆಂದು ನೀಡರು ನಮಗಿಷ್ಟು ಕೂಡ-

ವೀಯೂರಿನಲಿ ಮಲ್ಲಜೀಯನು ಬೊಲ್ಲ
ಜೀಯಗಳೀವರೆ ಸಲುವುದೇನಿಂತು?
ಕೇಳು ಮಹಾರಾಜ, ನಮ್ಮಯವೃತ್ತಿ-
ಯವರಿಗೆ ನಿರ್ಮಾಲ್ಯ ಮೊದಲಿಂದಲಿಹುದು,
ಹಸುಕಾಯಲೆಂದು ಬೇಡರ ಬಾಲನಂದು
ಮಳಲ ಲಿಂಗವ ಮಾಡಿ ಹಾಲ ಹಿಂಡುತಿರ-
ಲೇತಕೆ ಹಸುಗಳ ಹಾಲೆಲ್ಲವನ್ನು
ಹಾಳು ಮಾಡುವೆಯೆಂದು ಕಾಲಿಂದಲೊದೆಯೆ
ಮುಳಿದು ತಂದೆಯೆನದಲಾಗ ಕಾಲ್ಗಳನು
ಕಡಿಖಂಡಗಳ ಮಾಡಿ ಮೃಡನಿಗೊಪ್ಪಿಸುತ

ಮಾದೇವನಿಂದ ಪ್ರಸಾದವ ಪಡೆದು
ಆದಿ ಜಡೇಶ್ವರನಿಂತೆಮಗಿತ್ತ-
ನಾಗಿನಿಂದಲು ಭೋಗಿಸುತಿಹೆವಿಂತೆಯೆ ನಿ-
ರಂತರವಂಶ ಪರಂಪರೆಯಿಂದ;
ಈವೂರ ವೀರಮಾಹೇಶ್ವರರೆನಿಸಿ-
ಯೀಗಲೇತಕೆ ಸುಮ್ಮನೀಯುವೆವೆನುತ
ಬಸವಯ್ಯ ಯಂತ್ರಗಳೆಲ್ಲವ ಮಾಡಿ
ಹೊಸ ಬಗೆಯಿಂದೆಮ್ಮೊಡನೆ ಹೋರುತಿಹನು,
ಸಲ್ಲಿಸಬೇಕೆಂದು ತಿಳಿಸು, ಅಲ್ಲದೊಡೆ
ವಲ್ಲಭ, ಅರಮನೆ ಬಾಗಿಲಲಗ್ನಿ

ಕುಂಡವ ತೋಡಿಸಿ ಬೇಯುವೆ"ವೆನಲು
ತುಂಬಿದ ಕೋಪದಿಂದ ನಿಖಿಲೇಶ್ವರನು

ಬಸವನ ಕರೆತರೆ ಕಳಿಸಲು ಬಸವ-
ನಸಮಾನ ಲೀಲೆಯಿಂದಲ್ಲಿಗೈತರಲು
"ಜೊತೆಗೂಡಿ ಬೇಡರ ಕೆಡಿಪುದಿದೇನು
ಶಿವಪ್ರಸಾದವ ನೀವು ಕೊಂಬುದಿದೇನು
ಆದಿ ಮಾರ್ಗವೊ ಬಲುಮೆಯೊ ಇದು ಹೇಳು,
ಅಲ್ಲದಿರಾಡಿಕೋ ಕಾರ್ಯವೇನಿರಲು
ಸುಮ್ಮನೆ ಸೇವಿಪುದುಚಿತವೇ"ಯೆನಲು
ಧಾರುಣೀಶ್ವರಗೊಡನೆಯೆ ತಾನಿಂತೆಂದ:

"ಇಲ್ಲಲ್ಲವದುವೆ ಚಂಡೇಶನಿಗಭವ-
ನಿತ್ತ ರೀತಿಯ ನೀವರಿಯದಿರೆ ಕೇಳಿ
ಬಾಣಲಿಂಗಗಳಲ್ಲಿ ಪಟಿಕಗಳಲ್ಲಿ
ಪ್ರಾಣಲಿಂಗಗಳಲ್ಲಿ ಪೌಷ್ಯರಾಗಾದಿ
ಲಿಂಗಗಳಲ್ಲಿಯೆಯೆಇಲ್ಲ ಪ್ರಸಾದ-
ವಂಗಜಹರನಿಗೆ ಆಗಮೋಕ್ತದಲಿ
ಧರೆಯ ನರರು ಮಹೇಶ್ವರ ಪ್ರಸಾದವನು
ಧರಿಸಲು ಕೊಳ್ಳಲುಬಾರದು ನೋಡೆ,
ಅರಿಯದೆ ದಾಟಲು ನರಕಾಗ್ನಿ ಶಿಖೆಯ
ಹೊಗುವರೆಂಬುವ ಶ್ರುತಿವಾಕ್ಕನರಿಯಿದೆ?

ಶ್ರೀ ಗುರುಕರಾಣಾನುರಾಗ ಪ್ರಸಾದ-
ವಾಗಮ ವಿಧ್ಯುಕ್ತವಹ ಪ್ರಸಾದವದು
ಸುಪ್ರಸನ್ನಾನಂದ ಶುದ್ಧಪ್ರಸಾದ-
ವಪ್ರತರ್ಕ್ಯಾದಿ ಲಿಂಗಪ್ರಸಾದವದು
ಪರಮಪವಿತ್ರ ಸಂಪತ್ಪ್ರಸಾದವದು
ಸ್ಥಿರಭವರೋಗೌಷಧೀಪ್ರಸಾದವದು
ಸತ್ಯಪ್ರಸಾದವು ನಿತ್ಯಪ್ರಸಾದ-
ವತ್ಯುತ್ತಮೋತ್ತಮವಹ ಪ್ರಸಾದವದು
ಗರಳಕಂಧರ ಕೃಪಾಕಲಿತ ಪ್ರಸಾದ-
ವರಿದಾದ ಸಂಗಮೇಶ್ವರ ಪ್ರಸಾದವದು

ಮಲದೇಹಿಗಳು ನಿಮಗಹುದೆ ಭೋಗಿಸಲು?
ಮಲಹರ ಭಕ್ತರಿಂತಹ ಹುಟ್ಟುವೃತ್ತಿ
ಪೂಣ್ದ ಲಿಂಗಪ್ರಸಾದಾನೂನಸುಖವು
ಮಾನವರಿಗೆ ಹೊಂದಲೆಂತು ಬರುವುದು?

ಆನೆಯ ಹಲ್ಲಣವೇ ಕತ್ತೆಗಳಿಗೆ?
ನೀವೆಂದು ಕಣ್ಣಲಿ ಕಾಣಿರಲ್ಲದೆಯೆ
ಈವಲ್ಲಿ ಕೆಡಹಿದೆವೇ ಪ್ರಸಾದವನು
ಇತ್ತಕೊಂಡಿಹ ಸ್ಥಳವೆಲ್ಲಾದರಿಹುದೆ?
ಈಯೆಲ್ಲ ಹಿಂದಿನ ಕಥೆಯದು ಬನ್ನ
ಗುದಿಗುದಿ ಪಡೆದ ನೆಮ್ಮದಿಯಿಂದಿ"ರೆನಲು ೧೧೩೦

"ವಾರಣಾಸಿ ಗಯ ಕೇದಾರಗಳಲ್ಲಿ
ಸೌರಾಷ್ಟ್ರದಲ್ಲಿ ದಕ್ಷಾರಾಮದಲ್ಲಿ
ಶ್ರೀಗಿರಿಯಲ್ಲಿಯಾ ಸೇತುಪುರೋಗ-
ಮಾಗಮಾಸ್ಥಾನಗಳಲ್ಲೆಲ್ಲವೆಮಗೆ
ಸಲುತಿರೆ ನೀವೆಂತು ಸಲ್ಲಿಸದಿಹಿರಿ?
ಬಲ್ಲಿದವಹ ನಮ್ಮ ಪ್ರಾಣಗಳನ್ನು
ಬಿಡುವೆವೆ ಹೊರತೆಮ್ಮ ಮಡಿಗೂಳ ವೃತ್ತಿ-
ಯನು ಬಿಡುವೆವೆ? ಏನು ವಿಪರೀತವೃತ್ತಿ?"
ಎನುತ ಬೇಡರು ಎದ್ದು ಭರದಿಂದ ನುಡಿಯ-
ಲದಕಂದು ಬಸವಯ್ಯ ಕಣ್ಣಲೆ ನಗುತ- ೧೧೪೦

ಲೊಣಗಿದೆಲೆಗಳು ಗಾಳಿಗೆ ಹಾರ್ವುವಲದೆ
ಮಿಟ್ಟೆ ನಡುಗುವುದೇನೆಂತು ಬೀಸಿದರು?
ಬೆಂಡು ತೇಲ್ವುದೆ ವಿನಾ ಭಾರವಾಗಿರುವ
ಗುಂಡು ತೇಲುವುದೇನು, ತಂಟೆಯಿದೇಕೆ?
ಬಲದಿಂದ ಕೊಳೆ ಹರಿಬ್ರಹ್ಮಾದಿಗಳಿಗು
ತಾನಾಗದೆನೆ ನಿಮಗಹುದೇನು ಪಡೆಯೆ?
ನೀವೆನಿತಥಕರಾಗಿದ್ದರೂ ಕೂಡ
ಚಲಬಿಟ್ಟು ತೊಡೆಯಿರಿ, ತಿಳಿವ ಪಡೆಯಿರಿ;
ಶೈವಶಿವಾಲಯಸ್ಥಾನವ ಬಿಟ್ಟು
ಯಾವೂರು ಯಾವನಾಡಿನಲೆಂದುಯಿಂದು ೧೧೫೦

ಯಾವಾಗ ವೀರಮಾಹೇಶ್ವರ ನಿಲಯ-
ಗಳಲಿ ಕೊಂಡಿರುವುದು ಹೇಳಿ ಕೊಡುವೆವು.
ಆರಯ್ಯೆ ಮುನ್ ಶೈವರಾಗಿರಲೇನು
ವೀರಮಾಹೇಶ್ವರಾಚಾರಿಗಳಾಗಿ-
ಯಿರಲೇನು ಪ್ರಾಣಲಿಂಗಪ್ರಸಾದವನು
ನಿಮಗೀಯುವರೆ, ಕೇಳಿ, ಕುಟಿಲಾತ್ಮರುಗಳೆ!

ಅತಿಯಾಸೆಯೇಕೆ ಮೇಲ್ಕೊಸರಿನ ಬಳ್ಳ
ಕೂಲಿಹೋಗುವ ರೀತಿಯಾದರೀಯಿರೆನು-
ತಿಹುದಿದುವೇತಕೆ, ನಿಮಗಿಷ್ಟವಿರಲು
ಮಾದೇವಗೆಮ್ಮ ಶ್ರೀಮನ್ಮಹೇಶನಿಗೆ

ಬಾಲಚಂದ್ರಪ್ರಭಾಭಾಸುರಂಕನಿಗೆ
ಕಾಲಕಾಲನಿಗೆಮ್ಮ ನೀಲಕಂಠನಿಗೆ
ಸರ್ಪಕುಂಡಲನಿಗೆ ಸಂಗಮೇಶ್ವರನಿ-
ಗರ್ಪಿಸುವೆನು ಕಾಲಕೂಟವನಿಂದು
ಬನ್ನಿ ಪ್ರಸಾದವ ಕೊಳ್ಳಿರೀಯುವೆವು
ಹೋಗಿ ನೀವಿಷ್ಟಕೊಪ್ಪದೆಯಿರ"ಲೆನಲು
"ಅಕ್ಕಟಾ, ಬಸವಯ್ಯನೆಮ್ಮೆಲ್ಲರನ್ನು
ಒಂದೆ ಬಾರಿಗೆ ಕೊಲ್ಲಲೊಂದುಪಾಯವನು
ಸಾಲದೆ ಇದು ಮೇಲು ಮೇಲುವೋ ಶೃಂಗಿ
ಕಾಲಕೂಟವನು ನುಂಗಲು ಹೇಳುತಿಹನು!

ಒಳ್ಳಿತಾಯಿತು ನಮ್ಮ ಪ್ರಾಣಗಳಿರಲು
ಕಾರೆ ಸೊಪ್ಪನು ತಿಂದು ಬದುಕಿರಬಹುದು.
ಲೇಸಯ್ಯ ಸಾಯಲು ತಿಂದರೇನಹುದು
ಸರಿಯಾಯ್ತು, ಬಸವಯ್ಯನೊಡತಣವಾದ
ದಾರುವ ಕಡಿಯಲು ಹೋಗಿ ಗಡಹದಿ
ಸಾಯೆ ಬೀಳುವ ಮೂಷಕದೊಲಾಯಿತೀಗ
ನಾಡ ಕೊಳ್ಳೆಗೆ ಹೋಗಿಯೆದುರೆದುರಾಗಿ
ತಲೆಯನು ಕಡಿವಡೆದಂತಾಗಿರುವುದು
ದುಃಖದಿ ಕನಕನ ಸಾಮುವೆ ತನ್ನ
ಬೇಳ್ವೆಗೊಳ್ಳುವ ರೀತಿಯಾಯಿತಿಂದೆಮಗೆ

ಹಗೆಗಳ ಮಕ್ಕಳ ಕಾರ್ಯದಿ ಕೊಂದು
ಕಾಣಿಕೆಯಿತ್ತ ಯೋಧನು ಬಸವಣ್ಣ!
ಈರ್ಷೆಯದಿನಿತೇಕೆ, ನಾವಿಷ್ಟು ಹುಚ್ಚ-
ರಂತೆಂದು ತಿಳಿದೆಯೇನಯ್ಯ? ಇಷ್ಟೆಲ್ಲ
ಧರೆಯ ಭಕ್ತರಲಾರು ಹರನಿಗೆ ಮುನ್ನ
ಗರಳವನರ್ಪಿಸಿದುದಿರಲು ನೀವು
ಹೇಳಿರಿಯೀ ಪ್ರಸಾದವೆನುವ ವಿಷವ-
ನಾರಾದರೂ ಕೊಂಡಿದ್ದಿರಲು ಕೊಳ್ಳುವೆವು.

ಮೇಲು ಪ್ರಸಾದವ ಕೊಳೆ ನಿಮ್ಮ ಪಾಲು
ಕಾಲಕೂಟವು ನಮ್ಮ ಪಾಲಾಯಿತಿನ್ನು;

ಎಂತೀವಿರೈ ನಮಗೀಶಪ್ರಸಾದ
ತಲೆಯ ಬೀಳಿಸಲು ವಿಷವನು ನೀಡುವೆಯ?
ನೀವೀವ ವಿಷವನು ದೇವನಿಗಿತ್ತು
ಸಾಯದಿರಲು ತತ್ಪ್ರಸಾದವ ನೀವೆ
ಕೈಗೊಳ್ಳಿ ಹೆಚ್ಚೇಕೆ, ನಿಮ್ಮ ನಮ್ಮಲ್ಲಿ
ಪ್ರಾಕಟದಲ್ಲಿನ್ನು ಭಾಷೆ ತಾನಿದುವೆ"
ಎನಲು ಬಿಜ್ಜಳನುಭಯಾನುಮತದಲಿ
ನಡೆತಂದು ದೇವದೇವನ ಗುಡಿಯೆಡೆಗೆ
ಸಡಗರದಿಂದಲಿ ಬೇಡರು ಬಂದ-
ರಡರಿ ತಮ್ಮಯ ಕಾರಕಹಳವಿಗೆಯಲುಗೆ

**ಬಸವಣ್ಣನ ವಿಷಾರೋಗಣೆ**

ಬಸವನಸಂಖ್ಯಾತ ಭಕ್ತರ ಕೂಡೆ-
ಯಸಮಾನಲೀಲೆಯಿಂದಲ್ಲಿಗೆ ಬಂದು
ಕಾಲಕೂಟವು ಶೃಂಗಿ ಘನ ವತ್ಸನಾಭಿ
ಹಾಲಾಹಲಾದಿಯಾಗೆಲ್ಲ ದೊರೆಯುವ
ವಿಷವೆಲ್ಲ ಸೇರಿಸಿ ಬೇಗದಿಂದರೆಸಿ
ವಿಷಮತರವೆನಿಸೆ ವಿಷದ ಸೌರಭದ
ಗಾಳಿ ಸೋಕಿದ ಮಾತ್ರಕೆಲ್ಲ ಜಂತುಗಳು
ಬೀಳುತಲಲ್ಲಿ ಜೀವಗಳನು ತೊರೆಯೆ
ಮೇಲಾಕಾಶದಲಿ ಸುಳಿಯುವ ವಿಹಗವಿ-
ತಾನವು ಧರೆಗೆ ದೊಪ್ಪನೆ ಬಿದ್ದು ಸಾಯೆ

ರಾಗದಿಂದರೆಯೆ ಕರುಳು ಕತ್ತರಿಸಲು
ಕುಡಿದರೆ ಬದುಕಲು ತಾನೆಂತು ಸಾಧ್ಯ-
ವೆನುತಲಾ ಬೇಡರು ಭರದಿಂದ ನಡೆಯೆ
ಘನಘೋರಗರಳವನೆಲ್ಲವ ಕಲೆಸಿ
ಹೊನ್ನ ಕೊಪ್ಪರಿಗೆಗಳಲೆಸೆಯೆ ತುಂಬಿ-
ಯಸಮ ಸದ್ಭಕ್ತ ಸಭಾಭ್ಯಂತರದಲಿ
ಕೊಪ್ಪರಿಗೆಗಳ ತರಿಸಿಯರ್ಪಿಸುತ್ತ
ತಾನಾಗ ಧೂಪದೀಪಾದಿಗಳಿತ್ತು

ಪಂಚಮಹಾವಾದ್ಯಪಟಲಗಳುಲಿಯೆ
ಸಂಚಿತ ಕೀರ್ತಿ ಬಸವಚಕ್ರವರ್ತಿ–

ಯಾ ಮಡಿವಾಳ ಮಾಚಯನಾದಿಯಾಗಿ
ಕಾಮಾರಿಸದ್ಭಕ್ತಗಣಲಿಂಗಗಳಿಗೆ
ಅತಿಭಕ್ತಿಯಿಂದ ಸಾಷ್ಟಾಂಗದಿ ನಮಿಸಿ
ಚತುರತೆ ಸರಸಸಂಸ್ತುತಿಪೂರ್ವಕದಲಿ
ಮುದ್ರೆಯೊಡೆಯಲು ವಿಷೋದ್ರೇಕವಹ್ನಿ
ಶಿವನ ಮೂರನೆ ಕಣ್ಣ ರೌದ್ರಾಗ್ನಿಯಂತೆ
ಭುಗಿಲುಭುಗಿಲ್ಲೆನೆ ಕುದಿಯೆ ಕೆಂಬೊಗೆಯು
ನೆಗೆಯೆ ವಿಷಾನಿಲ ಗಗನವ ಕವಿಯೆ
ಪಟುವಹ್ನಿಯನು ಕೊಂಡು ಕೆಟ್ಟೋಡೆ ಭಾನು–
ವಲ್ಲಲ್ಲಿ ಬಿದ್ದವೀರೇಳು ಲೋಕಗಳು;

ಭೂಲೋಕದಲ್ಲೆಲ್ಲ ಕಲ್ಲೋಲವಾಯ್ತು
ಬಿದ್ದು ಮೂರ್ಛಿಸಿದವು ಜೀವಿಗಳೆಲ್ಲ
ಹುರಿಯೆ ಬಾಣಲೆಯಲ್ಲರಳು ಸಿಡಿದಂತೆ
ಧರಣಿಯ ಮೇಲೆ ಚೆಕ್ಕೆಗಳುದುರಿದವು;
ಹೊಗೆ ಕಂಡ ಮಾತ್ರದಿ ದಿಗಿಲಾಗಿ ವಿಗತ
ಚೇತನರಾದರು ದಿಗಧೀಶರೆಲ್ಲ
ತುಂಬಲು ಧೂಮ ಬ್ರಹ್ಮಾಂಡವೆನಲ್ಲ
ಗಿರಿಗಳು ತೋರಿದವಂಜನಾದ್ರಿಯೊಲು
ಬಡಬಾನಲ ಜಡಧಿಗಳು ಕಲಕಿದವು,
ಕಲ್ಪಾಂತಾಗ್ನಿಯೆನುತ ನಡುಗಿದ ಬ್ರಹ್ಮ

ನೀಲವರ್ಣವ ತಾನು ಕೈಕೊಂಡ ದಿನದ
ಹಾಲಾಹಲವಿದೆಂದು ಹರಿ ತಲ್ಲಣಿಸಿದ,
ಕತ್ತಿನ ವಿಷವೆಂತೊ ತಾ ಬಿಟ್ಟು ಬಂದು
ಕವಿಯಿತೆನ್ನುತ ರುದ್ರನತಿಭಯಪಟ್ಟ
ನೆಗೆಯಿತು ರುದ್ರನ ಫಾಲನೇತ್ರಾಗ್ನಿ–
ಯೆನೆ ಗಣಾಡಂಬರೋದ್ಯೋಗವು ತೋರ–
ಲಾಕಾಶ–ನೆಲಗಳು ಸೇರಿದವಿಂತು;
ಹಾಲಾಹಲಾಗ್ನಿಮಯವೆನಿಸಲಾಗ
ನಮ್ಮೇಶಭಕ್ತರ ಮಹಿಮೆಗಳೆಲ್ಲ
ಬೇಡರೆ, ಕೇಳಿರಿ, ಆವೇಶ ತೋರೆದು

ಕಂಡೆವು, ಕಾಣ್ಬೆವು, ಕೇಳ್ದೆವು ಇಲ್ಲ
ಇದ್ದೆವು ಇರಲಿಲ್ಲವೆಂಬುಕ್ತಿ ಬೇಡ-
ವಾರಯ್ಯಲಖಿಲ ಲೋಕಾಲೋಕಗಳಲಿ
ಪರಮೇಶಭಕ್ತರು ಪರಮಪಾವನರು,
ಅದ್ವಿತೀಯನು ಆ ಪಿನಾಕಿಯೆ ಕರ್ತ.
ಸದ್ವಿಧಿಯಿಂ ಪ್ರಸಾದಕೆ ಯೋಗ್ಯರಾವು;
ಇಂತಿದಲ್ಲವೆನುವಂಥಾ ದ್ರೋಹಿಗಳಿಗೆ
ಕಟ್ಟಿದೆ ತೊಡರನು ಕಾಲಕೂಟಾಗ್ನಿ
ಯಲಿ ಸುಟ್ಟು ಕಡಿಸುವೆ ಸಂದುಸಂದುಗಳ-
ನಿಳಿಸುವೆನವರನಧೋಗತಿಗೆನುತ ೧೨೬೦

ಚಲದಿಂದ ಬಸವಣ್ಣದಂಡನಾಯಕನು
ಚಂಡೇಶನುತನು ಶ್ರೀ ಸಂಗಮೇಶನಿಗೆ
ಸರ್ಪಾಂಕನಿಗೆ ತದ್ವಿಷವನು ಸದ್ಭಕ್ತಿ
ತೃಪ್ತಿಯಿಂದಲರಿ ಸಮರ್ಪಣೆಗೈದು
ಭರದಿಂದಲಾರೋಗಿಸಲು ತಿಳಿಸುತ್ತ
ವ್ಯಸನನಿವಾರಿತೋದ್ವೃತ್ತಿ ವಿಕಸಿಸ-
ಲಳುಕಿಲ್ಲದೆಯೆ ಕೊಪ್ಪರಿಗೆಗಳ ಸಾರಿ
ಪರಮಮಾಹೇಶ್ವರ ಪ್ರಕರವುಬ್ಬುತ್ತ-
ಲೆಂಜಲು 'ಬಹ್ವಪಿಸ್ತೋಕಮೇವಾಪಿ
ಶಿಷ್ಟಮನ್ನಂ ವಿಮಿಶ್ರಿತ'ವದೆಂದಿರಲು ೧೨೭೦

ಹೊಂಗಳಸಗಳಲಿ ಹೊಂಗಿಂಡಿಗಳಲಿ
ಹೊಂಗರ್ಪರಗಳಲಿ ಹೊಂಬಟ್ಟಲಿನಲಿ
ತಮತಮಗೇ ತಾವು ಬಡ್ಡಿಸಿಕೊಂಡು
ಮಾರಾರಿಗರ್ಪಿಸಿ ಮಹನೀಯತೆಯಲಿ
"ಚೆಲ್ಲದೆ ಕುಡಿಯಿರಿ ಚಿಕ್ಕಯ್ಯದೇವ
ಗಾಬರಿಗೊಳಬೇಡಿ ಸಂಗಯ್ಯದೇವ
ತರುವೆನು ಸೈರಿಸಿ ತ್ರಿಪುರಾರಿದೇವ
ದೂರಕೆ ಕುಳ್ಳಿರಿ ವಿಮಲಾತ್ಮದೇವ
ಕಾಲಕಂಠಯ್ಯಗೆ ಸಾಲದು ನಿದ್ದೆ
ಸಾಕುನೀ ಹೋಗು ನಿರಾಳದೇವಯ್ಯ ೧೨೮೦

ವೇಗವಿಂತೇಕೆ ವಿರೂಪಾಕ್ಷದೇವ
ಈ ಸೌಟಿನಲಿ ಸಾಕು ಭೋಗಯ್ಯಗಿನ್ನು

ಸಾಲದೇ, ತರಲೇನು ಶಂಕರಾಚಾರ್ಯ
ಫಾಲಲೋಚನ, ಹಿಡಿ ಹಿಡಿ, ಬಂದೆನಿಲ್ಲಿ-
ಯೆಷ್ಟಾದರಾಸ್ವಾದಿಸೈ ಪುರಾತಯ್ಯ
ಚಿಂತಿಸಬೇಡವೈ ಶಿವದೇವ ಇನ್ನು
ಉಳಿದಿದೆಯೋ ನೋಡು, ಜಗದೇವತಂದೆ
ನಗಗಳಿಗೈದುವೆಯಾ ಗಗನೇಶ!
ಕೊಂಕಿಸಬೇಡಯ್ಯ ಶಂಕರ ದೇವ
ಇನ್ನಷ್ಟು ತರಲೇನು, ಲೆಂಕಮಂಚಯ್ಯ?

ಸರಿಯೇ ಹೆಚ್ಚೆನ್ನಲು ಪರ್ವತದೇವ
ಜೊತೆಗೆ ಬಡಿಸಬೇಕು ಗುರುದೇವಗೀಗ
ಶಿವಶಿವ ತಣಿದನೀ ಚಿನ್ನದೇವಯ್ಯ
ಪ್ರವಿಮಲ ದೇವನು ಭಾಷೆ ಸಲ್ಲಿಸಿದ
ಮುದ್ದನಾಡದೆ ಹಿಡಿ ಮೂರ್ತಿದೇವಯ್ಯ!
ಕುಡಿಯುವೆಯೆಷ್ಟನು ಧೂರ್ಜಟಿದೇವ
ಸಂಭ್ರಮ ಪಡದಿರು ಸರ್ವಜ್ಞದೇವ!
ಕೆಂಭಾವಿ ಭೋಗಯ್ಯ, ಗೇಲಿಯೇ ನಿನಗೆ
ಮಿತಿಯ ನೀನರಿಯೆಯ ನಿಜಭಾವದೇವ!
ನಮಗೇನು ತಿಳಿವುದು ಮಹಲಿಂಗದೇವ

ಸಂತಸವೆ ನಿನಗೆ ಚಂದ್ರಶೇಖರನೆ?
ಯೋಚನೆಯೇಕೆ ನಿರ್ಮಲದೇವ ನಿನಗೆ?
ನುಸುಳಬೇಡವೊ ಕುಸುಮೇಶ್ವರ ನೀನು
ಸಡಗರವೇತಕೆ ಕಲ್ಲಿದೇವಯ್ಯ
ಸಡ್ಡೆಯಿಂತೇಕೆ ಸೊಡ್ಡಳದೇವ
ಬಡಿಸಲೆ ನಿನಗಷ್ಟು ದೊಡ್ಡಲಿಂಗಯ್ಯ
ಮೀಸಲು ತೀರಿಸು ಮಿಂಡಸಂಗಯ್ಯ
ಭಾಷೆ ನುಡಿಯದಿರು ಬಲ್ಲಾಳದೇವ!
ಹಸಿವಾರೆ ಕುಡಿಯಯ್ಯ ಕಲ್ಯಾಣದೇವ
ಕುಡಿಕೆಯ ತರಲೇನು ಗೊಲ್ಲವರಾಯ

ಬಹಳ ನೀರಡಿಕೆಯೆ ಶ್ರೀಗಿರಿನಾಥ
ಮುಷ್ಕರವೇಕಿದೆ ಮುದನೂರ ದಾಸಿ?
ಗಕ್ಕನೇ ಕುಡಿವನೀ ಕರಕಂಠದೇವ
ಬೆಕ್ಕಸಪಡಲೇಕೆ ವಿಮಲಾತ್ಮದೇವ!

ಗೊಗ್ಗವ್ವೆ ಮಹದೇವಿ ಗುಡ್ಡಲದೇವಿ
ದುಗ್ಗಳದೇವಿ ಸದ್ಯೋಜಾತದೇವಿ
ಅಮ್ಮವ್ವೆ ಸಕಳವ್ವೆಯಚಲದೇವಮ್ಮ
ನಿಮ್ಮವ್ವೆ ಶಾಂತವ್ವೆ ಬಮ್ಮಲದೇವಿ
ಕಾಳವ್ವೆ ಕೇತವ್ವೆ ಕಾಮಲದೇವಿ
ಷೋಡಶಿ ಬಸವಮ್ಮ ಸೋಮಲದೇವಿ

ಸಂಗವ್ವೆ ಶಿವದೇವಿ ಸಾಕಲದೇವಿ
ಲಿಂಗವ್ವೆ ರೆಬ್ಬವ್ವ ಮಂಗಳದೇವಿ
ಪ್ರಮಥವ್ವೆ ಬಾಚವ್ವೆ ಪದುಮಲದೇವಿ
ವಿಮಲವ್ವೆ ಚೆಲ್ಲವ್ವೆ ವೀರಭದ್ರವ್ವೆ
ಚಿಕ್ಕಲರಾಮವ್ವೆ ಸಿದ್ದಲದೇವಿ
ಅಕ್ಕವ್ವೆ ಚೋಳವ್ವೆಯಾನಂದದೇವಿ
ಹೊಲ್ಲವ್ವೆ ಕಲ್ಲವ್ವೆ ಹೊನ್ನಲದೇವಿ
ಹಲ್ಲವ್ವೆ ಮಲ್ಲವ್ವೆಯನಿಮಿಷದೇವಿ
ಕೇತಲದೇವಿ ಪುರಾತವ್ವೆ ನೀವು
ಬಂದಿಲ್ಲ ಕೂರಿರೀ ಪಂಕ್ತಿಯಲೆನುತ

ಸಲ್ಲೀಲೆಯಿಂ ಮತ್ತೆ ಚತುರತಾನ್ಯೋನ್ಯ
ಸಲ್ಲಾಪಸೂಕ್ತಿಯಿಂ ಸರಸವಾಗಿರುತ-
ಲಿಂಥ ಸಂದಣಿಯನೆಂದರಿಯೆವಾವೆನುತ
ದಿಟ್ಟನು ಬಸವಣ್ಣ ತಾ ಬಲ್ಲನೆನುತ
ತಮ್ಮಯ್ಯ ಹಸಿವಾರೆ ನೀಕುಡಿಯೆನುತ
ಈ ಮಾತುಗಳಿಗೆ ಮಿಕ್ಕಿದುದೇನುಯೆನುತ
ನೋಯಲು ಸಡಲಿಸೊಡ್ಯಾಣವನೆನುತ
ನಿನ್ನಾಣೆ ಹೊಟ್ಟೆಯು ತುಂಬಿತೇಯೆನುತ
ಹೊಟ್ಟೆಯು ಡೊಳ್ಳಾಗಿ ಬಿರಿವೆ ನೀನೆನುತ
ಹೊಟ್ಟೆಯೊಡೆಯೆ ಸಾಲದೇನಿನ್ನುಯೆನುತ

ಅಯ್ಯಗೆ ತಲೆವರೆಗಾಯ್ತು ಹೋಗೆನುತ
ಈಯಯ್ಯಗಿಷ್ಟರಲೇನಾಯ್ತುಯೆನುತ-
ಲಿದು ಹಿರಿದಲ್ಲವೋಯೀಯಯ್ಯಗೆನುತ
ಸಡಲಿಸಿ ಕಟ್ಟಿದ ವಸ್ತ್ರವನೆನುತ
ಹೋಗಲೀಯುವೆನೆ ನೀ ನುಸುಳಿದರೆನುತ
ಮಾಣಿಸು ಸರಸಗಳೆಮ್ಮೊಡನೆನುತ

ಆಯಯ್ಯ ನೋಡನೀಯಾಸ್ವಾದವೆನುತ
ನಿನ್ನಲ್ಲಿಯೆನಗೇನು ಹೋಗುವೆನೆನುತ
ಲುತ್ತಮಾಂಗದಲಿ ಓಯೆನ್ನೆಯೇಕೆನುತ-
ಚಿತ್ತವಿದ್ದಂತೆ ಹೇಳಿಕಳಿಸುಯೆನುತ

ಕಪ್ಪರ ತುಂಬಿತು ಹೊರಡು ನೀನೆನುತ-
ಪಾತ್ರೆಯ ತಂದು ಹೆಸರ ಹೇಳಿ ಕುಡಿಯೊ
ತಲೆದೂಗೆ ಬರದಿರು ತಂದೆ ನೀನೆನುತ-
ಲೆಮ್ಮೊಡನಾಗದು ವಾಗ್ವಾದವೆನುತ
ಹೊಟ್ಟೆಯು ಕೆಟ್ಟಿತು ಕಲುಬಿತ್ತುಯೆನುತ
ಬಣಗು ಮಾತುಗಳೇಕೆ ಪಂಕ್ತಿಯಲೆನುತ
ತಪ್ಪಿಹೋಹುದೆಯೂದಿ ಕುಡಿದರೆಯೆನುತ
ಕೊಪ್ಪರದಲಿ ಕತ್ತನೊಡ್ಡದಿರೆನುತ
ಹಾರಿಹೋಗದಲಾರೋಗಿಸು ನೀ ಬಾರೆನುತ-
ಲೊಳಿತಯ್ಯ ಬಲಿತನು ನಮ್ಮಯ್ಯನೆನುತ-

ಲೇಕೆ ತಂದಿಹೆ ಪತ್ರೆಯನ್ನಿಲ್ಲಿಯೆನುತ
ಮೇಲುಪಂಕ್ತಿಗೆ ನೀನೆ ಸಾಲದೇಯೆನುತ
ಓ ಅಯ್ಯ ತರಲೇನೊಂದಿಷ್ಟನೆನುತ್ತ
ನನ್ನಯ್ಯ ಸಾಕಪ್ಪ ನನಗಿನ್ನೆನುತ್ತ
ತೇಗದೆ ಹೋಗಲೆ ದೇವ ನಾನೆನುತ
ತೇಗದಿದ್ದರು ಕೂಡ ತೆರಹಿಲ್ಲವೆನುತ
ಪಾತ್ರೆತಟ್ಟೆಗಳವರೇ ಬನ್ನಿರೆನುತ
ಹೆಚ್ಚಿಗೆ ಬಡಿಸಿದೆ ತೇಲುವೆನೆನುತ
ಚೆಲ್ಲದೆ ಹಾರಯ್ಯ ಓಯಯ್ಯಯೆನುತ
ಚೆಲ್ಲಿದರಿರುವುದು ಬಸವನಿಗೆನುತ

ತೆರೆಯೊಳಗಿನ ಕೊಪ್ಪರಿಗೆ ತನ್ನಿರೆನುತ
ಹರಹರ, ಬಚ್ಚಿಟ್ಟೆ ನಿನಗೆ ನಾನೆನುತ"
ತರುತಲಿ ಬಡಿಸಲು ಕೂಗುತ ಭಕ್ತ
ಜನರನು ಕರೆತರುತನುರಾಗಲೀಲೆ-
ಯಿಂ ಶಿವಗರ್ಪಿಸಿ ಶಿವಶಿವಯೆನುತ-
ಲವಧಾನದಿಂದಲಿಯಾರೋಗಿಸುತ್ತ
ಸೊರ್ರುಸೊರೆನ್ನುತ ಹೀರುತ್ತ ಥರ್ರ
ಥರ್ರನೆ ತೇಗುತ ಕಾಲಚಾಚುತಲಿ

ನಿಲುಕುತ್ತ ನೀಳುತ್ತಲಕ್ಕಳಿಸುತಲಿ
ಸೊಕ್ಕುತ ಸೋಲುತ್ತ ಜಕ್ಕುಳಿಸುತಲಿ

ಗಾಬರಿಗೊಂಡು ರೆಪ್ಪೆಗಳ ಮುಚ್ಚುತಲಿ
ಗುಕ್ಕನು ನುಂಗುತ ಕುತ್ತಿಗೆವರೆಗೆ
ಕುಡಿಯುತ್ತಲಲರುತ್ತ ಕೂಗಾಡುತಾತ್ಮ
ಸೋಲುತ್ತ ಸುಖವಾರ್ಧಿಯಲಿ ತೇಲುತಾಸೆ-
ಗೊಲೆಯುತ್ತ ಮೆರೆಯುತ್ತ ವಕ್ಷಗಳಲ್ಲಿ-
ಯೊತ್ತಿ ಪಾತ್ರೆಯನಲ್ಲಿಗೊಯ್ಯನೆ ಮರಳಿ
ನೋಡುತ್ತ ತುಂಬುತುಂಬುತ ಬಗ್ಗಿಸುತ್ತ-
ಲೇಳುತ್ತ ನಲಿಯುತ್ತ ಲೀಲೆಯಲರಲು
ಆಡುತ್ತ ಕಪ್ಪರವಂಗೈಯಲಿಟ್ಟು
ಹಾಡುತ್ತ ಧುಮುಕುತ್ತ ಭಾರವ ಬಿಡುತ

ಕುಣಿಯುತ್ತ ಕುಲುಕುತ್ತ ಮುರುಕಗೈಯುತ್ತ-
ಲೊಂದೆ ಕಾಲಲಿ ನಿಂತು ಸರಸವಾಡುತ್ತ-
ಲೈತಂದು ಮೊಕ್ಕುತ ಕೈಗಳ ಚಾಚಿ
ಪ್ರೀತಿಯಿಂದ ಪ್ರಸಾದವನೀಸಿಕೊಳುತ
ಕರವನುರಕ್ತಿಯಿಂದಪ್ಪಿಕೊಳುತ್ತ-
ಲಚ್ಚರಿಯೆನೆ ಸ್ನೇಹದಿಂದಾರೋಗಿಸುತ-
ಲೊಬ್ಬರ ಮುಂದಿದ್ದ ಹರಿವಾಣಗಳನು
ಮತ್ತೊಬ್ಬರೆಸೆಯುತಲುಬ್ಬಿಯಾರುತ್ತ
ವಿಷಮಾಕ್ಷಸದ್ಭಕ್ತಿವಿತತಿಯೀ ರೀತಿ
ವಿಷಮವಿಕ್ರಮಲೀಲೆಯಿಂ ವಿಷಕೇಳಿ-

ಯಾಡಲು ಬಸವಣ್ಣದಂಡನಾಯಕನು
ಚಂಡೇಶವರದ ಪ್ರಸಾದಶೇಷವನು
ಕೊಟ್ಟಾರಗಳವರ ಚಾಮರದವರ
ಹೊಡೆವ ಬೋವಾರಿಗಾಲವಟ್ಟದವರಿಗೆ
ಪಟ್ಟದೇವರುಗಳ ಭ್ರಾತರ ಹಿತರ
ಅಡ್ಡೆಯ ಪಕ್ಕಲೆ ಸುತರ ಪೌತ್ರರನು
ಬಂಡಾರಿಗಳ ಬಾಣಸಿಗ ಹೆಗ್ಗಡೆಗಳ
ದಂಡನಾಯಕರನು ತಂತ್ರಪಾಲಕರ
ದಾಸ ಜನರನು ವಿಶ್ವಾಸಿ ಭಟರನು
ದಾಸೀ ಜನರನು ವಿಲಾಸಿನೀಜನರ

ತತವಿತತಾದಿ ವಾದ್ಯವಿಶಾರದರನು
ಚತುರಗಾಯಕ ನಿಜಸ್ತವಗಾಯಕರನು
ಪಂಡಿತ ನರ್ತಕ ಪರಿಹಾಸಕರನ–
ಮಂಡಿತ ಸತ್ಕಮಿಮಂಡಲಿಯನ್ನು
ಪಂಕ್ತಿಗಳಾಗಿಸಿ ಹಂಚಿಯವರಿಗೆ
ಚಿಂತೆಯ ಮಾಡದೆ ವಿಷವ ಸುರಿಯಲು
ಕಾಲಕೂಟವವರ ಪಾಲಿಗೆ ತುಪ್ಪ
ಹಾಲುಗಳಾಗಿರೆ ಬಸವಣ್ಣ ಮತ್ತೆ
ಕಾಲಾಗ್ನಿರುದ್ರನ ಗಣನಾಥ ತನ್ನಿ
ಕೋಲಾಹಲವನೀಗ ಕುಂಜರೋತ್ತಂಸ

ಗಂಗಾಧರಪ್ರಿಯ ಸಾಗರವಿಜಯ
ಲಿಂಗಸನ್ನಾಹವು ಮಂಗಳಕೀರ್ತಿ
ಚೌದಂತತಿಲಕವು ಜಗದೇಕವೀರ
ಭವದುಃಖಭಂಜನ ಪಂಚ್ಯಾಸಬಲನ–
ನಂತಕದರ್ಪಸಂಹಾರ ದುರ್ವಿಪ್ರ–
ದಂತಭಗ್ನನನು ಸದಾಶಿವಮೂರ್ತಿ
ಭದ್ರೇಭಸುಂದರ ಪರವಾದಿವೀರ
ವಿದ್ರಾವಣದ ವೀರಭದ್ರಾವತಾರ–
ನಪ್ರಮತ್ತನ ತ್ರಿಪುರಾತಂಕ ಜಂಗ–
ಮಪ್ರಸಾದವ ತನ್ನಿ ಮಾವಂತರುಗಳೆ!

ಎನುತ ಹೆಸರ ಹೇಳಿ ಕರೆಯುತಲಿದ್ದ
ವಿನುತೇಭತತಿಯನುದ್ವೃತ್ತಿಯಿಂ ತರಿಸಿ–
ಯಪ್ರತಿಬಲ ಹಯರಾಜನ ತನ್ನಿ
ಸುಪ್ರಸನ್ನನ ಸುಭಗನನೀಗ ತನ್ನಿ
ಧರ್ಮಕೀರ್ತಿಯ ತವರಾಜನ ತನ್ನಿ
ಕರ್ಮಸಂಹರನ ನಿರ್ಮಲನನು ತನ್ನಿ
ವಾಯುವೇಗನ ತನ್ನಿ ವರದನ ತನ್ನಿ
ದಾಯರಂಪವನು ತತ್ವಜ್ಞನ ತನ್ನಿ
ಸೃಷ್ಟಿಪಾಲಕನ ಚಿತ್ರಾಂಗನ ತನ್ನಿ
ದುಷ್ಟಮರ್ದನನ ದುರ್ದಾಂತನ ತನ್ನಿ

ಚಂದ್ರಾತಪನನು ಶಾಶ್ವತನನು ತನ್ನಿ
ಇಂದ್ರಾಯುಧವನೀಶಾನವನೀಗ ತನ್ನಿ

ಚೇರಮ ಪ್ರಿಯನ ಶೃಂಗಾರಿಯ ತನ್ನಿ
ವಾರಣಾಸಿಯ ತನ್ನಿ ವಾಹಕರುಗಳೆ
ಎನುತ ಹೆಸರ ಹೇಳಿ ಕರೆಯುತಲಿದ್ದ
ವಿನುತಾಶ್ವತತಿಯನುದ್ವೃತ್ತಿಯಿಂ ತರಿಸಿ
ಜೊತೆಜೊತೆಗಾನೆಕುದುರೆಗಳಿಗೆಲ್ಲ
ಪ್ರೀತಿಯಿಂ ಕುಡಿಸಲು ವಿಷವೆಲ್ಲ ಸವೆಯ–
ಲಳುತಲಿ ಬೇಡರು ಗಡಗಡ ನಡುಗೆ
ಮೃಡಭಕ್ತಮಂಡಳಿ ಮೆಚ್ಚಿ ಕೀರ್ತಿಸಲು

ಪ್ರಮಥಕಾರುಣ್ಯ ವಿಸ್ಫಾರಪ್ರಸಾದ
ವಿಮಲಪುಷ್ಪಾಂಚಿತವೃಷ್ಟಿಯು ಸುರಿಯೆ
ಗಗನಸ್ಥರಹ ರುದ್ರಗಣಗಳು ನೋಡೆ
ದಿವ್ಯದುಂದುಭಿಗಳವೊಮ್ಮೆಗೆ ಮೊಳಗೆ
ಬಿಜ್ಜಳನದ್ಭುತೋಪೇತದಿ ಮೊಕ್ಕ–
ಲಾಜನೌಘವುವೊಂದೆ ಸಮ ಜಯವಿಡಲು
ಭವಲತಾಂಚಿತದಾತ್ರ ಪರಮಪವಿತ್ರ
ಶಿವಗಣಸ್ತೋತ್ರ ವಿಶಿಷ್ಟಚಾರಿತ್ರ
ಸದಮಲಗಾತ್ರ ಪ್ರಸಾದೈಕಪಾತ್ರ
ವಿದಿತ ಸಜ್ಜನ ಮಿತ್ರ ವಿಜ್ಞಾನನೇತ್ರ

ಪ್ರೋದ್ಗತ ಸೂತ್ರ ಮಹದ್ಗುರುಪುತ್ರ
ಸದ್ಗುಣೈಕಚ್ಛತ್ರ ಜಂಗಮಕ್ಷೇತ್ರ–
ವತಿದಯಾ ಮಾತ್ರ ದುಃಖಾಬ್ಧಿವಹಿತ್ರ
ಪ್ರತಿವಾದಿಚೈತ್ರ ಸದ್ಭಕ್ತಿಕಳತ್ರ
ಘನ'ವರಿರ್ಮಿತ್ರಂ ವಿಷಂ ಪಥ್ಯ'ವೆಂದು
ಮೆರೆವ ಶ್ರುತ್ಯುಕ್ತಿ ಬಸವ ನಿನಗಾಯ್ತು!
ಭಾಪುರೇ ತಂದೆಯೆ ಭಕ್ತಿವರ್ಧನನೆ
ಭಾಪುರೇ ನಮ್ಮಯ್ಯ ಖ್ಯಾಪಿತ ಶೌರ್ಯ
ಭಳಿರಯ್ಯ ಬಸವನನಶ್ವರ ಕೀರ್ತಿ

ಗರಳವ ಮುನ್ನ ಜಗದ್ಧಿತಾರ್ಥದಲಿ
ಹರನಾರೋಗಿಸಿ ನುಂಗೆ ತಾ ಹೆದರಲ್ಲಿ
ನಿಂತಿತಲ್ಲವೆ ವಿಷವವನ ಕಂಠದಲಿ
ನಮ್ಮ ದೇವನ ಮಾಹಾತ್ಮ್ಯವದೆಷ್ಟು ಹಿರಿದು!
ಕಾಲಕೂಟಕ್ಕಿಂತ ಕಟ್ಟುಗ್ರ ವಿಷವ

ತಾ ಲೆಕ್ಕಮಾಡದೆ ದಂಡನಾಯಕನು
ಅಂಚಿತಭಕ್ತ ಹಿತಾರ್ಥದಿಂ ವಂಚ-
ನೆಯಿರದಾರೋಗಿಸಿದನು ಹೊಟ್ಟೆ ತುಂಬ
ಅಮೃತವ ಕುಡಿದರೂ ಅಮರಸಂಘವದು
ಸಮಸುಪ್ತಿಯೊಂದಿತು ಜಗವೆಲ್ಲವರಿಯೆ

ಬಸವನ ನೋಡು ಆ ವಿಷವ ಕುಡಿದರು
ಅಸಮಾನಲೀಲೆಯಿಂ ದಿವ್ಯಾಂಗನಾದ-
ನೆನುತ ಲೋಕಗಳೆಲ್ಲವಚ್ಚರಿವಡುತ
ವಿನುತಿಸೆ ಬೇಡರು ವಿಭ್ರಾಂತಿಯೊಂದಿ
ಸಂತಾಪಚಿತ್ತದಿಂ ಸಂಸ್ತುತಿಸುತಲ-
ಡಿಗಡಿಗೆ ಸಾಷ್ಟಾಂಗರಾಗುತ ಮೊಕ್ಕಿ
"ಅಭಯವ್ವೆ ಬಸವಯ್ಯನತಿಕೃಪಾಂಬೋಧಿ!
ಅಭಯವ್ವೆ ಬಸವಯ್ಯನದ್ಭುತ ಚರಿತ!
ನಿಮ್ಮಡಿ ಸಮ ಬರುವೆವೆ ಬಸವಯ್ಯ
ನಮ್ಮ ಸೋಲಿಸಲಿದು ಶೌರ್ಯವೇ ನಿನಗೆ!

ದುರ್ಜನರೊಂದಿಗಿನಾ ಸ್ನೇಹಕಿಂತ
ಬಹು ಮೇಲೆನುವರು ಸಜ್ಜನವಿರೋಧವದು
ಅದರಿಂದಲೆಮ್ಮನೀ ಕಾಯುತ ಸಲಹು-
ತೆಮ್ಮ ವಿಕಳತೆಯ ತೆಗೆದಾಶೀರ್ವದಿಸು
ದೇವ, ದೆಸೆಯು ದಿಕ್ಕು ನೀನೆಮ"ಗೆನುತ
ನಾನಾ ವಿಧದಲಿಂತು ಬಿನ್ನವಿಸುತಿರೆ
ಕಂಡನು ದಯೆಯಿಂದ ಕಾಯ್ದು ಶರಣೆನೆ;
ತೊಡೆದ ವಾದಗಳನು ನೆಯ್ದು ಪ್ರಖ್ಯಾತಿ
ಮಾಣ್ದು ಚೇಡರ ಪೆಂಪನಿತ್ತ ಪ್ರಸಾದ-
ವಿಲ್ಲೆಂದು ನೂಕಿಯೋಡಿಸಿದ ಬೇಡರನು;

ನಿಂತನು ಚಲಿಸದೆ ತಿಳಿದ ಪ್ರಸ್ತವವ
ಗೆದ್ದ ಸದ್ಭಕ್ತಿಯಿಂ ಮೆರೆದ ವೀರದಲಿ
ಒಲಿಸಿ ಭಕ್ತಾಳಿಯನೊಲಿದನಾದ್ಯೋಕ್ತಿ
ತೋರ್ದ ಸನ್ಮಾರ್ಗವ ಗೆಲಿದ ತರ್ಕದಲಿ
ಹರಡಿದ ನಿಶ್ಚಲಭಕ್ತಿ ಲೋಕದಲಿ
ತುಂಬಿದ ಬಸವಣ್ಣ ನಿರ್ಮಲಕೀರ್ತಿ

## ಜಗದೇವ ದಂಡನಾಯಕನ ಕಥೆ

ಮತ್ತೆಯು ಜಗದೇವ ದಂಡನಾಯಕನು
ತುಂಬಿದ ಸದ್ಭಕ್ತಿನಿಧಿ ಕರ್ಮಯೋಗಿ-
ಯಭಿಮತ ಲೀಲೆಯಿಂ ವಿಭವವ ಮೆರೆದು
ಶುಭಕಾರ್ಯವಾಚರಿಸುತಲೊಂದು ದಿವಸ-

ವೈತಂದು ವೀರಮಾಹೇಶ್ವರ ತಿಲಕ
ಪ್ರೀತಿಯಿಂದಲಿ ವಿಭೂತಿಯನು ಕೈಕೊಂಡು
"ನಮ್ಮಯ ಮನೆಯಲಾರೋಗಿಸಲಧಿಕ
ಬಸವಣ್ಣಮಂತ್ರಿ, ನಾ ಬದುಕುವೆ"ನೆನಲು
ನಗುಮೊಗವರಳುತ ಬಲದೇವಮಂತ್ರಿ-
ಯನು ನೋಡಿ ಬಸವಯ್ಯ "ಹಾಗಿರೆ ಕೇಳು
ಸರ್ವಜ್ಞರಾಗಿಹ ಶರಣರ ಬರವ
ಸೈರಿಸಲಾಪೆಯೇನೆಂದು ನೀ"ನೆನಲು
ಅಂತಾಗಲೆನ್ನುತ ಭರದಿಂದ ಹೋಗಿ
ವಿವಿಧ ಪಕ್ವಾನ್ನಾದಿವಿತತಿಯನಟ್ಟು

ಸರಸರ ಬಸವಯ್ಯ ಬಾರದ ಮುನ್ನ
ಕರಮಭಿಷೇಕವ ಮಾಡುವೆನೆನುತ
ಸಂಭ್ರಮದಿಂದಲಿ ಸದ್ಭಕ್ತಿಯುಕ್ತಿ-
ಯರಿಯದೆ ಹಾರ್ವರ ಕಾಲ್ಗಳ ತೊಳೆಯೆ
ಪರಿಚಾರನಿಂದಿದ ಬಸವಯ್ಯ ತಿಳಿದು
ಹೋಗದೆ ನಿಂತು ತಾನಾಗ್ರಹಿಸುತಿರೆ
ಜಗದೇವನನಿತರಲ್ಲೈತರೆ ಕಂಡು
ಭಗ್ಗನೆ ಕೋಪಾಗ್ನಿಯೊಗೆಯಲು ಮುಂದೆ
ತೆರೆಯನು ಹಾಕಿಸಿಯೊಳಗೆಂತು ಬರುವೆ
ಹೊರಡು ಭಕ್ತಜನಾವಳಿಯನು ನೀ ಬಿಟ್ಟು

ಕುಲದೈವ ಮನೆದೈವ ಮಲಹರನಿರಲು
ಬಲುಮಾರ್ಗದಲಿ ಹೋಗೆ ತಕ್ಕುದೆ ನಿನಗೆ
ಕರಕಂತ ಶುದ್ಧನಿಷ್ಕಲ ಭಕ್ತಿಯುಕ್ತಿ
ಜರಭರಿಗೆಂತದು ಸರಿಯಾಯ್ತು ಹೇಳು?
ಮೂಲೋಕನಾಥನ ಮುಟ್ಟಿ ಪೂಜಿಸುತ
ದುಷ್ಟಲೋಗರಿಗೆ ಬೋನವ ನೀಡಬಹುದೆ!

ಹರನಿಗೆ ಮಜ್ಜನವೆರೆದೆ ಕೈಗಳನು
ಸರವಿ ವಿಪ್ರರಕಾಲ್ಗಳ ತೊಳೆಯಬಹುದೆ?
ಶಿವಪಾದಜಲವನು ಶಿರದಲಿ ತಳೆದು
ಭವಿಗಳ ಕಾಲನೀರನು ತಳಿಯುವರೆ?

ಶ್ರೀ ಮಹಾದೇವನ ಪೂಜಿಪ ಕೈಯಿ-
ನಾ ಹೊಲೆನಾಯ್ಗಳನರ್ಚಿಸಬಹುದೆ?
ಮುರಹರಾರ್ಚಿತಗೆ ಮುನ್ನೆತ್ತಿದ ಕೈಯ-
ನೆತ್ತಬಹುದೆ ನೇಣಹೊಲೆಯರುಗಳಿಗೆ?
ಸದಮಲಲಿಂಗಪ್ರಸಾದ ಜೀವನಿಗೆ
ವಿದಿತವೀಶ್ವರಭಕ್ತಿ ವಿಮುಖರಾದಂಥ
ಕರ್ಮಚಂಡಾಲರ ಸೇರಿ ಸೇವಿಸಲು
ಕರ್ಮವನುಂಡಂತಾಯಿತ್ತು, ಎಂತೆನಲು
ತಾನದು ದಿವ್ಯಾಗಮಾರ್ಥಗಳಲ್ಲಿ
ಮದನಾರಿ ಸದ್ಭಕ್ತಮಂದಿರಗಳಲಿ

ಇರುವ ಪುತ್ರಕಳತ್ರಮಿತ್ರಗೋತ್ರಾದಿ
ಬಳಗ ಲಿಂಗಾನ್ವಿತರಾಗದೆಯಿರಲು
ತಾನೊಂದಾಗಿಂತು ಕೂಡಿದ್ದರೆ ಸಾಕು
ಚಂಡಾಲ ಮಿಶ್ರದೋಷವು ಬೆನ್ನೇರುವುದು;
'ದರ್ಶನಾದಪಿ ಪಾಪ'ವೆನ್ನುತಲಿರಲು
ದರ್ಶನಾಲಾಪ ಸಂಸ್ಪರ್ಶನ ಶಯನ
ಸಂಪರ್ಕಭೋಜನಾಸನ ದಾನಗಳಿಗೆ
ಇಚ್ಛೈಸುವನೆ ಭಕ್ತನಿತರರ ಜೊತೆಗೆ?
ಪಶುಪತಿ ಭಕ್ತಿಪಥವ ಹೇಳಲೇನು
ಪಶುಗಳ ಸದ್ಭಕ್ತಿಪರಮಾಡದೇನು?

ಏಲೇಶ್ವರ ಕೇತಯ್ಯನ ಕಥೆ

ಖ್ಯಾತನೇಲೇಶ್ವರ ಕೇತಯ್ಯನೆಂಬ
ಜಾತಭಕ್ತನ ತಚ್ಚರಿತೆಯೆಂತೆಂದೆನಲು:
ಚಿತ್ರವತ್ಯದ್ಭುತ ಶೀಲಪ್ರಯುಕ್ತಿ
ಪುತ್ರಮಿತ್ರಕಳತ್ರಗೋತ್ರವರ್ಗಗಳು
ದಾಸನೆ ಬಂಟ ಗೋಪಾಲನೆ ಪಶುವು
ಶ್ವಾನವು ಮತ್ತೆ ಮಾರ್ಜಾಲ ಮಾದಿಗನು

ಗೃಹಚಾರಕರೆನಲ್ಲ ಮಹನೀಯಲೀಲೆ
ಯಿಂ ಪ್ರಾಣಲಿಂಗಸನ್ನಿಹಿತರಗೈದು
ತಾನೆಂದು ಭವಿಗಳ ನೆನೆಯನು ಅವರ
ನೋಡನು ಮಾತನಾಡನು ಮಾತ ಕೇಳ

ಮುಟ್ಟನವರ ಸೀಮೆಯನು ಮೆಟ್ಟನವರಿ–
ಗೀಯನು ಅವರಿಂದಲೀಸಿಕೊಳ್ಳನವ
ಬಿಲಿಯನು ತಾ ಮಾರನೆಷ್ಟು ಭಾಗ್ಯವಿರೆ
ಹೋಗನೆರವನೀಯ ಕಡವೀಸಿಕೊಳನು,
ತಾನಾಗಿ ಪಡೆಯನಿಷ್ಟಕ್ಕೇನುಯೆನ್ನ
ಮಾಣದಲಿಷ್ಟವಾದರು ಬಿಡನವನು
ಭವಿಪರಿತಾಗಿಯಾಗುತ ಪ್ರವರ್ತಿಸಲು
ಶಿವಭಕ್ತರಿಗಿದುವೆ ಶಿಷ್ಯತ್ವವೆನುತ–
ಲಿಂತು ವರ್ತಿಸುವನೇಲೇಶಕೇತಯ್ಯ
ನೆಟ್ಟನೆ ಶಿವಭಕ್ತಿ ನೀತಿಯಿಂ ಜನರು

ಎಡೆಯೆಡೆಗೊಂದೊಂದಕಡ್ಡಿ ಮಾಡುತಿರೆ
ಕಂಗೆಡದಾಯಯ್ಯ ನಡೆಯುತ್ತಲಿರಲು
ಈಯನು ಭವಿಗಳಿಂ ತಾನು ಪಡೆಯನು
ಕೇಳನು ಭಕ್ತ ತಾನೆನುತಲಿನ್ನೇನ
ಬಿತ್ತಲು ಹದವಾದ ನೆಲದಿ ಬೀಜವನು
ಬಿತ್ತನೆಗೈವನೆ ನೋಡೋಣವೆನುತ
ಭರದಿ ಬೀಜದ ಮಂದಿರಕೆ ಕಿಚ್ಚನಿಟ್ಟು
ಅಲರುತ ದ್ರೋಹಿಗಳೆಲ್ಲ ವೀಕ್ಷಿಸಲು
ಏಲೇಶ ಕೇತಯ್ಯನರಿದು ನಗುತ್ತ
ಸುಟ್ಟರೇನಾಯ್ತೆಂದು ಗಕ್ಕನೆಯಲ್ಲಿ

ನೀರನು ಬಿಂದಿಗೆಗಳ ತುಂಬಿ ತರಿಸ–
ಲಾರದೆಯಿರೆ ಕೈಯಲೆಲ್ಲವ ಗುಡಿಸಿ
ಬಿತ್ತನೆ ಮಾಡಿಸಿ ಸಾವಿರ ಪಟ್ಟು
ಬೆಳೆಯ ತೆಗೆದನನುರಾಗ ಲೀಲೆಯಲಿ;
ಹಿಳ್ಳಹಾಳದ ಬ್ರಹ್ಮನೆನುವನ ಮಹಿಮೆ
ಹೇಳೆ ವಿಚಿತ್ರವು ಬೀಜ ಬಿತ್ತದಲೆ
ನೆಲದಿ ಬೆಳೆದನೆಂದು ಕೇಳ್ದ ಕಥೆಯನು
ತಾನಿವರಿಂದಲಿ ಕಾಣುವಂತಾಯ್ತು;

ಮದನಾರಿಭಕ್ತರ ಮಹಿಮೆಯ ತಿಳಿಯ-
ಲಿದು ಚೋದ್ಯವೇಯೆಂದು ಬುಧರೆಲ್ಲ ಹೊಗಳೆ

ಬಿಡದಲೆ ಮತ್ತೆಯು ಪಾಪಿಷ್ಠರಾದ
ಜನರೆಲ್ಲ ಹೋಗಲಸಹ್ಯಭಾವದಲಿ
ಹಸುವೆಲ್ಲಿ ತಾನೆಲ್ಲಿ ಭಕ್ತಿಯೆಲ್ಲಿ ಜಗ
ಪಸರಿಸ ಕೊಡುವ ಕಾಣಿಕೆಯಲ್ಲದೆನುತ
ಜಂತ್ರವಗ್ಗೆಯುತ ಬೇಗ ಚೋರರಿಗೆ
ಯಂತ್ರಿಸಿ ಹಸುಗಳ ತಾವು ಹಿಡಿಸಲು
ಬಿಡದಲೊಂದಾದರು ತಪ್ಪದೆಯಿರಲು
ಹೊಲದ ಹಸುಗಳನು ಹೊಲದಲಿ ಬಿಟ್ಟು
ತಾವಂತು ಹೊಡೆದು ಕೊಂಡೊಯ್ಯುತ್ತಲಿರಲು
ಪ್ರಾಣನಾಥನನಲ್ಲಿಯಿರಿಸಿ ಪಶುಗಳ

ಹಣ್ಣಾದ ಹೊಲಗಳ ಗಿಡ ಹುಲ್ಲುಗಳಲಿ
ತುಂಬಿದ ಕುಂಟೆಗಳಲಿ ನೀರಿನ ಬಳಿ
ಮರೆತಾದರೂ ಹುಲ್ಲ ಮೇಯದೆ ನೀರ
ಬಳಿಬಂದು ಮೂತಿಗಳನ್ನು ತೋಯಿಸದೆ
ಏಳು ದಿವಸಗಳೀ ರೀತಿ ಸಲ್ಲುತಿರೆ
ನೋಡಲಕ್ಕಜವೊಂದಿ ಚೋರರೂಹಿಸುತ-
ಲೇನಿದೊ ಚೋದ್ಯವೊ ಇವುಗಳ ಹಿಡಿದು
ತಂದಾಗಿನಿಂ ಮೇಯವೀಂಟವು ನೀರು
ಇದ್ದರೂ ಫಲವೇನಿಂತೆರಡು ಮೂರು ದಿನ-
ಗಳಿರಲು ಸಾಯ್ಯುವು ತಾವೊಂದಿಲ್ಲಿರದೆ

ಬರಿ ಕರ್ಮವನ್ನೇಕೆ ಕಟ್ಟಿಕೊಳ್ಳೋಣ-
ವೀಗಿರುವಂತೆ ಹೋಗಲಿಯೆಂದು ಬಿಡಲು
ಗಕ್ಕನೆ ಮರಳಿಯುಬ್ಬುತ ದಾರಿಯಲ್ಲಿ
ನಿಲ್ಲದಲೆಲ್ಲಿಯು ನೆಗೆದು ಹಾರುತ್ತ
ಬಾಲವ ಬೆನ್ನುಗಳಲ್ಲಿ ಸೇರಿಸುತ
ನಲಿಯುತ ಬಂದ ದಾರಿಯ ತಪ್ಪದಂತೆ-
ಯೇಳುದಿನದ ಮುನ್ನ ಬಂದ ಹಾದಿಯನು
ಏಳುಜಾಲಕೆ ಕೂಡಿ ಸವೆಸಲುಯಿಲ್ಲಿ
ಏಲೇಶ ಕೇತಯ್ಯ ದೂರದಿಂ ತಾನು
ಕೀಲಾರವಂ ಕಂಡು ಕಿನಿಸುತ ದೊಡ್ಡಿ

ಬಾಗಲಿಕ್ಕುತ ವ್ರತಭ್ರಷ್ಟರ ದಿಕ್ಕ
ನುಡಿಯಲು ನೋಡಲು ಪಾತಕವಹುದು,
ಹುಗದಂತೆ ನೂಕಲು ಸೊಪ್ಪೆ ಹುಲ್ಲುಗಳ
ಪರರಯ್ಯೋಯೆನ್ನುತ ಬಳಿಯಲ್ಲಿ ಹಾಕೆ
ಸೊಪ್ಪ ದಿಕ್ಕನು ಕೂಡ ನೋಡದೆ, ವ್ರತವು
ತಪ್ಪಿತಯ್ಯಾಯೆಂದು ತಾವರಚುವೊಲು
ಸ್ವರವೆತ್ತಿ ಕೂಡಿಯಂಬೇಯೆನ್ನುತರಚಿ
ತಲೆಯೆತ್ತಿ ಬಾಗಿ ನಾಲಗೆಯ ಚಾಚುವುವು,
ತಡಿಕೆಯ ಮೇಲೆ ಮೂತಿಗಳಿಟ್ಟು ನಗರ
ಸುತ್ತಲು ಚರಿಸುತ್ತಲರಡರಲು ಶೋಕ

ದೊಡ್ಡಿಯೊಳಗೆ ಎಂದಿನಂತೆ ಭಜಿಸಲು
ದೊಡ್ಡಲಿಂಗವ ಬಗ್ಗಿ ಬಗ್ಗಿ ನೋಡುತ್ತ
ದಾಟಲು ತಲೆಹೊಯ್ದು ದರ್ಪವು ಹೆಚ್ಚಿ
ದಾಟಲಾರದಲೆ ಕೇತಯ್ಯ ಬಾರೆನದೆ
ಪಶುಗಳೀ ರೀತಿಯಿಂ ತಹತಹ ಪಡುತಿ–
ರಲೊಳಗೆ ಕಟ್ಟಿದ ಕರುಗಳಿಂತರಿದು
ತಪ್ಪಿದುವೆಮ್ಮಯ ತಾಯ್ಗಳು ನಿಯಮ–
ವೀರೀತಿಯರಚಿದಲಾದರಿಸದಿರೆ
ಕರುಗಳ ತಡವುತ್ತಲಿರಲು ಕೇತಯ್ಯ
ಕವಿದರಚುತ ಮೇವ ಮುಟ್ಟದೆಯಿರಲು

ಶೀಲದಿ ತಪ್ಪಿಲ್ಲವೆಂಬುದನರಿದು
ನೋಡಿದರತ್ಯದ್ಭುತಾಕ್ರಾಂತರಾಗೆ
ಬಾಗಿಲ ತೆರೆಸಲಲರುತ ಪಶುಗಳು
ಬಲುವೇಗದಿಂ ಬಂದು ಬಂದು ಒಂದೊಂದ
ನೂಕುತಲುಜ್ಜುತ ಪರಿತಾಪಪಡುತ
ಹೊಳೆವ ಕಂಗಳ ತೆಗೆತೆಗೆದು ನೋಡುತ್ತ
ತಲೆಗಳ ಲಿಂಗಕೆ ತಾಕಿಸಿಕೊಳುತ
ಬಲಗೊಂಡು ಬರುತಲಿ ಮೂಸಿನೋಡುತ್ತ–
ಲಿತ್ತ ಲಿಂಗಮುಖವಾಗುತ್ತ ಹೋಗಿ–
ಯಲ್ಲಿನ ಸೊಪ್ಪೆಯ ತಿನ್ನದಿದ್ದದ್ದು

ಸತ್ಯ ನಿಮ್ಮಯಲಿಂಗ ಸಾಕ್ಷಿಯೆಂಬಂತೆ
ನಿತ್ಯ ಲಿಂಗಸ್ಪರ್ಶ ನಿಯಮವ ಸಲಿಸಿ

ಗಕ್ಕನೆ ಕೇತಯ್ಯಗಳ ಪಾದಗಳಿಗೆ
ತಾವಿಷ್ಟು ಬಾಗುತ್ತ ಮೊಕ್ಕುತಾಕ್ಷಣವೆ
ಮುಪ್ಪುರಿಗೊಂಡೋಡಿ ಸೊಪ್ಪೆಹುಲ್ಲುಗಳ-
ನಾಗ ತಮ್ಮಯ ಹೊಟ್ಟೆತುಂಬ ಮೇಯುತಲಿ
ಎಡೆಯೆಡೆಗುದಕವನ್ನೈದು ಕುಡಿಯುತ
ಮೈನೆಕ್ಕಿಕೊಳುತಲಿ ಮಲಗಿಯೇಳುತ್ತ
ಕೆಚ್ಚಲು ಸೊರೆಯಲಗ್ಗಳಿಸೆ ಪ್ರೀತಿಯಲಿ
ಮುದದಿಂದಬೇಯೆಂದು ಮುಂದ್ಯೆದರಚಲು

ಪಶುಗಳ ಕೇತಯ್ಯ ಕೈಕೊಳುತಿರಲು
ಕರುಗಳರಿತು ನಿಲ್ಲದರಚುತಲಿರಲು
ಬಿಡಲು ತಾಯ್ಗಳು ಚಾಚಿ ಕೊಡುತಿರೆ ನಿಯತಿ-
ಯಿಂದಡರಿದುವೆಲ್ಲವದು ತಾನೆಂತೆನಲು
ಏಲೇಶಕೇತಯ್ಯನ ಮನೆ ಪಶುಗಳು
ಪಾಲಿಸುತಲಿ ಶಿವಭಕ್ತಿಯ ನಿಯತಿ-
ಯಿಂದಿತರರ ಕೂಡಿರುವುದದು ವಿಧಿಯೆ
ಭಾವಿಸಲಿದು ಗುರುಮಾರ್ಗವೆ ಹೇಳು

**ಸವರದ ನಾಚಯ್ಯನ ಕಥೆ**

ಹಿಂದೆ ಸವರದ ನಾಚಯ್ಯನ ಸತಿಗೆ
ಅವಳಿಗಳುದಯಿಸುವುದಕಿಂತ ಮುನ್ನ

ಹುಟ್ಟಿದ ಬಾಲಕಿಗೊಂದು ಲಿಂಗವನು
ಹುಟ್ಟಿದ ತಕ್ಷಣ ಭರದಿಂದರ್ಪಿಸಲು
ಮುಂದಿನ ಬಾಲಗೆ ಬೇರೊಂದು ಲಿಂಗ-
ವನು ಕಟ್ಟದಿರಲಾಗಲದನು ಹೆಂಡತಿಯು
ಪತಿಗೆ ತಾ ಹೇಳಲು ಪಥಹೀನನಾದ
ಸುತನನೆಸೆದು ಬಿಡು ನೋಡೆ ನಿಷಿದ್ಧ
ಶರಣೊಕ್ತಿ ಗುರುಲಿಂಗ ಸನ್ನಿಹಿತವದು
ಸುತನರ್ಥೋದಯದ ಸಮಯದಲೆಯಿಲ್ಲ-
ವೆನೆ ನಾಚಿದೇವಯ್ಯನಖಿಲರರಿಯಲು
ಮಗನನು ತೊರೆದನೆನುತ್ತಲಾದ್ಯೋಕ್ತಿ

ಮಾರ್ಗಗಳಿರಲು ಕುಮಾರ್ಗವ ಹಿಡಿಯೆ
ಮಾರ್ಗವೆ? ಈ ಕುಮಾರ್ಗಿಗಳನು ಸೇರೆ

ಪಶುಪಾಶುಪತಿಯಿರೆ ಪಶುಗಳ ಕೊಲುವ
ಪಶುಜೀವಿಗಳಿಗೀಗ ಹಂದೆಗಳನ್ನು
ಹಿಡಿಯುತ್ತ ಮೂಗು ಮೊಂಡಾಗಲು ಕೊಯ್ದು
ಇಟ್ಟಿಗೆಯಿಂದಲೊರಸದೆ ಬಿಡುವನೆ?
ಖಂಡೇಂದುಧರನಿಂಥ ಕರ್ಮಿಗಳೊಡನೆ
ಇರುವನೇನೆಮ್ಮ ಭಕ್ತರ ಜೊತೆಯಿರದೆ?
ಆರಯ್ಯೆ ಶುದ್ಧ ಶಿವಾಚಾರ ಮಹಿಮೆ-
ಯನ್ನರಿಯಲು, ನೀಚ, ನಿನಗೆಂತು ಸಾಧ್ಯ?

ದೃಷ್ಟಿ ಹೀನನು ದೀಪವನ್ನರಿಯುವನೆ?
ನಷ್ಟಕರ್ಣನಿಗೆ ತಾ ನಾದವೇತಕ್ಕೆ?
ಜ್ವರಪೀಡಿತನು ಹಾಲ ಸವಿಯೇನು ಬಲ್ಲ?
ಕಪ್ಪೆಗಳರುವುದೇ ಜಡನಿಧಿಯಾಳಗೆ?
ವಾನರವರಿವುದೆ ವರರತ್ನಮಹಿಮೆ?
ಶ್ವಾನ ತಾನರಿವುದೆ ಸ್ವರ್ಗಲೋಕವನು?
ಅರಿಯ ಬಲ್ಲುದೆ ಪುಷ್ಪರಸವನು ನೊಣವು?
ರವಿಯ ಕಾಣುವುದೇನು ಕೌಶಿಕವಿತತಿ?
ಅಜ್ಞಾನ ಜೀವರಿಗತುಲಿತ ಭಕ್ತಿ
ಪ್ರಾಜ್ಞತೆಯೇಕೆ ಪ್ರಾಪ್ತಿಸುವುದು ಹೇಳು?

ಅಂಗಳ ಪೆನ್ನಿಧಿ ತಂಗಡಿ ಜೇನು
ಬಾಯೊಳಗೂರುವ ಅಮೃತವದೆನಲು
ಘನವೇಕಲಿಂಗನಿಷ್ಠಾಭಕ್ತಿಯನ್ನು
ಬಿಟ್ಟು ದುಷ್ಪಥದಲಿ ಚರಿಯಿಸುವುದದು
ರಾಜಿತಾಂಚಿತ ರತ್ನ ರಾಜಿಯೆಯಿರಲು
ಗಾಜಚೂರನು ಧರಿಸಲು ಹೊರಟಂತೆ
ತವರಾಶಿಯೆ ಮುಂದೆಯೊಪ್ಪಿರಲು
ತೌಡ ಮುಕ್ಕುವೆನೆಂದು ಹೋಗುವನಂತೆ
ಕೊಟ್ಟಿಗೆಯಲಿ ಸುರಧೇನು ಕರೆಯಲು
ಗೊಡ್ಡನು ಹಿಂಡಲು ಕರೆದೊಯ್ಯುವಂತೆ

ಅಕ್ಕಜಗೊಳಿಪ ವಜ್ರಾಯುಧವಿರಲು
ಮೊಂಡಾದ ಸುರಗಿಗೆ ಮೋಹಿಸುವಂತೆ
ಪಕ್ಕದಲ್ಲಿಯೆ ಸುರಭೂರುಹವಿರಲು
ಬರಿಯವೃಕ್ಷಕೆ ಭರದಿಂದೈದುವಂತೆ-

ಯೊದವೆ ಪ್ರವಾಹವು ನಾವೆಯದಿರಲು
ಸೋರೆಯ ಹಿಡಿದಂತೆ ವಸುಮತಿಯೊಳಗೆ.
ಮಂಗಳವಹ ಭಕ್ತಿ ಮಾರ್ಗವದಿರಲು
ಹೆಡ್ಡರಾಗುತ ಕರ್ಮವಿಧಿ ತಾಳಿ ಕೆಟ್ಟು
ಸ್ಮೃತಿ 'ತೇನ ಸಹ ಸಂವಸೇ'ತ್ತೆಂದು ಹೇಳೆ
ಮತಿಹೀನರಿಗೆ ಗತವಹುದೇಕೆ ಬುದ್ಧಿ?

ತಾನೆಷ್ಟು ಬಾರಿ ನೀರಿನೊಳಗದ್ದಿದರು
ಕಂಬಳಿಯೊಗೆದರು ಬೆಳ್ಳಗಾಗುವುದೆ?
ಎಂದಿಗಾದರು ದೆಬ್ಬೆಯನ್ನು ಕಟ್ಟಿದರೆ
ಶ್ವಾನದ ಬಾಲ ತಾ ನೇರವಾಗುವುದೇ?
ಮಾಣದೆ ಜಲದಲಿ ತಾನೆಷ್ಟು ದಿವಸ
ನೆನೆದರು ಶಿಲೆ ಮೆತ್ತಗಾಗುವುದೇನು?
ಒಂದೇಸಮನೆ ಹಾಲನೆಷ್ಟು ಸುರಿದರು
ಬಿಡುವುದೆ ಸರ್ಪವು ವಿಷವೊಂದಿಷ್ಟನ್ನು?
ಒಪ್ಪದಿಂ ಜೇನಲಿ ನೆನೆಯ ಹಾಕಿದರು
ಸಿಹಿಯಾಗುವುದೆ ತಾನೆಂದಾದರೂ ಬೇವು?

ಭರದಿ ನೆಲವನೆಂತು ತೊಳೆದೊರೆಸಿದರೆ
ಮಣ್ಣು ಹೋಗುವುದೇನು? ಮತ್ತೆಯಲ್ಲದಲೆ
ಹೊನ್ನನೇಗಿಲಲೆಷ್ಟು ರೀತಿಯಲುತ್ತು
ಗುಳ್ಳದ ಬೀಜಗಳನು ಬಿತ್ತಿದಂತೆ
ಘನಸಾರವೃಕ್ಷಗಳನು ಖಂಡಿಸುತ್ತ
ಮುಳ್ಳುಗಿಡಕೆ ಬೇಲಿ ಹಾಕಿದ ರೀತಿ
ಅಗ್ನಿಯಲ್ಲಡಿಗಡಿಗುಚ್ಚೆಯ ಹೊಯ್ದು
ಬಳಿಯ ಹೋಮವ ಮಾಡೆತೊಡಗಿದ ರೀತಿ
ಶುಭ್ರವಾಗರ್ಘ್ಯಪಣ್ಯಗಳನು ತಂದು
ನಾಯ್ಗಳ ಕಾಲುಗಳನು ತೊಳೆದಂತೆ

ಓಡಿನಲೆರೆದಿಹ ನೀರಿನ ರೀತಿ
ನೆರಳನೀಯದ ಧರಣೀರುಹದಂತೆ
ರಾಜಿತಲಿಂಗ ಪರಾಙ್ಮುಖಾನೇಕ
ಪೂಜೆಗಳರಿಯೆ ನಿಷ್ಫಲವಾಗವೇನು?
ತ್ರ್ಯಕ್ಷಪರಾಙ್ಮುಖಕ್ರತುವನಾಚರಿಸಿ
ದಕ್ಷನು ತಲೆ ಕಡಿವಡೆದುದನರಿಯ?

ಪರಶುರಾಮನು ಹಾರುವರಿಗಿರ್ಥಿಯಿಂದ
ಧರೆಯನಿತ್ತರಿಯೆಯ ತಾನೇನ ಪಡೆದ?
ಇನಿತೆಲ್ಲವರಿಯ ವಿಪ್ರರನೆ ಪೂಜಿಸುತ
ಬಲಿ ಬಂಧನದಲಿ ಸಿಕ್ಕನೇ ದೃಷ್ಟವಾಗೆ?

ಅಡರಲು ಗೌತಮನಗ್ರಜನ್ಮರಿಗೆ
ಬೋನವಿಡುತ ತಾನೆ ಗೋಹತ್ಯೆವಡೆದ?
ವೇದಜ್ಞರಹ ಕೋಟಿ ವಿಪ್ರರಿಗನ್ನ-
ವನ್ನರ್ಥಿಯಿಂದ ತಾನಿಟ್ಟ ಫಲಗಳು
ತ್ರ್ಯಕ್ಷಭಕ್ತನಿಗೊಂದು ಭಿಕ್ಷೆಯಿಡೆ ಬರು-
ವಕ್ಷಯ ಫಲಗಳಿಗಸಮಾನವೆನುತ
ವ್ಯಕ್ತವಾಗಿರಲು ಕುಯುಕ್ತಿಯಿಂ ನಡೆಯೆ
ಭಕ್ತಿಕೆಡುವುದು ದಾನಫಲ ನಿಷ್ಫಲವು"
ಎನುತಲನೇಕ ವಿಧದಿ ಹೇಳಿ ಕೇಳಿ
ತಾ ಶೋಕಜಲಸಮನ್ವಿತನೇತ್ರನಾಗಿ

ಜಗದೇವನಾ ಭಕ್ತಜನನಿಕಾಯವನು
ಪ್ರಸ್ತುತಿಸಿದ ಮುಗಿಯುತ್ತ ಕೈಗಳನು:
"ಕರ್ಮಬದ್ಧನೆಯಾದೆ ಕಷ್ಟನು ಖಳನು
ದುರ್ಮದೋಪೇತನು ದುಷ್ಕೃತಾಲಯನು
ಬ್ರಹ್ಮವಿಹೀನನು ಪರಮ ಪಾತಕನು
ಅಜ್ಞಾನಿಯಧಿಕ ಸರ್ವಾಪರಾಧಿಯನೆ
ಶಂಕೆಯಿಲ್ಲದಲನಾಚಾರಿಯಾದೆನಿದ-
ಕಿನ್ನು ಪ್ರಾಯಶ್ಚಿತ್ತವಾವುದೂಯಿಲ್ಲ.
ಸಂದೇಹವೇತಕೆ ಬಿಡುವೆ ಪ್ರಾಣವನು
ಎನಗಾಣತಿಯ ನೀಡೆ"ನ್ನುತ ಮೊಕ್ಕಿ ನಿಲಲು

ಅದಕಂಡು ಬಸವಯ್ಯ ಘನಭಕ್ತವಿತತಿ-
ಯನುಮತದಿಂದಲಾತನಿಗೆ ತಾನೆಂದ:
"ಕೊಂಕದೆ ಕೇಳಿನ್ನು ಕೆಲದಿನಗಳಲಿ
ಶಿವದ್ರೋಹವೊಂದಿಲ್ಲಿ ತಾನಾಗಲಿಹುದು.
ಮಡಿಯಿಸು ದ್ರೋಹಿಯ ನಮ್ಮಿಷ್ಟ ಕೆಲಸ-
ವಡರೆ ಪ್ರಸನ್ನನಾಗುವ ಶಿವನಾಗ;
ಈ ನಿನ್ನ ನಿರ್ಣಯಕೀಶಾನಗಣವಿ-
ತಾನವೆಲ್ಲವು ಮೆಚ್ಚಿ ತತ್ಪ್ರಸ್ತವದಲಿ

ಕರುಣಿಸುತಿಂಬುಗಳೀವರು ನಿನಗೆ,
ನಂಬೆಮ್ಮ ಮಾತುಗಳೇಳೇಳು"ಯೆನಲು

ಮುಗಿದಕೈಗಳನಳಕದಲಿ ಸೇರಿಸುತ
ಹೊಂಗುತ ವೀರತಾಂಬೂಲವ ಕೊಳಲು
ಜಗದೇವಶರಣನ ನಗರಿಗೆ ಬಸವ-
ನಗಣಿತ ಭಕ್ತಸಹಾಯದಿ ಬಂದ-
ನುಚಿತಕ್ರಿಯಾದಿಗಳಿಂದ ತಾ ತಣಿದು
ಬಸವಣ್ಣನಮಸದ್ಭಕ್ತರ ಕೂಡೆ
ಸತತವು ಭಕ್ತಿ ಸುಧಾಮೃತಾಪಾರ-
ವನಧಿಯೊಳಗೆ ನಿಮಗ್ನತೆಯಿಂದಲಿದ್ದ.

**ಅಲ್ಲಯ್ಯ ಮಧುಪಯ್ಯರ ಕಥೆ**

ಮತ್ತಲ್ಲಿಯಲ್ಲಯ್ಯ ಮಧುಪಯ್ಯನೆನುವ
ಕರಕಂಠಭಕ್ತರ ಕರ್ಮಸಂಚಯರು

ಲಿಂಗೈಕನಿಷ್ಠಾವಿಲೀನಮಾನಸರು
ಜಂಗಮಾರಾಧನಾಶಕ್ತ ಚೇತಸರು
ಪರಮಶಿವಾಚಾರ ಪರವರ್ತ್ಮನಿರತ-
ರುರುತರ ಕೀರ್ತಿನಿಯುಕ್ತರಾಗಿರುತ-
ಲಸಮಾನಲೀಲೆಯಿಂ ಕಲ್ಯಾಣದಲ್ಲಿ
ಬಸವನೊಂದಿಗೆ ತಾವು ವರ್ತಿಸುತಿರಲು
ಬಿಜ್ಜಳನಿತ್ತ ತಾ ಕೊಂಚಕಾಲದಲಿ-
ಯಂತಕನಗರಿಗೆ ಹೋಗಲು ಬಯಸಿ
ಬಸವನ ಮಹಿಮೆಯ ಭಕ್ತಿ ಮಹತ್ವ-
ದೆಸಕವನರಿತರೂ ಅರಿಯದೆಂಬಂತೆ

ಬೆಳೆದಿರುವಜ್ಞಾನ ಬೋಧೆಗೆ ಸಿಲುಕಿ
ಮಧಿಸುತ್ತಲಲ್ಲಯ್ಯ ಮಧುಪಯ್ಯಗಳನು
ಯಾವ ತಪ್ಪಿಲ್ಲದೆ ಸರಿಯಲ್ಲವೆನದೆ
ಕರೆಸಿ ಕಣ್ಣುಗಳನು ತೆಗೆಸಿದನಾಗ;
"ಕಾಲಕಾಲನ ಭಕ್ತಗಣಗಳ ಮಹಿಮೆ-
ಗಳನೆಲ್ಲವರಿಯನೆ ಮುನ್ನವೆ ತಾನು
ಅಕ್ಕಟಾ, ಕೇಡ ಬಗೆದನವನೀಶ-
ನೀ ಕಟಕದಲಿನ್ನೆಲ್ಲಿಯ ಬದುಕಿನ್ನು

ಮೃಡ ಭಕ್ತರ್ಮುಳಿಯಲು ಕೆಡನೆ ತಾ"ನೆನುತ
ನರರೆಲ್ಲರಧಿಕದಿ ಗಾಬರಿಗೊಳಲು

ಬಸವನೇ ಮೊದಲಾದ ಅಸಮಾನಭಕ್ತ-
ರಸಮಕೋಪೋದ್ದೀಪಿತಾಂಗರಾಗುತ್ತ
ಹೊಂಗುತಲಲ್ಲಯ್ಯಮಧುಪಯ್ಯನವರ
ಕಂಗಳನಾಗಲೆ ಭರದಿಂದ ಪಡೆದು
'ಇನ್ನಿರಬಾರದೀ ಊರಿನ'ಲ್ಲೆನುತ
ಶಂಕರ ಭಕ್ತರು "ಜಗದೇವಮಂತ್ರಿ,
ಮುನ್ನ ಕೈಗೊಂಡಿದ್ದ ಭಾಷೆಯ ನಡೆಸು,
ಶಿವದ್ರೋಹಿಯನ್ನು ಕೊಲ್ಲೆ"ನುತ ಬಿಜ್ಜಳನ
ನೊಸಲರೇಖೆಗಳನ್ನೊರಿಸುತಲಿ ರಾಜ್ಯ-
ವಸಮಾಕ್ಷನಾ ಹೊತ್ತಿಗೆಯಲಂತೆ ತೊಡೆಸಿ

ಬಲ್ಲಹ ಕಟಕವದೊಡೆದು ತುಂಡಾಗಿ
ಎಲ್ಲರು ನೋಡಿ ನೀವೀಕ್ಷಣದಲ್ಲಿ
ಹಾಳಾಗುವುದು ಕಟಕವು ಹಾಳಾಗುವುದು
ತಾನೆಲ್ಲವೆನುತ ಶಾಪಗಳನೀಯುತ್ತ
ಬಲ್ಲಿದನಾ ಮಡಿವಾಳ ಮಾಚಯ್ಯ-
ನಾಚೌಡರಾಯನೇ ಕಾಂತರಾಜಯ್ಯ
ಕಿನ್ನರಬ್ರಹ್ಮಯ್ಯ ಕೇಶಿರಾಜಯ್ಯ
ಕನ್ನದ ಬ್ರಹ್ಮಯ್ಯನಾ ಕಕ್ಕಯ್ಯಗಳು
ಮಾದಿರಾಜಯ್ಯನಾ ಮಸಣಯ್ಯನಾದಿ-
ಯಾಗೆಲ್ಲರಾಪುರಿಯಖಿಲಭಕ್ತಗಣ-

ವೆಲ್ಲ ಜಂಗಮಕೋಟಿ ತನ್ನೊಡವರಲು
ಭಂಡಾರಿ ಬಸವಣ್ಣದಂಡನಾಯಕನು
ಮೆರೆಯಲು ಕಪ್ಪಡಿ ಸಂಗಮೇಶ್ವರಕೆ
ನಡೆಯಲು ಬಿಜ್ಜಳನೆಸಕವು ತೊಲಗೆ,
ಕಟಕಟಾ, ಕರಕಂಠಗಳು ಹೋಗೆ
ಕಟಕದ ಭಾಗ್ಯವಾಕ್ಷಣವೆ ತೊಲಗಿತು.
ಭೂಕಂಪವಾಯಿತಲ್ಲರ್ಧರಾತ್ರಿಯಲಿ
ಕಾಗೆಗಳರಚಲಡುಗೆ ಹಾಳಾಯಿತ್ತು
ಬುವಿಗೆ ಸುರಿಯಿತುಲ್ಕೆಯಾಲಿಕಲ್ಲ ಮಳೆ-
ಯಾಯ್ತು ಭಾಸ್ಕರ ಚಂದ್ರಪರಿವೇಷವಾಯ್ತು

ದಿವಿಯ ತುಂಬಲು ಗ್ರೀಷ್ಮ ಮುಸುಕಿತು, ಮಂಜು
ಕವಿಯಿತು ಮಧ್ಯಾಹ್ನದಾ ಕಾಲದಲ್ಲಿ
ಕಟ್ಟುಗ್ರರೂಪಾಗಿ ಕಾಲನು ತೋರಿ
ಬಂದನು ಪಟ್ಟಣಪ್ರಾಂತ ದೇಶದಲಿ;
ಗಪ್ಪನೆ ಕಾವಳ ಕವಿಯಿತೆಲ್ಲೆಡೆಗೆ
ಧರಣೀಶ ಕಂಡ ತಲೆಯಿರದ ನೆರಳ
ರವಿಯುದಯಿಸುವ ತತ್ಪ್ರಸ್ತವದಲ್ಲಿ;
ದಿವಿಯಲ್ಲಿ ಕಂಡರು ಪ್ರತಿಸೂರ್ಯರುಗಳು
ಇನ್ನೇನೇನಿರುವುದೊ ಇನ್ನು ಮುಂದೆನುತ
ಸಂತಾಪಚಿತ್ತರಾಗಿರೆ ಜನ ಭೀತಿ-

ಯಿಂ ಜಗದೇವನು ನಿಲಯಕೈತರಲು
ಆಗಲಾಯಯ್ಯನ ಜನನಿ ವೀಕ್ಷಿಸುತ
"ಶಿವಗಣದ್ರೋಹವು ಕಿವಿಗೆ ಬಿದ್ದೊಡನೆ-
ಯವಿಚಾರದಿಂದವನನು ಕೊಲ್ಲಬೇಕು,
ಆಗದಿರಲು ತಾವೆ ಸವೆಯಲುಬೇಕು,
ಕಾಲಕಾಲನಭಕ್ತಗಣಮಾರ್ಗವಿದುವೆ;
ಸವೆಯಿಸಲಾರದೆ ಚಮಡಿಯು ತಾನು
ಸವೆಯದ ಪ್ರಾಣವಂಚಕ ಕುಟಿಲನಿಗೆ
ಕುಪಿತಗಜ್ಜಾನಿಗಪಜೀವಿತನಿಗೆ
ವಿಪರೀತಚರಿತನು ವಿಷಮಲೋಚನನು

ಮೆಚ್ಚುವನೇನವನಿಗಧಿಕ ಭಕ್ತಿ-
ಯೀವನೆ ಕೂರ್ಪನೆ ಹೆಚ್ಚಿನದೇಕೆ?
ಕೃತನು ನೀ ನಿನ್ನ ಪ್ರಾಣಪರಿತ್ಯಾಗಕ್ಕೆ
ಮತಿಮೆಚ್ಚಲವಸರೋಚಿತವಿತ್ತು ನಿನ್ನ
ಕಳಿಸಿದರೇ ವಿನಾ ಭಕ್ತರಾ ದ್ರೋಹಿ-
ಯನ್ನು ಕೊಲ್ಲಲು ಹೆದರೋಡಿದರೇನು?
ಸಿಡಿಯಲವರಲೊಬ್ಬನವಿಕಲಾಜಾಂಡ
ಸಂದೋಹವುರಿಯುತಿತ್ತೀವರೆಗಿರದೆ;
ದಕ್ಷನು ಕೊಬ್ಬಿಯದಕ್ಷನಾಗುತ್ತ
ದಕ್ಷಮುಖಕ್ಷಯದಕ್ಷನ ಹಳಿಯೆ

ಕೇಳಲಾರದೆ ತಾನೆ ತನ್ನ ಕೋಪಾಗ್ನಿ-
ಯಲಿ ಗೌರಿಯಾಕ್ಷಣವುರಿದುದನರಿಯಾ?

ಮತ್ತೆಯಾಯುಪಮನ್ಯುವಭವನ ನಿಂದೆ
ಕೇಳಲಾರದೆ ಭಸ್ಮವಾಗನೆ ತಾನು?
ಅದರಿಂದ ಶಿವಭಕ್ತಗಣನಿಂದೆ ಕೇಳಿ
ನೀ ಸುಮ್ಮನಿರಲದು ನೀತಿಯೇನವನ
ಕೊಲ್ಲದೇತಕ್ಕುಣ್ಣಲೆಂದು ಬಂದಿರುವೆ?
ತಿನ್ನುವನ್ನವು ನಿನಗಿಂಪಹುದೆಂತು?
ಛೀ, ನಾಯಿ ಕೈಯಲಿ ಶಿವಪ್ರಸಾದವನು
ಕೊಂಡು ತಿನ್ನಲು ಸ್ವಲ್ಪ ಸಿಗ್ಗೇತಕಿಲ್ಲ?

ಬಂದು ಗದುಕು ನೀನು ಶ್ವಾನಗಳಂತೆ,
ಉಚ್ಚುಚ್ಚುರೇ"ಯೆಂದು ಚಿಟಿಕೆ ಹಾಕುತ್ತ
ಹಿತ್ತಲ ಕಡೆಯಲ್ಲಿ ಮೃಡಪ್ರಸಾದವನು
ಕುಡಿಕೆಯೊಳಗೆ ತಂದು ನೆಲದಲಿ ಸುರಿಯೆ
'ತಕ್ಕದಿ'ದೆನುತಲಿ ತಾ ನಾಯ ರೀತಿ
ಜಗದೇವನಲ್ಲಿ ಪ್ರಸಾದವನುಣಲು
ಮಲ್ಲಬ್ರಹ್ಮಯ್ಯನೆಂಬತಿವೀರಭಕ್ತಿ
ಸರ್ವಸ್ವವೆನಿಸಿದ್ದನವನರ್ಧರಾತ್ರಿ-
ಯಲ್ಲೀ ವಾರ್ತೆಯ ಕೇಳಿ ಜಗದೇವನೆಡೆಗೆ
ಬೇಗಬೇಗೈತಂದಾ ಸರಿಹೊತ್ತಿನಲ್ಲಿ

ಕೂಡೆ ತಾನಾಪ್ರಸಾದವನಾರೋಗಿಸುತ-
ಲಾ ರಾತ್ರಿ ಕೊಲ್ಲಲು ಬಗೆದು ಬಿಜ್ಜಳನ-
ನಿರುಳಲಿ ಕಾಣುತ್ತ ಕತ್ತಿಯ ಹಿರಿದು
ಝಲ್ಲೆನೆ ನಡುಗಿಯಾ ಸಭೆ ತಲ್ಲಣಿಸಲು
ಒಮ್ಮಲೆ ಮೂರ್ಮೆಯುದ್ವೃತ್ತಿಯಿಂ ನೆಗೆದು
ಹೊಡೆಯುತ್ತಲಿರಿದು ಜರ್ಜರಿತನ ಮಾಡಿ
ರೋಷದಿಂ ಕರಕರನೆಂದು ಬಿಜ್ಜಳನ
ತಲೆಕೊಯ್ದು ಹೊಟ್ಟೆಯಲಿಟ್ಟು ಬಂದು ಬಳಿ
ಕಾ"ಯಸಂಖ್ಯಾತರ ಆಣತಿಯಿಂದ-
ಲೀ ನರಾಧಮನನು ಕೊಂದೆವು ನಾವು;

ಮಲೆಯುತ ಭಕ್ತರಿಗಹಿತವಗ್ಗೈಯು-
ವಧಮರೆಲ್ಲರುಯಿಂತೆ ಹೋಗುವ"ರೆನುತ
ಗಾಯಗಳನು ಕಟ್ಟಿ ಗತಿಗಳ ಹಾಕಿ
ಠಾಯಿಗಳನ್ನು ಕೊಂಡು ದಂಡವ ನಟಿಸಿ

ಹೊಂಗಿ ಬೊಬ್ಬಿಡುತ ಸಂತಸದಿ ಕೂಗುತ್ತ
ಲಿಂಗಭಕ್ತರಿಗೆದುರಾರಿಲ್ಲವೆನುತ
ಗುಂಪಾಗಿ ಪೌರರು 'ಬಿಜ್ಜಳನ ತಲೆ-
ಗೊಂಡ ಗಂಡಾ'ಯೆಂದು ಘೋರ್ಷಿಸುತಿರಲು
ಮತ್ತೆಯೂ ಮಲ್ಲಬ್ರಹ್ಮಯ್ಯನು ತಾನು
ನಗರಿ ಬಿಡುತ ತನ್ನ ನಗರಿಗೆ ಬಂದು

ತಾಯಿಗಡಿಗಡಿಗೆ ಮೈಚಾಚಿ ಮೊಕ್ಕಿ
ಲಲಿತಾಂಗಿಯಿತ್ತ ಪ್ರಸಾದವ ಪಡೆದು
"ಪರಮಪಾತಕನಾದ ಭಕ್ತನಿಗ್ರಹನ
ಕೊಲ್ಲಲಾಗಲೆ ಹೋಗದೇ ತಾನು ದ್ರೋಹಿ-
ಯನ್ನಾಗಲೇ ಕೊಂದು ಬಾರದೆಯಿರುವ
ತಪ್ಪಿಗೆ ಮತ್ತೊಂದು ದಂಡನೆಯಿಹುದು"
ಎನುತಲಾ ಜಗದೇವ ತಾನಷ್ಟರಲ್ಲಿ
ಶಿರವ ಕತ್ತರಿಸಿಕೊಳ್ಳುತ ವಿಮಾನದಲಿ
ಪುತ್ರಮಿತ್ರಕಳತ್ರ ಗೋತ್ರಾದಿಗಳನು
ತಾನು ವಿಚಿತ್ರದಿಂ ಶಿವನ ಲೋಕಕ್ಕೆ

ಕೊಂಡೊಯ್ಯೆ ಕಟಕದ ಜನರೆಲ್ಲ ಬೆದರಿ
ನೋಡುತ್ತ ಸಾಗಲು ದುಃಖಗೊಳ್ಳುತಲಿ
ಕಂಡ ಭಕ್ತರು ವಾರ್ತೆಗೇಳ್ದ ಭಕ್ತರವ-
ರಿದ್ದ ಭಕ್ತರು ಹೋದರೊಂದೊಂದು ಕಡೆಗೆ;
ಆಗ ರಾಜ್ಯಾರ್ಥದಿಂ ಯುದ್ಧಗೈದವನ
ಸಂತಾನವೆಲ್ಲ ನಿಸ್ಸಂತಾನವಾಯ್ತು;
ಭರದಿ ಕೊಟ್ಟಿಗೆಯಲ್ಲಿ ಮೆರೆಯುವಶ್ವಗಳ
ಬಾಲಗಳಿಗೆ ಬೆಂಕಿ ಹೊತ್ತಲಾಕ್ಷಣವೆ
ಕರಿಗಳು ಕರಿಗಳೊಡನೆ ತಾಕುತಲ್ಲಿ-
ಯೆದುರಿಸಿ ಜರ್ಜರಿತಗೊಳೆ ಕೆಡೆದವು;

ಭ್ರಮಿಸುತಾಮಾತ್ಯಾದಿ ಭಟವರ್ಗವೆಲ್ಲ
ತಮ್ಮಲ್ಲೆ ಸತ್ತರು ಸಮರವಗೈದು;
ಬಸವನ ಸತ್ಯಶಾಪದ ರೀತಿಯಿಂದ
ಕುಲಗೆಟ್ಟು ಕಟಕವು ಹಾಳಾಯಿತಲ್ಲಿ;
ಕೇಳಿದನೆಲ್ಲವನ್ನೈದು ಕೂಡಲಿಗೆ
ಕಂಡು ಸದ್ಗುರು ಸಂಗದೇವನನಲ್ಲಿ

ಭಕ್ತರೊಡನೆ ತಾನು ಪರಮಾನುರಾಗ
ಯುಕ್ತಿಯಿಂ ಬಸವಯ್ಯನಿದ್ದ ಸಂಪ್ರೀತ;
ಅತ್ತಲಾ ಗುರುವು ಸಮಂಚಿತನಾದ
ಸಂತತಪೂಜಾದಿಸತ್ಕ್ರಿಯಾದಿಯಲಿ

ಮುಳುಗಿ ಭಜಿಸಿ ಕೀರ್ತಿಸುತ ಮೆಚ್ಚಿಸುತ್ತ
ಮಿಗಿಲು ಬಿನ್ನಪವಾಚರಿಸಿ ಪ್ರಾರ್ಥಿಸುತ್ತ
"ದೇವ ಸದ್ಗುರುಮೂರ್ತಿ ದಿವ್ಯಾಂಗಲಿಂಗ
ದೇವ, ಸಂಗಯದೇವನೆನ್ನ ಪ್ರಾಣೇಶ,
ನಿನ್ನ ಸದ್ಭಕ್ತ ಪ್ರಸಾದವ ಕೊಂಡು
ಭಕ್ತಿಯಿಂ ಬದುಕಿ ನಾನಿಂತಾದೆನದಕೆ
ಭವಭವದಲ್ಲವರಿಗೆ ಭಕ್ತನಾನು
ಬುವಿಯಲವರ ಋಣದಲಿ ಹೋದೆ ನಾನು;
ಅಷ್ಟೇ ವಿನಾ ನಿನ್ನ ಕೇಳಿದುದಾವು-
ದೆಷ್ಟನೇನಾದರೂ ನೀಡರೆ ನೀವು

ತಪ್ಪನು ಸೈರಿಸಿ ಕಾಯ್ದಿರೆ ನೀವು
ಹೇಳಿರಿ ನೀವೆನಗೀಗಲೆಯದನು;
ಹುಟ್ಟಿದ ಮೊದಲಾಗಿ ನಾನಿಂದುತನಕ
ಬರಿದೊಲಿಯದೆ ನಿನ್ನ ಮುಟ್ಟಿಯೊಲಿದೆನು;
ಬಿಟ್ಟಿಗೈಯೆ ನಿನಗೆ ಸಾವಿರವರ್ಷ-
ವಾದರೂ ಮೇಲೇಳದಿರುವುದು ಸರಿಯೆ
ಸುಮ್ಮನಿಂತಿರುವುದೇನುಚಿತವೆ ಹೇಳು?
ಆರಯ್ಯೆ ಪ್ರಮಥರ ನಿನ್ನ ಮೇಲಾಣೆ
ವೃಷಭವಾಹನ, ಬಿನ್ನವಿಸಲು ಕೇಳದಲೆ
ವೃಷಭನ ನೀನೆಂತು ಬಿಡಬಹುದಯ್ಯ?

ಒಲ್ಲೆನೇನೊಂದನು ಸೋಲಲ್ಲವಿದುವೆ
ವಲ್ಲಭ, ಕೇಳೆನು ವರವನಾ ನಿನ್ನ,
ಪರಮಪರಾನಂದ ಪರವಶೀಭೂತ
ನಿರವಧಿತತ್ವವಿಸ್ಫುರಣ ಪೆಂಪೆನಲು
ಗತಿಮನೋವಾಕ್ಕಾಯಕರ್ಮಚೈತನ್ಯ
ರತಿಗಳೆಲ್ಲವು ನಿನ್ನಲೊಂದೆ ವಿಶ್ರಾಂತಿ
ಮಾಡಯ್ಯ, ನಿನ್ನಾಜ್ಞೆಗೈಯೆ ನಾ ಬಂದು
ಮಾಡಬೇಕಿಹ ಕೆಲಸಗಳ ಮಾಡಿದೆನು"

ಎನಲು ದಯಾಮತಿಯಿಂ ಗುರುಮೂರ್ತಿ
ತನ್ನ ಮುನ್ನಿನ ರೂಪ ತಳೆಯುತಾಕ್ಷಣವೆ

ಸಂಗಯದೇವನು ಸದನಾಂತರವನು
ಬಿಡುತ ಹೊರಗೆ ಬರೆ ಬಸವಯ್ಯ ನೋಡಿ
ಸನ್ನುತ ತದ್ಗುರುಚರಣಾಬ್ಜಯುಗಕೆ
ತಲೆಯ ತಾಕಿಸುತ ಸನ್ನುತಿಯಿಂದ ಮೊಕ್ಕ-
ಲಾನಂದ ಬಾಷ್ಪಸಮಂಚಿತವಾರ್ಧಿ-
ಯಾವರಿಸುತಿರೆ ಗದ್ಗದಕಂಠದಿಂದ-
ಲುತ್ಪುಲಕಗಳು ಮೈಯನು ತುಂಬೆ ಹರ್ಷ-
ತತ್ಪರನಾಗಿದ್ದ ಮಗನ ಮೇಲೆತ್ತಿ
ಚಕ್ಕನೆ ತನ್ನ ಪ್ರಸಾದವನಿಟ್ಟು
ಬಾರಿಬಾರಿಗು ಎದೆಗೊತ್ತಿಕೊಳುತ್ತ

ಮಗನ ತನ್ನಲಿ ಸೇರಿಸುತ ಗುರುಮೂರ್ತಿ
ಗುಡಿ ಹೊಕ್ಕನಿಬ್ಬರ ರೂಪು ಕಾಣದೊಲು;
ಬೆರಗೊಂದಿ ಸಕಲಭಕ್ತಸಮೂಹ ನೋಡೆ
ಬಸವಯ್ಯ ಗುರುವಿನ ಗರ್ಭವ ಹೊಗಲು
ಸಂಗಯ್ಯದೇವನು ಸದ್ಗುರುವಿನೊಲು
ಭರದಿಂದಲೈತಂದು ಬಸವನನಿಂತು
ತನ್ನಲ್ಲಿ ಸೇರಿಸಿಕೊಂಡಿರಲಲ್ಲಿ
ಘನಲೀಲೆಯಿಂದ ಜಂಗಮಕೋಟಿಯಲರ-
ಲತಿಶಯಲಿಂಗ ತೂರ್ಯಂಗಳು ಮೊಳಗೆ
ಧರೆಯಲೆಲ್ಲೆಡೆಯಲಿ ಹೂಮಳೆ ಸುರಿಯೆ

ಕೋಯೆಂದು ಭಕ್ತನಿಕಾಯವೆಲ್ಲೆಡೆಯು-
ಘೇಯೆಂದಡಿಗಡಿಗೆ ಕೀರ್ತನೆಗೈಯೆ
ಜಯಜಯಾರವಗಳು ದೆಸೆಗಳ ತುಂಬೆ
ಕ್ರಿಯೆಗೊಳುತಿಕ್ಕೆಲ ಕೇಳಿಕೆಯಲರೆ
ಮಾದಿರಾಜಯ್ಯನು ಮಾಚಿರಾಜಯ್ಯ
ನಾದಿಯಿಂದಾ ಭಕ್ತರನುರಾಗದಿಂದ-
ಲಿಹುದೇನುತ್ಪತ್ತಿಸ್ಥಿತಿಲಯಪ್ರಪಂಚ-
ಗಳು ಬಸವಯ್ಯಗೆ ಯೋಚಿಸಿ ನೋಡೆ;
ಗಾಳಿಯಿಂದಲೆ ಸುಳಿಗಾಳಿ ತಾ ಹುಟ್ಟಿ
ಗಾಳಿಯಲ್ಲಿಯೆ ಮತ್ತೆ ಬೆರೆಯುವ ರೀತಿ,

ಶರಧಿಯಲಲೆಗಳು ಜನಿಯಿಸಿ ಮತ್ತೆ
ಶರನಿಧಿಯಲ್ಲಿಯೆ ಸವೆಯುವ ರೀತಿ-
ಯುಡುವೀಥಿಯಲ್ಲಿ ವಿದ್ಯುಲ್ಲತೆ ಹುಟ್ಟಿ-
ಯಡುವೀಥಿಯಲ್ಲೆ ತಾನಡಗುತ ರೀತಿ
ನೀರಿನಲ್ಲಿಯೆ ವರ್ಷಾಫಲಗಳು ಹುಟ್ಟಿ
ನೀರಿನಲ್ಲಿಲಯೆ ತಾವು ಸವೆಯುವ ರೀತಿ
ಸದ್ಗುರು ಕಾರುಣ್ಯ ಸಂಗದಿ ಹುಟ್ಟಿ
ಸದ್ಗುರು ಕಾರುಣ್ಯಸಂಪದವಲರೆ
ಸದ್ಗುರುಗರ್ಭವಿಶ್ರಾಂತಿಯಲಿಂದು
ತದ್ಗತದಲಿ ಲಿಂಗತತ್ವ ತಾನಾದ-

ನಂತುಮಲ್ಲದಲೆ ಗುರ್ವಂಘ್ರಿಯುಗಳವ
ಮುಟ್ಟಿಯೋಲೈಸುತಿರುವ ಭಕ್ತಾಳಿಗಳ
ಹೃದಯಾಂಬುಜಗಳಲಿ ಬಸವಯ್ಯನೀಗ
ಕದಲದೆ ಹೂವುಕಂಪುಗಳನು ಹೋಲಿ
ಬೆರೆತಿರುತಿಹನಲ್ಲದೇ ಬೇರೆಯುಂಟೆ?
ಮಲಹರಭಕ್ತರಿರುವ ಕಾಲವೆಲ್ಲ
ಭಕ್ತಿಹಿತಾರ್ಥದಿ ಪ್ರಭವಿಸುವಂಥ
ವ್ಯಕ್ತಿಯಾಗವನೀಶ್ವರಾಂಶನಾಗಿಹನು"
ಎಂದು ಸ್ತುತಿಸಿ ಮೊದಲಂತೆ ಸದ್ಭಕ್ತಿ
ಜನಿತಸುಖಾಮೃತವನಧಿ ಮಧ್ಯದಲಿ

ಓಲಾಡುತ್ತಿದ್ದರಲ್ಲುರುತರಾನಂದ
ಲೀಲೆಯಿಂದಲಿ ಪೆಂಪಿನಿಂ ಕೆಲಕಾಲ;
ಪ್ರಸ್ತುತಿಸುತಿರೆ ಸದ್ಭಕ್ತಿವಿಸ್ಫುರಣ
ಪ್ರಸ್ತುತಿಗೇರಿದ ಬಸವನ ಚರಿತೆ-
ಯೊರೆದನು ಭಕ್ತರಿಂ ಕೇಳಿದ ರೀತಿ;
ತಪ್ಪಾಗದಂತೆ ಯಥಾಶಕ್ತಿಗೈದು
ಮಹಿಯಲ್ಲೀಶ್ವರನೆ ತಾನರಿಯಲಾಗದಿರು-
ವಾ ಮಹಾಬಸವನದ್ಭುತಚರಿತೆಯನು
ವರ್ಣಿಸಲೆಂತಹವನೆ ತಾನಾಗಿರಲು
ವರ್ಣನೆಗೈದೆನು, ಅವರನಲ್ಲದೆಯೆ

ಯಾವೆಡೆಯನ್ಯಥಾ ತಿಳಿಯನಾನೆನ್ನು-
ವೀಯೊಂದು ಬಲುಮೆಮಹಿಷ್ಠತೆಯಿಂದ;

ಅದುವೆಯಲ್ಲದೆಯೆ ಮಹಾಭಕ್ತಾವರರ
ಸದಮಲದಿವ್ಯಪ್ರಶಂಸೆಯಾಗಿಸುತ
ಭಾವಿಸಲೆನ್ನ ವಾಕ್ಪಾವನಾರ್ಥವಿದು
ಆಗಲೆನ್ನುತಲೀ ಕಥೆಯ ರಚಿಸಿದೆನು;
ಬಸವಪುರಾಣವನೊಲವಿಂದ ಕೇಳೆ
ದೊರೆವುದಧಿಕಪ್ರಸಾದಾನಂದ ಸಿದ್ಧಿ
ಬಸವಪುರಾಣವನೊಲವಿಂದ ಕೇಳೆ
ವಸಿಪುದು ಸದ್ಭಕ್ತಿವಾಸನಮಹಿಮೆ

ಬಸವಪುರಾಣವನೊಲವಿಂದ ಕೇಳೆ
ದೊರೆಯುವುದಧಿಕದಿ ಭಕ್ತರ ಕರುಣೆ
ಬಸವಪುರಾಣವನೊಲವಿಂದ ಕೇಳೆ
ಬರುವುದು ಲಿಂಗಾನುಭವ ನಿತ್ಯಸುಖವು
ಬಸವಪುರಾಣವನೊಲವಿಂದ ಕೇಳೆ-
ಲೆಸಕದಿ ದೊರೆಯುವುದೀಪ್ಸಿತಾರ್ಥಗಳು
ಬಸವಪುರಾಣವ ಭಕ್ತಿಯಿಂ ಬರೆಸಿ
ಪ್ರೀತಿಯಿಂದೋದುವ ಮನುಜರಿಗೆಲ್ಲ
ದುರಿತಗಳಾಪದ ದ್ರೋಹಗಳೆಲ್ಲ
ಹರಿವುದು ಸಂತತ ಹರಕೃಪೆಯಿಂದ;

ಈ ಪುರಾಣವನಾರಾದರು ಮನೆಯಲ್ಲಿ
ಭಕ್ತಿಯಿಂದಿರಿಸಿದರಿಹಪರಸಿದ್ಧಿ;
ಶರಣೋಪಕಾರ ಬಸವಪುರಾರ್ಥ
ವಿರಚಿತ ತ್ರಿಭುವನ ವಿಖ್ಯಾತಚರಿತ!
ಶರಣೋಪಕಾರ ಬಸವಪುರಾಣಾರ್ಥ
ವರಭುಕ್ತಿಮುಕ್ತಿಸಂವರ್ಧನಭರಿತ
ಶರಣೋಪಕಾರ ಬಸವಪುರಾಣಾರ್ಥ
ಸರಸಸಮಂಚಿತ ಸತ್ಯವಾಗ್ಜಾಲ!
ಗೊಬ್ಬೂರ ಮಾದಣ್ಣನಾ ಪ್ರಿಯಶಿಷ್ಯ
ಗೊಬ್ಬೂರ ಸಂಗ ಸದ್ಗುಣ ಸಮುತ್ತುಂಗ!

ಇದುವಸಂಖ್ಯಾತ ಮಾಹೇಶ್ವರದಿವ್ಯ
ಪದಪದ್ಮಸೌರಭಭ್ರಮರಾಯಮಾಣ
ಜಂಗಮಲೀಲಪ್ರಸಾದೋಪಭೋಗ
ಸಂಗತ ಸುಖಸುಧಾಶರಧಿನಿಮಗ್ನ

ಸುಕೃತಾತ್ಮ ಪಾಲುಕುರಿಕಿ ಸೋಮನಾಥ
ಸುಕವಿಪ್ರಣೀತವಾಗಧಿಕ ಶೋಭಿಸುವ
ಚರಲಿಂಗ ಘನಕರಸ್ಥಲಿ ವಿಶ್ವನಾಥ
ವರಕೃಪಾಂಚಿತ ಕವಿತ್ವಸ್ಫೂರ್ತಿಯಿಂದ
ಮೆರೆವ ಬಸವ ಪುರಾಣದ ಕಥೆಯಲ್ಲಿ
ಅನುಪಮದಲಿ ಸಪ್ತಮಾಶ್ವಾಸವಾಯ್ತು. ೨೦೮೦

ಸಂಪೂರ್ಣ

## ‘ಬಸವಪುರಾಣ’ದಲ್ಲಿ ಉಲ್ಲೇಖಗೊಂಡ ಸಂಸ್ಕೃತೋಕ್ತಿಗಳು

**ಉಲ್ಲೇಖಗಳ ಮುಂದೆ ಕೊಟ್ಟಿರುವ ಸಂಖ್ಯೆಗಳಲ್ಲಿ ಮೊದಲನೆಯದು ಆಶ್ವಾಸವನ್ನೂ ಎರಡನೆಯದು ಸಾಲನ್ನೂ ಸೂಚಿಸುತ್ತದೆ.**

ಅಣೋರಣೀಯಾನ್ ೬. ೭೨೫

ಅಧರ್ಮೋ ಧರ್ಮತಾಂ ವಜ್ರೇತ್ ೫. ೭೭೩

ಅನಾದರೇಣ ಶಾಠ್ಯೇನ ೨. ೮೫೭

ಅಪುತ್ರಸ್ಯ ಗತಿರ್ನಾಸ್ತಿ ೪. ೮೩೯

ಅರಿರ್ಮಿತ್ರಂ ವಿಷಂ ಪಥ್ಯಂ ೭. ೧೪೬೫

ಅಸಂಖ್ಯಾತಾಸ್ಸಹಸ್ರಾಣಿ ೨. ೬೯೫

ಉಮಾ ಮಾತಾ ಪಿತಾ ರುದ್ರಾ ೧. ೧೪೫; ೭. ೮೭೭

ಏಕ ಏವ ರುದ್ರೋ ೬. ೬೪೧; ೬. ೧೬೧೧

ಏಕಯೇವಹಿ ರೂಪೇಣ ೩. ೬೯

ಏಕೋ ರುದ್ರ ಉಚ್ಚತೇ ೬. ೧೬೫೧

ಏತಬೋಧನ್ನಿರೋಧತ ೨. ೬೯೬

ಕವಯಃ ಕಿಂ ನ ಪಶ್ಯಂತಿ ೧. ೨೬೦

ಕೃತಂ ಕರ್ಮ ಶುಭಾಶುಭ ೬. ೧೬೪೯

ತದ್ವಿಷ್ಣೋ ಪರಂ ಪದ ೬. ೧೭೦೫

ತವಪುತ್ರೋ ಭವಿಷ್ಯಾಮಿ ೨. ೧೨೨೩

ತಸ್ಯ ತನ್ಮಯ ತಾಂಯಾತಿ ೩. ೭೦೧

ದರ್ಶನಾದಪಿ ಪಾಪ ೭. ೧೫೫೫

ದಿವಾರಾತ್ರೌಚ ವರ್ಜಯೇತ್ ೨. ೭೬೭

ನಗುರೋರಧಿಕ ೧. ೯೫೭

ಬಹ್ವಪಿಸ್ತೋಕಮೇವಾಪಿ ಶಿಷ್ಟಮನ್ನಂ ವಿಮಿಶ್ರಿತ ೭. ೧೨೬
ಬ್ರಹ್ಮಾಚರಂತಿ ಬ್ರಾಹ್ಮಣಾ ೭. ೧೭೭
ಬ್ರಹ್ಮಾಧಿಪತಿರ್ಬ್ರಹ್ಮಣೋಧಿಪತಿ ೭. ೧೯೩
ಬ್ರಾಹ್ಮಣೋನಹಂತವ್ಯ ೬. ೧೪೧೭
ಭ್ರಾಂತಿ ಸಂಸರ್ಗಜಾಃ ಪಾಪಗುಣಾಭವಂತಿ ೪. ೧೬೯೧
ಮಮಕರ್ತಾ ಮಹೇಶ್ವರ ೬. ೧೫೮೯
ಯಜ್ಞಸ್ಯ ಶಿರೋಭಿನ್ನ ೬. ೧೭೮೯
ಯಥಾಶಿವಮಯೋವಿಷ್ಣು ೬. ೧೯೪೧
ರಸಾನ್ ಭಕ್ತ ಜಿಹ್ವಾಂಚಲೇ ೫. ೧೧೭೬
ರಾಜಾನುಮತೋ ಧರ್ಮ ೭. ೨೯
ರಾಜ್ಯಾಂತೇ ನರಕ ೫. ೭೬
ಲಿಂಗಬಾಹ್ಯಾತ್ಪರಂ ನಾಸ್ತಿ ೬. ೬೪೩
ಲಿಂಗಮಧ್ಯೇ ಜಗತ್ಸರ್ವ ೬. ೬೪೨
ವಿಶ್ವತಶ್ಚಕ್ಷು ಋತ ೧. ೯೫೧
ವಿಷ್ಣು ಪಿತಾಮಹ ೬. ೧೭೧೭
ಶಿವಭಕ್ತಃ ಪ್ರಭುರ್ಮಮ ೬. ೧೫೨೯
ಸದಾ ಪಶ್ಯಂತಿ ಸೂರಯೋಃ ೬. ೧೭೦೭
ಸ್ಮೃತಿ ತೇನ ಸಹ ಸಂವಸೇತ್ ೭. ೧೭೨೯
ಸರ್ವಂ ವಿಷ್ಣು ಮಯ ೭. ೬೭೧
ಸರ್ವಸ್ಯ ಗಾತ್ರಸ್ಯ ಶಿರಃ ಪ್ರಧಾನಂ ೪. ೮೦೫
ಸಾಧಕಸ್ಸಂಸ್ಮರೇತ್ಸದಾ ೩. ೭೦೦
ಸ್ಥಾವರೇ ನಿಷ್ಫಲಂ ಭವೇತ್ ೪. ೧೬೨೯
ಹರಿಗಂ ಹರಂತಂ ೬. ೧೭೮೫
ಹಸ್ತಿನಾಹನ್ಯಮಾನೋಪಿ ೬. ೧೬೦೧

ಪದಗಳ ಮುಂದೆ ಕೊಟ್ಟಿರುವ ಸಂಖ್ಯೆಗಳಲ್ಲಿ ಮೊದಲನೆಯದು ಆಶ್ವಾಸವನ್ನೂ ಎರಡನೆಯದು ಸಾಲನ್ನೂ ಸೂಚಿಸುತ್ತದೆ.

| | |
|---|---|
| ಅಂಕಕಾರ ೪. ೬೬೨ | ಯುದ್ಧವೀರ |
| ಅಂತಕಾಂತಕ ೬. ೧೦೦೦ | ಯಮನನ್ನು ನಿಗ್ರಹಿಸಿದವನು ; ಶಿವ |
| ಅಂಬಳಕ ೩. ೭೪೭ | ಅಂಬಲಿ |
| ಅಂಬಲಿಕ್ಕು ೧. ೮೩೬ | ಅಂಬೆಗಾಲಿಡು |
| ಅಕ್ಕಳಿಸು ೬. ೧೩೭೯ | ಹೊಟ್ಟೆಯನ್ನು ಕುಗ್ಗಿಸು |
| ಅಗಲು ೩. ೯೯೫ } | ಕಂದಕ |
| ಅಗಳ್ತೆ ೫. ೧೩೧ } | |
| ಅಗ್ಗಿಸು ೬. ೮೭೬ | ಗೌರವಿಸು |
| ಅಟ್ಟಳೆ ೩. ೯೮ | ಕೊತ್ತಳ |
| ಅಡುಗುಬ್ಬ ೨. ೯೪೯ | ಸೌದೆ |
| ಅನುಷಕ್ತಿ ೨. ೬೧೦ | ಕೂಡಿರುವುದು |
| ಅಪವರ್ಗ ೫. ೪೨೪ | ಮೋಕ್ಷ |
| ಅಪಾಂಗ ೩. ೧೪೯೫ | ಕಡೆಗಣ್ಣು |
| ಅರ್ಭಕ ೧. ೭೧೯ | ಮಗು |
| ಅಲುಬು ೧. ೧೦೪೫ | ಕಾಲ್ತೊಳೆದ ನೀರು |
| ಅಳಕ ೭. ೧೭೯೧ | ತಲೆಗೂದಲು |
| ಅಳಿಗಣ್ಣು ೩. ೧೫೭೦ | ಕೆಟ್ಟಕಣ್ಣು |
| ಅಳಿಗೊಳು ೪. ೧೯೧೧ | ಅವಮಾನಿಸು |
| ಆಲವಟ್ಟ ೪. ೧೫೮೭ | ಬೀಸಣಿಗೆ |
| ಆಳುವೇರಿ ೩. ೧೦೩೮ | ಕೋಟೆಯ ಗೋಡೆ |
| ಇಬ್ಬಳ ೫. ೩೭೦ | ಎರಡು ಬಳ್ಳ |
| ಉಕ್ಷವಲ್ಲಭ ೧. ೭೩೦ | ಶಿವ |
| ಉಡುರಾಜಧರ ೬. ೩೭ | ಚಂದ್ರಶೇಖರ |
| ಉಡುವೀಥಿ ೪. ೪೧೫ | ಆಕಾಶ |
| ಉಪ್ಪೊಂಗು ೧. ೧೦೯೦ | ಹಿಗ್ಗು |

| | |
|---|---|
| ಉರವಣೆ ೩. ೧೨೦೯ | ರಭಸ |
| ಉರ್ವೀಧರ ೫. ೪೭೧ | ಪರ್ವತ |
| ಊಗು ೧. ೬೫೩ | ಓಲಾಡು |
| ಎಕ್ಕಟಿವೀರ ೩. ೯೮೫ | ಏಕಾಂಗವೀರ |
| ಎಕ್ಕರಿಸು ೪. ೪೩೫ | ಅಣಕಿಸು |
| ಏವಯಿಸು ೩. ೧೪೦೫ | ಅಸಮಾಧಾನಪಡು |
| ಕಕ್ಕಟಿಗರ್ಭ ೧. ೭೨೦ | ಕಠಿಣಗರ್ಭ |
| ಕಚ್ಚಟ ೧. ೭೬೯<br>ಕಚ್ಚಡ ೩.೩೦೧<br>ಕಚ್ಚುಟ ೩. ೯೫೯ | ಕೌಪೀನ |
| ಕಟಾರ ೬. ೧೧೭೬ | ಕಿರುಗತ್ತಿ |
| ಕಟಾಹ ೩. ೧೨೧೬ | ಕೊಪ್ಪರಿಗೆ |
| ಕಡಂಗು ೫. ೧೯೯ | ಉತ್ಸಾಹಪಡು |
| ಕತ ೬. ೧೪೭ | ಕಾರಣ |
| ಕಥಕ ೩. ೪೮೨ | ಕತೆ ಹೇಳುವವನು |
| ಕಪೋತ ೩. ೧೪೨೪ | ಪಾರಿವಾಳ |
| ಕಪ್ಪರ ೪. ೧೯೯೮ | ಭಿಕ್ಷಾಪಾತ್ರೆ |
| ಕರ್ಣಿಕಾ ೧. ೧೩೦ | ಕಮಲದ ಮಧ್ಯಭಾಗ |
| ಕಾಲಕಂಧರ ೪. ೨೦೨೦ | ಕಪ್ಪು ಕತ್ತುಳ್ಳವನು ; ಶಿವ |
| ಕಿನಿಸು ೬. ೧೦೯೮ | ರೇಗು |
| ಕೀಲಾರ ೭. ೧೬೩೦ | ದನಗಳ ಸಮೂಹ |
| ಕುಂಪಟಿ ೫. ೬೩೭ | ಅಗ್ಗಿಷ್ಟಿಕೆ |
| ಕುಣಿಕಿಲು ೭. ೨೯೯ | ಚೀಲ |
| ಕುರವಕ ೩. ೨೦೬೦ | ಮದರಂಗಿ |
| ಕುಲಿಶ ೨. ೬೦೦ | ವಜ್ರಾಯುಧ |
| ಕೂಲಿಹೋಗು ೭. ೧೧೫೮ | ಕುಸಿದುಹೋಗು |
| ಕೈವಾರ ೨. ೧೨೯ | ಹೊಗಳಿಕೆ |
| ಕೊಂಡೆಯ ೧. ೧೧೫೭ | ಚಾಡಿಯ ಮಾತು |
| ಕೊಟ್ಟಾರ ೬. ೧೨೭೩ | ಕಣಜ |
| ಕೊಪ್ಪರ ೭. ೧೩೫೮ | ಕಡಾಯಿ |
| ಕೋಟೀರ ೧. ೧೧೦ | ಕಿರೀಟ |
| ಕೌಪ ೫. ೧೦೮೫ | ಕೌಪೀನ |
| ಕ್ರತು ೬. ೧೬೪೩ | ಯಜ್ಞ |

ಕ್ರಮುಕ ೩. ೨೦೫೬ — ಅಡಿಕೆ

ಕ್ಷಪಣ ೬. ೧೦೦೪ — ಜೈನ ಸನ್ಯಾಸಿ

ಕ್ಷೋಣಿ ೪. ೧೮೭೧ — ಭೂಮಿ

ಕ್ಷ್ಮಾಜ ೪. ೧೬೦೫ — ಮರ

ಕ್ಷ್ಮಾತಲೇಶ ೬. ೧೧೬೭ }
ಕ್ಷ್ಮಾಧೀಶ ೨. ೨೦೨ } — ರಾಜ

ಗಂಡೂಷ ೩. ೧೭೩೭ — ಬಾಯಿ ಮುಕ್ಕಳಿಸು

ಗಡಹ ೭. ೧೧೭೫ — ಬೋನು

ಗಾರು ೭. ೩೭೧ — ಕೆಟ್ಟುದು

ಗೀರ್ವಾಣ ೪. ೩೦೫ — ದೇವತೆ

ಗುದಿಗೆ ೫. ೩೫೮ — ದಡಿ, ದೊಣ್ಣೆ

ಗೊಂದಿ ೫. ೧೬೭ — ಕೊಟ್ಟಿಗೆ

ಗ್ರಕ್ಕದಿರು ೨. ೫೮ — ರಭಸದಿಂದ ಅಲುಗಾಡು

ಘರ್ಮಜಲ ೪. ೧೫೯ — ಬೆವರು

ಚಂದ್ರಾತಪ ೬. ೬೬೫ — ಬೆಳುದಿಂಗಳು

ಜಂಘೆ ೪. ೧೫೪೪ — ಕಿರುದೊಡೆ

ಜನ್ನ ೭. ೯೧೭ — ಯಜ್ಞ

ಜನ್ನಿಗೆ ೩. ೩೨೩ — ಮೀಸಲು ಗೋವು

ಜರಭ ೭. ೧೫೩೪ — ಜಡ

ಜಾಯಿಲ ೫. ೧೩೭೮ — ನಾಯಿ

ಜಿಷ್ಣರು ೨. ೧೧೮೩ — ರಾಗಗಳನ್ನು ಗೆದ್ದವರು

ಜ್ವಲನ ೭. ೪೮೦ — ಬೆಂಕಿ

ಟೆಕ್ಕೆಯ ೩. ೧೦೦೦ — ಬಾವುಟ ; ಧ್ವಜ

ಡಿಂಗರಿಗ ೪. ೨೦೪೩ — ಸೇವಕ

ಡೆಂಕಣಿ ೩. ೯೯ — ಧ್ವಜಸ್ತಂಭ

ತನ್ವಿ ೫. ೧೫೪ — ಕೋಮಲಾಂಗಿ

ತಮ್ಮಡಿ ೩. ೧೨೮೧ — ಗುರು; ಆಚಾರ್ಯ

ತರುವಲಿ ೩. ೯೬೮ — ತಬ್ಬಲಿ

ತೀಕ್ಷ್ಣ ೩. ೨೦೬೪ — ಲವಂಗ

ತುಂಡ ೩. ೧೪೪೧ — ಬಾಯಿ

ತುಂಡಾಗ್ರ ೩. ೧೪೫೭ — ಸೊಂಡಿಲ ತುದಿ

ತುಲಾಯಷ್ಟಿ ೪. ೧೯೨೩ — ತಕ್ಕಡಿಯ ಕೋಲು

ತೂಪಿರಿ ೩. ೫೯೬ — ಉಗುಳು

| | |
|---|---|
| ದಸಿ ೩. ೧೦೦೩ | ಗೂಟ |
| ದಾಂತ ೬. ೧೨೩೧ | ಇಂದ್ರಿಯನಿಗ್ರಹಿ |
| ದೀರ್ಘಿಕೆ ೪. ೧೮೩೬ | ನದಿ |
| ದುಪ್ಪಿ ೫. ೧೪೨೪ | ಜಿಂಕೆ |
| ದೋವತಿ ೭. ೪೦೧ | ಪಂಚೆ |
| ಧರಣೀರುಹ ೪. ೧೫೭೨ | ಮರ |
| ಧಾರಾಳಿ ೩. ೧೬೦೭ | ನೀರಧಾರೆ |
| ಧೂಕಳಿ ಝುಂಕಳಿ ೩. ೪೦೪ | ನೃತ್ಯ ಭಂಗಿಗಳು? |
| ನಗರೋಪಕಂಠ ೫. ೪೧೧ | ಪಟ್ಟಣದ ಹತ್ತಿರ |
| ನಾಮು ೬. ೧೭೧೧ | ಕೊಯಿಲಾದ ಜೋಳದ ಕೂಳೆಯಲ್ಲಿ ಬಂದ ಮೊಳಕೆ (ಪಶುಗಳಿಗೆ ಮೃತಿಕಾರಿ) |
| ನಾರಂಗ ೩. ೨೦೭೦ | ಕಿತ್ತಳೆ |
| ನಿರ್ದಳನ ೬. ೧೮೪೦ | ನಾಶ |
| ನಿಶಾತ ೪. ೧೯೭೧ | ಹರಿತ |
| ನಿಹತಿ ೪. ೭೮೭ | ಕೊಲ್ಲುವಿಕೆ |
| ನ್ಯಗ್ರೋಧ ೩. ೨೦೫೬ | ಆಲದ ಮರ |
| ಪಂಚಾಸ್ಯ ೫. ೧೩೭೭ | ಸಿಂಹ |
| ಪಡಿಹಾರಿ ೬. ೧೨೯೨ | ಬಾಗಿಲು ಕಾಯುವವನು |
| ಪಡಿಗ ೩. ೨೩೭ | ಪಾತ್ರೆ |
| ಪಥಶ್ರಾಂತ ೫. ೩೭೮ | ನಡೆಯುವುದರಿಂದಾದ ಆಯಾಸ |
| ಪರಿಣಾಮ ೧. ೬೨೦ | ಸಂತೋಷ |
| ಪವಿತ್ರ ೭. ೮೮೫ | ದರ್ಭೆ |
| ಪಾವಕ ೬. ೭೨೮ | ಬೆಂಕಿ |
| ಪಿಪೀಲಿಕೆ ೫. ೨೫೦ | ಇರುವೆ |
| ಪೋಟರು ೩. ೧೦೨೩ | ಹೇಡಿಗಳು |
| ಫಣಿಹಾರಿ ೧. ೧೦೨೭ | ಶಿವ |
| ಬಜ್ಜಣೆ ೭. ೨೯೯ | ಹೊದಿಕೆ |
| ಬಣಗು ೩. ೧೦೮೫ | ಕ್ಷುದ್ರ |
| ಬಹಿತ್ರ ೨. ೫೧೨ | ಹಡಗು |
| ಬಾಸನ ೭. ೫೪೧ | ಬಾಣಸ; ಅಡಿಗೆಯವನು |
| ಬಿಂಡಿವಾಳ ೫. ೧೪೨೧ | ಒಂದು ಆಯುಧ |
| ಬಿಲಿ ೫. ೪೭ | ವಿಕ್ರಯಿಸು |
| ಬುಗ್ಗಿ ೩. ೧೪೮೫ | ದವಡೆ |

| | |
|---|---|
| ಬೆಡಗು ೪. ೧೫೩೬ | ಆಶ್ಚರ್ಯ |
| ಬೆಲೆವೆಣ್ಣು ೧. ೯೯೬ | ವೇಶ್ಯೆ |
| ಬೇಹಾರ ೪. ೬೧ | ವ್ಯಾಪಾರ |
| ಬೇಳ್ ೧. ೮೬೪ | ಯಜ್ಞಮಾಡು; ಬೇಯಿಸು |
| ಬೊಂಕಣ ೩. ೧೩೦೫ | ಚೀಲ |
| ಬೊಂಕು ೨. ೨೩೩ | ಸುಳ್ಳು ಹೇಳು |
| ಬೊಬ್ಬಿಲಿ ೭. ೧೦೮<br>ಬೊಬ್ಬುಳಿ ೩. ೪೨ | ಜಾಲಿಗಿಡ |
| ಭುಜಂಗ ೬. ೮೬೦ | ಹಾವು |
| ಭೂಧರ ೩. ೧೩೬೨ | ಬೆಟ್ಟ |
| ಮಹೋಕ್ಷಗಮನ ೬. ೨೬೯ | ಶಿವ |
| ಮೂವಿಟ್ಟಿ ೪. ೬೨೯ | ಯುದ್ಧಕಾಲದಲ್ಲಿ ರಾಜನಿಗೆ ಮಾಡಿಕೊಡಬೇಕಾದ ಶೋಧನ, ವಹನ, ಅಪನಯನ ಎಂಬ ಮೂರು ಬಗೆಯ ಬಿಟ್ಟಿ ಕೆಲಸಗಳು |
| ಮೇಧಾವಿ ೧. ೯೦೨ | ಗೋಪಿಚಂದನ |
| ಮೊಕ್ಕು ೧. ೨೭೪ | ನಮಸ್ಕರಿಸು |
| ಮೋಹಳ ೫. ೨೫೪ | ಕತ್ತಿಯ ಹಿಡಿ |
| ಯಷ್ಟಿ ೭. ೪೦೨ | ದಂಡ |
| ಯಾಜ್ಞಿಕ ೧. ೯೪೧ | ಯಜ್ಞ ಮಾಡುವವನು |
| ಯಾಮಿಕ ೪. ೯೬ | ಕಾವಲುಗಾರ |
| ರಯ ೧. ೫೮೦ | ವೇಗ |
| ರಾಕಾಮಲಜ್ಯೋತ್ಸ್ನೆ ೩. ೩೯ | ಹುಣ್ಣಿಮೆಯ ಶುಭ್ರ ಬೆಳುದಿಂಗಳು |
| ರುಚ್ಯ ೨. ೩೨ | ಪ್ರಕಾಶಮಾನ |
| ಲೆಂಕಿ ೨. ೯೮೧ | ಸೇವಕ |
| ವಂಕದಾರ ೩. ೯೯೬ | ಡೊಂಕಾದ ಬಾಗಿಲು |
| ವಕ್ತ್ರ ೧. ೪೬೫ | ಮುಖ |
| ವಟವಿಟಪ ೫. ೯೪೨ | ಆಲದ ಮರ |
| ವಾತಪೂರಣ ೨. ೩೨೨ | ಪತಾಕೆ |
| ವಾಯಸ ೨. ೪೨೦ | ಕಾಗೆ |
| ವಾಲುಕಾ ೩. ೨೧೪೫ | ಸೌತೆಯ ಜಾತಿ |
| ವಿಕಸ್ವರ ೨. ೭೮೨ | ಆಧಿಕ್ಯ |

| | |
|---|---|
| ವಿಚ್ಛಿನ್ನ ೪. ೧೮೦೭ | ಹಾಳಾದ |
| ವಿಧೂತ ೫. ೫೬೨ | ತೊಳೆಯಲ್ಪಟ್ಟ |
| ವಿಯನ್ಮಂಡಲ ೬. ೧೩೩೫ | ಆಕಾಶ |
| ವಿಷಯಜೈತ್ರ ೧. ೧೧೯ | ವಿಷಯಗಳನ್ನು ಗೆದ್ದವನು |
| ವಿಸ್ಫುಲಿಂಗ ೬. ೧೪೭೩ | ಬೆಂಕಿಯ ಕಿಡಿ |
| ವೃಷಾಂಕ ೨. ೧೧೪೨ | ಶಿವ |
| ಶತಮಖ ೩. ೧೧೮೨ | ಇಂದ್ರ |
| ಶಶ್ವತ್ ೨. ೪೪೭ | ಶಾಶ್ವತ |
| ಶಿವಂಗಿ ೫. ೧೪೩೨ | ಚಿರತೆಯಂಥ ಪ್ರಾಣಿ |
| ಸಂಬಳಿಗೆ ೭. ೪೦೧ | ಪುಸ್ತಕವಿಡುವ ಸಂಪುಟ |
| ಸಂಸೃತಿ ೪. ೧೨೭ | ಸಂಸಾರ |
| ಸಚೇಲಸ್ನಾನ ೭. ೧೬೪ | ಉಟ್ಟ ಬಟ್ಟೆಯೊಡನೆ ಮಾಡುವ ಸ್ನಾನ |
| ಸಹಕಾರ ೩. ೨೦೬ | ಮಾವು |
| ಸಾಮಜ ೪. ೧೭೭ | ಆನೆ |
| ಸಾರಮೇಯ ೭. ೨೧೫ | ನಾಯಿ |
| ಸಿತಗ ೩. ೭೬೮ | ನೀಚ |
| ಸುಂಟಿಗೆ ೩. ೧೩೧೮ | ಸುಟ್ಟ ಮಾಂಸ |
| ಸೂನೆಗಾರ ೪. ೧೨೮೮ | ಕಟುಕ |
| ಸೆಲದಿ ೩. ೧೪೩೩ | ಜೇಡರ ಹುಳು |
| ಸೊಮ್ಮು ೫. ೮೦೧ | ಸ್ವತ್ತು |
| ಸೋವು ೧. ೬೮೩ | ಓಡಿಸು |
| ಹಳವಿಗೆ ೬. ೧೨೯೧ | ಧ್ವಜ |
| ಹಾಟಕ ೩. ೨೪೪ | ಚಿನ್ನ |
| ಹೊಂಗು ೪. ೨೦೫ | ಉಬ್ಬು |
| ಹೊಂಪುಳಿವೋಗು ೧. ೨೩೮ | ರೋಮಾಂಚನಗೊಳ್ಳು |

# ಪಾಲ್ಕುರಿಕೆ ಸೋಮನಾಥನ ತೆಲುಗು 'ಬಸವಪುರಾಣಮು'

ಪಾಲ್ಕುರಿಕೆ ಸೋಮನಾಥನ 'ಬಸವಪುರಾಣ'ವು ಮೊದಲನೆಯ ವೀರಶೈವ ಪುರಾಣವೆಂದು ಪ್ರಸಿದ್ಧವಾಗಿದೆ. ವೀರಶೈವ ಪುರಾಣಗಳು ಇತರ ಮತಗಳ ಪುರಾಣಗಳಿಗಿಂತ ಕೆಲವೊಂದು ವಿಭಿನ್ನ ಲಕ್ಷಣಗಳನ್ನು ಪಡೆದಿರುತ್ತವೆ. ಎಂ. ಆರ್. ಶ್ರೀನಿವಾಸಮೂರ್ತಿಗಳು ವೀರಶೈವ ಕಾವ್ಯಗಳ ಸಮಗ್ರ ಅಭ್ಯಾಸದ ಹಿನ್ನೆಲೆಯಲ್ಲಿ ಈ ಲಕ್ಷಣಗಳನ್ನೆಲ್ಲ ತಮ್ಮೊಂದು ಲೇಖನದಲ್ಲಿ ಕ್ರೋಡೀಕರಿಸಿದ್ದಾರೆ.[೧] ಅವರ ಪ್ರಕಾರ ವೀರಶೈವ ಪುರಾಣವೆನ್ನಿಸಿಕೊಳ್ಳಬೇಕಾದರೆ ಒಂದು ಕೃತಿಯು ಈ ಲಕ್ಷಣಗಳನ್ನು ಒಳಗೊಂಡಿರಬೇಕು; ೧. ಕೈಲಾಸ ಪರ್ವತದ ವರ್ಣನೆ, ಈಶ್ವರಾಸ್ಥಾನ ವರ್ಣನೆ, ೨. ನಾರದ ಪ್ರವೇಶ, ೩. ಕಾರಣಪುರುಷನೆಂಬ ಸೂಚನೆ, ೪. ಪವಾಡಗಳು, ೫. ಶಿವಾಧಿಕ್ಯ ಸ್ಥಾಪನೆ, ೬. ಸೃಷ್ಟಿಯ ನಿರೂಪಣೆ, ೭. ವೀರಶೈವ ಮತಾಧಿಕ್ಯ ಸ್ಥಾಪನೆ, ಅಷ್ಟಾವರಣಗಳ ಮಹಾತ್ಮ್ಯ ನಿರೂಪಣೆ, ೮. ಭಕ್ತರ ಹಿರಿಮೆ, ೯. ಕಥಾನಾಯಕನ ಮುಕ್ತಿ – ಇವುಗಳು.

'ಶಿವತತ್ವ ಚಿಂತಾಮಣಿ'ಯಲ್ಲಿ 'ಪದಿನೆಂಟಂಗ' ಎಂದು ಹೇಳಿರುವ ಮಾತಿಗೆ ಎಂ. ಆರ್. ಶ್ರೀ. ಅವರು "ವೀರಶೈವಪುರಾಣಕ್ಕೆ ಲಕ್ಷಣಗಳಾದ ಪರವಸ್ತು, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದ, ವಿಭೂತಿ, ರುದ್ರಾಕ್ಷಿ, ಮಂತ್ರ, ಸೃಷ್ಟಿ, ಗಣವರನ ಚರಿತ್ರೆ, ಅರವತ್ತು ಮೂವರು ಪುರಾತನರು, ಗಣಸಹಸ್ರನಾಮ, ನೂತನ ಪುರಾತನರ ಕಥೆಗಳು, ವೀರಶೈವಾಧಿಕ್ಯ ಸ್ಥಾಪನೆ, ವೀರಶೈವತತ್ವ ನಿರೂಪಣೆ (ಷಟ್‌ಸ್ಥಲ) ಕಾಲಜ್ಞಾನ ಎಂಬ ಹದಿನೆಂಟು ಅಂಗಗಳೆಂದೂ ಅರ್ಥಮಾಡಬೇಕು" ಎಂದು ಹೇಳುತ್ತಾರೆ.[೨] ಪಾಲ್ಕುರಿಕೆ ಸೋಮನಾಥನ 'ಬಸವಪುರಾಣ'ವು ಈ ಲಕ್ಷಣಗಳಲ್ಲಿ ಬಹುತೇಕ ಅಂಶಗಳನ್ನು ಒಳಗೊಂಡಿದೆ; ವೀರಶೈವ ಪುರಾಣಗಳಿಗೆ ಆದಿಯಾಗಿದೆ.

ಈ ಕಾವ್ಯವು ಅನೇಕ ದೃಷ್ಟಿಗಳಿಂದ ಮಹತ್ವದ ಕೃತಿಯಾಗಿದೆ; ತೆಲುಗಿನಲ್ಲಿ ಅಥವಾ ಕನ್ನಡೇತರ ಭಾಷೆಗಳಲ್ಲಿ ಬಸವನ ಬಗ್ಗೆ ಮತ್ತು ವೀರಶೈವದ ಬಗ್ಗೆ ಸೃಷ್ಟಿತವಾದ ಮೊದಲ ಕಾವ್ಯವಾಗಿದೆ. ಈ ಮಾತನ್ನು ಹೇಳಿರುವ ಹಿನ್ನೆಲೆಯಲ್ಲಿ

---

೧. ಎಂ.ಆರ್.ಶ್ರೀ: 'ವೀರಶೈವಪುರಾಣಲಕ್ಷಣಗಳು (ಶರಣಸಾಹಿತ್ಯ ೧೩–೪: ಪು. ೧೯೮–೨೧೫)

೨. ಅದೇ : ಪು. ೨೧೧

ಹರಿಹರನ 'ಬಸವರಾಜದೇವರ ರಗಳೆ'ಯು ಪಾಲ್ಕುರಿಕೆ ಸೋಮನಾಥನ 'ಬಸವಪುರಾಣ'ಕ್ಕಿಂತ ಪ್ರಾಚೀನವಾದುದು ಎಂಬ ಅಭಿಪ್ರಾಯವಿದೆ. ಆದರೆ ಕೆಲವರು 'ಬಸವಪುರಾಣ'ವೇ ರಗಳೆಗಿಂತ ಪಾಚೀನವಾದುದೆಂದು ಹೇಳುತ್ತಾರೆ.[೩] ಈ ಅಭಿಪ್ರಾಯವನ್ನು ಒಪ್ಪುವುದು ಕಷ್ಟ. ಸೋಮನಾಥನು ಹರಿಹರನಿದ್ದ ಕಾಲದಲ್ಲಿಯೂ ಜೀವಿಸಿದ್ದಿರಬಹುದು, ಆದರೆ ಕಾವ್ಯರಚನೆಯ ಕಾಲವನ್ನು ಮಾತ್ರ ಗಮನಿಸಿದರೆ 'ಬಸವರಾಜದೇವರ ರಗಳೆ'ಯು 'ಬಸವಪುರಾಣ'ಕ್ಕಿಂತ ಹಿಂದೆ ಸೃಷ್ಟಿತವಾಯಿತೆಂಬುದಕ್ಕೇ ನಮ್ಮ ಬೆಂಬಲವಿದೆ.

ಆದರೆ 'ಬಸವಪುರಾಣ'ದ ಒಟ್ಟು ಧೋರಣೆಯು 'ಬಸವರಾಜದೇವ ರಗಳೆ'ಯ ಧೋರಣೆಗಳಿಗಿಂತ ತುಂಬ ಭಿನ್ನವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ರಗಳೆಯನ್ನು ರಚಿಸುವಲ್ಲಿ ಹರಿಹರನಿಗೆ ಬಸವನ ಚರಿತ್ರೆ ಮುಖ್ಯವಾಗಿದೆ; ಆದರೆ ಸೋಮನಾಥನಿಗೆ ವೀರಶೈವ ದರ್ಶನ ಮುಖ್ಯವಾಗಿದೆ. ಬಸವಣ್ಣನ ವ್ಯಕ್ತಿತ್ವದ ವಿವಿಧ ಮುಖಗಳನ್ನು ನೇರವಾಗಿ ಚಿತ್ರಿಸುವುದೇ ಹರಿಹರನ ಉದ್ದೇಶ; ಸೋಮನಾಥನಿಗಾದರೋ ಬಸವನ ಚರಿತ್ರೆಯ ನೆಪದಲ್ಲಿ ಹಾಗೂ ಅನೇಕ ಶಿವಶರಣ ಕಥೆಗಳ ಮೂಲಕ ವೀರಶೈವ ಆಧಿಕ್ಯವನ್ನು ಸ್ಥಾಪಿಸುವುದೇ ಮುಖ್ಯೋದ್ದೇಶ. ಹರಿಹರನದು ತದೇಕ ದೃಷ್ಟಿ; ಸೋಮನಾಥನದು ಸುತ್ತಮುತ್ತೆಲ್ಲ ಕಣ್ಣು ಹಾಯಿಸುವ ರೀತಿ. 'ಬಸವರಾಜದೇವರ ರಗಳೆ'ಯಲ್ಲಿ ಬಸವಣ್ಣನಿಗೆ ನೇರವಾಗಿ ಸಂಬಂಧಪಡದ ಒಂದು ಪ್ರಸಂಗವೂ ಚಿತ್ರಿತವಾಗಿಲ್ಲ; ಪಾಲ್ಕುರಿಕೆ ಸೋಮನಾಥನ ಕಾವ್ಯದಲ್ಲಿ ಬಸವಣ್ಣನಿಗೆ ಸಂಬಂಧಿಸಿದ ಪ್ರಸಂಗಗಳಿಗಿಂತ ಸಂಬಂಧಪಡದ ಕಥೆಗಳು ಆರೆಂಟು ಪಟ್ಟು ಹೆಚ್ಚಾಗಿವೆ. ಹರಿಹರನು ಬಸವಣ್ಣನಿಗೆ ಸೋಮನಾಥನಿಗಿಂತ ಕಾಲ ಹಾಗೂ ಭೌಗೋಳಿಕತೆಯಲ್ಲಿ ಪ್ರಾಯಶಃ ಹತ್ತಿರವಾದವನು. ಸೋಮನಾಥನೇ ಹೇಳಿಕೊಳ್ಳುವಂತೆ ಅವನು ಬಸವಣ್ಣನ ಚರಿತ್ರೆಯನ್ನು ಹಲವರಿಂದ ಸಂಗ್ರಹಿಸಿದ. ಆದರೆ ಹರಿಹರನಿಗೆ ಬಸವಣ್ಣನಂತೆಯೆ ಇತರ ನೂತನ ಪುರಾತನ ಶರಣರ ಬಗ್ಗೆ ಹರಿಹರ ರಗಳೆಗಳನ್ನು ಬರೆದ ಮೇಲೆಯೇ ಪ್ರಾಯಶಃ ಸೋಮನಾಥನಿಗೆ ತನ್ನ 'ಬಸವಪುರಾಣ'ದ ಕಲ್ಪನೆಯುಂಟಾಗಿರಬೇಕೆನಿಸುತ್ತದೆ. ಹರಿಹರನು ಅನೇಕ ಕೃತಿಗಳಲ್ಲಿ ಸಾಧಿಸಿರುವುದನ್ನು ಸೋಮನಾಥನು ಒಂದೇ ಕೃತಿಯಲ್ಲಿ ಸಾಧಿಸುವ ಕಾಣ್ಕೆಯನ್ನು ಕಂಡಿರಬೇಕು. ಏಕೆಂದರೆ ತನ್ನ 'ಬಸವಪುರಾಣ'ದಲ್ಲಿಯೇ ಅವನು ಬಸವಣ್ಣನ ಜೀವನ ಚಿತ್ರಣದ ಜೊತೆಗೆ ಇತರ ಹತ್ತಾರು ಶರಣರ ವಿಚಾರವನ್ನು ಹೇಳುತ್ತಾನೆ. ಇಂತಹ ಒಂದು ಸಮಗ್ರ ದೃಷ್ಟಿ ಹರಿಹರನ ಕೃತಿಗಳ ಪರಿಚಯವನ್ನು ಪಡೆದ ನಂತರ ಸೋಮನಾಥನಿಗೆ ಉಂಟಾಗಿರಬೇಕು. ಅದರಿಂದ ವೀರಶೈವಪುರಾಣದ ಕಲ್ಪನೆ ಸ್ಪಷ್ಟಗೊಂಡಿತು ಎಂದು ನಮ್ಮ ಊಹೆ. ಹೀಗಾಗಿ ಪಾಲ್ಕುರಿಕೆ ಸೋಮನಾಥನೇ ಮೊದಲ ವೀರಶೈವಪುರಾಣದ

---

೩. ಗಾಜುಲವೀರಯ್ಯ: 'ಬಸವಪುರಾಣ ಬಸವರಾಜದೇವರ ರಗಳೆಗಳಲ್ಲಿರುವ ಸಾಮ್ಯ ವ್ಯತ್ಯಾಸಗಳು' (ಸಾಧನೆ ೬-೨: ಪು. ೩೦-೩೧)

ಕರ್ತೃ; 'ಬಸವಪುರಾಣ'ವೇ ಮೊದಲ ವೀರಶೈವ ಪುರಾಣಕಾವ್ಯ. ಮುಂದೆ ಬಹುಸಂಖ್ಯಾಕ ವೀರಶೈವ ಕವಿಗಳು ಅನುಸರಿಸಿದ್ದು ಪಾಲ್ಕುರಿಕೆ ಸೋಮನಾಥನನ್ನೇ ಹೊರತು ಹರಿಹರನನ್ನಲ್ಲ.

ಪಾಲ್ಕುರಿಕೆ ಸೋಮನಾಥನು ತನ್ನ ವೈಯಕ್ತಿಕ ವಿಚಾರಗಳನ್ನು ಹೆಚ್ಚು ಹೇಳಿಕೊಳ್ಳದಿರುವುದರಿಂದ ಅವನ ಕಾಲ, ದೇಶ ಮುಂತಾದವುಗಳ ಬಗ್ಗೆ ವಿವಾದಗಳಿವೆ. ಕೆಲವರು ಅವನು ತುಮಕೂರು ಜಿಲ್ಲೆಯ ಪಾಲುಕುರಿಕೆ ಎಂಬ ಊರಿನವನು ಎಂದು ಹೇಳಿದರೂ, ಸೋಮನಾಥನ ಊರು ಇದಾಗಿರಲಿಕ್ಕಿಲ್ಲ. ಅವನು ತೆಲಂಗಾಣ ವಿಭಾಗದಲ್ಲಿರುವ ನಲ್ಲಗೊಂಡ ಜಿಲ್ಲೆಯ ಜನಗಾಮ ತಾಲ್ಲೂಕಿನ ಪಾಲ್ಕುರಿಕಿ ಎಂಬ, ಓರಂಗಲ್ಲಿಗೆ ಹನ್ನೆರಡು ಮೈಲಿ ದೂರವಿರುವ ಗ್ರಾಮಕ್ಕೆ ಸೇರಿದವನು ಎಂಬ ಬಗ್ಗೆ ಈಗ ಹೆಚ್ಚು ಭಿನ್ನಾಭಿಪ್ರಾಯಗಳಿಲ್ಲ. ಅವನ ತಂದೆತಾಯಿಯರು ವಿಷ್ಣುರಾಮಿದೇವ ಹಾಗೂ ಶ್ರೀಯಾದೇವಿಯರು. ಪ್ರಾಯಶಃ ಇವನು ಮೊದಲು ಆರಾಧ್ಯ ಬ್ರಾಹ್ಮಣನಾಗಿದ್ದು, ವೀರಶೈವವು ಆಂಧ್ರದಲ್ಲಿ ಹಬ್ಬಿದ ಮೇಲೆ ಆ ಮತಕ್ಕೆ ಪರಿವರ್ತಿನಾದವನು.

ಸೋಮನಾಥನ ಕಾಲದ ಬಗ್ಗೆಯೂ ವಿವಾದಗಳಿವೆ, ಬ್ರೌನ್ ಹಾಗೂ ಕಿಟ್ಟೆಲ್‌ರು ಇವನ ಕಾಲವನ್ನು ೧೩೦೦ ಎಂದರೆ, ವೀರೇಶಲಿಂಗಂ ಪಂತುಲು ಅವರು ಮೊದಲು ಇವನ ಕಾಲವು ೧೩೨೫ ಎಂದು ಹೇಳೀದ್ದವರು ಅನಂತರ ೧೧೯೦ ಎಂಬುದಾಗಿ ಮಾರ್ಪಸಿಕೊಂಡರು. ಆರ್. ನರಸಿಂಹಾಚಾರ್ ಅವನ ಕಾಲ ಕ್ರಿ.ಶ. ೧೧೯೫ ಎಂದು ನಿರ್ಧರಿಸಿದರೆ, ಇ.ಪಿ. ರೈಸರೂ ಅದೇ ಕಾಲವನ್ನು ಒಪ್ಪಿಕೊಂಡರು. ಚಿಲಕೂರಿ ವೀರಭದ್ರರಾವ್ ಅವರು ಇವನದು ಮೊದಲ ಪ್ರತಾಪರುದ್ರನ ಕಾಲವೆಂದು ಹೇಳಿದರು. ನಿಡುದವ್ರೋಲು ವೆಂಕಟರಾವು ಅವರು ಸೋಮನಾಥನ ಜೀವಿತಾವಧಿಯು ೧೧೯೦ರಿಂದ ೧೨೬೦ರ ನಡುವೆ ಎಂದು ನಿರ್ಧರಿಸಿದರೆ,[೪] ಬಂಡಾರು ತಮ್ಮಯ್ಯನವರು ಸುಮಾರು ಇದೇ ಕಾಲವನ್ನು ಒಪ್ಪುತ್ತಾರೆ. ಸೋಮನಾಥನು ೧೧೬೦ರಲ್ಲಿ ಜನಿಸಿ, ಸುಮಾರು ೧೧೮೦ರ ಹೊತ್ತಿಗೆ ತನ್ನ ಮೊದಲ ಕೃತಿಯಾದ 'ಅನುಭವಸಾರ'ವನ್ನೂ, ಎರಡನೆಯ ಕೃತಿಯಾದ 'ಬಸವಪುರಾಣ'ವನ್ನು ೧೧೯೨ರಲ್ಲಿಯೂ, ಪಂಡಿತಾರಾಧ್ಯಚರಿತೆಯನ್ನು ೧೨೩೦ರಲ್ಲಿಯೂ ರಚಿಸಿ, ೧೨೪೦ರ ಹೊತ್ತಿಗೆ ಮರಣಹೊಂದಿದನೆಂದು ತೀರ್ಮಾನಿಸತ್ತಾರೆ.[೫] ಭೀಮಕವಿಯು ಸೋಮನಾಥನ 'ಬಸವಪುರಾಣ'ವನ್ನು ಅನುಸರಿಸಿ ತನ್ನ ಕಾವ್ಯವನ್ನು ಕ್ರಿ.ಶ.೧೩೬೯ರಲ್ಲಿ ಬರೆದು ಮುಗಿಸಿದ್ದ. ಆದ್ದರಿಂದ ಈ ಕಾಲಕ್ಕಿಂತ ಮುಂಚೆ ಸೋಮನಾಥನಿದ್ದದ್ದು ಖಚಿತ. ಹಾಗೆಯೇ, ಬಸವಣ್ಣನೇ ಕ್ರಿ.ಶ.೧೧೮೦ರವರೆಗೆ ಬದುಕಿದ್ದುದರಿಂದ

---

೪. ಬಸವ ಪುರಾಣಮು (ಆಂಧ್ರ ಗ್ರಂಥಮಾಲೆ, ೧೯೫೨) ಪೀಠಿಕೆ : ಪು. ೩೪

೫. ಬಸವ ಪುರಾಣಮು (ವಾವಿಳ್ಲ) ಪೀಠಿಕೆ

ಅನಂತರದಲ್ಲಿ ಸೋಮನಾಥನಿದ್ದನೆಂಬುದೂ ಖಚಿತ. ಪಾಲ್ಕುರಿಕೆ ಸೋಮನಾಥನು ತನ್ನ 'ಬಸವಪುರಾಣ'ದಲ್ಲಿ ಹೆಸರಿಸಿರುವ, ತನಗೆ ಬಸವಕಥೆಯನ್ನು ನಿರೂಪಿಸಿದ ಮಾಹೇಶ್ವರರ ಜೊತೆಯಲ್ಲಿ ಇದ್ದಳೆಂದು ಹೇಳಿರುವ, ದೋಚಮಾಂಬೆಯು ಕ್ರಿ.ಶ. ೧೨೯೦ರಲ್ಲಿ ನೀಲಗಂಗವರ ಶಾಸನದಲ್ಲಿ ಉಕ್ತಳಾಗಿರುವಳಂತೆ.[೬] ಹೀಗಾಗಿ ಅವನು ೧೨೯೦ಕ್ಕೆ ಮುಂಚೆಯೇ ಕಾವ್ಯರಚನೆ ಮಾಡಿರಬೇಕು. ಆದರೆ ನಾವು ಹಿಂದೆಯೇ ಗಮನಿಸಿರುವಂತೆ ಸೋಮನಾಥನು ಸುಮಾರು ೧೨೨೦ರಲ್ಲಿ ಇದ್ದ ಹರಿಹರನಿಗಿಂತ ಈಚಿನವನಾದುದರಿಂದ ಪ್ರಾಯಶಃ ಹದಿಮೂರನೆಯ ಶತಮಾನದ ಮಧ್ಯಭಾಗದಲ್ಲಿ ಆತನು ಕೃತಿರಚನೆ ಮಾಡಿರಬೇಕು. 'ಬಸವಪುರಾಣ'ವು ಅವನ ಎರಡನೆ ರಚನೆಯೆಂದು ಬಹುಮಂದಿ ವಿದ್ವಾಂಸರು ಒಪ್ಪಿದ್ದಾರೆ. ಹೀಗಾಗಿ ಆ ಕಾವ್ಯವು ಕ್ರಿ.ಶ.೧೨೫೦ರ ಹೊತ್ತಿಗೆ ರಚಿತವಾಗಿರಬೇಕು. ಆದರೆ ಡಿ.ಎಲ್.ಎನ್. ಹೇಳುವ ಸೋಮನಾಥನ ಕಾಲವಾದ ಕ್ರಿ.ಶ. ೧೩೦೫[೭] ಅವನ ಜೀವಿತಾವಧಿಯ ಕೊನೆಯ ಭಾಗವಾಗಿರುವಂತೆ ತೋರುತ್ತದೆ.

ಪಾಲ್ಕುರಿಕೆ ಸೋಮನಾಥನು ಇಪ್ಪತ್ತಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಕೃತಿರಚನೆ ಮಾಡಿದ್ದಾನೆ. ಅನುಭವಸಾರ, ಬಸವಪುರಾಣ, ವೃಷಾಧಿಪಶತಕ, ಅಕ್ಷರಾಂಕ ಗದ್ಯ, ಅಕ್ಷರಾಂಕ ಪದ್ಯ, ನಮಸ್ಕಾರ ಗದ್ಯ, ಪಂಚಪ್ರಕಾರ ಗದ್ಯ, ಶರಣಬಸವ ಗದ್ಯ, ಅಷ್ಟೋತ್ತರಶತನಾಮ ಗದ್ಯ, ಚತುರ್ವೇದಸಾರ, ಸದ್ಗುರು ರಗಡ, ಗಂಗೋತ್ಪತ್ತಿರಗಡ, ಬಸವೋದಾಹರಣ, ಚನ್ನಮಲ್ಲು ಸೀಸಮುಲು, ಸೋಮನಾಥಸ್ತವ, ಮಲ್ಲಮದೇವಿ ಪುರಾಣ, ಪಂಡಿತಾರಾಧ್ಯ ಚರಿತೆ–ಈ ತೆಲುಗು ಕೃಗಳನ್ನೂ, ಬಸವೋದಾಹರಣ, ಸೋಮನಾಥ ಭಾಷ್ಯ, ರುದ್ರಭಾಷ್ಯ, ವೃಷಭಾಷ್ಟಕ ಎಂಬ ಸಂಸ್ಕೃತ ಕೃತಿಗಳನ್ನೂ ರಚಿಸಿದ್ದಾನೆ. ಇವನ ವೃಷಾಧಿಪಶತಕವು ಮುಖ್ಯವಾಗಿ ತೆಲುಗಿನಲ್ಲಿದ್ದರೂ ಅದರಲ್ಲಿ ಸಂಸ್ಕೃತ, ತಮಿಳು, ಕನ್ನಡ, ಮಹಾರಾಷ್ಟ್ರ, ಮಣಿಪ್ರವಾಳಗಳಲ್ಲಿ ಬರೆದಿರುವ ಪದ್ಯಗಳಿವೆ. ಹೀಗಾಗಿ ಆತನು ನಾನಾ ಭಾಷೆಗಳನ್ನು ತಿಳಿದಿದ್ದ ಪಂಡಿತನೆಂಬುದರಲ್ಲಿ ಸಂಶಯವಿಲ್ಲ. ಅವನ ಕೃತಿಸಂಖ್ಯೆಯು ಅವನ ಕ್ರಿಯಾಶೀಲತೆಗೆ ಸಾಕ್ಷಿಯಾಗಿದೆ.

ಪಾಲ್ಕುರಿಕೆ ಸೋಮನಾಥನು ಬಸವಭಕ್ತ. ಅಕ್ಷರಾಂಕ ಗದ್ಯ, ಅಕ್ಷರಾಂಕ ಪದ್ಯ, ಪಂಚ ಪ್ರಕಾರ ಗದ್ಯ, ಶರಣುಬಸವ ಗದ್ಯ, ಅಷ್ಟೋತ್ತರ ಶತನಾಮ ಗದ್ಯ–ಇವೆಲ್ಲ ಬಸವಸ್ತುತಿ ಮಾಡುವ ರಚನೆಗಳು. ಸಂಸ್ಕೃತ ಹಾಗೂ ತೆಲುಗು ಭಾಷೆಗಳಲ್ಲಿರುವ 'ಬಸವೋದಾಹರಣವು' ಉದಾಹರಣ ಯುಗ್ಮ'ವೆಂದು ಹೆಸರು ಪಡೆದಿದೆ. ಇಲ್ಲಿಯೂ ಬಸವಣ್ಣನ ಗುಣಸಂಕೀರ್ತನೆಯೇ ಮುಖ್ಯವಸ್ತು. ವೃಷಾಧಿಪಶತಕವು ಉತ್ಪಲಮಾಲೆ ಹಾಗೂ ಚಂಪಕಮಾಲೆಗಳಲ್ಲಿ ರಚಿತವಾಗಿದೆ.

---

೬. ಗಾಜುಲ ವೀರಯ್ಯ : 'ಬಸವಪುರಾಣ ಬಸವರಾಜದೇವರ ರಗಳೆಗಳಲ್ಲಿರುವ ಸಾಮ್ಯ ವ್ಯತ್ಯಾಸಗಳು' (ಸಾಧನೆ) ೬–೨ : ಪು. ೩೦

೭. ಕರ್ನಾಟಕ ಕವಿಚರಿತೆ (೧೯೭೨) : ಅನುಬಂಧ ೮೩–೮೪

ಅದರ ಪ್ರತಿಪದ್ಯವೂ 'ಬಸವಾ ಬಸವಾ ಬಸವಾ ವೃಷಾಧಿಪಾ' ಎಂದು ಮುಗಿಯುತ್ತದೆ. ಅಂತೆಯೇ ಅವನ 'ಚತುರ್ವೇದಸಾರ' ಎಂಬ ಸೀಸಪದ್ಯಗಳ ರಚನೆಯ ಪ್ರತಿಪದ್ಯ ಬಸವಲಿಂಗ ಎಂಬ ಅಂಕಿತವನ್ನು ಪಡೆದಿದೆ. 'ಬಸವಪುರಾಣ'ವಾದರೋ ಬಸವನ ಬಗ್ಗೆ ಸೋಮನಾಥನಿಗಿದ್ದ ಭಕ್ತಿಯ ಪರಾಕಾಷ್ಠತೆಯನ್ನು ಸೂಚಿಸುತ್ತದೆ. ಆದ್ದರಿಂದಲೇ ಅವನನ್ನು ಸಮಕಾಲೀನರು 'ಬಸವಣ್ಣ ಮಹಿಮ ಶುಂಭದ್ಭಕ್ತಿಯುಕ್ತಿ'ಯೆಂದು ಹೊಗಳುತ್ತಿದ್ದರಂತೆ. ಇದನ್ನು ಅವನೇ ತನ್ನ 'ಪಂಡಿತಾರಾಧ್ಯ ಚರಿತೆ'ಯಲ್ಲಿ ಹೇಳಿಕೊಂಡಿದ್ದಾನೆ. 'ಉದ್ಭಟಚರಿತೆ'ಯ ಕರ್ತೃವಾದ ಸೋಮರಾಜನು ಅವನನ್ನು 'ಸಮುದಾಂಚದ್ವೃಷಭಸ್ತವಾಮರಮಹೀಜಾರಾಮನಂ ಸೋಮನಂ' ಎಂದು ಸ್ತುತಿಸುತ್ತಾನೆ.

ಅವನು ತೆಲುಗು ಹಾಗೂ ಕನ್ನಡ ಕವಿಗಳ ಮೇಲೆ ಮಾಡಿರುವ ಪ್ರಭಾವವು ಅಪಾರವಾದುದು. ನನ್ನಿಚೋಡ, ಅನ್ನಮಯ್ಯ, ತಿಕ್ಕನ, ಬದ್ದೆನ, ನಾಚೆನ, ಸೋಮನ, ಜಕ್ಕನ, ಶ್ರೀನಾಥ, ಬಮ್ಮೆರ ಪೋತನ, ಎಡಪಾಟಿ ಎರ್ರನ, ರಘುನಾಥ ಭೂಪಾಲ, ನಾಲೂಟಿ ಶೇಷನಾರಾಧ್ಯ ಮುಂತಾದ ಕವಿಗಳ ಮೇಲೆ ಅವನ ಪ್ರಭಾವವಿದೆ.[೮] ನೇರವಾಗಿ ಅವನನ್ನು ಅನುಕರಿಸಿದವರು ಹಲವರು. ಕ್ರಿ.ಶ. ೧೫೬೦ರ ಪಿಡುಪರ್ತಿ ಸೋಮನಾಥ ಕವಿಯು ಇವನ ದ್ವಿಪದ ಕಾವ್ಯವನ್ನು ಚಂಪೂರೂಪದಲ್ಲಿ ಪರಿವರ್ತಿಸಿದ. ಇದನ್ನೇ ಇನ್ನೂ ಮುಂದೆ ವಿಜಯವಾಡದ ಮಹಾದೇವಾರಾಧ್ಯನೂ ದ್ವಿಪದ ಕಾವ್ಯವನ್ನಾಗಿ ಪರಿವರ್ತಿಸಿದ. ಶ್ರಿನಾಥನು ಸೋಮನಾಥನ 'ಪಂಡಿತಾರಾಧ್ಯ ಚರಿತೆ'ಯನ್ನು ತೆಲುಗು ಕಾವ್ಯರೂಪಕ್ಕೆ ಪರಿವರ್ತಿಸಿದ.[೯] ಮುಂದೆ ಸ್ವತಂತ್ರವಾಗಿ ತುಮ್ಮನಪಲ್ಲಿ ನಾಗಭೂಷಣ, ನಲ್ಲಗೊಂಡ್ಲ ನಾಗನಾರಾಧ್ಯರೂ 'ಬಸವವಿಜಯ'ಗಳನ್ನು ಬರೆದರು.

ಭೀಮಕವಿಯು ಸೋಮನಾಥನನ್ನು ಅನುಸರಿಸಿ ಕನ್ನಡ 'ಬಸಪುರಾಣ'ವನ್ನು ಕ್ರಿ.ಶ.೧೩೬೯ರಲ್ಲಿ ಬರೆದು ಮುಗಿಸಿದ. ಈ ಪರಂಪರೆಯೇ ಷಡಕ್ಷರನ 'ವೃಷಭೇಂದ್ರ ವಿಜಯ'ದವರೆಗೂ ಮುಂದುವರೆಯಿತು. ಇವನ ಬಗೆಗೆ ಕನ್ನಡ ಕವಿಗಳಲ್ಲಿ ಎಂತಹ ಭಕ್ತಿಯು ಬೆಳೆಯಿತೆಂದರೆ, ಕ್ರಿ.ಶ. ೧೫೬೦ರ ತೋಂಟದ ಸಿದ್ಧಲಿಂಗ ದೇಶಿಕನು ೧೪೫೭ ವಾರ್ಧಕಷಟ್ಪದಿಗಳಲ್ಲಿ 'ಪಾಲ್ಕುರಿಕೆ ಸೋಮೇಶ್ವರಪುರಾಣ'ವೆಂಬ ಕೃತಿಯನ್ನೇ ರಚನೆ ಮಾಡಿದ್ದಾನೆ. ಅವನ ಪ್ರಕಾರ ಪಾಲ್ಕುರಿಕೆ ಸೋಮನಾಥನು ಭೃಂಗಿಯ ಅವತಾರ, ವೀರಶೈವವನ್ನು ಪ್ರಸಾರಗೈಯಲು ಶಿವನಿಂದ ಆಜ್ಞಾಪಿತವಾಗಿ ಭೂಮಿಯಲ್ಲಿ ಜನಿಸಿದವನು.

---

೮. ಬಸವಪುರಾಣಮು (ವಾಪಿಳ್ಳ) : (ಸಂ) ಬಂಡಾರು ತಮ್ಮಯ್ಯ : ಪೀಠಿಕೆ : ಪು ೮೧

೯. Bandaru Thammaiah ; 'Basaveswara in Telugu Literature' (Sri Basaveswara Commemmoration Valume ೧೯೬೭. Pp. ೪೩೪-೫)

**ಬಸವಪುರಾಣಮು**

ಈ ಕೃತಿಯು ಸೋಮನಾಥನು ಬರೆದ ಎರಡನೆಯ ಕೃತಿಯಾಗಿದೆ. ತೆಲುಗಿನಲ್ಲಿ ರಚಿತವಾದ ಮೊಟ್ಟಮೊದಲನೆಯ ದ್ವಿಪದ ಕಾವ್ಯವಾಗಿದೆ. ಆವರೆಗೆ ಕೇವಲ ಜಾನಪದ ರಚನೆಗಳಲ್ಲಿ ಮಾತ್ರ ಬಳಕೆಗೊಳ್ಳುತ್ತಿದ್ದ ದ್ವಿಪದವು ಸೋಮನಾಥನ ಪ್ರತಿಭೆಯಿಂದಾಗಿ ಔನ್ನತ್ಯವನ್ನು ಪಡೆಯಿತು; ಮುಂದಿನ ದ್ವಿಪದ ಕವಿಗಳಿಗೆ ರಾಜಮಾರ್ಗವನ್ನು ತೆರೆಯಿತು. ಕಥೆಯ ನಿರರ್ಗಳ ನಿರೂಪಣೆಗೆ ರಗಳೆಯು ತುಂಬ ಸಮರ್ಥವಾಹಕವೆಂದು ಕಂಡುಕೊಂಡ ಹರಿಹರನ ಪ್ರತಿಭೆಗೆ ಸಮಾನಾಂತರವಾದದ್ದು ದ್ವಿಪದವನ್ನು ಆರಿಸಿಕೊಂಡ ಪಾಲ್ಕುರಿಕೆ ಸೋಮನಾಥನ ಪ್ರತಿಭೆ.

ದ್ವಿಪದವು ಒಂದು ಅಂಶ ಛಂದಸ್ಸು. ಪ್ರತಿಪಾದಲ್ಲಿಯೂ ಮೂರು ವಿಷ್ಣುಗಣಗಳೂ ಕೊನೆಗೊಂದು ಬ್ರಹ್ಮಗಣವೂ ಇರುವ ಎರಡು ಪಾದಗಳ ಘಟಕವಿದು. ಹೀಗಾಗಿ ಸಮಸಂಖ್ಯೆಯ ಎಷ್ಟೇ ಪಾದಗಳನ್ನು ಬಳಸಿಕೊಂಡು ಕಥಾನಿರೂಪಣೆ ಮಾಡುವ ಅವಕಾಶವಿದೆ ಈ ಛಂದಸ್ಸಿನಿಂದ. ಜಾನಪದದಲ್ಲಿ ಬಳಸಿದ ರಚನೆಗಳಲ್ಲಿ ಪ್ರಾಸಯತಿಗಳು ಇರಲಿಲ್ಲ. ಸೋಮನಾಥನಿಗಿಂತ ಹಿಂದೆ ಕ್ವಚಿತ್ತಾಗಿ ಒಳಕೆಗೊಂಡ ದ್ವಿಪದದಲ್ಲಿ ಪ್ರಾಸಯತಿಗಳು ನಿಷೇಧಿತವಾಗಿದ್ದವು. ಆದರೆ ಸೋಮನಾಥನು ಆ ನಿಷೇಧವನ್ನು ಉಲ್ಲಂಘಿಸಿ ದ್ವಿಪದದಲ್ಲಿ ಪ್ರಾಸಯತಿಗಳನ್ನು ತಂದಿದ್ದಾನೆ. ಅವನ ರಚನೆಯಲ್ಲಿ ದ್ವಿತೀಯಾಕ್ಷರ ಪ್ರಾಸವಿದೆ, ಪ್ರತಿಪಾದದಲ್ಲಿ ಎರಡು ಗುಣಗಳ ನಂತರ ಹಾಗೂ ಪಾದದ ಕೊನೆಯಲ್ಲಿ ಯತಿಯಿದೆ.

ಕನ್ನಡದಲ್ಲಿ ಅಲ್ಲಲ್ಲಿ ದ್ವಿಪದಿಯು ಕಾಣಿಸಿಕೊಂಡರೂ ಅದರಲ್ಲಿ ಬಹುಪಾಲು ಮಾತ್ರಾ ಛಂದಸ್ಸನ್ನು ಕಾಣಬಹುದು. 'ಛಂದೋಂಬುಧಿ'ಯಲ್ಲಿನ ಕರ್ನಾಟಕ ವಿಷಯಜಾತಿ ಪ್ರಕರಣದಲ್ಲಿ ದ್ವಿಪದದ ಪ್ರಸ್ತಾಪವಿಲ್ಲ. ಮುಂದೆ 'ನಂದಿ ಛಂದೋರ್ಣವ'ದಲ್ಲಿ ದ್ವಿಪದವನ್ನು ಈ ರೀತಿ ವಿವರಿಸಲಾಗಿದೆ:

ದೇವೇಂದ್ರಗಣಮೂರು ದಿನಕರನೊಂದು
ಭಾವಿಸು ದ್ವಿಗುಣಾಂತ್ಯ ದಿವ್ಯವಿಶ್ರಾಂತಿ
ಚಪಲಾಕ್ಷಿ ಪೂರ್ವದಾಚಾರ್ಯರ ಮತದಿ
ದ್ವಿಪದ ಲಕ್ಷಣವೆಂದು ತಿಳಿಯೆ ನೀನಿಂದು.[೧೦]

ಈ ವಿವರಣೆಯ ಪ್ರಕಾರ ಪ್ರತಿಪಾದದಲ್ಲಿ ಮೂರು ಇಂದ್ರಗಣಗಳು (ವಿಷ್ಣುಗಣ) ಒಂದು ಸೂರ್ಯಗಣ (ಬ್ರಹ್ಮಗಣ)ವೂ ಬರುತ್ತದೆ; ಎರಡನೆಯ ಗಣಾಂತ್ಯದಲ್ಲಿ ಯತಿಯಿರುತ್ತದೆ. ಕೊನೆಯ ಬ್ರಹ್ಮಗಣವೂ (ಮುಂದೆ ಸಹಜ ಯತಿಯಿರುವುದ-ರಿಂದಾಗಿ) ಎಳೆಯಲ್ಪಟ್ಟು ಉಚ್ಚಾರಕಾಲದ ದೃಷ್ಟಿಯಿಂದ ವಿಷ್ಣುಗಣದ ಹರಹನ್ನೇ ಪಡೆಯುತ್ತದೆ. ಇದು ರಗಳೆಯ ಓಟವನ್ನೇ ಹೋಲುವಂಥದು. ಕನ್ನಡದ ರಗಳೆಗೆ

---

೧೦. ಎಲ್. ಬಸವರಾಜು (ಸಂ) : ಛಂದಸ್ಸಂಪುಟ : ಪು. ೨೫೬

ಈ ಅಂಶಘಟಿತ ದ್ವಿಪದವೇ ಮೂಲವಾಗಿರಬಹುದೇ? ಏಕೆಂದರೆ ಅಂಶಗಣ ಘಟಿತವಾದ ಒಂದೇ ಬಗೆಯ ಷಟ್ಪದಿಯು ಮುಂದೆ ನಾನಾ ಬಗೆಯ ಮಾತ್ರಾ ಷಟ್ಪದಿಗಳಿಗೆ ದಾರಿಮಾಡಿಕೊಟ್ಟಿತು. ಇದಕ್ಕೆ ಕಾರಣ ವಿಷ್ಣುಗಣವು ನಾಲ್ಕರಿಂದ ಆರು ಮಾತ್ರೆಗಳ ವ್ಯಾಪ್ತಿಯನ್ನು ಪಡೆಯುವುದು. ಹಾಗೆಯೇ ವಿಷ್ಣುಗಣಗಳಿಂದಲೇ ಪ್ರಮುಖವಾಗಿ ಕೂಡಿರುವ ಅಂಶ ದ್ವಿಪದವು ಮಾತ್ರಾರೂಪಕ್ಕೆ ತಿರುಗಿದಾಗ ನಾಲ್ಕು ಮಾತ್ರೆಗಳ (ಮಂದಾನಿಲ) ಐದು ಮಾತ್ರೆಗಳ (ಲಲಿತ) ಹಾಘೂ ಆರು ಮಾತ್ರೆಗಳ ಅಥವಾ ಮೂರು ಮಾತ್ರೆಗಳ ಎರಡು ಘಟಕಗಳನ್ನುಳ್ಳ (ಉತ್ಸಾಹ) ರಗಳೆಗಳ ಅವಕಾಶ ಮಾಡಿಕೊಟ್ಟಿರಬಹುದು. ಈ ಬಗ್ಗೆ ವಿದ್ವಾಂಸರಿಂದ ಇನ್ನೂ ನಿಖರವಾಗಿ ಸಂಶೋಧನೆ ನಡೆಯಬೇಕಾಗಿದೆ.

ಕಥಾರಚನೆಗೆ ಒಗ್ಗುವ ದ್ವಿಪದವನ್ನು ಪಾಲ್ಕುರಿಕೆ ಸೋಮನಾಥನು 'ಬಸವಪುರಾಣ'ದಲ್ಲಿ ಅಳವಡಿಸಿ ಆ ಛಂದಸ್ಸು ಎಷ್ಟು ಸಮರ್ಥವಾದುದೆಂದು ಸಾಬೀತು ಮಾಡಿ ತೋರಿಸಿದ್ದಾನೆ. ಸುಮಾರು ಹನ್ನೆರಡು ಸಾವಿರದ ಆರುನೂರಕ್ಕೂ ಹೆಚ್ಚಿನ ಪಂಕ್ತಿಗಳುಳ್ಳ, ಎಂದರೆ ಆರು ಸಾವಿರದ ಮುನ್ನೂರಕ್ಕೂ ಹೆಚ್ಚಿನ ದ್ವಿಪದಗಳುಳ್ಳ 'ಬಸವಪುರಾಣಮು' ದೀರ್ಘ ಕಾವ್ಯವೇ. ಈ ಕಾವ್ಯವು ಏಳು ಆಶ್ವಾಸಗಳಾಗಿ ವಿಭಾಗಗೊಂಡಿದೆ. ಇಲ್ಲಿ ಬಸವನ ಜೀವನ ಚರಿತ್ರೆಯೊಡನೆ ಇತರ ಹಲವಾರು ಶರಣರ ಕಥೆಗಳು ಹಾಸುಹೊಕ್ಕಾಗಿ ಕೂಡಿಕೊಂಡು ಪುರಾಣದ ವಿನ್ಯಾಸ ರಚಿತವಾಗಿದೆ. ಆ ಶರಣರಲ್ಲಿ ತಮಿಳುನಾಡಿನ ಪುರಾತನರು, ಕರ್ನಾಟಕದ ನೂತನರು ಸೇರಿದ್ದಾರೆ.

ತಾನು 'ಬಸವಪುರಾಣ'ವನ್ನು ಬರೆಯಲು ಕರಸ್ಥಲಿ ಸೋಮನಾಥ, ಮಲ್ಲಿನಾಥ, ರೆಂಟಾಲ ಮಲ್ಲಿನಾಥ, ದೋಚಮಾಂಬೆ, ನೀಲಕಂಠಾಗ್ರಜ, ಗೋಡಗಿ ತ್ರಿಪುರಾರಿ ಮುಂತಾದ ಮಾಹೇಶ್ವರರ ಆಶೀರ್ವಾದವೇ ಕಾರಣವೆಂದು ಸೋಮನಾಥನು ಹೇಳಿಕೊಳ್ಳುತ್ತಾನೆ. ಈ ಪುರಾಣವನ್ನು ಹೇಳಲು ತನಗೆ ಆಸೆಯಾಗಿದೆಯೆಂದು ಸೂಚಿಸಿದಾಗ ಈ ಮಾಹೇಶ್ವರರು ಅವನ ವಿನಯದಿಂದ ಹರ್ಷಗೊಂಡು, ಈ ಕಾವ್ಯವನ್ನು ರಚಿಸುವ ಶಕ್ತಿಯನ್ನವನಿಗೆ ದಯಪಾಲಿಸಿದರೆಂದು, ಸೋಮನಾಥನೇ ಕಾವ್ಯಾರಂಭದಲ್ಲಿ ಹೇಳಿಕೊಳ್ಳುತ್ತಾನೆ. ತನ್ನ ಕಥಾನಿರೂಪಣೆಗೆ ಶ್ರೋತೃವೆಂದು ಗೊಬ್ಬೂರಿನ ಸಂಗನಾಮಾತ್ಯನನ್ನು ಆರಿಸಿಕೊಂಡಿರುವ ಸೋಮನಾಥನು, ಪ್ರತಿ ಆಶ್ವಾಸದ ಕೊನೆಯಲ್ಲಿ ಅವನನ್ನು ಭಕ್ತಿಯಿಂದ ನೆನೆಯುತ್ತಾನೆ.

ನಾರದನು ಕೈಲಾಸಕ್ಕೆ ಹೋಗಿ ಭಕ್ತಿ ಖಿಲವಾಗುತ್ತಿರುವ ಕಾರಣದಿಂದ ಭೂಲೋಕದಲ್ಲಿ ಅವರತಾವೆತ್ತಿ ಭಕ್ತಿಯನ್ನು ಪ್ರಸರಿಸಬೇಕೆಂದು ಶಿವನನ್ನು ಪ್ರಾರ್ಥಿಸುತ್ತಾನೆ. ತನಗೂ ನಂದಿಕೇಶ್ವರನಿಗೂ ಭೇದವಿಲ್ಲದ್ದರಿಂದ ತನ್ನ ಪರವಾಗಿ ಅವನನ್ನೇ ಭೂಮಿಗೆ ಕಳಿಸುವುದಾಗಿ ಶಿವ ನುಡಿಯುತ್ತಾನೆ. ಆದರಂತೆ ನಂದಿಯು ಓಂಗುಳೇಶ್ವರ ಬಾಗೇವಾಡಿಯ ಮಂಡೆಗ ಮಾದಿರಾಜ–ಮಾದಾಂಬೆಯರ ಪುತ್ರ

ಬಸವನಾಗಿ ಜನ್ಮ ತಳೆಯುತ್ತಾನೆ. ಎಂಟನೆಯ ವರ್ಷದಲ್ಲಿ ಉಪನಯನವನ್ನು ಮಾಡಲು ತಂದೆ ಆಲೋಚಿಸಿದಾಗ ಅದನ್ನು ಬಸವನು ಧಿಕ್ಕರಿಸಿ ಭಕ್ತಿಯನ್ನು ಎತ್ತಿ ಹಿಡಿಯುತ್ತಾನೆ. ಅವನನ್ನು ಮೆಚ್ಚಿದ ಬಲದೇವನು ತನ್ನ ಮಗಳನ್ನು ಬಸವನಿಗಿತ್ತು ಮದುವೆ ಮಾಡುತ್ತಾನೆ. ಆನಂತರ ಆತನು ಕೂಡಲಸಂಗಮಕ್ಕೆ ಹೋಗಿ ದೈವವನ್ನು ಸಂತೋಷಗೊಳಿಸಿ ಬೋಧೆವಡೆಯುತ್ತಾನೆ. ಇದು ಮೊದಲನೆಯ ಆಶ್ವಾಸದ ವಸ್ತು. ಬಿಜ್ಜಳನು ಬಸವಣ್ಣನನ್ನು ಪ್ರಧಾನಿಯಾಗಿ ನೇಮಕ ಮಾಡಿದ ವಿಷಯ, ಬಸವನ ಭಾಷೆ, ಅವನ ಶಿವಾಚಾರ ನಿರತಿ, ಅಲ್ಲಮಪ್ರಭುವಿನ ಆರೋಗಣೆ, ಬಸವನು ಗೊಲ್ಲತಿಯ ಹರವಿ ಬೀಳದಂತೆ ಕಾಪಾಡಿದುದು ಮುಂತಾದವು ಎರಡನೆಯ ಆಶ್ವಾಸದಲ್ಲಿ ವರ್ಣಿತವಾಗಿವೆ. ಬಸವಣ್ಣನ ಜಂಗಮಭಕ್ತಿ, ಸೂರ್ಯೋದಯ-ಚಂದ್ರೋದಯ ವರ್ಣನೆಗಳು, ಅನೇಕ ಶಿವಶರಣರ ಮಹಿಮೆಗಳು, ಮುಗ್ಧ ಭಕ್ತಿಯ ಮಹತ್ವ ಇವುಗಳು ಮೂರನೆಯ ಆಶ್ವಾಸದಲ್ಲಿವೆ. ನಾಲ್ಕನೆಯ ಆಶ್ವಾಸದಲ್ಲಿ ಮಡಿವಾಳ ಮಾಚಯ್ಯನು ಬಸವನಲ್ಲಿದ್ದ ಅಹಂಕಾರದ ಕಿಂಚಿದಂಶವನ್ನು ತೋರಿಸಿ, ವಿನಯದ ಮಹಿಮೆಯನ್ನು ತಿಳಿಸುವ ಅನೇಕರ ಕಥೆಗಳನ್ನು ವಿವರಿಸುವ ವಿಷಯವು ವರ್ಣಿತವಾಗಿದೆ. ಕಿನ್ನರಬ್ರಹ್ಮಯ್ಯ, ಕನ್ನದ ಬ್ರಹ್ಮಯ್ಯ ಮುಂತಾದ ಬಸವ ಸಮಕಾಲೀನರ ಮಹಿಮೆಗಳ ವರ್ಣನೆಯೇ ಐದನೆಯ ಆಶ್ವಾಸದ ವಸ್ತು. ಏಕಾಂತರಾಮಯ್ಯನ ಕಥೆ ಹಾಗೂ ಪರಸಮಯಿಗಳನ್ನು ಸೋಲಿಸಿದ ಇತರ ಭಕ್ತರ ಕಥೆಗಳು ಆರನೆಯ ಆಶ್ವಾಸದಲ್ಲಿ ಬಂದಿವೆ. ಶಿವನಾಗಮಯ್ಯನ ಕಥೆ, ಆಲ್ಲಯ್ಯ-ಮಧುವಯ್ಯಗಳ ಪ್ರಸಂಗ, ಬಿಜ್ಜಳನ ಕೊಲೆ, ಕ್ರಾಂತಿ, ಬಸವನ ಐಕ್ಯಗಳು ಏಳನೆಯ ಆಶ್ವಾಸದಲ್ಲಿವೆ.

ಸೋಮನಾಥ ಕವಿಗೆ ಮುಖ್ಯವಾದುದು ವೀರಶೈವತತ್ವದ ಶ್ರೇಷ್ಠತೆ, ಭಕ್ತಿಪಾರಮ್ಯ ಮುಂತಾದವು. ಹಾಗಾಗಿ ಹಲವಾರು ಶರಣರ ಕತೆಗಳ ಮೂಲಕ ತನ್ನ ಧರ್ಮದ ಬಗ್ಗೆ ತಾನು ತಳೆದ ಕಲ್ಪನೆಯನ್ನು ವಿಸ್ತೃತಗೊಳಿಸುವುದು ಅವನ ಉದ್ದೇಶ. ಆದ್ದರಿಂದ ಅವನಿಗೆ ಶುದ್ಧ ಕಾವ್ಯದ ದೃಷ್ಟಿಯಿಲ್ಲ: ಅಲ್ಲಿ ಕಾಣುವುದು ಹೆಚ್ಚಾಗಿ ಮತ ಪ್ರಸಾರದ ಹುಮ್ಮಸ್ಸು. ಈ ದೃಷ್ಟಿಯಿಂದ ನೋಡಿದರೆ ಸೋಮನಾಥ ಹರಿಹರನ ಕವಿತಾಶಕ್ತಿಯನ್ನು ಪಡೆದಿಲ್ಲ. ಅವನ ಸೂಕ್ಷ್ಮ ನಿರೀಕ್ಷಣೆ, ಕಥಾಸಂವಿಧಾನದ ಚಾತುರ್ಯ ಇವನಲ್ಲಿಲ್ಲ. ಆದರೆ ಕೆಲವು ಪ್ರಸಂಗಗಳಲ್ಲಿ ಅವನು ತುಂಬು ಹೃದಯದಲ್ಲಿ ಅನುಭವವೇ ಮೂಲದ್ರವ್ಯವಾದ ಕಾವ್ಯವನ್ನು ರಚಿಸುತ್ತಾನೆ. ಬಸವಣ್ಣನ ಐಕ್ಯದ ಸಂದರ್ಭವಂತೂ ನಮ್ಮನ್ನು ಆವರಿಸಿಬಿಡುತ್ತದೆ.

ಸೋಮನಾಥ ತುಂಬ ಸರಳಶೈಲಿಯ ಲೇಖಕ. ಬಸವಪುರಾಣದ ಭಾಷೆ ಮೃದು, ಸರಳ; ಸಲಿಲದೃಶ ಓಟ ಅಲ್ಲಿನ ದ್ವಿಪದಗಳದ್ದು. ತಾನು ಹೇಳುವ ವಿಷಯವು ಅತ್ಯಂತ ಮಹತ್ವದ್ದಾದ್ದರಿಂದ ತನ್ನ ಕಾವ್ಯಭಾಷೆಯು ತೆಲುಗಾದರೂ ಅದಕ್ಕೆ ವೇದಭಾಷೆಯ ಪಾವಿತ್ರ್ಯವುಂಟಾಗುತ್ತದೆಂದು ಹೇಳಿಕೊಳ್ಳುತ್ತಾನೆ, ಈ ಕವಿ. ಭಾವ ಮತ್ತು ಅದನ್ನು ಹೇಳಿಕೊಳ್ಳುವ ರೀತಿ ಮುಖ್ಯ, ಸಮರ್ಥನಾದವನಿಗೆ ಎಲ್ಲ

ಭಾಷೆಗಳೂ ಸಮಾನವೆಂಬ ಈ ಮನೋಭಾವ ಸೋಮನಾಥನಿಗೆ ಬಸವಾದಿಗಳಿಂದಲೇ ದತ್ತವಾಗಿರುವುದರಲ್ಲಿ ಸಂಶಯವಿಲ್ಲ.

ತಾನು ಬಳಸುವ ತೆಲುಗನ್ನು ಪಾಲ್ಕುರಿಕೆ ಸೋಮನಾಥನು 'ಜಾನುತೆಲುಗು' ಎಂದು ವರ್ಣಿಸುತ್ತಾನೆ. 'ಜಾನುತೆಲುಗು' ಎಂದರೆ ಅಚ್ಚ ತೆಲುಗು ಎಂದು ಕೆಲವರು ಅರ್ಥೈಸುತ್ತಾರೆ. ಮತ್ತೆ ಕೆಲವರು ತದ್ಭವ–ತತ್ಸಮ ದೇಶ್ಯಯುಕ್ತವಾದ ತೆಲುಗು ಎಂದು ಅರ್ಥೈಸುತ್ತಾರೆ.[೧೧] ಪ್ರಾಯಶಃ ಈ ಮಾತು ಕನ್ನಡದಲ್ಲಿ ಬಳಕೆಯಲ್ಲಿರುವ 'ದೇಸಿ' ಎಂಬ ಮಾತಿಗೆ ಸಂವಾದಿಯೆನಿಸುತ್ತದೆ. ಭಾಷೆಯಲ್ಲಿನ ಪದಗಳಿಗಿಂತ, ಭಾಷೆಯ ಜಾಯಮಾನವನ್ನು ಅವಲಂಬಿಸುವುದೇ ದೇಸಿಯೆನ್ನಬಹುದು.

ಸೋಮನಾಥ ತೆಲುಗಿನ ಶಿವಕವಿಗಳಿಗೆ ಆದ್ಯ; ವೀರಶೈವಪುರಾಣ ಕರ್ತೃಗಳ ಮೂಲಪುರುಷ; ದ್ವಿಪದ ಛಂದಸ್ಸಿನ ಉದ್ಧಾರಕ; ಅಸೀಮ ಬಸವಭಕ್ತ; ತೋಂಟದ ಸಿದ್ಧಲಿಂಗ ದೇಶಿಕನ 'ಪಾಲ್ಕುರಿಕೆ ಸೋಮೇಶ್ವರಪುರಾಣ'ದ ಪ್ರಕಾರ ಅರವತವನಾಲ್ಕು ಶೀಲಗಳನ್ನು ಆಚರಣೆಗೆ ತಂದ ಧರ್ಮಿಷ್ಠ. ವೀರಶೈವ ಸಾಹಿತ್ಯ, ವೀರಶೈವಪುರಾಣ ನಿರ್ಮಿತಿ, ವೀರಶೈವ ಧರ್ಮಪ್ರಸಾರ–ಈ ಕ್ಷೇತ್ರಗಳಲ್ಲಿ ಅವನು ಆಚಾರ್ಯಪುರುಷರಲ್ಲೊಬ್ಬ.

('ಪಾಲ್ಕುರಿಕೆ ಸೋಮನಾಥನ ಬಸವಪುರಾಣ'
ಮೊದಲ ಮುದ್ರಣದ ಪ್ರಸ್ತಾವನೆ, ೧೯೮೨)

---

೧೧. ಬಸವಪುರಾಣಮು (ಆಂಧ್ರ ಗ್ರಂಥಮಾಲೆ ೧೯೫೨) : ನಿಡುದವೋಲು ವೆಂಕಟರಾವು; ಪೀಠಿಕೆ ಪು. : ೪೦

# ಭೀಮಕವಿಯ 'ಬಸವಪುರಾಣ'

**ಕವಿಕಾವ್ಯ ಪರಿಚಯ**

'ಬಸವಪುರಾಣ'ವನ್ನು ಬರೆದವನು ಭೀಮಕವಿ. ಇವನ ತಂದೆ ಶಿವಕವಿದೇವ.[೧] ಶಿವಕವಿದೇವನು 'ಆಂಧ್ರಭಾಷಾಸತ್ಕವಿತ್ವಕೋವಿದ'ನೇಗಿದ್ದವನು. ಇವನೊಮ್ಮೆ ಪಂಪಾಪುರಕ್ಕೆ ಬಂದು ಹರಿಹರನನ್ನು ಕಂಡು ನಮಸ್ಕರಿಸಿ 'ನನಗೆ ಸತ್ಪುತ್ರನೊಬ್ಬನು ಹುಟ್ಟಿದರೆ ನಿಮ್ಮ ಪಾದಸೇವೆಯನ್ನು ಮಾಡುತ್ತಿರುವ ರಾಘವಾಂಕನ ಸೇವೆ ಮಾಡಿಸಿ ಓದಿಸುತ್ತೇನೆ' ಎಂದು ಹೇಳುತ್ತಾನೆ. ಆ ಮಗು ಬೆಳೆದ ಮೇಲೆ ಹರಿಹರನಿಗೆ ಒಪ್ಪಿಸಿದಾಗ ಅವನಿಗೆ ವಿದ್ಯೆ ಕಲಿಸಬೇಕೆಂದು ಹರಿಹರನು ರಾಘವಾಂಕನಿಗೆ ಹೇಳುತ್ತಾನೆ. ವಿದ್ಯೆಯನ್ನು ಕಲಿತಾದ ಮೇಲೆ ಕವಿತೆಯನ್ನು ಹೇಳೆಂದು ಹರಿಹರನು ಕೇಳಿದಾಗ ಭೀಮನು 'ಭೃಂಗಿದಂಡಕ'ವನ್ನು ಹೇಳಿದನು. ಭೀಮಕವಿಯ ಬಗ್ಗೆ ಈ ವಿಷಯವು ಚಿಕ್ಕನಂಜೇಶನ 'ರಾಘವಾಂಕಚಾರಿತ್ರ'ದಲ್ಲಿ ದೊರೆಯುತ್ತದೆ.[೨] ಎಂದರೆ ಭೀಮಕವಿಯು ಹರಿಹರ-ರಾಘವಾಂಕರ ಮೇಲ್ವಿಚಾರಣೆಯಲ್ಲಿ ಬೆಳೆದವನೆಂದು ತಿಳಿಯುತ್ತದೆ. ಈತನು ರಾಘವಾಂಕನ ಷಟ್ಪದೀ ಪರಂಪರೆಯನ್ನು ಮುಂದುವರಿಸಿರುವುದಕ್ಕೆ ಇದೂ ಕಾರಣವಿರಬಹುದು. ಈತನು ಪೂರ್ವ ಕವಿಗಳಲ್ಲಿ ಸ್ಮರಿಸಿರುವುದು ಹರಿಹರ ರಾಘವಾಂಕರನ್ನು ಮಾತ್ರ (ಬ.ಪು. ೧.೧೧ ಪೀಠಿಕೆಯಲ್ಲಿ ಹೇಳುವ ಪದ್ಯಗಳ ಸಂಖ್ಯೆಗಳು ಡಾ॥ ಆರ್. ಸಿ. ಹಿರೇಮಠರಿಂದ ಸಂಪಾದಿತವಾಗಿ ಧಾರವಾಡದ ಮುರುಘಾಮಠದಿಂದ ಪ್ರಕಟವಾದ ಗ್ರಂಥದ್ದು.)

ಭೀಮಕವಿಯು ಕೊಂಡಗುಳಿ ಕೇಶಿರಾಜ, ಶ್ರೀಪತಿಪಂಡಿತ, ಶಿವಲೆಂಕ ಮಂಚಣ್ಣ, ಗುರು ಮಲ್ಲಿಕಾರ್ಜುನ ಪಂಡಿತ ಇವರ ಕೃಪೆಯಿಂದ ಬಸವಪುರಾಣವನ್ನು ರಚಿಸಿರುವುದಾಗಿ ಹೇಳಿಕೊಳ್ಳುತ್ತಾನೆ. (ಬ.ಪು. ೧. ೧೦) ತನ್ನಂತಹ ಬಡಮತಿಯಿಂದ ಕೂಡಿದವನು ಬಸವನ ಕೃತಿಯನ್ನು ಹೇಗೆ ರಚಿಸಬಲ್ಲೆ ಎಂದು ಶಿವನಿದ್ರೆಯಲ್ಲಿರಲು ಪಾಲ್ಕುರಿಕೆ ಸೋಮನಾಥನೂ ಅನಘ (ಶಿವ) ದೇವಾರ್ಯನೂ ಕನಸಿನಲ್ಲಿ ಬಂದು

---

೧. ಭೀಮನ ತಂದೆಯ ಹೆಸರು ಶಿವದೇವ ಎಂದು 'ರಾಘವಾಂಕಚಾರಿತ್ರ'ದಲ್ಲಿ ಹೇಳಿದೆ. (ರಾ.ಚಾ. ೧೫.೩)

೨. ರಾ.ಚಾ. : ೧೫.೩-೭ ಭೀಮಕವಿಯು 'ಭೀಮಕವೀಶ್ವರ ರಗಳೆ'ಯನ್ನೂ ಬರೆದಿರುವಂತೆ ತೋರುತ್ತದೆ. ಆದರೆ ಸಿಕ್ಕಿರುವ ಗ್ರಂಥ 'ಬಸವಪುರಾಣ'ವು ಮಾತ್ರ.

'ಅವುದಕ್ಕನುಮಾನಸದಿರೊಲಿದಾವ ಶಬ್ದಾರ್ಥಮುಮನಾದೊಡೆ ಭಾವಿಸಲು ನಿನಗಜಿಪಿ ನಿನ್ನಾತ್ಮದೊಳಗಗಲದಿರ್ದು ನಾವು ರಚಿಸುವೆವು' ಎಂದು ಭರವಸೆ ಯೀಯುತ್ತಾರೆಂದು ಕವಿಯೇ ಹೇಳುತ್ತಾನೆ (ಬ.ಪು. ೧. ೧೪–೧೫). ಪ್ರಾಯಶಃ ಇದನ್ನು ನೋಡಿಯೇ ಚಿಕ್ಕನಂಜೇಶನು "ಗುರುಲಿಂಗಜಂಗಮವನಾರಾಧಿಸುತ್ತೆ ಶಿವಶರಣರ ಚರಿತ್ರಮಂ ಭೀಮ ಶಿವಕವಿ ಪೇಳುತಿರೆ ಪಾಲುಕುರಿಕೆ ಸೋಮೇಶ್ವರಂ ಶಿವದೇವನುಂ ಸ್ವಪ್ನದಲಿ ಬಂದು 'ವಿರಚಿಸು ಬಸವಪುರಾಣವನೆಂದು ಕರುಣದಿಂದೊರೆಯಲೆಳ್ಚತ್ತು ಹರಗಣನೇಮವಂ ಪಡೆದು ಧರೆಯಲ್ಲಿ ಭಕ್ತರಾದರಿಸುವಂದದಿ' ರಚಿಸಿದನೆಂದು ಹೇಳುತ್ತಾನೆ.[3] ಹೀಗೆ ಸೋಮೇಶ್ವರ– ಶಿವದೇವರ ಆಜ್ಞೆಯಂತೆ ಅವರಂದುದನ್ನು ತಾನು ಬರೆದುಕೊಂಡು ತೆಲುಗಿನ ಬಸವಪುರಾಣವನ್ನೇ ತಾನು ಕನ್ನಡಿಸಿದ್ದೇನೆಂದು ಕವಿ ಹೇಳುಕೊಳ್ಳುತ್ತಾನೆ (ಬ.ಪು. ೧–೧೬).

ಬಸವಪುರಾಣವನ್ನು ಬರೆದು ಮುಗಿಸಿದ್ದು 'ಉಡುದೇವನಿಧಿನಯನೇಂದು ಸಂಖ್ಯೆಗಳ' (ಎಂದರೆ ಶಕವರುಷ ೧೨೯೧, ಎಂದರೆ ಕ್ರಿ.ಶ. ೧೩೬೯) ಸೌಮ್ಯಸಂವತ್ಸರದ ಶ್ರಾವಣ ಬಹುಳ ದಶಮಿ ಗುರುವಾರವೆಂದು ಕವಿ ಕಾವ್ಯಾಂತ್ಯದಲ್ಲಿ ಹೇಳಿದ್ದಾನೆ (ಬ.ಪು. ೬೦–೯೨). ಈ ಕಾವ್ಯವು ೮ ಕಾಂಡ, ೬೦ ಸಂಧಿ, ೩೬೨೧ ಷಟ್ಪದಿಗಳಿಂದ ಕೂಡಿದ ಬೃಹತ್ ಪುರಾಣ.[4] ಇದು ಇಷ್ಟು ದೊಡ್ಡದಾಗಿರಲು ಕಾರಣ ಪುರಾಣಕ್ಕೆ ಸಹಜವಾಗಿರುವ "ಆದಿಗಣ ಚರಿತಂಗಳೊಳು ಸಂವೇದಿಸಲು ಬಸವನ ಚರಿತೆಯಂ ಬಣ್ಣಿಸುವೆನೊಸೆದು" (ಬ.ಪು. ೧.೨೩) ಎಂದು ಕವಿಯೇ ಹೇಳಿಕೊಂಡಿರುವಂತೆ ಪುರಾತನರ ಕಥೆಗಳನ್ನು ಹೇಳಿರುವುದು. ಬಸವಣ್ಣನ ಜೀವನವನ್ನೇ ಬಯಸಿದವರಿಗೆ ಮಧ್ಯೆಮಧ್ಯೆ ಬರುವ ದೀರ್ಘವಾದ ಕಥೆಗಳು ಅವನ ಜೀವನ ಸಂಗತಿಗಳ ಸರಣಿಯಲ್ಲಿ ಬಿರುಕುಂಟುಮಾಡುವುದು.

ಬಸವಪುರಾಣ ಮೊಟ್ಟಮೊದಲು ಸಂಪೂರ್ಣವಾಗ ಭಾಮಿನೀಷಟ್ಪದಿಯಲ್ಲಿ ರಚಿತವಾಗಿರುವ ಬೃಹತ್‌ಕಾವ್ಯ. ಇವನಿಗೆ ರಾಘವಾಂಕನ ಮೇಲ್ಪಂಕ್ತಿಯಿರುವುದು ಸ್ಪಷ್ಟ. ಆದರೂ ಕವಿಗೆ ಭಾಮಿನೀಷಟ್ಪದಿಯ ಈ ಕಾವ್ಯಕ್ಕೆ ಓದುಗರ ಪ್ರತಿಕ್ರಿಯೆ ಹೇಗಿರುವುದೋ ಎಂಬ ಕಾತರವಿದ್ದಂತಿದೆ. ಆದ್ದರಿಂದಲೇ "ಪ್ರಾಸಯತಿಗಣಗದ್ಯ ಪದ್ಯ ಸಮಾನಯುತ ವಸ್ತುಕದ ಮುಂದೆ ವಿಳಾಸಮೇ ಸಾಮಾನ್ಯಮೀ ವರ್ಣಕಕವಿತೆಯೆಂದು ಓಸರಿದಿರಿ" (ಬ.ಪು. ೧.೨೧) ಎಂದು ಹೇಳುತ್ತಾನೆ. ಇದಕ್ಕಾಗಿಯೇ ತನ್ನ ಕಾವ್ಯವು ಸ್ವಲ್ಪ ಪ್ರೌಢವಾಗಿರುವಂತೆ ರಚಿಸಲು ಪ್ರಯತ್ನಿಸಿದ್ದಾನೆ: "ಸರಸ ಮೃದುತರಯನುಕಗಮಕವಿಸರ ಸಮಾಸ ಪ್ರಾಸ ದೇಶೀಸರಣಿ

---

೩. ರಾ.ಚಾ. ೧೫.೯

೪. ಕೆಲವು ಪ್ರತಿಗಳಲ್ಲಿ ಅರವತ್ಮೂರು ಸಂಧಿಗಳೂ, ೩೬೨೮ ಪದ್ಯಗಳೂ ಇದ್ದರೂ ಅರವತ್ತು ಸಂಧಿ, ೩೬೨೧ ಪದ್ಯಗಳೇ ಸರಿಯಾದ ಸಂಖ್ಯೆಯೆಂದು ಒಬ್ಬ ಪ್ರಾಚೀನ ಪ್ರತಿಕಾರನು ಸ್ಪಷ್ಟಪಡಿಸಿದ್ದಾನೆ (ನೋಡಿ ಕ. ಕವಿಚರಿತೆ (ಪರಿಷತ್) ಪು. ೪೮೨ ಅಡಿಟಿಪ್ಪಣಿ)

ಶಬ್ದಾರ್ಥೋಪಮಾ ಚಾತುರ್ಯ ಮಾಧುರ್ಯ ಶಯ್ಯಾ ದೃಢವ್ಯಾಕರಣಯುತಲಾಲಿತ್ಯ ನಿಯಮಾಕ್ಷರ ಸಲಕ್ಷಣ ಭಾವಮಾಗಿರೆ ರಚಿಸುವೆಂ ಕೃತಿಯ" (ಬ.ಪು. ೧.೧೯) ಎಂದು ತನ್ನ ಕಾವ್ಯರಚನಾ ರೀತಿಯನ್ನು ಹೇಳಿಕೊಂಡಿದ್ದಾನೆ. ಹೀಗೆ ಅವನು ಪ್ರೌಢತೆ ಸರಳತೆಗಳ ಸಾಮರಸ್ಯವನ್ನು ಸಾಧಿಸಲು ಹೆಣಗಿದ್ದಾನೆ.

'ಬಸವಪುರಾಣ'ವು ಕನ್ನಡದಲ್ಲಿ ರಚಿತವಾದ ಮೊಟ್ಟಮೊದಲ ಬಸವಣ್ಣನ ಬಗೆಗಿನ ಪುರಾಣವಾಗಿದೆ. ಹರಿಹರನ 'ಬಸವರಾಜದೇವರ ರಗಳೆ'ಯಲ್ಲಿ ಕೇವಲ ಬಸವಣ್ಣನಿಗೆ ಸಂಬಂಧಿಸಿದ ಸಂಗತಿಯಿದೆಯಲ್ಲದೆ, ಅದು ವೀರಶೈವ ಪುರಾಣದ ಲಕ್ಷಣಗಳನ್ನು ಪಡೆದಿಲ್ಲ. ಹೀಗಾಗಿ ಭೀಮಕವಿಯ ಕೃತಿಯು ಮುಂದಣ ಕನ್ನಡ ವೀರಶೈವಪುರಾಣಗಳಿಗೆ ಮಾರ್ಗವನ್ನು ಹಾಕಿಕೊಟ್ಟಿತು, ಜೊತೆಯಲ್ಲಿ ಭಾಮಿನೀಷಟ್ಪದಿಕಾರರಿಗೆ ಮಾರ್ಗದರ್ಶಿಯಾಯಿತು. ಈ ರೀತಿ ಐತಿಹಾಸಿಕ ದೃಷ್ಟಿಯಿಂದ ಈ ಕೃತಿಗೆ ಕನ್ನಡ ಸಾಹಿತ್ಯದಲ್ಲೊಂದು ವಿಶಿಷ್ಟ ಸ್ಥಾನವಿದೆ.

**'ಬಸವಪುರಾಣ'ದಲ್ಲಿನ ಬಸವ ವೃತ್ತಾಂತ**

ಶ್ರೀಗಿರಿಯ ಪಡುವಣದಲ್ಲಿನ ಕರ್ನಾಟಕ ದೇಶದಲ್ಲಿ ಶಿವಭಕ್ತಿ ಬೀಜಕ್ಕೆ ನೆಲೆಯೆನಿಸಿದ ಇಂಗುಳೇಶ್ವರ ಬಾಗೆವಾಡಿಯೆಂಬ ಮಹಾ ಅಗ್ರಹಾರವೊಂದಿತ್ತು. ಅದರ ಗ್ರಾಮಣೀಮಣಿ ಮಂಡಗೆ ಮಾದಿರಾಜನೆಂಬ ಶಿವಭಕ್ತ; ಅವನ ಹೆಂಡತಿಯು ಮಾದಲಾಂಬಿಕೆಯೆಂಬ ಪತಿವ್ರತೆ. ಮಕ್ಕಳಿಲ್ಲದ್ದರಿಂದ ಮಾದಿರಾಜ ಮಾದಲಾಂಬಿಕೆ-ಯರು ಪುತ್ರಭಾಗ್ಯವನ್ನು ಬಯಸಿ ಹಲವಾರು ವ್ರತಗಳನ್ನು ಮಾಡುತ್ತಾರೆ. ಆದರೂ ಮಕ್ಕಳಾಗದಿರಲು ಜೋಯಿಸರನ್ನು ವಿಚಾರಿಸಲು ಅವರು ನಂದಿನಾಥನ ನೋಂಪಿಯನ್ನು ಮಾಡಿರಿ ಎಂದು ಸೂಚಿಸುತ್ತಾರೆ. ಅಂತೆಯೇ ಮಾದಲಾಂಬಿಕೆಯು ಸೋಮವಾರದಿಂದ ಪ್ರಾರಂಭಿಸಿ ಒಂಬತ್ತು ದಿವಸಗಳ ಕಾಲ ವ್ರತವನ್ನಾಚರಿಸಿ ನಂದಿನಾಥನನ್ನು ಭಜಿಸುತ್ತಾಳೆ. ಆ ಹೊತ್ತಿಗೆ ಶಿವನಾಜ್ಞೆಯಿಂದ ಮರ್ತ್ಯಕ್ಕೆ ಬಂದಿದ್ದ ನಂದಿಯು ಅವಳ ಭಕ್ತಿಗೆ ಮೆಚ್ಚಿ ಅವಳ ಗರ್ಭವನ್ನು ಸೇರುತ್ತಾನೆ.

ಹೀಗೆ ಗರ್ಭಿಣಿಯಾದ ಮಾದಲಾಂಬಿಕೆಯಲ್ಲಿ ಒಂದು ಸುಂದರವಾದ ಮಗುವು ಜನಿಸುತ್ತದೆ. ಆ ಮಗುವಿನೊಳಗಿದ್ದ ಶಿವನು ಗುರುವಿನಾಕಾರವನ್ನು ತಾಳಿ, ತಾನು ಕಪ್ಪಡಿ ಸಂಗಮದ ಕೂಡಲ ಸಂಗಮೇಶನೆಂದೂ ಈ ಮಗುವು ಲೋಕಹಿತಾರ್ಥವಾಗಿ ಆಕೆಯಲ್ಲಿ ಜನಿಸಿದೆಯೆಂದೂ ಹೇಳಿ, ಶಿವಾರ್ಪಿತವಲ್ಲದ್ದನ್ನು ಮಗುವಿಗೆ ನೀಡದಿರಿ ಎಂದು ತಂದೆ-ತಾಯಿಯರಿಗೆ ಸೂಚಿಸಿ ಶಿಶುವಿಗೆ ಲಿಂಗಧಾರಣೆ ಮಾಡಿ ಅಂತರ್ಧಾನವಾಗುತ್ತಾನೆ. ತಂದೆತಾಯಿಗಳು ಮಗುವಿಗೆ ಯಥೋಚಿತವಾಗಿ ಜಾತಕರ್ಮಗಳನ್ನು ಮಾಡುತ್ತಾರೆ, ಬಸವನೆಂದು ಹೆಸರಿಡುತ್ತಾರೆ.

ಬಸವನು ಬೆಳೆದು ಎಂಟು ವರ್ಷದ ಹುಡುಗನಾಗುತ್ತಾನೆ; ಆಗ ಅವನಿಗೆ ಉಪನಯನವನ್ನು ಮಾಡಲು ಮಾದಿರಾಜನು ಸಿದ್ಧತೆಗಳನ್ನು ನಡೆಸುತ್ತಾನೆ. ಆಗ ಬಸವನು, ತನಗೆ ಜನಿಸಿದ ಕ್ಷಣವೇ ಸಂಗಮೇಶನು ದೀಕ್ಷೆಯನ್ನು ಕೊಟ್ಟು

ಶೈವಮಾರ್ಗದಲ್ಲಿರಿಸಿದ್ದಾನೆ, ಹೀಗೆ 'ಉಭಯಕರ್ಮ ನಿರ್ಮಲ'ನಾದ ತನ್ನನ್ನು ಕರ್ಮಮಾರ್ಗದಲ್ಲಿ ತೊಡಗಿಸುವುದು ಯುಕ್ತವಲ್ಲ ಎಂದು ತಂದೆಯೊಡನೆ ವಾದಿಸುತ್ತಾನೆ. ತಂದೆಯು ಬ್ರಾಹ್ಮಣ್ಯದ ಹಿರಿಮೆಯನ್ನೂ ಬ್ರಾಹ್ಮಣನಿಗೆ ಉಪನಯನದ ಮಹತ್ವವನ್ನೂ ಹೇಳುತ್ತಾನೆ. ಬ್ರಾಹ್ಮಣನು ಕೋಟ್ಯನುಕೋಟಿ ದೇವತೆಗಳ ಆರಾಧಕ, ಆದರೆ ತಾನು ಹಾಗೆ ಆರಾಧಿಸಿದರೆ ತನ್ನ ಮೃಡಭಕ್ತಿಯು ನಾಶವಾಗುತ್ತದೆ, ಈ ರೀತಿ "ಪಾರ್ಬನಾದಡೆ ಮೃಡನ ಭಕ್ತನದೆಂತಹನು ತಾಂ, ಮೃಡನ ಭಕ್ತನು ಪಾರ್ಬನೆಂತಹನಯ್ಯ" ಎಂದು ಹೇಳಿ ತಾನು "ಹಾರುವ ಕುಲಕೆ ಹಾರುವನಲ್ಲ"ವೆಂಬ ತೀರ್ಮಾನವನ್ನು ಬಸವಣ್ಣನು ತಿಳಿಸಿ ತನ್ನ ಸಹೋದರಿಯಾದ ನಾಗಾಂಬಿಕೆಯೊಡನೆ ಮನೆಬಿಟ್ಟು ಹೊರಬರುತ್ತಾನೆ. ಮುಂಜಿಗಾಗಿ ಬಂದಿದ್ದ ಮಾದಲಾಂಬೆಯ ಸೋದರನೂ ಬಿಜ್ಜಳನ ಭಂಡಾರಿಯೂ ಆದ ಬಲದೇವನು ಬಸವನ ಸ್ಥೈರ್ಯ ಧೀಮಂತಿಕೆಗಳನ್ನು ಕಂಡು ಮೆಚ್ಚಿ, ಅವನಿಗೆ ತನ್ನ ಮಗಳಾದ ಗಂಗಾಂಬೆಯನ್ನು ಕೊಟ್ಟು ಮದುವೆ ಮಾಡಲು ನಿರ್ಧರಿಸಿ ಮುಂದೆ ಹಾಗೆಯೇ ಮಾಡುತ್ತಾನೆ.

ಗಂಗಾಂಬಿಕೆಯನ್ನು ಮದುವೆಯಾದ ಬಸವಣ್ಣನು ಕಲ್ಯಾಣವನ್ನು ಬಿಟ್ಟು ಹೆಂಡತಿ-ಸೋದರಿಯರೊಂದಿಗೆ ಕಪ್ಪಡಿ ಸಂಗಮ ಕ್ಷೇತ್ರಕ್ಕೆ ಬರುತ್ತಾನೆ. ಅಲ್ಲಿ ಕೂಡಲಸಂಗಮೇಶ್ವರನ ಪೂಜೆಯನ್ನು ಕೈಕೊಂಡು ಸುಖದಿಂದ ಜೀವಿಸುತ್ತಿರುತ್ತಾನೆ. ಅತ್ತ ಬಲದೇವ ಮಂತ್ರಿಯು ಶಿವಪದವನ್ನೈದಿದಾಗ, ಅವನ ಬಂಧುಗಳು ಯಾರಾದರೂ ಇದ್ದರೆ ಮಂತ್ರಿಯ ಆಸ್ತಿಯನ್ನು ಕೊಡಲು ಬಯಸಿರುವ ತನ್ನ ನಿರ್ಧಾರವನ್ನು ಬಿಜ್ಜಳನು ತಿಳಿಸಿದಾಗ ಬಸವಣ್ಣನ ವಿಷಯವು ತಿಳಿದುಬರುತ್ತದೆ. ಅವನನ್ನು ಬರಮಾಡಿಕೊಳ್ಳುತ್ತಾನೆ. ಬಿಜ್ಜಳನು ಬಸವಣ್ಣನನ್ನು ಸ್ವಾಗತಿಸಿ ಅರಮನೆಗೆ ಕರೆತಂದಾಗ, ಸಭಾಭವನದಲ್ಲಿ ಒಂದು ಬರೆಹವು ಮೇಲಿನಿಂದ ಬೀಳುತ್ತದೆ. ಅದರ ಬರೆಹವು ಯಾವ ಪರಿಚಿತ ಲಿಪಿಯಲ್ಲೂ ಇಲ್ಲದುದನ್ನು ಕಂಡು ರಾಜನು ಲಿಪಿತಜ್ಞರನ್ನು ಕರೆಸಿ ಓದಿಸಲು ಪ್ರಯತ್ನಿಸಿ ವಿಫಲನಾಗುತ್ತಾನೆ; ಕೊನೆಗೆ, ಆ ಓಲೆಯನ್ನು ಓದಿದವರಿಗೆ ಸಕಲ ನಿಯೋಗದ ಒಡೆತನವನ್ನು ಕೊಡುವುದಾಗಿ ಸಾರುತ್ತಾನೆ. ಬಸವಣ್ಣನು ಅದನ್ನು ಓದಿ, ಚಾಳುಕ್ಯ ವಂಶಜರು ಹಿಂದೆ ಸಿಂಹಾಸನದ ಅಡಿಯಲ್ಲಿ ನಿಕ್ಷೇಪಿಸಿದ್ದ ಅಪಾರ ಧನವಿರುವ ವಿಷಯವನ್ನು ತಿಳಿಸುತ್ತಾನೆ. ಅದನ್ನು ಪರೀಕ್ಷಿಸಿ ಅದು ನಿಜವಾದುದನ್ನು ಕಂಡು ಬಿಜ್ಜಳನು ಬಸವಣ್ಣನನ್ನು ಅಮಾತ್ಯಮುಖ್ಯನನ್ನಾಗಿ ಮಾಡುತ್ತಾನೆ. ಅದನ್ನು ಕೈಕೊಂಡು ಬಸವನು ಬಲದೇವನ ಮನೆಯಲ್ಲಿಯೇ ವಾಸಿಸಲು ತೊಡಗುತ್ತಾನೆ. ಹೀಗೆ ಉಚ್ಚಪದವಿಗೇರಿದ ಬಸವನು ಭಕ್ತರ ದಾಸೋಹ ಕೈಂಕರ್ಯಗಳನ್ನು ಮಾಡುವ ಪ್ರತಿಜ್ಞೆ ಮಾಡಿ ಶರಣರ ಕಣ್ಮಣಿಯಾಗಿ ಬಾಳುತ್ತಿರುತ್ತಾನೆ.

ಬಸವಣ್ಣನ ಭಕ್ತಿಯ ವಿಷಯವನ್ನು ಕೇಳಿದ ಅಲ್ಲಮಪ್ರಭುವು ಕಲ್ಯಾಣಕ್ಕೆ ಬಂದಾಗ ಬಸವನು ಅವನನ್ನು ಅಪಾರಭಕ್ತಿಯಿಂದ ಸ್ವಾಗತಿಸುತ್ತಾನೆ. ಮನೆಗೆ ಕರೆತಂದು ದಿವ್ಯಾನ್ನಗಳನ್ನು ನಿವೇದಿಸಿ ಆರೋಗಿಸಲು ಕೇಳಿಕೊಳ್ಳಲು ಅಲ್ಲಮನು

ಲಕ್ಷ ತೊಂಬತ್ತಾರು ಸಾವಿರ ಜಂಗಮರಿಗೆ ಮಾಡಿದ್ದ ಆಹಾರವೆನ್ನಲ್ಲ ಒಂದು ಗಳಿಗೆಯಲ್ಲಿ ತಿಂದಾಗ, 'ಮಾಡಿದ ಅಡುಗೆಯೆಲ್ಲ ತೀರಿತು ಇನ್ನು ನಾನೇ ನಿಮಗೆ ಆಹಾರ'ವೆಂದು ಬಸವಣ್ಣನು ತನ್ನನ್ನೆ ಸಮರ್ಪಿಸಿಕೊಂಡಾಗ ಅವನ ಭಕ್ತಿಗೆ ಮೆಚ್ಚಿದ ಅಲ್ಲಮನು ಅವನನ್ನು ಕೊಂಡಾಡುತ್ತಾನೆ. ಆಗ ಬಸವನು ತನ್ನ ವಿನಯವನ್ನು ಮೆರೆದು ಅಲ್ಲಮನು ಉಪದೇಶಿಸಿದ ಲಿಂಗತತ್ವವನ್ನು ಕೇಳಿ ತಿಳಿದು ಪುನೀತನಾಗುತ್ತಾನೆ.

ಬಸವಣ್ಣನ ವ್ಯಕ್ತಿತ್ವ ಹಿರಿದಾಗುತ್ತ ಬಂದು ಅವನೆಡೆಗೆ ಶರಣರು ಹೆಚ್ಚು ಆಕರ್ಷಿತರಾಗುತ್ತಿದ್ದಂತೆಯೇ, ಕೆಲವರಿಗೆ ಅವನ ಬಗ್ಗೆ ಅಸೂಯೆಯುಂಟಾಗುತ್ತದೆ. ಆದರೆ ಮಹಿಮಾನ್ವಿತನಾದ ಬಸವನು ತನ್ನ ಕೆಲವು ಪವಾಡಗಳಿಂದ ಭಕ್ತರ ಮೇಲೆ ಪ್ರಭಾವವನ್ನು ಬೀರುತ್ತಾನೆ. ಒಮ್ಮೆ ಕೆಲವು ತಸ್ಕರರು ಬಸವಣ್ಣನನ್ನು ಬಂದಿಯಾಗಿ ಹಿಡಿಯಲು ಕರಿಯ ಬದನೆಕಾಯಿಗಳನ್ನೇ ಲಿಂಗದಂತೆ ಕಟ್ಟಿಕೊಂಡು ಬಂದಾಗ, ಅವರನ್ನು ಕುಳ್ಳಿರಿಸಿ ಸಹಜ ಜಂಗಮರಂತೆಯೇ ಬಸವಣ್ಣನು ಸತ್ಕರಿಸುತ್ತಾನೆ. ಶಿವಾರ್ಚನೆಗೆ ಪ್ರಾರಂಭಿಸಿರೆಂದು ಕೇಳಿದಾಗ ಆ ಠಕ್ಕರು ತಮಗಿನ್ನು ಸಾವು ತಪ್ಪದೆಂದು ಹೆದರುತ್ತ ಒಬ್ಬೊಬ್ಬರ ಮುಖವನ್ನು ನೋಡಿಕೊಳ್ಳುತ್ತಿರಲು, ಆಶ್ಚರ್ಯ, ಅವರ ಕೊರಳಿನಲ್ಲಿದ್ದ ಬದನೆಯ ಕಾಯಿಗಳು ಲಿಂಗವಾಗಿರುತ್ತವೆ! ಹೀಗೆ ಭಕ್ತರಾದ ಅವರನ್ನು ಬಸವನು ಇಷ್ಟಾರ್ಥಗಳನ್ನು ನೀಡಿ ಕಳುಹಿಸಿಕೊಡುತ್ತಾನೆ. ಮತ್ತೊಮ್ಮೆ, ಬಸವನು, ರಾಜಾಸ್ಥಾನದಲ್ಲಿ ಕುಳಿತಿದ್ದಾಗ ಏನನ್ನೋ ಹಿಡಿಯುವಂತೆ ನಟಿಸುತ್ತ ಕೈಗಳನ್ನು ಮೇಲೆತ್ತುತ್ತಾನೆ. ಬಿಜ್ಜಳನು ತಮಾಷೆ ಮಾಡಿ ಹಾಗೆ ಕೈಯೆತ್ತಲು ಕಾರಣವೇನೆಂದಾಗ ಬಸವನು, ಕಾಟಕ್ಕನೆಂಬ ಭಕ್ತೆಯೊಬ್ಬಳು ಹರವಿಯನ್ನು ಹೊತ್ತು ನಡೆಯುವಾಗ ಕೆಸರಲ್ಲಿ ಕಾಲಿಕ್ಕಿ ಜಾರಲು 'ಬಸವಾ' ಎಂದು ಧ್ಯಾನಿಸಿದುದರಿಂದ ತಾನು ಆ ಬೀಳುತ್ತಿದ್ದ ಅವಳ ಹರವಿಯಿನ್ನು ಹಿಡಿದುದಾಗಿ ತಿಳಿಸುತ್ತಾನೆ. ಆ ಗೊಲ್ಲತಿಯ ಆಕೃತಿ ಹಾಗೂ ಮನೆಯ ಜಾಗವನ್ನು ಬಸವನಿಂದ ತಿಳಿದು ಬಿಜ್ಜಳನು ಭಟರನ್ನು ಕಳುಹಿಸಿ ಆ ಹೆಸರಿನ ವ್ಯಕ್ತಿಯನ್ನು ಕರತರಿಸಿದಾಗ ಬಸವನು ಹೇಳಿದ ಸಂಗತಿ ನಿಜವಾಗಿದ್ದುದ್ದು ತಿಳಿಯುತ್ತದೆ. ಮುಂದೊಮ್ಮೆ ಕೆಲವರು ಸುಖೀಜಂಗಮರು ಬಸವನಲ್ಲಿ ಬಂದು ಅಪಾರಹಣವನ್ನು ಬೇಡಿದಾಗ ಅವರ ಬಯಕೆಯನ್ನು ಸಲ್ಲಿಸುತ್ತಾನೆ. ಇದನ್ನು ಕಂಡ ಕೆಲವರು ಬಿಜ್ಜಳನಲ್ಲಿಗೆ ಬಂದು ಬಸವನು ಭಂಡಾರದ ಹಣವನ್ನೆಲ್ಲ ಮಿಂಡಜಂಗಮರಿಗೆ ಕೊಟ್ಟು ಹಣವನ್ನು ದುರ್ವ್ಯಯ ಮಾಡುತ್ತಿರುವನೆಂದು ದೂರುತ್ತಾರೆ. ಕೋಪಗೊಂಡ ರಾಜನು ತಕ್ಷಣ ಬಸವನನ್ನು ಕರೆಸಿ ಲೆಕ್ಕವನ್ನು ಒಪ್ಪಿಸಬೇಕೆಂದೂ ಹೆಚ್ಚು ಕಡಿಮೆಯಿದ್ದರೆ ಅವನಿಗೆ ಶಿಕ್ಷೆ ವಿಧಿಸುವುದಾಗಿಯೂ ಬೆದರಿಸುತ್ತಾನೆ. ಇದನ್ನು ಕೇಳಿ ನಸುನಕ್ಕ ಬಸವನು 'ಶಿವಭಕ್ತಿಯೆಂಬ ಚಿಂತಾಮಣಿ, ಕಲ್ಪತರು, ಕನಕಾಚಲವಿರುವಾಗ ನಿನ್ನ ಹಣವನ್ನು ಬಯಸುವ ಆವಶ್ಯಕತೆಯಿಲ್ಲ'ವೆಂದು ತಿಳಿಸಿ ತಾನು ಜಂಗಮರಿಗಿತ್ತುದು ತನ್ನೊಡವೆಯನ್ನೇ ಹೊರತು ಭಂಡಾರದ ಹಣವನ್ನಲ್ಲವೆಂದು ಹೇಳಿ ಭಂಡಾರದ ಹಣದ ಪೆಟ್ಟಿಗೆಗಳನ್ನು ತರಿಸಿದಾಗ ಅಲ್ಲಿನ ಹೊನ್ನು ಹೆಚ್ಚಾಗುತ್ತದೆ. ಇದನ್ನು ಕಂಡು

ಹೆದರಿದ ಬಿಜ್ಜಳನು 'ಪುನಃ ಯಾರಾದರೂ ಬಸವಣ್ಣನ ಬಗ್ಗೆ ದೂರಿದರೆ ಅವರ ನಾಲಿಗೆಗಳನ್ನು ಸೀಳಿಸುತ್ತೇನೆ' ಎಂದು ಕೊಂಡೆಯರನ್ನು ಬೈದು ಕಳಿಸುತ್ತಾನೆ.

ಬಸವನು ಜಂಗಮಪ್ರಾಣಿಯೆಂಬ ವಿಷಯವು ಸ್ಥಿರೀಕೃತವಾದ ಪ್ರಸಂಗವು ಒಮ್ಮೆ ನಡೆಯುತ್ತದೆ. ಒಮ್ಮೆ ಬಸವಣ್ಣನು ಪರಶಿವಯೋಗ ನಿದ್ರಾಮುದ್ರೆಯೊಳಿರುತ್ತಾನೆ. ಆಗ ಬಸವಸಂದರುಶನ ನಿಮ್ಮಿತವಾಗಿ ಕೆಲವು ಹೊಸಬ ಜಂಗಮರು ಮಹಮನೆಗೂ ಬಂದಾಗ ಆತನು ನಿದ್ರಾಪರವಶನಾಗಿದ್ದ ವಿಷಯವನ್ನು ತಿಳಿದು ಅವನನ್ನು ತೊಂದರೆಗೊಳಿಸಲಿಚ್ಛಿಸದೆ ಮರಳಿ ಹೋಗುತ್ತಾರೆ. ಅನಂತರ ಸಂಧ್ಯಾವಸರದಲ್ಲಿ ಶಿವಾರ್ಚನೆಗೆಂದು ಜಂಗಮ ಸಮೂಹವು ಬಂದಾಗ ಬಸವನ ಪ್ರಾಣ ಹಾರಿಹೋಗಿರುವ ವಿಷಯ ಅರಿವಾಗುತ್ತದೆ. ಆಗ ಆ ಭಕ್ತರು ಅಂದು ನಡೆದ ವಿಷಯವೇನೆಂದು ವಿಚಾರಿಸಿ ಹೊಸಬ ಜಂಗಮರು ಸಂದರುಶನಾರ್ಥಿಗಳಾಗಿ ಬಂದು ಹಾಗೆಯೇ ವಾಪಸು ಹೋಗಿದ್ದ ವಿಷಯವು ತಿಳಿಯುತ್ತದೆ. ಆಗ ಎಲ್ಲ ಭಕ್ತರ ಮನೆಗಳಲ್ಲಿ ಶೋಧಿಸಿ ಅವರನ್ನು ಕರೆತಂದಾಗ ಅವರೊಡನೆ ಬಸವನ ಪ್ರಾಣವೂ ಅವರ ಜೊತೆಯಲ್ಲಿಯೇ ಮರಳುತ್ತದೆ. ಬಸವನ ಜಂಗಮ ಪ್ರಾಣದ ರೀತಿಯನ್ನು ಪರೀಕ್ಷಿಸಲು ಶಿವನು ಕಿನ್ನರಯ್ಯಗಳನ್ನು ತನ್ನಲ್ಲಿ ಐಕ್ಯ ಮಾಡಿಕೊಳ್ಳುತ್ತಾನೆ. ಈ ವಿಷಯವನ್ನರಿತ ಬಸವಣ್ಣನು ಬೊಮ್ಮಯ್ಯನನ್ನು ನೋಡಿ ಶೋಕಾಕ್ರಾಂತನಾಗಿ ಹಲವಾರು ವಿಧಗಳಿಂದ ಪ್ರಲಾಪಿಸುತ್ತಾನೆ. ಆ ಸಮಯದಲ್ಲಿ ಪಡಿಹಾರಿ ಬಾಚಯ್ಯನೆಂಬ ದ್ವಾರಪಾಲಕನು ಈ ವಿಷಯವನ್ನು 'ಸದಾಶಿವ ಸಮ'ನೆನಿಸಿದ ಮಡಿವಾಳ ಮಾಚಿದೇವನಿಗೆ ತಿಳಿಸಲು ಬಂದು ವಿಷಯವನ್ನರುಹಿದಾಗ, ಬಸವಣ್ಣನು ಕಿನ್ನರಯ್ಯನ ಐಕ್ಯವನ್ನು ಕಂಡು ಅಳುತ್ತಿರಲು ವಿಷಯವನ್ನು ತಿಳಿದು 'ಜಂಗಮಪ್ರಾಣಿಯೆಂದು ತನ್ನನ್ನು ಕರೆದುಕೊಳ್ಳುವ ಬಸವನು ಕಿನ್ನರಯ್ಯನ ಸಾವನ್ನು ಕಂಡು ಹೀಗೆ ಪ್ರಲಾಪಿಸುವುದು ಆತನ ಠಕ್ಕುತನವನ್ನು ತೋರಿಸುತ್ತದೆ, ತನ್ನ ಭಾಷೆಯನ್ನುಳಿಸಿಕೊಳ್ಳದೆ ಸಂಸಾರಿಯಂತೆ ಅಳುವ ಬಸವಣ್ಣನನ್ನು ಕಾಣಲು ತನಗೆ ಇಷ್ಟವಿಲ್ಲ' ಎಂದು ಹೇಳಿಕಳಿಸುತ್ತಾನೆ. ಪಡಿಹಾರಿ ಬಾಚಯ್ಯನಿಂದ ಈ ಮಾತುಗಳನ್ನು ಕೇಳಿದ ಬಸವನ ಪ್ರಾಣವೂ ಶಿವೈಕ್ಯವಾಗುತ್ತದೆ. ಈ ವಿಷಯವನ್ನು ಮಾಚಯ್ಯನಿಗೆ ತಿಳಿಸಿದಾಗ ಆತನು ಅವರಿದ್ದೆಡೆಗೆ ಬರುತ್ತಾನೆ. ಹಾಗೆ ಬಂದು 'ಕಿನ್ನರಯ್ಯ, ಪ್ರಾಣಮಿತ್ರನಾದ ಬಸವಣ್ಣನನ್ನುಳಿದು ಶಿವೈಕ್ಯನಾಗಬಹುದೇ, ಅದರಿಂದ ಬಸವನೂ ಶಿವನಲ್ಲಿ ಅಡಗುವಂತಾಯಿತು. ಇದರ ನಿಮಿತ್ತವಾಗಿ ಭಕ್ತಿಯ ಹೆಸರು ಕೆಡುತ್ತದೆ. ಹೀಗಾಗಿ ಬಸವಣ್ಣನು ಇರುವವರೆಗೂ ನೀನೂ ಇಲ್ಲಿರಬೇಕು, ಎದ್ದೇಳು' ಎಂದು ಹೇಳಿದಾಗ ಕಿನ್ನರಯ್ಯನ ಪ್ರಾಣ ಮರುಳುತ್ತದೆ, ಅದರ ಹಿಂದೆಯೇ ಬಸವಣ್ಣನೂ ನಿದ್ದೆ ತಿಳಿದೆದ್ದವನಂತೆ ಏಳುತ್ತಾನೆ. ಮುಂದೆ ಇನ್ನೊಂದು ಬಾರಿ ಬಸವಣ್ಣನ ಜಂಗಮಪ್ರಾಣವನ್ನು ಪರೀಕ್ಷಿಸಲು ಶಿವನು ಮೇದರಕೇತಿದೇವನನ್ನು ತನ್ನಲ್ಲಿ ಅಡಗಿಸಿಕೊಳ್ಳುತ್ತಾನೆ. ಆ ವಿಷಯವನ್ನರಿತ ಬಸವನು ಭಕ್ತರ ಸಮೇತ ಅಲ್ಲಿಗೆ ಬಂದು ಪಡಿಹಾರಿಯ ಮೂಲಕ ಮಾಚಯ್ಯನಿಗೆ ಹೇಳಿ ಕಳಿಸುತ್ತಾನೆ. ಅಲ್ಲಿಗೆ

ಯಾರು ಯಾರು ಬಂದಿದ್ದಾರೆಂದು ತಿಳಿದ ಮಾಚಯ್ಯನು "ಬಸವನುಂ ತಾನೆಹಗೆ ಬಂದಿದ್ದಹನೊ ನಾಚಿಕೆಯಹುದಲಾ ತನಗೆಂದರಿಯನೇ ಮರೆದನೇ ತನ್ನ ಗಹನ ಭಾಷೆಯನು?" ಎಂದು ಹೀಯಾಳಿಸಿ ಕಳಿಸುತ್ತಾನೆ. ಈ ಮಾತನ್ನು ಕೇಳಿ, ಮಾಚಯ್ಯನು ತನ್ನನ್ನು ಎಚ್ಚರಿಸಿದನೆಂದು ಹೇಳಿ ಪ್ರಾಣವನ್ನು ಬಿಡುತ್ತಾನೆ. ಮತ್ತೆ ಈ ವಿಷಯವನ್ನು ಬಾಚಯ್ಯನಿಂದ ತಿಳಿದ ಮಡಿವಾಳಯ್ಯನು ಹರುಷವನ್ನು ತಾಳಿ ಆ ಸ್ಥಳಕ್ಕೆ ಬರುತ್ತಾನೆ. ಭಕ್ತರೆಲ್ಲ ಆತನಿಗೆ ನಮಸ್ಕರಿಸಿ ಬಸವಣ್ಣನ ಜಂಗಮಪ್ರಾಣವನ್ನು ಹೊಗಳುತ್ತಾರೆ. "ಜಂಗಮಾವಳಿಗೊಲೆದು ಮಾಡುವ ಲಿಂಗವಂತರನಿತ್ತಲಿರಿಸದೆ ನುಂಗಿಕೊಂಡಿ ತನುಗುಳದಿದ್ದಹಡಿನ್ನು ಸೈರಿಸೆನು, ಅಂಗಜಾರಿಯ ಮೇಲೆ ಹೊಯಿ ಹೊಯಿ ಡಂಗುರವನು" ಎಂದು ಶಿವನ ಮೇಲೇ ಡಂಗುರವನ್ನು ಹೊಡೆಸುತ್ತಾನೆ. ಸ್ವಲ್ಪ ಕಾಲಾನಂತರ ಕೇತಿದೇವ- ಬಸವಣ್ಣನವರಿಬ್ಬರೂ ಎಚ್ಚರಗೊಳ್ಳುತ್ತಾರೆ. ಭಕ್ತರೆಲ್ಲ ಬಸವ-ಮಾಚಯ್ಯರನ್ನು ಸ್ತುತಿಸುತ್ತಾರೆ.

ಕಲ್ಯಾಣದಲ್ಲಿ ಶಿವನಾಗಮಯ್ಯನೆಂಬ ಅಂತ್ಯಜನಾದ ಶ್ರೇಷ್ಠ ಭಕ್ತನೊಬ್ಬನಿದ್ದ; ಬಸವನ ಗೌರವಕ್ಕೆ ಪಾತ್ರನಾಗಿದ್ದ ಆತನ ಮನೆಗೆ ಬಸವನು ಹೋಗಿ ಒಕ್ಕುಮಿಕ್ಕುದನ್ನು ಸ್ವೀಕರಿಸುತ್ತಿದ್ದ. ಇದನ್ನು ಸಹಿಸದೆ ಕೆಲವರು ಚಾಡಿಕೋರರು ಬಿಜ್ಜಳನಲ್ಲಿಗೆ ಬಂದು 'ಮೈಲಿಗೆಯಿಂದ ಕೂಡಿದ ಬಸವನು ಸಭ್ಯನ ಹಾಗೆ ನಿಮ್ಮಲ್ಲಿಗೆ ಬಂದು ಹೊಲೆಗಲಸುತ್ತಿದ್ದಾನೆ. ಇದರಿಂದ ವರ್ಣಾಶ್ರಮ ನೀತಿಗಳೆಲ್ಲ ಹಾಳಾಗುತ್ತಿವೆ. ಇದರ ಪಾತಕವೆಲ್ಲವೂ ರಾಜನಿಗೆ ತಟ್ಟುತ್ತದೆ' ಎಂದು ಮುಂತಾಗಿ ದೂರುತ್ತಾರೆ. ಬಿಜ್ಜಳನು ಬಸವನನ್ನು ಆಗಲೇ ಕರೆಸಿದಾಗ ಅವನು ಶಿವನಾಗಮಯ್ಯನನ್ನು ಪಲ್ಲಕ್ಕಿಯಲ್ಲಿ ಕರೆತಂದುದನ್ನು ನೋಡಿ ಅರಮನೆಯು ಅಪವಿತ್ರವಾಗುತ್ತದೆಂಬ ಕಾರಣದಿಂದ ಹೊರಗಿನ ಅಂಗಳದಲ್ಲಿಯೇ ಸಭೆಯನ್ನು ಸೇರಿಸುತ್ತಾನೆ; ಅಲ್ಲಿಯೇ ವಿಚಾರಣೆಗೆ ಪ್ರಾರಂಭವಾಗುತ್ತದೆ. ಬಿಜ್ಜಳನು "ಅಷ್ಟಾದಶಜಾತಿಗಳು ಈಗ ಉಂಟಾದುವಲ್ಲ, ಆದಿಯಲ್ಲೇ ಆದವು. ನೀನು ಹೊಲೆಗಲಸಿ ವರ್ಣಸಂಕರಕ್ಕೆ ಎಡೆ ಮಾಡಿಕೊಡುತ್ತಿದ್ದೀಯೆ. ಇನ್ನು ಮಳೆ ಬಂದು ಬೆಳೆಯಾಗುತ್ತದೆಯೇ? ನೀನು ನಿರ್ಮಲವಾಗಿರಬೇಕು' ಎಂದು ಮುಂತಾಗಿ ಬಸವನಿಗೆ ಹೇಳುತ್ತಾನೆ. ಅದನ್ನು ಕೇಳಿ ಬಸವಣ್ಣನು ದೇವನದಿಗೆ ಹಳ್ಳಗಳು ಎಣೆಯಾಗುತ್ತವೆಯೇ? ಸುರಗಿರಿಗೆ ಬೆಟ್ಟಗಳು ಸಾಟಿಯೇ? ಕಾಮಧೇನುವಿಗೆ ಸಾಮಾನ್ಯ ಹಸುವು ಸಮವೇ? ಶಿವಭಕ್ತರಿಗೆ ಬ್ರಾಹ್ಮಣರು ಎಣೆಯಾಗುತ್ತಾರೆಯೆ? ಶಿವನಾಗಮಯ್ಯನಿಗೆ ಈ ಬ್ರಾಹ್ಮಣನು ಸಮನಲ್ಲ. ಹೊಲೆಯನು ಶಿವಭಕ್ತನಾದರೆ ಅವನೇ ನಿಜವಾದ ಕುಲಜನಾಗುತ್ತಾನೆ. ಶಿವನನ್ನೇ ತನ್ನ ಮನೆಯ ಅಂಬಲಿಯನ್ನುಣ್ಣುವಂತೆ ಮಾಡಿದ ಮಾದಾರ ಚನ್ನಯ್ಯನಂತಹ ಸದ್ಭಕ್ತನನ್ನು ಹೊಲೆಯನೆನ್ನಬಹುದೇ?' ತಾಮ್ರವು ಸಿದ್ಧರಸದಿಂದ ಹೊನ್ನಾಗುವಂತೆ ಶ್ರೀ ಗುರುಸ್ಪರ್ಶದಿಂದ ಅಂತ್ಯಜನಾದವನೂ ಕುಲಜನಾಗುತ್ತಾನೆ. ತಾವರೆಯು ಕೆಸರಿನಲ್ಲಿ ಹುಟ್ಟಿದರೂ ಪೂಜ್ಯವಾಗುತ್ತದೆಯಲ್ಲವೇ? ಹೀಗೆ ಅಂತ್ಯಜನಾದರೂ ಶಿವಭಕ್ತನಾದರೆ ಶ್ರೇಷ್ಠನಾಗುತ್ತಾನೆ' ಎಂದು ನುಡಿದಾಗ ಬಿಜ್ಜಳನಿಗೆ ಕೋಪವುಕ್ಕುತ್ತದೆ. ಅವನು

'ಶಿವಭಕ್ತರನ್ನು ಚಿವುಟಿದರೆ ಹಾಲೂ ಇತರರನ್ನು ಚಿವುಟಿದರೆ ರಕ್ತವೂ ಬರುತ್ತದೆಯೇನು?' ಎಂದು ಸವಾಲು ಹಾಕುತ್ತಾನೆ. 'ವೇದಭಾರಭರಾಕ್ರಾಂತರಾಗಿ, ಆನುಕೊಲ್ಲೆನು ನೇಣುಕೊಂದಿತು ಎನ್ನುವ ಪಾರ್ವರೊಡನೆ ಶಿವಭಕ್ತರಲ್ಲಿ ನಿನ್ನ ಮಾತಿಗೆ ಪ್ರತಿದೋರುತ್ತೇನೆ. ಶಿವನಾಗಮಯ್ಯನ ದೇಹದಲ್ಲಿ ಹಾಲು ಬರುವುದನ್ನು ತೋರಿಸುತ್ತೇನೆ. ವಿಪ್ರರಲ್ಲಿ ಸೋಮಯಾಜಿ ಎಂಬುವವನಲ್ಲಿ ಇಷ್ಟು ನೀರನ್ನಾದರೂ ತೋರಿಸಿರಿ. ತಪ್ಪಿದರೆ ನಿಮ್ಮನ್ನು ಪಟ್ಟಣದ ಸುತ್ತ ಎಳಹೂಟೆ ಹೊಡಿಸುತ್ತೇವೆ' ಎಂದು ಮರುಸವಾಲು ಹಾಕಿ ಹಾಗೂ ವಿಪ್ರರ ಅನುಮತಿಯಿಂದ ತನ್ನ ಪ್ರತಿಜ್ಞೆ ನೆರವೇರಿಸಲು ತೊಡಗುತ್ತಾನೆ. ಶಿವನಾಗಮಯ್ಯನ ಸುತ್ತ ಪ್ರದಕ್ಷಿಣೆ ಬಂದು ನಮಸ್ಕರಿಸಿದ ಬಸವಣ್ಣನು ಖಡ್ಗವನ್ನು ತೆಗೆದುಕೊಂಡು ನಾಗಮಯ್ಯನ ಬೆರಳನ್ನು ಸ್ವಲ್ಪ ಕೊಯ್ಯಲು ಶಿವಭಕ್ತಿಯೆಂಬ ಕಾಮಧೇನುವು ಬಸವನಿಗೆ ಮೊಲೆದೆರೆದು ಹಾಲುಕರೆವಂತೆ ಆಂಬರದವರೆಗೂ ಚಿಮ್ಮಿದ ಹಾಲು ಧಾರಾಕಾರವಾಗಿ ಸುರಿಯುತ್ತದೆ. ಇದನ್ನು ಕಂಡು ಬಿಜ್ಜಳನಾದಿಯಾಗಿ ಸಕಲರೂ ಬಂದು ನಾಗಮಯ್ಯನಿಗೆ ಮೊಡೆಮಡುತ್ತಾರೆ. ಅವರ ಮೇಲೆ ದಯೆ ತೋರಿದ ಬಸವಣ್ಣನು ಅವರನ್ನು ಕಾಯ್ದು ನಾಗಮಯ್ಯನೊಡನೆ ತನ್ನರಮನೆಗೆ ಮರಳುತ್ತಾನೆ.

ಒಮ್ಮೆ ಕಬ್ಬಿಲರೆಲ್ಲ ಬಿಜ್ಜಳನಲ್ಲಿಗೆ ಬಂದು 'ಯಾವಯಾವುದೋ ಮತಗಳ ಶೈವದೀಕ್ಷಾ ಮುಖ್ಯರನ್ನು ಬಸವಣ್ಣನು ಲಿಂಗೈಕರೆಂದು ಪ್ರಸಾದವನ್ನೆಲ್ಲ ತಾವೇ ಸೇವಿಸುವರೇ ಹೊರತು ನಮಗಿನಿತಾದರೂ ಕೊಡುವುದಿಲ್ಲ' ಎಂದು ದೂರಲು ಬಿಜ್ಜಳನು ಬಸವಣ್ಣನನ್ನು ಕರೆಸಿ 'ಕಬ್ಬಿಲರಿಗೆ ಆ ಪ್ರಸಾದವನ್ನು ಕೊಡು, ಅವರೊಡನೆ ನಿನಗೇತಕ್ಕೆ ಘರ್ಷಣೆ?' ಎಂದು ಹೇಳುತ್ತಾನೆ. ಆಗ ಬಸವನು 'ಬೆಳ್ಳಿ ಬಂಗಾರಾದಿ ಲಿಂಗಗಳ ಪ್ರಸಾದವು ಅವರಿಗೆ ಸಲ್ಲಬಹುದೇ ಹೊರತು ಇಷ್ಟಲಿಂಗದ ಪ್ರಸಾದವು ಭಕ್ತರಿಗಲ್ಲದೇ ಮಿಕ್ಕವರಿಗೆ ದೊರೆಯುವುದಿಲ್ಲ' ಎಂದು ಖಂಡಿತವಾಗಿ ಹೇಳಲು, ಆ ಬೇಡರು ತಾವು ಅಲ್ಲಿಯೇ ಸಾಯುತ್ತೇವೆಂದು ದುರಾಗ್ರಹ ಹೂಡುತ್ತಾರೆ. ಆಗ ಬಸವಣ್ಣನು 'ಹಿಂದೆ ಯಾವಾಗಲಾದರೂ ಇಷ್ಟಲಿಂಗಪ್ರಸಾದವನ್ನು ನಿಮಗೆ ಕೊಟ್ಟದ್ದನ್ನು ಪ್ರಮಾಣಪೂರ್ವಕವಾಗಿ ತೋರಿಸಿದರೆ ಒಪ್ಪಿಕೊಳ್ಳುತ್ತೇವೆ, ಇಲ್ಲದಿದ್ದರೆ ಸಂಗಮೇಶ್ವರನಿಗೆ ವಿಷವನ್ನು ಅರ್ಪಿಸುತ್ತೇವೆ, ಅದರ ಪ್ರಸಾದವನ್ನು ಸ್ವೀಕರಿಸಿ' ಎಂದು ಸವಾಲೊಡ್ಡುತ್ತಾನೆ. ಇದನ್ನು ಕೇಳಿದ ಬೇಡರು ವಿಷದಿಂದ ತಮ್ಮನ್ನು ಕೊಲ್ಲಲು ಬಸವಣ್ಣನು ಸಂಚು ಹೂಡುತ್ತಿರುವರೆಂದು ಆರೋಪಿಸುತ್ತಾರೆ. ವಿಷಧರನಿಗೆ ಅರ್ಪಿಸಿದ ವಿಷವನ್ನು ಅವರೇ ಉಂಡು ಬದುಕಿದರೆ ನಾವು ನಿಮ್ಮ ಪ್ರಸಾದವನ್ನು ಎಂದು ಬೇಡುವುದೇ ಇಲ್ಲ ಎಂದು ಹೇಳಿದಾಗ ಇಬ್ಬರಲ್ಲಿಯೂ ಈ ರೀತಿಯಾಗಿಯೇ ಒಪ್ಪಂದವಾಗುತ್ತದೆ. ಎಲ್ಲರೂ ಶಿವಾಲಯದಲ್ಲಿ ಸೇರುತ್ತಾರೆ. ನಾನಾ ಬಗೆಯ ಭೀಕರ ವಿಷಗಳನ್ನು ಸೇರಿಸಿ ಅರೆಸಿದಾಗ ಅದರ ಕಮ್ರೊಗೆ ಎಲ್ಲಡೆಯಲ್ಲೂ ವ್ಯಾಪಿಸಿತು, ಇಂತಹ ವಿಷವನ್ನು ಕುಡಿಯುವವರಾರೆಂದು ಬೇಡರೆಲ್ಲ ಓಡಿಹೋದರು. ಅದನ್ನೇ ಬಸವನು ಶಿವನಿಗೆ ಸಮರ್ಪಣೆ ಮಾಡಿದನಂತರ ಭಕ್ತರೆಲ್ಲ ಅದನ್ನು

ಪಾತ್ರೆಗಳಲ್ಲಿ ಮೊಗೆ ಮೊಗೆದು ಪ್ರಸಾದ ಸೇವನೆ ಮಾಡುತ್ತಾರೆ, ಎಲ್ಲರಿಗೂ ಬಡಿಸಿ ಉಣಿಸುತ್ತಾರೆ. ಎಲ್ಲರೂ ಅಮೃತವನ್ನು ಕುಡಿದಂತೆ ಆ ವಿಷವನ್ನು ಸೇವಿಸಿ ಬಸವಣ್ಣನನ್ನು ಸ್ತುತಿಸುತ್ತಾರೆ. ಅನಂತರ, ಈಶ್ವರನ ಪ್ರಸಾದವು ವೀರಮಾಹೇಶ್ವರರಿಗಲ್ಲದೆ ಇತರರಿಗೆ ಸಲ್ಲದು ಎಂದು ಬಸವಣ್ಣನು ಶಾಸನವನ್ನು ಹೊಯಿಸುತ್ತಾನೆ.

ಕಲ್ಯಾಣದಲ್ಲಿ ಜಗದೇವನೆಂಬ ಮಂತ್ರಿಯು ಶೈವ ಸಮಯ ಸಮುದ್ಧರಣನೆನಿಸಿ ವೈಭವದಿಂದ ಬಾಳುತ್ತಿರುತ್ತಾನೆ. ಒಂದು ದಿನ ಆತನು ಬಸವಣ್ಣನಲ್ಲಿಗೆ ಬಂದು ತನ್ನ ಮನೆಯಲ್ಲಿ ಆರೋಗಣೆಗೆ ಆಹ್ವಾನಿಸಿ ಆತನನ್ನು ಒಪ್ಪಿಸುತ್ತಾನೆ. ಬಸವಣ್ಣನು "ಲಿಂಗಜಂಗಮ ಮಂಡಳಿಯು ಬರವಿಂಗೆ ಸೈರಿಸಲಾಪಡೆ"ತಾನು ಬರುವುದಾಗಿ ಒಪ್ಪಿದಾಗ ಜಗದೇವನು ಮನೆಗೆ ಮರಳಿ ಪಕ್ವಾನ್ನಗಳನ್ನು ತಯಾರಿಸುತ್ತಾರೆ. ಆದರೆ ಬಸವನು ಬರುವುದಕ್ಕೆ ಮುಂಚೆಯೇ ಕೆಲವರು ಹಾರುವರನ್ನು ಕರೆದು ಅವರ ಕಾಲುಗಳನ್ನು ತೊಳೆದು ಉಪಚರಿಸುತ್ತಾನೆ. ಈ ವಿಷಯವನ್ನು ತಿಳಿದ ಬಸವಣ್ಣನು ಅವನ ಮನೆಗೆ ಹೋಗದಿರಲು ಜಗದೇವನು ತಾನೇ ಬರುತ್ತಾನೆ. ಅವನನ್ನು ಕಂಡು ಬಸವಣ್ಣನು ಅವನ ಕಾರ್ಯಕ್ಕೆ ವಿಷಾದಿಸಿ, ಅವನು ಜಂಗಮಭಕ್ತಿಗೆ ದೂರವೆಂದು ಹೇಳಿ ಭಕ್ತನಾಗಿದ್ದು ಭವಿಗಳನ್ನು ಸ್ತುತಿಸುವ ಅವನನ್ನು ಖಂಡಿಸುತ್ತಾನೆ. ಆದರೆ ಜಗದೇವನು ತನ್ನ ತಪ್ಪಿಗೆ ತುಂಬ ಪಶ್ಚಾತ್ತಾಪ ಪಟ್ಟಮೇಲೆ ಅವನ ಬಗ್ಗೆ ಕನಿಕರಿಸಿದ ಬಸವಣ್ಣನು ಅವನು ಮಾಡಿದ ತಪ್ಪಿಗೆ ಪ್ರಾಯಶ್ಚಿತ್ತವೊಂದನ್ನು ವಿಧಿಸುತ್ತಾನೆ; ಮುಂದೆ ಕೆಲವು ಸಮಯಕ್ಕೆ ಶಿವದ್ರೋಹವು ನಡುಯುತ್ತದೆ, ಅಂತಹ ಶಿವದ್ರೋಹಿಯನ್ನು ಕೊಲ್ಲಲು ಜಗದೇವನನ್ನು ನೇಮಿಸುತ್ತಾನೆ. ಸ್ವಲ್ಪ ಕಾಲದ ನಂತರ, ಕೊಂಡೆಯರ ಮಾತನ್ನು ಕೇಳಿ ಬಿಜ್ಜಳನು ನಿರಪರಾಧಿಗಳೂ ಆಚಾರವಂತರೂ ಆದ ಹರಳಯ್ಯ ಮಧುವಯ್ಯ ಎಂಬ ಶಿವಭಕ್ತರ ಕಣ್ಣುಗಳನ್ನು ಕೀಳಿಸುತ್ತಾನೆ. ಈ ಅಮಾನುಷ ಕೆಲಸವನ್ನು ಕಂಡು ಬಸವಣ್ಣನು ಶರಣ ಸಮೂಹದೊಡನೆ ಜಗದೇವನ ಬಳಿ ಬಂದು ಅವನು ಬಸವನಿಗಿತ್ತ ವಚನವನ್ನು ನೆನಪಿಸುತ್ತಾನೆ; ತಾನು ಕಪ್ಪಡಿ ಸಂಗಮದೆಡೆಗೆ ಧಾವಿಸುತ್ತಾನೆ. ಜಗದೇವನ ತಾಯಿಯು ಮಗನನ್ನು ಕಂಡು ಶಿವದ್ರೋಹಿಯನ್ನು ಸಂಹರಿಸಬೇಕಾದ ಅವಶ್ಯಕತೆಯನ್ನು ಒತ್ತಿಹೇಳಿ, ಶಿವಯೋಗಿಯನ್ನು ಕೊಲ್ಲದೆ ಬಂದ ಅವನಿಗೆ ಹಿತ್ತಿಲಲ್ಲಿ ನಾಯಿಗೆ ಹಾಕುವಂತೆ ಊಟವನ್ನು ಬಡಿಸುತ್ತಾಳೆ. ಅದನ್ನುಂಡ ಜಗದೇವನು ತನ್ನ ವಚನಪಾಲನೆಗೆ ಹೊರಟಾಗ ಅವನಿಗೆ ಸಹಾಯಕರಾಗಿ ಮೊಲ್ಲೆ-ಬೊಮ್ಮಯ್ಯರೆಂಬ ಭಕ್ತರೂ ಬರುತ್ತಾರೆ. ಮೂವರೂ ಸೇರಿ ಬಿಜ್ಜಳನು ಇರುಳಿನೋಲಗದಲ್ಲಿರುವಾಗ ಸಭೆಗೆ ನುಗ್ಗಿ ಬಿಜ್ಜಳನನ್ನು ಸಂಹರಿಸುತ್ತಾರೆ. ಅದನ್ನು ಜಗದೇವನು ತಾಯಿಗೆ ತಿಳಿಸಿ, ತಾನು ನಿರಪರಾಧಿಗಳಿಗೆ ಹಿಂಸೆ- ಯಾಗುತ್ತಿದ್ದರೂ ಸುಮ್ಮನಿದ್ದ ತಪ್ಪಿಗೆ ಪ್ರಾಯಶ್ಚಿತ್ತರೂಪವಾಗಿ ತನ್ನ ಕತ್ತನ್ನು ತಾನೇ ಕತ್ತರಿಸಿಕೊಳ್ಳುತ್ತಾನೆ.

ಇತ್ತ ಕಪ್ಪಡಿಸಂಗಮಕ್ಕೆ ಬಂದ ಬಸವಣ್ಣನು ಕೂಡಲಸಂಗಮೇಶನನ್ನು ಪೂಜಿಸುತ್ತ ಸ್ವಲ್ಪ ಕಾಲಾನಂತರ ತಾನು ಮರ್ತ್ಯಕ್ಕೆ ಬಂದ ಕಾರ್ಯವು ಪೂರೈಸಿತೆಂದು ಶಿವನಲ್ಲಿ ಐಕ್ಯನಾಗುತ್ತಾನೆ.

## 'ಬಸವಪುರಾಣ' ಹಾಗೂ 'ಬಸವರಾಜದೇವರ ರಗಳೆ'ಗಳಲ್ಲಿನ ಕಥಾವ್ಯತ್ಯಾಸ

ಭೀಮಕವಿಯ 'ಬಸವಪುರಾಣ'ವು ಹರಿಹರನ 'ಬಸವರಾಜ ದೇವರ ರಗಳೆ'ಯ ನಂತರ ಬಂದ ಮೊತ್ತಮೊದಲ ಬಸವಚರಿತ್ರಾತ್ಮಕ ಗ್ರಂಥವಾದುದರಿಂದ ಅವೆರಡರ ರಚನೆಯಲ್ಲಿನ ವ್ಯತ್ಯಾಸಗಳನ್ನು ಗಮನಿಸುವುದು ಉಪಯುಕ್ತವಾಗುತ್ತದೆ. ಬಸವಣ್ಣನು ಕ್ರಿ.ಶ. ೧,೧೫೦ರ ಹೊತ್ತಿಗೆ ಕನ್ನಡ ನಾಡಿನಲ್ಲಿ ಬಾಳಿ ಬದುಕಿದ ಪ್ರಸಿದ್ಧ ಐತಿಹಾಸಿಕ ವ್ಯಕ್ತಿ. ಹದಿಮೂರನೆಯ ಶತಮಾನದ ಪ್ರಾರಂಭದಲ್ಲಿ, ಎಂದರೆ ಬಸವಣ್ಣನ ತರುವಾಯ ಸುಮಾರು ಅರ್ಧ–ಮುಕ್ಕಾಲು ಶತಮಾನ ಕಾಲದಲ್ಲಿ ಅವನ ಬಗ್ಗೆ ಮೊದಲ ಕಾವ್ಯ (ಅದೇ 'ಬಸವರಾಜದೇವರ ರಗಳೆ') ಕನ್ನಡದಲ್ಲಿ ಹುಟ್ಟಿಕೊಂಡಿತು. ಅದೇ ಶತಮಾನದ ಉತ್ತರಾರ್ಧದಲ್ಲಿ 'ಬಸವಪುರಾಣ' ರಚಿತವಾಯಿತು. ಆದರೆ ಇಷ್ಟರಲ್ಲಿಯೇ ಬಸವಣ್ಣನ ಬಗೆ ಇದ್ದ ('ಬಸವಪುರಾಣ')ವು ತೆಲುಗಿನ ಕಾವ್ಯದ ಸುಮಾರು ಅನುವಾದವಾಗಿರು–ವುದರಿಂದ ಇದರ ಕಥೆಯು ಹರಿಹರನ ಕಾಲದ್ದೇ ಎಂದು ಭಾವಿಸಬೇಕಾಗುತ್ತದೆ. ಜನಜನಿತ ಕಥೆಯು ಎಂತಹುದೆಂಬುದರ ಅರಿವುಂಟಾಗುತ್ತದೆ; ಮುಂದೆ ಈ ಕತೆಯು ಇನ್ನೂ ರಂಜಕವಾಗಿ ಬೆಳೆಯುತ್ತ ಹೋಗಿದೆ. ಐತಿಹಾಸಿಕ ವ್ಯಕ್ತಿಯೊಬ್ಬನು ಮಹಾಪುರುಷನೆನಿಸಿದಾಗ ಸಾಮಾನ್ಯ ಜನರಲ್ಲಿ ಅವನ ಬದುಕು ಪೌರಾಣಿಕ ಸ್ವರೂಪವನ್ನು ಪಡೆದು ಕಾಲಕಾಲಕ್ಕೆ ಹೇಗೆ ಬೆಳೆಯುತ್ತ ಹೋಗುತ್ತದೆಂಬುದನ್ನು ಅಧ್ಯಯನ ಮಾಡಲು ಬಸವಣ್ಣನ ಚರಿತ್ರೆ ಒಂದು ಅತ್ಯುತ್ತಮ ವಸ್ತುವಾಗುತ್ತದೆ. ಈ ದಿಸೆಯಿಂದ ಹರಿಹರ ಭೀಮಕವಿಗಳ ರಚನೆಗಳ ಹೋಲಿಕೆ ಮುಖ್ಯವೆನಿಸುತ್ತದೆ.

ಹರಿಹರನ ಕಾವ್ಯವು ಬಸವಣ್ಣನ ಸುತ್ತಲೂ ಹೆಣೆಯಲ್ಪಟ್ಟ, ಅವನ ಭಕ್ತಿಪ್ರಧಾನ ವ್ಯಕ್ತಿತ್ವವನ್ನು ಚಿತ್ರಿಸುವ ಒಂದು ಕಾವ್ಯ. (ಪ್ರಾಯಶಃ ಅದರ ಗಾತ್ರ ಈಗ ಪ್ರಕಟವಾಗಿರುವ ಎರಡರಷ್ಟು, ಇಪ್ಪತ್ತೈದು ಸ್ಥಲಗಳನ್ನುಳ್ಳದ್ದು; ಅರ್ಧಭಾಗ ಮಾತ್ರ ನಮಗೆ ದೊರಕಿರುವುದು. ಉಳಿದ ಅರ್ಧ ಸಂಪೂರ್ಣವಾಗಿ ನಾಶವಾಗಿರುವುದು ಏಕೆ ಎಂಬುದು ತುಂಬ ಕುತೂಲಹಲಕಾರಕ ಅಂಶ) ಆದರೆ ಬಸವಪುಥಾಣದ ಗಾತ್ರವನ್ನು ಗಮನಿಸಿದರೆ, ಅಲ್ಲಿ ಬಸವಣ್ಣನ ಸ್ವಂತಜೀವನ ಕಥನ ಆವರಿಸುವ ಭಾಗ ತುಂಬ ಕಡಿಮೆ, ಸುಮಾರು ಎಂಟನೇ ಒಂದು ಭಾಗ. ರಗಳೆಯಲ್ಲಿ ಒಂದು ಸಾಲೂ ಬಸವಣ್ಣನ ಜೀವನಕ್ಕೆ ಸಂಬಂಧಪಡದ ಹಾಗೆ ಇಲ್ಲ; ಆದರೆ ಪುರಾಣದ ಅನೇಕ ಸಂಧಿಗಳು ಪುರಾತನರ ಕಥೆಗಳನ್ನು ಹೇಳುವುದಕ್ಕೇ ಮೀಸಲಾಗಿವೆ. ಹರಿಹರ–ಭೀಮರಿಬ್ಬರೂ ಬಸವಣ್ಣನ ಕಥೆಯನ್ನು ಹೇಳುವಾಗ, ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡುವಾಗ ಅವನ ಬಗ್ಗೆ ಆಗ ಪ್ರಚಲಿತವಿದ್ದ ಐತಿಹ್ಯಗಳನ್ನು ಅವಲಂಬಿಸುತ್ತಾರೆ, ಎಂದರೆ ಪವಾಡಗಳ ಸುತ್ತ ಕತೆಯನ್ನು ಹೆಣೆಯುತ್ತಾರೆ. ಆದರೆ ಹಾಗೆ

ಬರೆಯುವಾಗಲೂ ಹರಿಹರ ವಾಸ್ತವತೆಗೇ ಹೆಚ್ಚು ಗಮನವೀಯುವಂತೆ ತೋರುತ್ತದೆ, ಆದರೆ ಪುರಾಣದ ಹೆಸರಿಗೆ ಅನುಗುಣವಾಗಿ ಭೀಮಕವಿಯು ಅತಿಮಾನುಷ ವನ್ನಾಗಿ ಮಾಡುತ್ತಾನೆ. ಜೊತೆಗೆ ಬಿಜ್ಜಳನ ಬಗ್ಗೆ ಹರಿಹರ ಮಾತನಾಡುವಾಗ ಆವೇಶದಿಂದಿರದೆ ಇದ್ದರೆ, ಭೀಮಕವಿಯಲ್ಲಿ ಮುಂದಣ–ಬಸವಪುರಾಣಗಳಲ್ಲಿ ಕಾಣುವ ಬಿಜ್ಜಳ ವಿರೋಧೀ ಮನೋಭಾವವು ತೀವ್ರವಾಗಿದೆ. ಬಸವ–ಬಿಜ್ಜಳರ ಘರ್ಷಣೆಯನ್ನು ಹರಿಹರ ಎಲ್ಲಿಯೂ ಅತಿರೇಕಕ್ಕೆ ಕೊಂಡೊಯ್ದಿಲ್ಲ; ಬಸವಣ್ಣನ ಬಗ್ಗೆ ಇಲ್ಲ ಸಲ್ಲದ ಆರೋಪ ಬಂದಾಗ ಹರಿಹರನ ಬಿಜ್ಜಳ ಖಂಡಿತವಾಗಿ ನಡೆದರೂ ಆ ಪ್ರಸಂಗಗಳು ಅನಿವಾರ್ಯವಾಗಿ ನಡೆಯಬೇಕಾದಂತೆಯೇ ಚಿತ್ರಿತವಾಗಿವೆ. ಭೀಮಕವಿಯು ಈ ಘರ್ಷಣೆಯಲ್ಲಿ ಬಸವನ ಬಗ್ಗೆ ಹೆಚ್ಚು ಜಾಗೃತವಾಗಿ ಪಕ್ಷಪಾತಿಯಾಗಿರುವುದರಿಂದ, ಬಸವನ ಹಿರಿಮೆಯನ್ನು ತೋರಿಸಬೇಕಾದ ಕಾರಣ, ಬಿಜ್ಜಳ ಹಲವು ಬಾರಿ ಬಸವಣ್ಣನನ್ನು ತುಂಬ ಭಯ ಭಕ್ತಿಯಿಂದ ಕಾಣುವಂತೆ ಮಾಡುತ್ತಾನೆ.

ಹರಿಹರ–ಭೀಮಕವಿ ಇಬ್ಬರೂ ಕಥಾರಚನೆಯಲ್ಲಿ ಪವಾಡಗಳನ್ನು ಅಳವಡಿಸಿಕೊಂಡಿದ್ದಾರೆಂದು ಆಗಲೇ ಹೇಳಿದ್ದೇವೆ. ಹರಿಹರನಲ್ಲಿ ಬಂದಿರುವ ಮುಖ್ಯವಾದ ಪವಾಡ ಪ್ರಸಂಗಗಳೆಂದರೆ ಬಸವನ ಮೇಲೆ ದುರ್ವ್ಯಯದ ಅಪವಾದ ಬಂದಾಗ ಭಂಡಾರದ ಹಣವನ್ನು ಹೆಚ್ಚಿಸಿದ್ದು, ಬಂದಿವಿಡಿಯಲು ಬಂದ ಠಕ್ಕು ಜಂಗಮರ ಬದನೆಕಾಯಿಗಳನ್ನು ಲಿಂಗಗಳನ್ನಾಗಿ ಮಾಡಿದ್ದು, ಜಂಗಮ ಪ್ರಾಣಿಯಾದ ಬಸವಣ್ಣನ ಪ್ರಾಣವು ಜಂಗಮರ ಹಿಂದೆ ಹೋಗಿ ಅವರು ವಾಪಸ್ಸು ಬಂದಾಗ ಮರಳಿ ಬಂದದ್ದು, ಸಂಬೋಳಿ ನಾಗಿದೇವನ ಮೈಯಲ್ಲಿ ಹಾಲು ಸುರಿಸಿದ್ದು – ಇವೆಲ್ಲ ಪುರಾಣದಲ್ಲಿಯೂ ಇವೆ. ಆದರೆ ಮೇಲೆ ಹೇಳಿದ ಪವಾಡಗಳೂ ನಿರೂಪಿತವಾಗಿವೆ. ಎಂದರೆ ಸಂಖ್ಯಾದೃಷ್ಟಿಯಿಂದ ಪುರಾಣದಲ್ಲಿ ಪವಾಡಗಳು ಹೇರಳವಾಗಿ ಚಿತ್ರಿತವಾಗಿವೆ. ಇದಕ್ಕೆ ಕಾರಣ ಭೀಮಕವಿಯು ಬಸವನ ಪೌರಾಣಿಕತೆಗಿತ್ತ ಪ್ರಾಮುಖ್ಯ. ಇದು ಕಾವ್ಯದುದ್ದಕ್ಕೂ ಕಾಣುತ್ತದೆ. ಬಸವನ ಹುಟ್ಟನ್ನು ಚಿತ್ರಿಸುವುದರಲ್ಲಿಯೇ ಇವರಿಬ್ಬರಲ್ಲಿ ವ್ಯತ್ಯಾಸವಿದೆ. ಹರಿಹರನಲ್ಲಿ ಬಸವಣ್ಣನು ಶಾಪದಿಂದಾಗಿ ಮರ್ತ್ಯದಲ್ಲಿ ಜನಿಸುತ್ತಾನೆ. (ಹರಿಹರನ ದೀರ್ಘ ರಗಳೆಗಳಲ್ಲಿ ಎಲ್ಲ ಕಥನಾಯಕರ ಜನನ ಕಾರಣವು ಕೈಲಾಸದಲ್ಲಿಯೇ ನಿರ್ಧಾರಗೊಳ್ಳುವ ಅಂಶ ಕಾಣುತ್ತದೆ. ಕೆಲವದರಲ್ಲಿ ಮೋಹವಶದಿಂದ ಮರ್ತ್ಯದಲ್ಲಿ ಜನಿಸಬೇಕಾಗಿ ಬಂದರೆ, ಮತ್ತೆ ಕೆಲವದರಲ್ಲಿ ಶಾಪಕಾರಣದಿಂದ ಹುಟ್ಟಿ ಬರುತ್ತಾರೆ.) ಆದರೆ 'ಬಸವಪುರಾಣ'ದಲ್ಲಿ ಬಸವನು ನಂದಿಯ ಅವತಾರವಾಗಿದ್ದಾನೆ. ಹಾಗೆಯೇ ಉಪನಯನದ ಸನ್ನಿವೇಶ ರಗಳೆಯಲ್ಲಿ ಬರುವುದೇ ಇಲ್ಲ; ಪುರಾಣದಲ್ಲಿ ತಂದೆಯನ್ನು ಧಿಕ್ಕರಿಸಿದ ಬಸವನು ಮನೆಬಿಟ್ಟು ಹೋಗುತ್ತಾನೆ. ರಗಳೆಯಲ್ಲಿನ ಬಸವಣ್ಣನು ಸಣ್ಣ ಹುದ್ದೆಯಿಂದ ದೊಡ್ಡ ಪದವಿಗೆ ಏರುತ್ತಾನೆ; ಆದರೆ ಪುರಾಣದಲ್ಲಿ ಬಸವನನ್ನು ಬಿಜ್ಜಳನು ಬಲದೇವ ಮರಣಾನಂತರ ಬರಮಾಡಿಕೊಂಡು ಅಮಾತ್ಯಶ್ರೇಷ್ಠನನ್ನಾಗಿ ಮಾಡುತ್ತಾನೆ.

ಈ ರೀತಿ ಇಬ್ಬರು ಕವಿಗಳೂ ಬಸವನ ಮೇಲೆ ಅಪಾರ ಭಕ್ತಿಯುಳ್ಳವರು. ಆದರೆ ಅವರಿಬ್ಬರ ದೃಷ್ಟಿ ಬೇರೆ ಬೇರೆ. ಒಬ್ಬನು ತನ್ನ ನಾಯಕನ ಭಕ್ತಿಪ್ರಧಾನ ವ್ಯಕ್ತಿತ್ವಕ್ಕೆ ಮಾರುವೋದವನು (ಹರಿಹರನು ಪವಾಡಗಳನ್ನು ಚಿತ್ರಿಸಿದ್ದರೂ ಬಸವನ ಪೂಜಾಕ್ರಮ, ಶಿವಾನುಭವಗೋಷ್ಠಿಯಲ್ಲಿ ಬಸವ ಪಾಲ್ಗೊಳ್ಳುವ ರೀತಿ, ಗೋಗಳು ಕಳ್ಳತನವಾದಾಗ ಕರುಗಳನ್ನು ಕಳಿಸಿಕೊಡಿರೆಂದು ಹೇಳುವ ಪ್ರಸಂಗ, ಕಿನ್ನರಯ್ಯನನ್ನು ಶಾಂತಗೊಳಿಸಲು ತನಗೆ ಅಷ್ಟು ಇಲ್ಲವಿಲ್ಲದಿದ್ದ ಉಳ್ಳಿಯನ್ನು ಮೆರವಣಿಗೆ ಮಾಡಿದ ಪ್ರಸಂಗ ಇವುಗಳಲ್ಲಿ ಬಸವಣ್ಣನ ಭಕ್ತಿ, ಜಂಗಮಪ್ರೇಮ, ಮಾನವೀಯ ಗುಣಗಳು ಎದ್ದು ಕಾಣುತ್ತವೆ); ಆದರೆ ಭೀಮಕವಬಿ ಅವನನ್ನು ಶಿವಾಂಶಸಂಭೂತನೆಂದು ಕಂಡು ಅವನ ಕೃತಿಗಳೆಲ್ಲ ಅತಿಮಾನುಷವೆಂದು ಬಗೆಯುವನು. ಹೀಗಾಗಿ ಭೀಮಕವಿಯಲ್ಲಿ ಪವಾಡಗಳು ಹೆಚ್ಚಿನ ಸಂಖ್ಯೆಯಲ್ಲಿರುವುದರ ಜೊತೆಗೆ ಆವೇಶವು ಎದ್ದು ಕಾಣುತ್ತದೆ; ಎಂದರೆ, ಒಟ್ಟಾರೆ ಪುರಾಣವೆಂಬ ಹೆಸರೇ ಕವಿಯ ಮನೋಭಾವವನ್ನು ಸೂಚಿಸುತ್ತದೆ.

## ಬಸವನ ಪವಾಡಗಳ ಬಗ್ಗೆ

ಬಸವಣ್ಣನ ನಂತರ ಅರ್ಧಶತಮಾನದಲ್ಲಿಯೇ ಅವನ ಬಗ್ಗೆ ಅನೇಕ ಐತಿಹ್ಯಗಳು ಹುಟ್ಟಿಕೊಂಡಿದ್ದವು. ಮುಂದೆ ಅವುಗಳು ಹೆಚ್ಚಾಗುತ್ತ ನಡೆದವು, ಬಸವಣ್ಣನ ಕತೆಗೆ 'ಬಸವ ಪವಾಡ'ವೆಂದೇ ಒಬ್ಬ ಕವಿಯು ಹೆಸರಿಡುವವರೆಗೂ ಅವನ ಪವಾಡಗಳಿಗೆ ಪ್ರಾಮುಖ್ಯವೂ, ಸಂಖ್ಯಾಬಾಹುಳ್ಯವೂ ಉಂಟಾದವು. ಆದರೆ ಮೂಲತಃ ಇವುಗಳ ಸ್ವರೂಪ ಹೇಗಿದ್ದಿರಬಹುದು? ನಮ್ಮ ಕಣ್ಣು ಮುಂದೆಯೇ ಕೆಲವರು ಸಾಮಾನ್ಯರಿಗೆ ಸಾಧ್ಯವಾಗದ ಕಾರ್ಯಗಳನ್ನು ಮಾಡುವುದನ್ನು ಕಂಡು ಮೂಕವಿಸ್ಮಿತರಾಗುವ ಸಂದರ್ಭಗಳು ನಮ್ಮ ಜೀವನದಲ್ಲೂ ಉಂಟಾಗುತ್ತವೆ. ಹೀಗಾಗಿ ಬಸವಣ್ಣನ ಪವಾಡಗಳ ಬಗ್ಗೆ ನಂಬಿಕೆಯಿರಿಸಿಕೊಳ್ಳುವುದೂ ತಪ್ಪೆನಿಸುವುದಿಲ್ಲ. ಆದರೆ ಕಾಲಾನುಕ್ರಮದಲ್ಲಿ ಇವುಗಳ ಸಂಖ್ಯೆ-ಸ್ವರೂಪಗಳು ವ್ಯತ್ಯಾಸವಾಗಿರುವುದನ್ನು ಗಮನಿಸಿದರೆ ಎಲ್ಲ ಕಾವ್ಯ-ಪುರಾಣಗಳಲ್ಲಿ ಬಸವನಿಗೆ ಆರೋಪಿತವಾದ ಪವಾಡಗಳನ್ನೆಲ್ಲ ಅವನು ತನ್ನ ಜೀವಿತ ಕಾಲದಲ್ಲಿ ಮಾಡಿದನೇ ಎಂಬ ಸಂಶಯವುಂಟಾಗುತ್ತದೆ. ಬಸವಣ್ಣನೇ ತನ್ನ ವಚನವೊಂದರಲ್ಲಿ "ಎಂಬತ್ತೆಂಟು ಪವಾಡವ ಮೆರೆದು ಹಗರಣದ ಚೋಹದಂತಾಯಿತ್ತೆನ್ನ ಭಕ್ತಿ"[೫] ಎಂದು ಹೇಳಿಕೊಂಡಿದ್ದಾನೆಯಾದರೂ ಈ ಮಾತಿಗೆ ಅರ್ಥೈಸುವಾಗ ನಾವು ಏನನ್ನು ಲಕ್ಷಿಸಬೇಕೆಂಬುದು ಮುಖ್ಯವಾಗುತ್ತದೆ. ಕೆಲವರು ಇದರಿಂದ ಬಸವಣ್ಣ ಎಂಬತ್ತೆಂಟು ಪವಾಡಗಳ ಸಂಖ್ಯೆಯೆಂದು ಹೇಳಬಹುದು; ಆದರೆ ಬಸವಣ್ಣನು ಇದನ್ನು ತನ್ನ ಜೀವನದ ಕೊನೆಯಲ್ಲಿ ಹೇಳಿದ್ದಾನೆಂದು ಹೇಗೆ ಹೇಳುವುದು? ಹಾಗಿದ್ದರೆ ಮಾತ್ರವೇ ಇದು ಆತನು ಮಾಡಿದ ಪವಾಡಗಳ ಸಂಖ್ಯೆಯೆಂದು ಹೇಳಬಹುದಲ್ಲವೇ? ಅಲ್ಲದೆ

---

೫. ಬಸವಣ್ಣನವರ ವಚನಗಳು (ಸಂ: ಆರ್ ಸಿ. ಹಿರೇಮಠ) ವ. ೮೯೧: ಪು. ೩೬೬)

ಇಲ್ಲಿ ಪವಾಡಗಳನ್ನು 'ಹಗರಣದ ಚೋಹ'ವೆಂದು ಬಸವಣ್ಣನೇ ಕರೆದಿರುವುದನ್ನು ನೋಡಿದರೆ ಅವನಿಗೆ ಪವಾಡಗಳ ಬಗ್ಗೆ ಭಕ್ತಿ–ನಂಬಿಕೆಗಳಿರಲಿಲ್ಲವೆನ್ನುವುದು ಸ್ಪಷ್ಟ. ಹೀಗಾಗಿ ಅವನನ್ನು ಅವನು ಮಾಡಿದ ಪವಾಡಗಳಿಂದಲೇ ಶ್ರೇಷ್ಠ ವ್ಯಕ್ತಿಯೆಂದು ಹೇಳುವುದು ಸರಿಯಾಗಲಾರದು.

ಒಬ್ಬ ಮಹಿಮಾನ್ವಿತ ವ್ಯಕ್ತಿಯ ಬಗ್ಗೆ ಪವಾಡಗಳು ಹಬ್ಬುವುದು ಕೇವಲ ವಾಚ್ಯವೆಂದು ತಾನೇ ಏಕೆ ನಂಬಬೇಕು? ಅವುಗಳಲ್ಲಿ ನಾವು ಕಾಣಬೇಕಾದದ್ದು ಕಾವ್ಯಸತ್ಯವನ್ನು; ಸಾಂಕೇತಿಕತೆಯನ್ನೇ ವಿನಾ ಅವುಗಳ ಐತಿಹಾಸಿಕ ಸತ್ಯವನ್ನಲ್ಲ, ಹಾಗೆಯೇ ಕಾವ್ಯಗಳಲ್ಲಿ ಚಿತ್ರಿತವಾದ ಸಂಗತಿಗಳು ಈ ಬಗೆಯ ಸಾಂಕೇತಿಕ ಅರ್ಥಗಳಿಂದಲೇ ಮಹತ್ವವಾದವುಗಳಾಗುತ್ತವೆ. ಕೆಲವು ನಿದರ್ಶನಗಳಿಂದ ಈ ಮಾತನ್ನು ಸ್ಪಷ್ಟಪಡಿಸಬಹುದು. ಬಸವಣ್ಣನ ಕೀರ್ತಿಯನ್ನು ಕಂಡು ಕರುಬಿದ ಕೆಲವರು ಅವನನ್ನು ಬಂದಿವಿಡಿಯಬೇಕೆಂದು ಬದನೆಕಾಯಿಗಳನ್ನೇ ಲಿಂಗದಂತೆ ಕಟ್ಟಿಕೊಂಡು ಬಂದ ಪ್ರಸಂಗವನ್ನು ನೋಡೋಣ. ಹಾಗೆ ಬಂದವರನ್ನು ಲಿಂಗಪೂಜೆ ಮಾಡಲು ಕರಡಿಗೆಯನ್ನು ತೆಗೆಯಿರೆಂದು ಬಸವಣ್ಣನು ಹೇಳಿದಾಗ ಬದನೆಕಾಯಿಗಳು ಲಿಂಗವಾಗಿರುತ್ತವೆ. ಇದೊಂದು ಸುಂದರ ಸಾಂಕೇತಿಕ ಪ್ರಸಂಗ. ಬಸವಣ್ಣನ ವರ್ಚಸ್ಸಿನಿಂದ ತಮ್ಮ ಠಕ್ಕುತನವನ್ನು ಬಯಲು ಮಾಡಿಕೊಂಡು ಅವರು ಅವನ ಪ್ರಭಾವವಲಯಕ್ಕೆ ಒಳಗಾಗಿ ಅನುಯಾಯಿಗಳಾಗಿರುವುದನ್ನು ಅದು ಸೂಚಿಸುತ್ತದೆ. ಜನಗಳ ಮನಸ್ಸಿನ ಮೇಲೆ ಆತನು ತನ್ನ ವ್ಯಕ್ತಿತ್ವದಿಂದ ಉಂಟು ಮಾಡುತ್ತಿದ್ದ ಪರಿಣಾಮ, ಅವನ ವ್ಯಕ್ತಿತ್ವದ ಭವ್ಯತೆ ಇದರಿಂದ ವ್ಯಕ್ತವಾಗುತ್ತವೆ. ಇಲ್ಲದಿದ್ದರೆ ಅವನ ಹಿಂಬಾಲಕರಾಗಿ ಸಾವಿರಾರು ಮಂದಿ ಬರಲು ಸಾಧ್ಯವಾಗುತ್ತಿದ್ದಿತೇ? ಹಾಗೆಯೇ ಅಪವ್ಯಯದ ಆರೋಪಕ್ಕೊಳಗಾಗಿ ಬಿಜ್ಜಳನ ಭಂಡಾರದ ಹಣವನ್ನು ಹೆಚ್ಚಿಸುವ ಪ್ರಸಂಗ. ರಾಜಕೀಯವಾಗಿ ಧಾರ್ಮಿಕವಾಗಿ ತುಂಬ ಮಹತ್ವದ ವ್ಯಕ್ತಿಯಾಗಿದ್ದ ಬಸವಣ್ಣನ ಮೇಲೆ, ಅಂತಹ ಎಲ್ಲ ವ್ಯಕ್ತಿಗಳ ಮೇಲೆ ಬರುವಂತೆ, ಅಪವ್ಯಯದ ಆರೋಪ ಬಂದದ್ದು ಸಹಜ. ಆದರೆ ಪ್ರಾಮಾಣಿಕನಾಗಿದ್ದ ಬಸವಣ್ಣನನ್ನು ಚಿತ್ರಿಸುವಾಗ, ಕವಿಯು ಅದನ್ನು ಉತ್ಪ್ರೇಕ್ಷೆಗೊಳಿಸಿರ ಬಹುದು, ಇದ್ದ ಹಣದ ಹತ್ತಾರು ಪಟ್ಟು ಹಣವು ಭಂಡಾರದಲ್ಲಿದ್ದಿತೆಂದು ಚಿತ್ರಿಸಿರಬಹುದು.

ಈ ಪ್ರಸಂಗದಿಂದ ಸಮಕಾಲೀನರಿಗೆ ಅವನ ಬಗ್ಗೆ ಗೌರವವು ಮಾತ್ರ ಹೆಚ್ಚಾದದ್ದು ಮಾತ್ರ ನಿಜ. ಬಸವಣ್ಣನ ಪ್ರಾಣವು ಜಂಗಮರ ಹಿಂದೆಯೇ ಹೋಗಿದ್ದಿತೆಂಬ ಪವಾಡವಾದರೂ ಅತ್ಯಂತ ಕಾವ್ಯಮಯವಾಗಿ (ಅದರಲ್ಲೂ ಹರಿಹರನಲ್ಲಿ) ಅವನ ಜಂಗಮ ಪ್ರೇಮವನ್ನು ಚಿತ್ರಿಸುತ್ತದೆ. ಅವನ ಹಲವಾರು ವಚನಗಳಲ್ಲಿ, ಬಸವಣ್ಣನ ಚೇತನವು ಹೇಗೆ ಸದಾ ಜಂಗಮಸಾನ್ನಿಧ್ಯಕ್ಕಾಗಿ ಹಾತೊರೆಯುತ್ತಿದ್ದಿತೆಂಬುದು ಅತ್ಯಂತ ಸಹಜವಾಗಿ ಹೊರಹೊಮ್ಮಿದೆ. ಅಂತೆಯೇ ಕಂಬಳಿ ನಾಗಿದೇವ (ಬಸವಪುರಾಣದ ಶಿವನಾಗಮಯ್ಯ)ನ ಪ್ರಸಂಗ. ತಾನು

ಶಿವನಾಗಮಯ್ಯನ ದೇಹದಿಂದ ಹಾಲಿನ ಹೊಳೆಯನ್ನೇ ಹರಿಸುತ್ತಾನೆಂದು ಪವಾಡವು ಹೇಳುತ್ತದೆ. ಅಂತ್ಯಜನಾದರೂ ಅವನು ಮೂಲಭೂತವಾಗಿ ಬೇರೆಯವರಿಗಿಂತ ಕೀಳಲ್ಲ (ಮಾನಸಿಕವಾಗಿ ಆಧ್ಯಾತ್ಮಿಕವಾಗಿ ಇತರರಿಗಿಂತ ಮೇಲೆ) ಎಂದು ತೋರಿಸಲು ಅವನಲ್ಲಿಯೂ ಇತರರಲ್ಲಿರುವಂತೆ ರಕ್ತವೇ ಹರಿಯುತ್ತಿದೆ ಎಂದು ತೋರಿಸಿರಬಹುದು, ವಾಸ್ತವಿಕವಾಗಿ!

ಬಸವಣ್ಣನನ್ನು ಪವಾಡಪೂರ್ಣಜೀವನವನ್ನು ನಡೆಸಿದ ವ್ಯಕ್ತಿಯೆಂದು ಅಕ್ಷರಶಃ ಭಾವಿಸಿದರೆ ಅದರಲ್ಲಿ ಮತ್ತೊಂದು ವಾಸ್ತವಿಕ ತೊಂದರೆಯುಂಟಾಗುತ್ತದೆ. ಬಸವಣ್ಣನ ವಚನಗಳನ್ನು ಗಮನಿಸಿದರೆ, ಆ ಭಕ್ತಚೇತನವು ಹೇಗೆ ಪ್ರಾಪಂಚಿಕ ಆಮಿಷಗಳಿಂದ ವಿಮುಖವಾಗಲು ಪ್ರಯತ್ನಿಸುತ್ತದೆ, ಉನ್ನತಿಯನ್ನೇರಲು ಬಯಸುವ ಚೇತನವು ಸಹಜವಾಗಿ ಎದುರಿಸಬೇಕಾಗಿ ಬರುವ ಅಡ್ಡಗಳೆಂತಹವು, ಅವುಗಳು ಬಸವಣ್ಣನ ಜೀವಿತದಲ್ಲಿ ಎದುರಾದರೂ ಅವುಗಳನ್ನಾತ ಹೇಗೆ ಮೆಟ್ಟಿ ನಿಂತ, ಅದಕ್ಕೆ ಕಾರಣವಾದ ಆತನ ಸಂಕಲ್ಪಬಲ ಎಂತಹುದು ಎಂಬ ವಿಚಾರಗಳು ತಿಳಿದುಬರುತ್ತವೆ. ವಚನಗಳ ಈ ಬಸವಣ್ಣನ ಜೀವನಕ್ಕೂ, ಪುರಾಣಗಳ ಅತಿಮಾನುಷ ಜೀವನಕ್ಕೂ ಹೇಗೆ ಹೊಂದಿಸುವುದು? ಅದಕ್ಕಾಗಿಯೇ ಹೇಳಿದ್ದು, ಕಾವ್ಯದಲ್ಲಿ ಬರುವ ಚಿತ್ರಗಳು ಸಾಂಕೇತಿಕವಾದದ್ದು ಎಂದು. ಸುತ್ತಲೂ ಧರ್ಮದ ಹೆಸರಲ್ಲಿ ಅನಾಚಾರಗಳು ನಡೆಯುತ್ತಿರುವಾಗ ಅದನ್ನು ಪ್ರತಿಭಟಿಸಿ, ಸಾತ್ವಿಕ ಭಕ್ತಿಯ ಶ್ರೇಷ್ಠತೆಯನ್ನು ಜನಸಾಮಾನ್ಯರಲ್ಲಿಯೂ ಮನಗಾಣಿಸಿ, ತನ್ನ ಅಪಾರ ಸಂಘಟನಾ ಶಕ್ತಿಯಿಂದ ಭದ್ರವಾಗಿ ಬೇರೂರಿದ್ದ ವ್ಯವಸ್ಥೆಯನ್ನು ಕಿತ್ತೊಗೆಯಲು ಪ್ರಯತ್ನಿಸಿ ಸಫಲವಾದದ್ದು ವಾಸ್ತವವಾದ ಪವಾಡ. ಹೀಗಾಗಿ ಬಸವಣ್ಣನ ವ್ಯಕ್ತಿತ್ವಕ್ಕೆ ಮೆರಗು–ಮಹತ್ವಗಳು ಬರುವುದು ಅವನ ಪವಾಡಗಳ ಹಿಂದೆ ಅಡಗಿರುವ ಸಾಂಕೇತಿಕ ಅರ್ಥವನ್ನು ಗುರುತಿಸಿದಾಗಲೇ.

## 'ಬಸವಪುರಾಣ'ದ ಭಾಷೆ, ಶೈಲಿ ಇತ್ಯಾದಿ

ಭೀಮಕವಿಯ ಈ ಪುರಾಣವು ಕನ್ನಡದ ಮೊತ್ತ ಮೊದಲ ಸಂಪೂರ್ಣ ಭಾಮಿನಿಷಟ್ಪದಿಯ ಕಾವ್ಯವಾಗಿರುವುದರಿಂದ ಇದರ ಛಂದಸ್ಸು–ಭಾಷೆಗಳು ಸಂಕ್ರಮಣ ಸ್ಥಿತಿಯನ್ನು ಸೂಚಿಸುವುದು ಸಹಜ. ಹಿಂದೆ ಆಗಲೇ ಗಮನಿಸಿದಂತೆ ತನ್ನ ಶೈಲಿಯ ಧ್ಯೇಯವನ್ನು ಹೇಳಿಕೊಳ್ಳುವಾಗ, ವರ್ಣಕ ಕವಿತೆಯೆಂದು ತನ್ನ ಪುರಾಣವನ್ನು ಓಸರಿಸಬೇಡಿರೆಂದು ಕೇಳುವಾಗ ಇದು ಕವಿಯಲ್ಲಿ ಪ್ರಜ್ಞಾಪೂರ್ವಕವಾಗಿಯೇ ಗೋಚರಿಸುತ್ತದೆ. 'ಸೂರ್ಪಕಪ್ರಹರಪ್ರಹಾರಿಗೆ ದರ್ಪಿತ–ತ್ರಿಪುರೇದ್ರನಾಗ್ನಿಗಹರ್ಪತಿ–

---

೬. ಪರಿಪರ ಹೇಳುವುದು ಕಂಬಳಿ ನಾಗಿದೇವನಲ್ಲ. ಸಂಬೋಳಿ ನಾಗಿದೇವನನ್ನು. ಸಂಬೋಳಿ ಎನ್ನುವುದರ ಅರ್ಥ ತಿಳಿಯದೆ ಕಂಬಳಿ ಎಂದು ತಪ್ಪಾಗಿ ಮುದ್ರಿತವಾಗಿದೆ.

ಪ್ರಣುತಪ್ರಭಾಮಯ ದಿವ್ಯದೇಹಂಗೆ ಸರ್ಪಭೂಷಣ ಸಂಗಮೇಶಂಗರ್ಪಿಸುವೆ-ನಿಂದುಗ್ರಗರಳನಾರ್ಪವರು ಪ್ರಸಾದವನೀಸಿಕೊಳ್ಳಿರೆಯಾ" (ಬ.ಪು. ೩೭. ೪೧) “ದುಷ್ಟ ಸಮಯಾರಿಷ್ಟ ಮಹಿಮೋತ್ಕೃಷ್ಟಕರುಣಾದೃಷ್ಟಿ ಮಾತ್ರಾಭೀಷ್ಟದಾಯಕ ಶಿಷ್ಟಭಕ್ತಿ ಸುಪುಷ್ಟ ಸರ್ವಾಂಗ ಅಷ್ಟವಿಧ ಪೂಜೇಷ್ಟನಿಷ್ಠಾತುಷ್ಟ ಮಾನಸರಷ್ಟ ಸಂಸ್ಕೃತಿನಷ್ಟ ದೃಷ್ಟಾದೃಷ್ಟ ಗೋವಿಸ್ಪಷ್ಟ ಬಸವೇಶ” (ಬ.ಪು. ೧೦.೧) ಎಂದು ಪ್ರೌಢವಾಗಿ ಕೆಲವೆಡೆ ಬರೆಯುವ ಕವಿಯು ಮತ್ತೆ ಕೆಲವೆಡೆಗಳಲ್ಲಿ “ಎಂದುವುಂ ಲೋಕಕ್ಕೆ ಬಾರದ ನಂದನಂ ನೀನೆಮ್ಮ ಬಸುರಲಿ ಬಂದು ಹರುಷವನೆಯ್ದಿಸದೆ ಪಿರಿದುಮ್ಮಳವನೆಮಗೆ ತಂದಕಟ ಕುಲಗೆಡುಕನಹರೇ ಕಂದ ನಿನ್ನಂ ಪಿಡಿದು ಸಂಗತಿಯನೊಂದಿ ಬದುಕುವೆವೆಂದಲಾ ನೆರೆ ನಂಬಿಕೊಂಡಿಹೆವು” (ಬ.ಪು. ೫೯) ಎಂದು ಸರಳವಾಗಿಯೂ ಬರೆಯುತ್ತಾನೆ.

ಬಸವಣ್ಣನು ಉಪನಯನವನ್ನು ಒಲ್ಲದೆ ತಂದೆಯೊಡನೆ ಮಾಡುವ ಸಂವಾದದಲ್ಲಿ ಸುಸಂಬದ್ಧವಾದ ತಾರ್ಕಿಕತೆಯನ್ನು ಕಾಣಬಹುದು; ಹಾಗೆಯೇ ಬೇಡರು ಪ್ರಸಾದದ ಹಕ್ಕನ್ನು ಸ್ಥಾಪಿಸುವಾಗ ಬಸವಣ್ಣನು ವಾದಿಸುವ ರೀತಿಯಲ್ಲಿಯೂ ಈ ತಾರ್ಕಿಕತೆಯನ್ನು ಕಾಣುತ್ತೇವೆ. ಕೆಲವೆಡೆ ಭೀಮಕವಿಯು ಕಣ್ಣಿಗೆ ಕಟ್ಟುವಂತಹ ಚಿತ್ರಗಳನ್ನು ಕೊಡುತ್ತಾನೆ. ಬೇಡರ ಗುಂಪನ್ನು ವರ್ಣಿಸುವ ಈ ಪದ್ಯಗಳನ್ನು ನೋಡಿ: “ಒಡಲುಗೊಂಡ ತಮಂಧಪಟಮೋ ನಡೆವ ನೀಲಾದ್ರಿಗಳೆ ಕೈಕಾಲ್ ಪಡೆದ ವಜ್ಜಳ ಗಿರಿಗಳೋ ಕರ್ಬೊನ್ನ ಭಿತ್ತಿಗಳೊ ನುಡಿಗಲಿತ ಮಾತಂಗಸಂಗಮೊ ಹೆಡೆ ಉಡುಗಿದ ಸಿತಾಹಿಗಳೊ ಎನೆಲೆಡೆವಿಡದೆ ಸಂದಣಿಸಿ ಬಂದರಾಯಡೆಗೆ.” (ಬ.ಪು. ೫೭.೪೮) ಬಸವಣ್ಣನು ಕೂಡಲಸಂಗಮನಲ್ಲಿ ಐಕ್ಯವಾಗುವುದನ್ನು “ಗಾಳಿಯೊಲು ಸುಳಿಗಾಳಿಯೊಗೆದಾ ಗಾಳಿಯೊಳು ತಾ ಮತ್ತೆ ಬೆರಸಿದವೋಲು, ದಧಿಯೊಳು ನೊರೆಗಳೊಗೆದುದಧಿಯೊಳಡಗಿದಂತೆ; ಮೇಲೆ ನಭದೊಳಗೆಸೆದು ತಟಿರ್ಲತೆ ಮೇಲೆ ನಭದೊಳೆ ಹೊಳೆದಡಂಗಿದವೋಲುದಕದಿಂದಾಲಿ-ಕಲ್ಲೊಗೆದಲ್ಲಡಗಿದಂತೆ” (ಬ.ಪು. ೬೦-೬೬) ಎಂದು ಮುಂತಾಗಿ ವರ್ಣಿಸುವ ಮಾತುಗಳಲ್ಲಿ ಬಸವಣ್ಣನ ವ್ಯಕ್ತಿತ್ವಕ್ಕೆ ಅನುಗುಣವಾದ ರೀತಿಯ ವರ್ಣನೆಯಿದೆ.

ಕನ್ನಡದ ನುಡಿಗಟ್ಟುಗಳನ್ನೂ ಭೀಮಕವಿಯು ಬಳಸಿಕೊಳ್ಳುವ ಮೂಲಕ ತನ್ನ ಭಾಷಾ ಶೈಲಿಗಳಿಗೆ ಸಹಜತೆಯನ್ನು ತರುತ್ತಾನೆ; ‘ಕುಲದ ಬೇರಿಗೆ ನೀನೆ ಗುದ್ದಲಿಗೊಳಲದೇಕೆ’ (೩.೫೮) ‘ಇಳೆಗೆ ಮಾವಿನ ಬೀಜಮಂ ಬಿತ್ತಲದು ತಾಂ ಬೇವಹುದೆ’ (೩.೭೫), ‘ತಾಂ ಮುಂಡಮೋಚಿದ ಹಾಂಗೆ ಅರಚುವರೆ’ (೩೫.೧೬) ‘ನುಂಗಿಕೊಂಡಿತನುಗುಳದಿದ್ದಹನಿನ್ನ ಸೈರಿಸೆನು’ (೩೬’೪೨) ಇತ್ಯಾದಿ ಕಡೆಗಳಲ್ಲಿ ಕನ್ನಡದ ಸಹಜ ಮಾತುಗಾರಿಕೆಯನ್ನು ಕಾಣುತ್ತೇವೆ. ಹರಿಹರನಂತೆ ಭೀಮಕವಿಯೂ ಅಲ್ಲಲ್ಲಿ ಬಸವಣ್ಣನ ವಚನಗಳ ಭಾವವನ್ನೇ ಪದ್ಯಗಳನ್ನಾಗಿ ಅಳವಡಿಸಿ ಕೊಂಡಿರುವುದನ್ನು ಕಾಣಬಹುದು. ‘ಇಳೆಯೊಳೀ ಭೂಸುರರ ಗುರು ಕಬ್ಬಲಿಗನಲ್ಲಾ’

(ಬ.ಪು.೫೬.೭) ಎಂಬ ಪದ್ಯವನ್ನು ಬಸವಣ್ಣನ ೫೮೮ನೇ (ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಣೆ) ವಚನದೊಂದಿಗೂ, 'ಭೂವರನೆ ಕೇಳ್ ಬಡಗಿ ಮಾಚಲ ದೇವಿಯಂ' (೫೪.೧೪) ಎಂಬ ಪದ್ಯದೊಡನೆ ೫೮೨ನೆಯ ವಚನವನ್ನೂ, ಉದಾಹರಣೆಗಾಗಿ ಹೋಲಿಸಬಹುದು. 'ಆನುಕೊಲ್ಲೆನು ನೇಣುಕೊಂದಿತು' (ಬ.ಪು. ೫೬,೭೯) 'ಜಾತಿ ನೇಣಿನ ಹೊಲೆಯರು' (೫೫.೪೯) 'ವೇದಭಾರಕ್ರಾಂತದೆನಲಿಹ ಮೇದಿನೀಸುರಗರ್ಧಭಾಧಮರು' (೫೬.೭೭) ಇತ್ಯಾದಿ ಮಾತುಗಳು ಬಸವಣ್ಣನ ವಚನಗಳಿಂದ ಪ್ರಭಾವಿತವಾಗಿದೆಯೆಂಬುದು ಸ್ಪಷ್ಟ. ಇದರಿಂದ ಬಸವಣ್ಣನ ವ್ಯಕ್ತಿಚಿತ್ರಕ್ಕೆ ನೈಜತೆಯುಂಟಾಗುವಂತೆ ಆಗಿದೆ.

ಈ ರೀತಿ ಭೀಮಕವಿಯು ತನ್ನ ಬಸವಪುರಾಣದಿಂದ ಕನ್ನಡ ವೀರಶೈವಪುರಾಣಗಳಿಗೂ, ಭಾಮಿನೀಷಟ್ಪದಿಯ ಮಾರ್ಗಕ್ಕೂ ಮೊದಲಿಗನಾಗಿ ವಿಶಿಷ್ಟನೆನಿಸಿದ್ದಾನೆ. ಒಟ್ಟಿನಲ್ಲಿ "ಅವನ ಶೈಲಿಯಲ್ಲಿ ಧಾರಾಳತೆ ಇದೆ, ಮಾರ್ದವ ಮಾಧುರ್ಯಗಳಿವೆ. ಪಾಂಡಿತ್ಯದ ಆವೇಶವು ಆಗಾಗ ಅವನನ್ನು ಆಕ್ರಮಿಸಿದರೂ ಪುರಾಣಕಾರಕವಿಯ ಸಹಜಸುಂದರ ರೀತಿಯಲ್ಲಿ ಅವನು ಕಥೆಯನ್ನು ಸಾಗಿಸಿಕೊಂಡು ಹೋಗುತ್ತಾನೆ..... ಈ ದೃಷ್ಟಿಯಿಂದ ನೋಡಿದರೆ ಮೂರನೆಯ ಯುಗದ ಭಾಮಿನೀಷಟ್ಪದಿಕಾರರಿಗೆ ಪೂರ್ವಭಾವಿಯಾಗಿ ಬಂದ ಅವನು ಭಾಮಿನಿಯ ಸಹಜಲಾಲಿತ್ಯಕ್ಕೆ ಮಾರ್ಗದರ್ಶಿಯಾಗಿದ್ದಾನೆ"[೭] ಎಂಬ ಮಾತುಗಳು ಭೀಮಕವಿಯ ವೈಶಿಷ್ಟ್ಯವನ್ನು ಸಮಂಜಸವಾಗಿ ಸಂಗ್ರಹಿಸಿ ಹೇಳುತ್ತವೆ.

*('ಬಸವಪುರಾಣ ಸಂಗ್ರಹ' ಪ್ರಸ್ತಾವನೆ, ೧೯೭೪)*

೭. ರಂ.ಶ್ರೀ ಮುಗಳಿ : ಕನ್ನಡ ಸಾಹಿತ್ಯ ಚರಿತ್ರೆ (೧೯೬೩:) ಪುಟ ೨೧೯

# ಪಾಲ್ಕುರಿಕೆ ಸೋಮನಾಥ ಮತ್ತು ಭೀಮಕವಿ –ಒಂದು ಹೋಲಿಕೆ

ಬಸವ ಚರಿತೆಗಳನ್ನು ಹೇಳುವ ಕಾವ್ಯಗಳಲ್ಲಿ ಸ್ಪಷ್ಟವಾದ ಎರಡು ಸಂಪ್ರದಾಯಗಳಿವೆ: ಒಂದು, ಹರಿಹರನು ಬರೆದ 'ಬಸವರಾಜದೇವರ ರಗಳೆ'ಯದು; ಎರಡು, ಪಾಲ್ಕುರಿಕೆ ಸೋಮನಾಥನ ತೆಲುಗು 'ಬಸವಪುರಾಣಮು'ವಿನದು. ಇವರಿಬ್ಬರ ಕಾವ್ಯಗಳ ಧೋರಣೆಯನ್ನು ಸಂಗ್ರಹವಾಗಿ ಈ ರೀತಿ ಹೋಲಿಸಬಹುದು. " 'ಬಸವಪುರಾಣ'ದ ಒಟ್ಟು ಧೋರಣೆಯು 'ಬಸವರಾಜದೇವರ ರಗಳೆ'ಯ ಧೋರಣೆಗಿಂತ ತುಂಬ ಭಿನ್ನವಾಗಿದೆಯೆಂಬುದರಲ್ಲಿ ಸಂದೇಹವಿಲ್ಲ. ರಗಳೆಯನ್ನು ರಚಿಸುವಲ್ಲಿ ಹರಿಹರನಿಗೆ ಬಸವನ ಚರಿತ್ರೆ ಮುಖ್ಯವಾಗಿದೆ; ಆದರೆ ಸೋಮನಾಥನಿಗೆ ವೀರಶೈವ ದರ್ಶನ ಮುಖ್ಯವಾಗಿದೆ. ಬಸವಣ್ಣನ ವ್ಯಕ್ತಿತ್ವದ ವಿವಿಧ ಮುಖಗಳನ್ನು ನೇರತವಾಗಿ ಚಿತ್ರಿಸುವುದೇ ಹರಿಹರನ ಉದ್ದೇಶ. ಸೋಮನಾಥನಿಗಾದರೋ ಬಸವನ ಚರಿತ್ರೆಯ ನೆಪದಲ್ಲಿ ಹಾಗೂ ಅನೇಕ ಶಿವಶರಣ ಕಥೆಗಳ ಮೂಲಕ ವೀರಶೈವದ ಆಧಿಕ್ಯವನ್ನು ಸ್ಥಾಪಿಸುವುದೇ ಮುಖ್ಯೋದ್ದೇಶ. ಹರಿಹರನದು ತದೇಕ ದೃಷ್ಟಿ; ಸೋಮನಾಥನದು ಸುತ್ತು ಮುತ್ತೆಲ್ಲ ಕಣ್ಣುಹಾಯಿಸುವ ರೀತಿ. 'ಬಸವರಾಜ ದೇವರ ರಗಳೆ'ಯಲ್ಲಿ ಬಸವಣ್ಣನಿಗೆ ನೇರವಾಗಿ ಸಂಬಂಧ ಪಡೆದ ಒಂದು ಪ್ರಸಂಗವೂ ಚಿತ್ರಿತವಾಗಿಲ್ಲ. ಪಾಲ್ಕುರಿಕೆ ಸೋಮನಾಥನ ಕಾವ್ಯದಲ್ಲಿ ಬಸವಣ್ಣನಿಗೆ ಸಂಬಂಧಿಸಿದ ಪ್ರಸಂಗಗಳಿಗಿಂತ ಸಂಬಂಧಪಡದ ಕಥೆಗಳು ಆರೆಂಟು ಪಟ್ಟು ಹೆಚ್ಚಾಗಿವೆ. ಹರಿಹರನು ಬಸವಣ್ಣನಿಗೆ ಸೋಮನಾಥನಿಗಿಂತ ಕಾಲ ಹಾಗೂ ಭೌಗೋಳಿಕತೆಯಲ್ಲಿ ಪ್ರಾಯಶಃ ಹತ್ತಿರವಾದವನು. ಸೋಮನಾಥನೇ ಹೇಳಿಕೊಳ್ಳುವಂತೆ ಅವನು ಬಸವಣ್ಣನ ಚರಿತ್ರೆಯನ್ನು ಹಲವರಿಂದ ಸಂಗ್ರಹಿಸಿದ. ಆದರೆ ಹರಿಹರನಿಗೆ ಬಸವಣ್ಣನ ಬಗೆಗಿನ ಮಾಹಿತಿ ಜನಗಳಿಗಿಂದ ತಾನಾಗಿ ನೇರವಾಗಿ ಕಿವಿಗೆ ಬಿದ್ದಿರಬೇಕು. ಬಸವಣ್ಣನಂತೆಯೇ ಇತರ ನೂತನ ಪುರಾತನ, ಶರಣರ ಬಗ್ಗೆ ಹರಿಹರ ರಗಳೆಗಳನ್ನು ಬರೆದ ಮೇಲೆಯೇ ಪ್ರಾಯಶಃ ಸೋಮನಾಥನಿಗೆ ತನ್ನ 'ಬಸವಪುರಾಣ'ದ ಕಲ್ಪನೆ ಯುಂಟಾಗಿರಬೇಕನ್ನಿಸುತ್ತದೆ. ಹರಿಹರನು ಅನೇಕ ಕೃತಿಗಳಲ್ಲಿ ಸಾಧಿಸಿರುವುದನ್ನು ಸೋಮನಾಥನು ಒಂದೇ ಕೃತಿಯಲ್ಲಿ ಸಾಧಿಸುವ ಕಾಣ್ಕೆಯನ್ನು ಕಂಡಿರಬೇಕು. ಏಕೆಂದರೆ ತನ್ನ 'ಬಸವಪುರಾಣ'ದಲ್ಲಿಯೇ ಅವನು ಬಸವಣ್ಣನ ಜೀವನ ಚಿತ್ರಣದ ಜೊತೆಗೆ ಇತರ ಹತ್ತಾರು ಶರಣರ ವಿಚಾರವನ್ನು ಹೇಳುತ್ತಾನೆ. ಇಂತಹ ಒಂದು

ಸಮಗ್ರದೃಷ್ಟಿ ಹರಿಹರನ ಕೃತಿಗಳ ಪರಿಚಯವನ್ನು ಪಡೆದನಂತರ ಸೋಮನಾಥನಿಗೆ ಉಂಟಾಗಿರಬೇಕು. ಅದರಿಂದ ವೀರಶೈವಪುರಾಣದ ಕಲ್ಪನೆ ಸ್ಪಷ್ಟಗೊಂಡಿತು ಎಂಬುದು ನಮ್ಮ ಊಹೆ. ಹೀಗಾಗಿ ಪಾಲ್ಕುರಿಕೆ ಸೋಮನಾಥನೇ ಮೊದಲ ವೀರಶೈವಪುರಾಣದ ಕರ್ತೃ. 'ಬಸವ ಪುರಾಣ'ವೇ ಮೊದಲ ವೀರಶೈವ ಪುರಾಣ ಕಾವ್ಯ-ಮುಂದೆ ಬಹುಸಂಖ್ಯಾಕ ವೀರಶೈವ ಕವಿಗಳು ಅನುಸರಿಸಿದ್ದು ಪಾಲ್ಕುರಿಗೆ ಸೋಮನಾಥನನ್ನೇ ಹೊರತು ಹರಿಹರನನ್ನಲ್ಲ."[೧]

ಈ ಮೇಲಿನ ಮಾತುಗಳಲ್ಲಿ ಹರಿಹರನು ಪಾಲ್ಕುರಿಕೆ ಸೋಮನಾಥನಿಗಿಂತ ಹಿರಿಯ ಎಂಬ ಅಭಿಪ್ರಾಯ ಸ್ಪಷ್ಟವಾಗಿದೆ. ಆದರೆ ಇದಕ್ಕೆ ವ್ಯತಿರಿಕ್ತವಾದ ಅಭಿಪ್ರಾಯವೂ ಇದೆ. ಅದಕ್ಕೆ ಕಾರಣ ಹರಿಹರ-ಸೋಮನಾಥರಿಬ್ಬರ ಕಾಲದ ಬಗ್ಗೆ ನಿಷ್ಕೃಷ್ಟ ಮಾಹಿತಿಯಿಲ್ಲದಿರುವುದು. ಹರಿಹರನ ಕಾಲವು ಹದಿಮೂರನೆಯ ಶತಮಾನದ ಮೊದಲ ಭಾಗವೆಂದು ವಿದ್ವಾಂಸರು ಸಾಮಾನ್ಯವಾಗಿ ಒಪ್ಪಿದ್ದಾರೆ. ಹರಿಹರ ಕ್ಷೇತ್ರದಲ್ಲಿ ದೊರೆಯುವ ಶಾಸನಗಳನ್ನು ಆಧರಿಸಿ ಡಾ॥ ಚಿದಾನಂದ ಮೂರ್ತಿಯವರು ಹರಿಹರ ಹರಿಹರಕ್ಷೇತ್ರಕ್ಕೆ ಸುಮಾರು ಕ್ರಿ.ಶ. ೧೨೦೦-೨೦ರಲ್ಲಿ ಹೋಗಿರಬೇಕೆಂದು ವಾದಿಸಿ, ಹರಿಹರನ ಕಾಲವು ಹದಿಮೂರನೆಯ ಶತಮಾನದ ಮೊದಲರ್ಧವೆಂದು ಪುಷ್ಟೀಕರಿಸುತ್ತಾರೆ.[೨] ಆದರೆ ಗಾಜುಲ ವೀರಯ್ಯ ಇದನ್ನು ಅಲ್ಲಗಳೆಯುತ್ತಾರೆ. ಬಸವಪುರಾಣವು ಪಾಲ್ಕುರಿಕೆ ಸೋಮನಾಥನ ಕೃತಿಗಳ ಮೊದಲ ಹಂತಕ್ಕೆ ಸೇರಿದುದು. ಅದನ್ನವನು ತನ್ನ ಮೂವತ್ತನೇ ವರ್ಷ ವಯಸ್ಸಿನೊಳಗೆ ಬರೆದಿದ್ದಾನೆ. ತನಗೆ ಬಸವಣ್ಣನ ಕತೆಯನ್ನು ತಿಳಿಸಿದವರಲ್ಲಿ ಒಬ್ಬಳೆಂದು ಆತ ಹೇಳುವ ದೋಚಮಾಂಬೆ ಎಂಬಾಕೆಯು ಕ್ರಿ.ಶ. ೧೨೯೦ರ ನೀಲಗಂಗವರ ಶಾಸನದಲ್ಲಿ ಹೆಸರಿಸಲ್ಪಟ್ಟಿದ್ದಾಳೆ. ಈ ಕಾಲದಿಂದ ಆಕೆ ಸುಮಾರು ಇಪ್ಪತ್ತು ವರ್ಷವಾದರೂ ಮುಂಚೆಯಿದ್ದಿರಬೇಕು. ಆಗಲೇ ಬಸವಪುರಾಣ ರಚಿತವಾಗಿದ್ದಿರಬೇಕು ಎಂದು ವಾದಿಸುವ ಅವರು ಹರಿಹರನು ಪಂಪಾವಿರೂಪಾಕ್ಷ ದೇವಾಲಯದಲ್ಲಿ ತೆರೆಗೆ ಬೆಂಕಿ ಬೆದ್ದುದನ್ನು ಆರಿಸಿದ ಪವಾಡವು ೧೨೭೭ರಲ್ಲಿ ನಡೆಯಿತೆನ್ನುವ ವಾದವೊಡ್ಡಿ, ಅವನು ಹಂಪೆಗೆ ೧೨೭೭ರ ನಂತರವೇ ಹಿಂತಿರುಗಿ ನೆಲೆಸಿದನೆಂದೂ, ಆಮೇಲೆ ತನ್ನ ಇಳಿವಯಸ್ಸಿನಲ್ಲಿ 'ಬಸವರಾಜದೇವರ ರಗಳೆ'ಯನ್ನು ಬರೆದಿರಬೇಕೆಂದೂ ಹೇಳುತ್ತಾರೆ.[೩] ಆದರೆ ಪವಾಡವನ್ನು ಆಧರಿಸಿ ಕಾಲ ನಿರ್ಧರಿಸುವುದು ಅಷ್ಟು

---

೧. ಪಿ.ವಿ. ನಾರಾಯಣ: ಪಾಲ್ಕುರಿಕೆ ಸೋಮನಾಥನ ಬಸವಪುರಾಣ (ಅನುವಾದ) ಪ್ರಸ್ತಾವನೆ- ಪು. x-xi

೨. ಎಂ. ಚಿದಾನಂದಮೂರ್ತಿ: 'ಹರಿಹರಕ್ಷೇತ್ರ ಮತ್ತು ಹರಿಹರ ಕವಿಯ ಕಾಲ' (ಲಿಂಗಾಯುತ ಅಧ್ಯಯನಗಳು: ಪು. ೧೭೩-೧೭೭)

೩. ಗಾಜುಲ ವೀರಯ್ಯ: 'ಬಸವಪುರಾಣ ಬಸವರಾಜದೇವರ ರಗಳೆಗಳಲ್ಲಿರುವ ಸಾಮ್ಯ ವ್ಯತ್ಯಾಸಗಳು' (ಸಾಧನೆ VI.-೨: ೩೦-೩೧)

ಸರಿಯಾಗಲಾರದು. ಪುರಾಣಕವಿಯೊಬ್ಬ ಇಂತಹ ಪವಾಡವು ನಡೆಯಿತೆಂದು ತಿಳಿಸುವ ದಿನಾಂಕವು ಪಂಚಾಂಗರೀತ್ಯಾ ಸರಿಯೆಂದು ಕಂಡುಬಂದರೂ ಅದನ್ನು ಪ್ರಬಲ ಆಧಾರವಾಗಿ ಸ್ವೀಕರಿಸುವುದು ಕಷ್ಟ ಹಾಗಾಗಿ 'ಬಸವರಾಜದೇವರ ರಗಳೆ'ಯು 'ಪಾಲ್ಕುರಿಕೆ ಸೋಮನಾಥನ 'ಬಸವ ಪುರಾಣ'ಕ್ಕೆ ಮೊದಲೇ ರಚಿತವಾಗಿರ-ಬೇಕೆಂಬುದು ನಮ್ಮ ಅಭಿಪ್ರಾಯ.

ಪಾಲ್ಕುರಿಕೆ ಸೋಮನಾಥನು ಹರಿಹರನ ಸಮಕಾಲೀನನೆಂದು ಭಾವಿಸಬಹುದು. ಅವರಲ್ಲಿ ಯಾರು ಹಿರಿಯರು ಯಾರು ಕಿರಿಯರು ಎಂದು ನಿರ್ಧರಿಸುವುದು ಕಷ್ಟದ ಕೆಲಸ. ಸೋಮನಾಥನ ಕಾಲವು ೧೧೬೦ರಿಂದ ೧೩೦೦ರವರೆಗೂ ಓಲಾಡುತ್ತಿದೆ. ಬ್ರೌನ್ ಹಾಗೂ ಕಿಟ್ಟೆಲ್ಲರೂ ಪಾಲ್ಕುರಿಕೆ ಸೋಮನ ಕಾಲವನ್ನು ಕ್ರಿ.ಶ. ೧೩೦೦ ಎಂದು ಹೇಳುತ್ತಾರೆ. ವೀರೇಶಲಿಂಗಂ ಅವರು ಮೊದಲು ಇವನ ಕಾಲವನ್ನು ಕ್ರಿ.ಶ. ೧೩೦೦ ಎಂದವರು, ಆನಂತರ ೧೧೯೦ ಎಂದು ಮಾರ್ಪಡಿಸಿಕೊಂಡರು. ಆರ್. ನರಸಿಂಹಾಚಾರ್ ಪ್ರಕಾರ ಇವನ ಕಾಲ ಕ್ರಿ.ಶ. ೧೧೯೫, ಇ.ಪಿ. ರೈಸರೂ ಅದನ್ನು ಸಮ್ಮತಿಸುತ್ತಾರೆ. ಚಿಲುಕೂರಿ ವೀರಭದ್ರರಾವ್, ಇವನ ಕಾಲವು ಮೊದಲ ಪ್ರತಾಪರುದ್ರನ ಕಾಲವೆಂದು ಹೇಳುತ್ತಾರೆ. ನಿಡುದವೋಲು ವೆಂಕಟರಾವು ಈತನ ಜೀವನಾಧಿಯು ೧೧೯೦ರಿಂದ ೧೨೬೦ರ ನಡುವೆ ಎಂದು ನಿರ್ಧರಿಸಿದರು.[೪] ಬಂಡಾರು ತಮ್ಮಯ್ಯನವರು ಸೋಮನಾಥನು ೧೧೬೦ರಲ್ಲಿ ಜನಸಿ ಸುಮಾರು ೧೧೦೦ ಹೊತ್ತಿಗೆ ತನ್ನ ಮೊದಲ ಕೃತಿಯಾದ 'ಅನುಭವಸಾರ' ವನ್ನೂ, ಎರಡನೆಯ ಕೃತಿಯಾದ 'ಬಸವಪುರಾಣ'ವನ್ನು ೧೧೯೨ರಲ್ಲಿಯೂ, 'ಪಂಡಿತಾರಾಧ್ಯ ಚರಿತೆ'ಯನ್ನು ೧೨೩೦ರಲ್ಲಿಯೂ ರಚಿಸಿ, ೧೨೪೦ರ ಹೊತ್ತಿಗೆ ಮರಣ ಹೊಂದಿದನೆಂದು ತೀರ್ಮಾನ ಮಾಡುತ್ತಾರೆ.[೫] ಪಾಲ್ಕುರಿಕೆ ಸೋಮನಾಥನು ಎರಡನೆಯ ಪ್ರತಾಪರುದ್ರನ ಕಾಲ (೧೨೯೨–೧೩೨೬) ದವನೆಂದು ಹೇಳಲು ಹೆಚ್ಚು ಆಧಾರಗಳಿವೆಯೆಂದೂ, ಬೆಲಿದೇವಿ ವೇಮನಾರಾಧ್ಯರ ಮೊಮ್ಮಗನ ಶಿಷ್ಯನೇ ತಾನೆಂದು ಆತ ಹೇಳಿಕೊಂಡಿರುವುದರಿಂದ ಸೋಮನಾಥನ ಕಾಲವನ್ನು ಹದಿಮೂರನೆಯ ಶತಮಾನವೆಂದೂ, ಆತನ ಜೀವಿತಾವಧಿ ೧೨೪೦–೧೩೧೦ರ ನಡುವೆ ಎಂದು ಅರ್ವಿಯಸ್ ಸುಂದರಂ ತೀರ್ಮಾನಿಸುತ್ತಾರೆ.[೬] ಒಟ್ಟಾರೆ ಹರಿಹರನೇ ಪಾಲ್ಕುರಿಕೆ ಸೋಮನಾಥನಿಗಿಂತ ಮೊದಲು ಬಸವಚರಿತೆಯನ್ನು ಬರೆದನೆಂದು ತೀರ್ಮಾನಿಸಬಹುದು.

ಹರಿಹರ – ಸೋಮನಾಥರಿಬ್ಬರೂ ಹೊಸಕಾವ್ಯ ಪರಂಪರೆಯನ್ನು ಸೃಷ್ಟಿಸುವ ಮೂಲಕ ತಮ್ಮ ತಮ್ಮ ಭಾಷೆಯಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿದ್ದಾರೆ. ಹರಿಹರನು ಕ್ರಾಂತಿಕವಿ ಎನ್ನಿಸಿದವನು, ಮೊದಲ ಬಾರಿಗೆ ಇಡೀ ಕಾವ್ಯವನ್ನು ರಗಳೆಯ ಛಂದಸ್ಸಿನಲ್ಲಿ

---

೪. ನಿಡುದವೋಲು ವೆಂಕಟರಾವ್ (ಸಂ): 'ಬಸವಪುರಾಣಮು' ಪೀಠಿಕೆ: ಪು. ೨೮

೫. ಬಂಡಾರು ತಮ್ಮಯ್ಯ (ಸಂ): 'ಬಸವಪುರಾಣಮು' ಪೀಠಿಕೆ

೬. ಆರ್ವಿಯಸ್ ಸುಂದರಂ: ತೆಲುಗು ಭಾಷೆ ಮತ್ತು ಸಾಹಿತ್ಯ: ಪು ೪೨–೩

ಬರೆಯುವ ಮೂಲಕ ಹೊಸಹಾದಿಯನ್ನು ತೆರೆದವನು. ಸೋಮನಾಥನು ಅಂಥದೇ ಕೆಲಸವನ್ನು ತೆಲುಗಿನಲ್ಲಿ ಮಾಡಿದ್ದಾನೆ. "ದ್ವಿಪದ ಛಂದಸ್ಸನ್ನು ಮಹಾಕಾವ್ಯಕ್ಕೆ ಉಪಯೋಗವಾಗುವಂತೆ ತಿದ್ದಿದ ಗೌರವವು ಇವನಿಗೆ ಸಲ್ಲುತ್ತದೆ."[೭]

ಇಲ್ಲಿಯೇ ಒಂದು ಸಣ್ಣ ಊಹೆಯನ್ನು ಮಾಡಬಹುದು. ಹರಿಹರ-ಸೋಮನಾಥರಿಬ್ಬರೂ, ಬಸವಣ್ಣ ಮತ್ತವನ ನೇತೃತ್ವದ ಆಂದೋಲನದಿಂದ ಪ್ರಭಾವಿತರಾದವರು, ಹಾಗಾಗಿ ಅವರ ಕಾವ್ಯರಚನೆ ಜನಪರ ನಿಲವುಗಳನ್ನು ತಳೆಯುವಂತಾಯಿತು. ಹಾಗಾಗಿ ಅವರಿಬ್ಬರೂ ತಮ್ಮ ತಮ್ಮ ಭಾಷೆಯಲ್ಲಿ ಆವರೆಗೂ, ಕ್ವಚಿತ್ತಾಗಿ ಬಳಕೆಯಲ್ಲಿದ್ದ ದೇಶೀ ಛಂದಸ್ಸನ್ನು ತಮ್ಮ ಕಾವ್ಯಾಭಿವ್ಯಕ್ತಿಯ ವಾಹಕವನ್ನಾಗಿ ಮಾಡಿಕೊಂಡರು. ಹರಿಹರ ಎಲ್ಲ ಬಗೆಯ ರಗಳೆಗಳನ್ನು ಬಳಸಿಕೊಂಡ; ಸೋಮನಾಥ 'ದ್ವಿಪದ'ವನ್ನು ದೀರ್ಘರಚನೆಗಳಿಗೂ ಅಳವಡಿಸಿಕೊಂಡ. ದ್ವಿಪದ ಸ್ವರೂಪವೆಂದರೆ ಪ್ರತಿಪಾದದಲ್ಲಿ ಮೂರು ವಿಷ್ಣುಗಣಗಳೂ ಕೊನೆಗೊಂದು ಬ್ರಹ್ಮಗಣವೂ ಬರುತ್ತದೆ. ಎರಡನೆಯ ಗಣದನಂತರ ಯತಿಯಿರುತ್ತದೆ. ಇದರ ಬಗ್ಗೆ 'ಛಂದೋಂಬುಧಿ'ಯಲ್ಲಿ ಪ್ರಸ್ತಾಪವಿಲ್ಲ. ಈಚಿನ 'ನಂದಿಛಂದೋರ್ಣವ'ದಲ್ಲಿ ಇದರ ಲಕ್ಷಣವನ್ನು ವಿವರಿಸಲಾಗಿದೆ. ದ್ವಿಪದವು ಅಂಶಗಣಘಟಿತವಾದುದು. ಕನ್ನಡದಲ್ಲಿ ದೊರೆಯುವ ರಗಳೆಗಳು ಮಾತ್ರಾಗಣ ಘಟಿತವಾದವು. ರಗಳೆಯ ಬಗ್ಗೆ ರಂ.ಶ್ರೀ. ಮುಗಳಿಯವರ ಒಂದು ಊಹೆ ಹೀಗಿದೆ: "ಕನ್ನಡ ಜನಪದ ಸಾಹಿತ್ಯದಲ್ಲಿ ತ್ರಿಪದಿಯ ಹಲವು ಆವಿಷ್ಕಾರಗಳಂತೆ ರಗಳೆಯ ಕೆಲವು ಆವಿಷ್ಕಾರಗಳೂ ಇದ್ದಿರಬಹುದು. ಪಂಪನ ರಚನೆಗಳಲ್ಲಿ ಜಾನಪದ ಪ್ರಭಾವವನ್ನು ನಾವು ಗುರುತಿಸಿದ್ದೇವೆ. ಇದರಿಂದ ಮುಖ್ಯವಾಗಿ ರಗಳೆ ಇದು ಅಚ್ಚಗನ್ನಡ ಜಾನಪದ ಛಂದೋರೂಪವಿರಬೇಕೆಂದೂ ಅದು ಹಲವು ಟಿಸಿಲಾಗಿ ಬೆಳೆಯಿತೆಂದೂ ಮಾರ್ಗಕಾವ್ಯದಲ್ಲಿ ಅದೇ ಶಿಷ್ಟಭಾಷೆಯಲ್ಲಿ ಜನ್ಮತಾಳಿತೆಂದೂ ಹೇಳಬಹುದು."[೮] ಕನ್ನಡದ ಜಾನಪದ ಸಾಹಿತ್ಯವೆಂದರೆ ಅಂಶಛಂದಸ್ಸಿನ ರಚನೆಗಳು. ದ್ವಿಪದದ "ಕೊನೆಯ ಬ್ರಹ್ಮಗಣವೂ (ಮುಂದೆ ಸಹಜ ಯತಿಯಿರುವುದರಿಂದಾಗಿ) ಎಳೆಯಲ್ಪಟ್ಟು ಉಚ್ಚಾರ ಕಾಲದ ದೃಷ್ಟಿಯಿಂದ ವಿಷ್ಣುಗಣದ ಹರಹನ್ನೇ ಪಡೆಯುತ್ತದೆ. ಇದು ರಗಳೆಯ ಓಟವನ್ನೇ ಹೋಲುವಂಥದು. ಕನ್ನಡದ ರಗಳೆಗೆ ಈ ಅಂಶಘಟಿತ ದ್ವಿಪದವೇ ಮೂಲವಾಗಿರಬಹುದೇ? ಏಕೆಂದರೆ ಅಂಶಗಣ ಘಟಿತವಾದ ಒಂದೇ ಬಗೆಯ ಷಟ್ಪದಿಯು ಮುಂದೆ ನಾನಾ ಬಗೆಯ ಮಾತ್ರಾ ಷಟ್ಪದಿಗಳಿಗೆ ದಾರಿ ಮಾಡಿಕೊಟ್ಟಿತು. ಇದಕ್ಕೆ ಕಾರಣ ವಿಷ್ಣುಗಣವು ನಾಲ್ಕರಿಂದ ಆರು ಮಾತ್ರೆಗಳ ವ್ಯಾಪ್ತಿಯನ್ನು ಪಡೆಯುವುದು. ಹಾಗೆಯೇ ವಿಷ್ಣುಗಣಗಳಿಂದಲೇ ಪ್ರಮುಖವಾಗಿ ಕೂಡಿರುವ ಅಂಶದ್ವಿಪದವು ಮಾತ್ರಾರೂಪಕ್ಕೆ ತಿರುಗಿದಾಗ ನಾಲ್ಕು ಮಾತ್ರೆಗಳ (ಮಂದಾನಿಲ) ಐದು ಮಾತ್ರೆಗಳ (ಲಲಿತ) ಹಾಗೂ ಆರು ಮಾತ್ರೆಗಳ

---

೭. ದಿವಾಕರ್ಲ ವೆಂಕಟಾವಧಾನಿ (ಅನು:ಎಫ್. ಜಿ. ಮಠದ): 'ಆಂಧ್ರ ವಾಙ್ಮಯ ಚರಿತ್ರೆ': ಪುಟ. ೧೯

೮. ರಂ. ಶ್ರೀ. ಮುಗಳಿ: ಪ್ರಾಚೀನ ಕನ್ನಡ ಸಾಹಿತ್ಯ ರೂಪಗಳು (೧೯೮೫): ಪು. ೧೬೩

ಅಥವಾ ಮೂರು ಮಾತ್ರೆಗಳ ಎರಡು ಘಟಕವನ್ನುಳ್ಳ (ಉತ್ಸಾಹ) ರಗಳೆಗಳಿಗೆ ಅವಕಾಶ ಮಾಡಿಕೊಟ್ಟಿರಬಹುದು. ಈ ಬಗ್ಗೆ ವಿದ್ವಾಂಸರಿಂದ ಇನ್ನೂ ನಿಖರವಾಗಿ ಸಂಶೋಧನೆ ನಡೆಯಬೇಕಾಗಿದೆ"[೯] ಒಟ್ಟಿನಲ್ಲಿ ಹರಿಹರ – ಸೋಮನಾಥರಿಬ್ಬರೂ ಧೋರಣೆಯಲ್ಲಿ ಒಂದೇ ಮನೋಭಾವದವರಾದುದರಿಂದ ಅವರ ಕಾವ್ಯವಸ್ತುವಿನ ಆಯ್ಕೆಯಂತೆಯೆ ಛಂದೋ ಆಯ್ಕೆಯ ಜನಪದದಿಂದ ಪ್ರಭಾವಿತವಾಯಿತೆಂದು ಹೇಳಬಹುದು.

ಪಾಲ್ಕುರಿಕೆ ಸೋಮನಾಥನು ತೆಲುಗು ಕವಿಯಾದರೂ ಕನ್ನಡದಲ್ಲಿ ಅವನಿಗೆ ಹೆಚ್ಚಿನ ಮಾನ್ಯತೆ ದೊರೆತಿದೆ. ತೆಲುಗಿನ ಶಿವಕವಿಗಳಲ್ಲಿ ಅವನು ಅಸದೃಶನಾಗಿದ್ದಾನೆ. ಅನೇಕ ಕವಿಗಳು ಮುಂದೆ ಅವನನ್ನು ಸ್ತುತಿಸಿದ್ದಾರೆ, ಅನುಸರಿಸಿದ್ದಾರೆ. ಕೆಲವರು ಅವನನ್ನು ನೇರವಾಗಿ ಅನುಕರಿಸಿಯೂ ಇದ್ದಾರೆ. ಕ್ರಿ.ಶ. ೧೫೬೦ರ ಪಿಡುಪರ್ತಿ ಸೋಮನಾಥ ಕವಿಯು ಇವನ 'ಬಸವಪುರಾಣ'ವನ್ನು ಚಂಪುರೂಪದಲ್ಲಿ ರಚಿಸಿದ. ಇನ್ನು ವಿಜಯವಾಡದ ಮಹಾದೇವಾರಾಧ್ಯನು ಇದನ್ನು ಮತ್ತೆ ದ್ವಿಪದರೂಪದಲ್ಲಿ ಬರೆದ. ಶ್ರೀ ನಾಥ ಮಹಾಕವಿಯು ಸೋಮನಾಥನ ಮತ್ತೊಂದು ದ್ವಿಪದ ಕಾವ್ಯವಾದ 'ಪಂಡಿತಾರಾಧ್ಯ ಚರಿತಮು'ವನ್ನು ಸುಮಾರು ೧೪೦೦ರಲ್ಲಿ ತೆಲುಗು ಕಾವ್ಯರೂಪಕ್ಕೆ ತಿರುಗಿಸಿದ. ತುಮ್ಮನಪಲ್ಲಿ ನಾಗಭೂಷಣಕವಿಯು ಸು. ೧೨೫೦ರಲ್ಲಿ 'ಬಸವ ವಿಜಯಮು' ಎಂಬ ಕಾವ್ಯವನ್ನು ರಚಿಸಿದ್ದಾನೆ. ಇದೇ ಕಾಲದಲ್ಲಿಯೇ 'ಬಸವ ವಿಜಯಮು' ಎಂಬ ಹೆಸರಿನಲ್ಲಿಯೇ ನಲ್ಲಗೊಂಡ ನಾಗನಾರಾಧ್ಯನು ದ್ವಿಪದ ಕಾವ್ಯವೊಂದನ್ನು ಬರೆದ. ಅಲ್ಲದೆ ತೆಲುಗಿನಲ್ಲಿ ಅನುಮೋದ ಸನ್ಯಾಸಿ ಕವಿಯು 'ಬಸವ ಕಲ್ಯಾಣಮು' ಎಂಬ, ಕಾನೂರಿ ವರ ವೀರಭದ್ರಕವಿಯು 'ಬಸವ ಮಹಿಮಾಮೃತ ವಿಲಾಸಮು' ಎಂಬ ಯಕ್ಷಗಾನಗಳನ್ನೂ ರಚಿಸಿದ್ದಾರೆ. ಹತ್ತೊಂಬತ್ತನೇ ಶತಮಾನದಲ್ಲೂ ಬಸವನನ್ನು ಕುರಿತು ಅನೇಕ ಗ್ರಂಥಗಳು ತೆಲುಗಿನಲ್ಲಿ ರಚಿತವಾಗಿವೆ.[೧೦]

ಬಸವನನ್ನು ಕುರಿತ ತೆಲುಗಿನ ಈ ದೀರ್ಘ ಕಾವ್ಯಪರಂಪರೆಗೆ ಪಾಲ್ಕುರಿಕೆ ಸೋಮನಾಥನು ಆದ್ಯನಾಗಿದ್ದಾನೆ. ಅಷ್ಟು ಮಾತ್ರವಲ್ಲ ಕನ್ನಡದಲ್ಲಿಯೂ ಹರಿಹರನಿಗಿಂತ ಭಿನ್ನವಾದ ಬಸವ ಚರಿತ ಪರಂಪರೆಗೆ ಕಾರಣನಾಗಿದ್ದಾನೆ. ಹಾಗಾಗಿ ಕನ್ನಡದ ಕವಿಗಳು ಇವನ ಬಗ್ಗೆ ಅಪಾರ ಗೌರವವನ್ನು ತೋರಿದ್ದಾರೆ. ತೋಂಟದಾರ್ಯನು 'ಪಾಲ್ಕುರಿಕೆ ಸೋಮೇಶ್ವರಪುರಾಣ'ವೆಂಬ ಕಾವ್ಯವನ್ನೇ ಈತನ ಬಗ್ಗೆ ಬರೆದಿದ್ದಾನೆ.

---

೯. ಪಿ.ವಿ. ನಾರಾಯಣ (ಅನು); ಪಾಲ್ಕುರಿಕೆ ಸೋಮನಾಥನ 'ಬಸವಪುರಾಣ' ಪ್ರಸ್ತಾವನೆ; ಪು. XVI-XVII

೧೦. Bandaru Thammaiah; 'Basavesvara in Telugu Literature' (Sri Basavesvara Commemoration Volume) ೧೯೬೭: pp ೪೩–೫

ಸಿದ್ಧನಂಜೇಶನು 'ಗುರುರಾಜ ಚಾರಿತ್ರ'ದಲ್ಲಿಯೂ ಇವನ ಬಗ್ಗೆ ಅನೇಕ ವಿಚಾರಗಳನ್ನು ಹೇಳಿದ್ದಾನೆ.[೧೧]

ಸೋಮನಾಥನು ಇಪ್ಪತ್ತಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಕೃತಿಗಳನ್ನು ಬರೆದಿದ್ದಾನೆ. ಅನುಭವಸಾರ, ಬಸವಪುರಾಣ, ವೃಷಾಧಿಕ ಶತಕ, ಅಕ್ಷರಾಂತ ಗದ್ಯ, ಅಕ್ಷರಾಂತ ಪದ್ಯ, ನಮಸ್ಕಾರ ಗದ್ಯ, ಪಂಚ ಪ್ರಕಾರ ಗದ್ಯ, ಶರಣ ಬಸವ ಗದ್ಯ, ಅಷ್ಟೋತ್ತರ ಶತನಾಮ ಗದ್ಯ, ಚತುರ್ವೇದಸಾರ, ಸದ್ಗುರು ರಗಡ, ಗಂಗೋತ್ಪತ್ತಿ ರಗಡ, ಬಸವೋದಾಹರಣ, ಚನ್ನಮಲ್ಲು ಸೀಸಮುಲು, ಸೋಮನಾಥ ಸ್ತವ, ಮಲ್ಲಮದೇವಪುರಾಣ, ಪಂಡಿತಾರಾಧ್ಯ ಚರಿತೆ– ಈ ತೆಲುಗು ಕೃತಿಗಳನ್ನೂ ಬಸವೋದಾಹರಣ, ಸೋಮನಾಥ ಭಾಷ್ಯ, ರುದ್ರ ಭಾಷ್ಯ, ವೃಷಭಾಷ್ಟಕ – ಎಂಬ ಸಂಸ್ಕೃತ ಕೃತಿಗಳನ್ನೂ ರಚಿಸಿದ್ದಾನೆ. ವೃಷಾಧಿಪ ಶತಕವು ಮುಖ್ಯವಾಗಿ ತೆಲುಗಿನಲ್ಲಿದ್ದರೂ ಅದರಲ್ಲಿ ಸಂಸ್ಕೃತ, ಕನ್ನಡ, ತಮಿಳು, ಮರಾಠಿ ಹಾಗೂ ಮಣಿಪ್ರವಾಳಗಳಲ್ಲಿ ಬರೆದಿರುವ ಪದ್ಯಗಳಿವೆ.

ಪಾಲ್ಕುರಿಕೆ ಸೋಮನಾಥನು ಅಸೀಮ ಬಸವ ಭಕ್ತ. ಅಕ್ಷರಾಂಕ ಗದ್ಯ, ಅಕ್ಷರಾಂಕ ಪದ್ಯ, ಪಂಚ ಪ್ರಕಾರ ಗದ್ಯ, ಶರಣ ಬಸವ ಗದ್ಯ, ಅಷ್ಟೋತ್ತರ ಶತನಾಮ ಗದ್ಯ– ಇವು ಬಸವಣ್ಣನನ್ನು ಸ್ತುತಿಸುವ ಕೃತಿಗಳು. ಶರಣ ಬಸವ ಗದ್ಯವು ರಗಳೆಯಲ್ಲಿದೆ (ಇವನ ಇತರ ಗದ್ಯ ಹೆಸರಿನ ಕೃತಿಗಳೂ ರಗಳೆಯ ಛಂದಸ್ಸಿನಲ್ಲಿ ರಚಿತವಾದುವುಗಳು). ಅಲ್ಲಿನ ಪ್ರತಿಪಾದವೂ 'ಶರಣು ಬಸವ' ಎಂದು ಕೊನೆಗೊಳ್ಳುತ್ತದೆ. ಇವು 'ಉದಾಹರಣಯುಗ್ಮ' ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಇದೂ ಬಸವ ಸಂಕೀರ್ತನೆಯನ್ನು ಧ್ಯೇಯವಾಗಿರಿಸಿಕೊಂಡ ಕೃತಿ. ವೃಷಾಧಿಪ ಶತಕವು ಉತ್ಪಲಮಾಲೆ ಹಾಗೂ ಚಂಪಕಮಾಲಾ ವೃತ್ತಿಗಳಲ್ಲಿರುವ ಕೃತಿ. ಅದರ ಪ್ರತಿಪದ್ಯವೂ 'ಬಸವಾ ಬಸವಾ ಬಸವಾ ವೃಷಾಧಿಪ' ಎಂದು ಮುಗಿಯುತ್ತದೆ. 'ಚತುರ್ವೇದಸಾರ' ಎಂಬುದು ಸೀಸ ಪದ್ಯಗಳ ರಚನೆ; ಪ್ರತಿಪದ್ಯದಲ್ಲಿಯೂ ಬಸವಲಿಂಗ ಎಂಬ ಮುದ್ರಿಕೆಯಿರುತ್ತದೆ. 'ಬಸವಪುರಾಣ'ವು ಅವನ ಬಸವ ಭಕ್ತಿ ಪ್ರಕಟನೆಯ ಶೃಂಗಕೃತಿ. ಆದ್ದರಿಂದ ಅವನ ಸಮಕಾಲೀನರು ಅವನನ್ನು 'ಬಸವಣ್ಣ ಮಹಿಮ ಶುಂಭದ್ಭಕ್ತಿಯುಕ್ತಿ' ಎಂದು ಹೊಗಳುತ್ತಿದ್ದರಂತೆ. ಇದನ್ನು ಸೋಮನಾಥನೇ ತನ್ನ 'ಪಂಡಿತಾರಾಧ್ಯ ಚರಿತೆ'ಯಲ್ಲಿ ಹೇಳಿಕೊಂಡಿದ್ದಾನೆ. 'ಉದ್ಭಟ ಚರಿತೆ'ಯ ಕರ್ತೃವಾದ ಸೋಮರಾಜನು ಅವನನ್ನು 'ಸಮುದಾಂಚದ್ವೃಷಭಸ್ತವಾಮರ ಮಹೀಜಾರಾಮನಂ ಸೋಮನಂ' ಎಂದು ವರ್ಣಿಸುತ್ತಾನೆ.

ಪಾಲ್ಕುರಿಕೆ ಸೋಮನಾಥನು ಆವೇಶಪೂರ್ಣನಾದ ವೀರಶೈವ. ಆತನು ಶಿವೇತರ ದೇವತೆಗಳ ವಿಗ್ರಹಗಳನ್ನು ನೋಡಬಾರದೆಂಬ ಛಲದವನು. ಇದರಿಂದಾಗಿ

---

೧೧. ಮರಿತೋಂಟದಾರ್ಯನ 'ಸಿದ್ದೇಶ್ವರಪುರಾಣ', ಪರ್ವತೇಶನ 'ಚತುರಾಚಾರ್ಯಪುರಾಣ', ಗುಬ್ಬಿ ಮಲ್ಲಣಾರ್ಯನ 'ವೀರಶೈವ ಮಹಾಪುರಾಣ', ಶಾಂತಲಿಂಗದೇಶಿಕನ 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ'– ಈ ಕೃತಿಗಳಲ್ಲೂ ಸೋಮನಾಥನ ವಿಷಯವಿದೆ.

ಕೋಟೆಯ ಮೇಲಿದ್ದ ಗಜಲಕ್ಷ್ಮಿಯ ವಿಗ್ರಹವು ಮುರಿದು ಬೀಳುವಂತೆ ಪವಾಡ ಮೆರೆದನೆಂಬ ಕತೆಯು 'ಪಾಲ್ಕುರಿಕೆ ಸೋಮೇಶ್ವರ ಚರಿತ ಯಕ್ಷಗಾನಮು' ಎಂಬ ತೆಲುಗು ಕೃತಿಯಲ್ಲಿದೆ. ಇವನು ಆರಾಧ್ಯ ಬ್ರಾಹ್ಮಣನಾಗಿದ್ದವನು. ಆದರೆ ಬಾಲ್ಯದಲ್ಲಿಯೇ ವೀರಶೈವನಾದವನು. ಅವನು ಕಟ್ಟುನಿಟ್ಟಾಗಿ ಅರವತ್ತನಾಲ್ಕು ಶೀಲಗಳನ್ನು ಆಚರಿಸಿದನೆಂದು 'ಪಾಲ್ಕುರಿಕೆ ಸೋಮೇಶ್ವರಪುರಾಣ'ದಲ್ಲಿ ವರ್ಣಿತವಾಗಿದೆ. ತನ್ನ 'ಸೋಮನಾಥ ಭಾಷ್ಯ', 'ರುದ್ರ ಭಾಷ್ಯ', 'ಚತುರ್ವೇದಸಾರ', 'ಗಂಗೋತ್ಪತ್ತಿ ರಗಡ' ಈ ಕೃತಿಗಳಲ್ಲಿ ಪರಮತಗಳನ್ನು ಖಂಡಿಸಿ ವೀರಶೈವದ ಬಗ್ಗೆ ಸೂತ್ರ ಗ್ರಂಥ-ಗಳೆನ್ನಬಹುದಾದ ರೀತಿಯ ರಚನೆ ಮಾಡಿದ್ದಾನೆ.[೧೨] ಆತನು ತನ್ನ ಕೊನೆಗಾಲದಲ್ಲಿ ಕರ್ನಾಟಕದ ಬೆಂಗಳೂರಿನ ಬಳಿಯಿರುವ ಮಾಗಡಿ ತಾಲ್ಲೂಕಿನ ಕಲ್ಯಕ್ಕೆ ಬಂದು ಅಲ್ಲಿಯೇ ಕೊನೆಯುಸಿರೆಳೆದ ಬಗ್ಗೆ ತೋಂಟದಾರ್ಯನ 'ಪಾಲ್ಕುರಿಕೆ ಸೋಮೇಶ್ವರ ಪುರಾಣ'ದಲ್ಲಿ ವಿವರಗಳಿವೆ. ಹಿಂದೆಯೇ ನೋಡಿದಂತೆ ಸೋಮನಾಥನು ಅರವತ್ತು ನಾಲ್ಕು ಶೀಲಗಳನ್ನು ಚಾಚು ತಪ್ಪದೆ ಅನುಸರಿಸಿದವನು. ಅವನಂತೆಯೇ ವ್ರತಗಳನ್ನು ಅನುಸರಿಸುತ್ತಿದ್ದ ಚನ್ನಮ್ಮನೆಂಬ ಶರಣೆಯು ಕಲ್ಯದಲ್ಲಿದ್ದಳು. ಸೋಮನಾಥನಿಗೆ ಆಕೆಯನ್ನು ಕಾಣುವ ಉತ್ಸಾಹದಿಂದ ಸೋಮನಾಥನು ಆಂಧ್ರದ ತೆಲಂಗಾಣ ಪ್ರದೇಶದ ಪಾಲ್ಕುರಿಕೆಯಿಂದ ಬಂಡಿಯೇರಿ ಬರುತ್ತಾನೆ. ತನ್ನನ್ನು ಕಂಡ ಆತನಿಗೆ ತಮ್ಮೂರಿನಲ್ಲಿ ಒಂದು ತಿಂಗಳಾದರೂ ಉಳಿಯಬೇಕೆಂದು ಚೆನ್ನಮ್ಮ ಆಗ್ರಹಪಡಿಸಿದಾಗ ಅವನು ಮೊದಲು ವಾಗ್ದಾನ ಮಾಡುತ್ತಾನೆ. ಆದರೆ ಕೆಲಕಾಲದ ನಂತರ ಮನಸ್ಸು ಬದಲಾಯಿಸಿ, ತಿಂಗಳಾಗುವ ಮುಂಚೆಯೇ ಊರಿಗೆ ಮರಳಲು ಗಾಡಿ ಕಟ್ಟಿಸುತ್ತಾನೆ. ಎತ್ತುಗಳು ಮಾತ್ರ ಮುಂದೆ ಹೋಗದೆ ಹಾಗೆಯೇ ನಿಂತುಬಿಟ್ಟುವು. ಚನ್ನಮ್ಮನಿಗೆ ತಾನಿತ್ತ ಮಾತನ್ನು ನಡೆಸದೆ ಹೊರಟದ್ದರಿಂದ ಹಾಗಾಯಿತೆಂದು ಮನವರಿಕೆಯಾಗಿ ಸೋಮನಾಥನು ಪ್ರಯಾಣವನ್ನು ರದ್ದುಗೊಳಿಸುತ್ತಾನೆ. ಆದರೆ ಕೆಲವು ದಿನಗಳಲ್ಲಿಯೇ ಅವನು ಅಲ್ಲಿಯೇ ಕಣ್ಣುಮುಚ್ಚಿದ, ಊರಿನ ಭಕ್ತರು ಅವನಿಗೆ ಕಲ್ಲೇಶ್ವರ ದೇವಾಲಯದ ಬಳಿ ಸಮಾಧಿಯನ್ನು ನಿರ್ಮಿಸುತ್ತಾರೆ. ಹೀಗೆ ಆಂಧ್ರದಲ್ಲಿ ಹುಟ್ಟಿದ ಅಸೀಮ ಬಸವಭಕ್ತನಾದ ಸೋಮನಾಥನು ಕನ್ನಡ ನೆಲದಲ್ಲಿ ಸೇರಿಹೋದುದು ಅರ್ಥಪೂರ್ಣವಾಗಿದೆ.

ಭೀಮಕವಿಯು ತನ್ನ 'ಬಸವಪುರಾಣ'ವನ್ನು "ಉಡುದೇವ ನಿಧಿನಯನೇಂದು ಸಂಖ್ಯೆಗಳೋವಿ ಶಕವರುಷಂಗಳಾಗಲು ಸೌಮ್ಯವತ್ಸರದ ಶ್ರಾವಣ ಬಹುಳ ಪಕ್ಷ ದಶಮೀ ಜೀವವಾರ"ದಂದು ಬರೆದು ಮುಗಿಸಿದುದಾಗಿ ಹೇಳಿಕೊಳ್ಳುತ್ತಾನೆ.[೧೩] ಇದು ಕ್ರಿ.ಶ. ೧೩೬೯ಕ್ಕೆ ಸರಿಹೊಂದುತ್ತದೆ. ತನ್ನ ತಂದೆಯ ಹೆಸರು ಶಿವಕವಿದೇವನೆಂದು

---

೧೨. ಗಾಜುಲ ವೀರಯ್ಯ: 'ಬಸವಪುರಾಣ ಬಸವರಾಜದೇವರ ರಗಳೆಗಳಲ್ಲಿರುವ ಸಾಮ್ಯ ವ್ಯತ್ಯಾಸಗಳು' (ಸಾಧನೆ vi-೨: ಪು. ೩೨)

೧೩. ಆರ್.ಸಿ. ಹಿರೇಮಠ (ಸಂ): ಭೀಮಕವಿ ವಿರಚಿತ ಬಸವಪುರಾಣ: ಸಂ ೬೦:೯೨

ಕವಿಯೇ ಹೇಳಿಕೊಳ್ಳುತ್ತಾನೆ. ಭೀಮಕವಿಯ ಬಗ್ಗೆ ಸಿದ್ಧನಂಜೇಶನ 'ರಾಘವಾಂಕ ಚಾರಿತ್ರದಲ್ಲಿ ಕೆಲವು ವಿವರಗಳಿವೆ.[೧೪] ಭೀಮಕವಿಯ ತಂದೆ ಶಿವಕವಿದೇವ ಶ್ರೀಶೈಲದ ಬಳಿಯ ಸಿದ್ಧವಟಪುರದವನು. ಆತ ಹಂಪೆಗೆ ಒಮ್ಮೆ ಬಂದಾಗ ಹರಿಹರನನ್ನು ಕಾಣುತ್ತಾನೆ. ತನಗೆ ಮಗನು ಹುಟ್ಟಿದರೆ ಹರಿಹರನ ಸೇವೆ ಮಾಡುತ್ತಿರುವ ರಾಘವಾಂಕನಲ್ಲಿ ವಿದ್ಯೆ ಕಲಿಸುತ್ತೇನೆ ಎನ್ನುತ್ತಾನೆ. ಮುಂದೆ ಆತನಿಗೆ ಮಗ ಹುಟ್ಟುತ್ತಾನೆ. ಆ ಮಗು ಭೀಮ ಎಂಬ ಹೆಸರಿನಿಂದ ಬೆಳೆದು ಎಂಟು ವರ್ಷದವನಾದಾಗ ಅವನನ್ನು ಹಂಪೆಯಲ್ಲಿ ಹರಿಹರನ ವಶಕ್ಕೆ ಒಪ್ಪಿಸುತ್ತಾನೆ. ಹರಿಹರನ ಆಣತಿಯಂತೆ ರಾಘವಾಂಕ ಭೀಮನಿಗೆ ವಿದ್ಯೆ ಕಲಿಸುತ್ತಾನೆ. ಆತನ ಕಾವ್ಯರಚನಾ ಸಾಮರ್ಥ್ಯವು ಕುಡಿವರೆದು ಹರಿಹರನ ಮುಂದೆಯೇ 'ಭೃಂಗಿದಂಡಕ'ವನ್ನು ರಚಿಸುವಂತಾಗುತ್ತದೆ. ಕೆಲಕಾಲನಂತರ ಭೀಮಕವಿ ಸ್ವಂತ ಊರಾದ ಸಿದ್ಧವಟಪುರಕ್ಕೆ ಬರುತ್ತಾನೆ. ತಂದೆ ಸಂತೋಷಿಸಿ 'ಭಕ್ತವೃಂದದ ಆಜ್ಞೆಯಂತೆ ನಡೆದುಕೋ' ಎಂದು ಆಶೀರ್ವದಿಸುತ್ತಾನೆ. ಒಮ್ಮೆ ಪಾಲ್ಕುರಿಕೆ ಸೋಮನಾಥನೂ ಶಿವದೇವನೂ ಕನಸಿನಲ್ಲಿ ಬಂದು ಬಸವ ಪುರಾಣವನ್ನು ರಚಿಸುವಂತೆ ಸೂಚಿಸುತ್ತಾರೆ. ಈ ಸ್ವಪ್ನವಿಚಾರವನ್ನು ಭೀಮಕವಿಯೂ ಹೇಳಿಕೊಂಡಿದ್ದಾನೆ. "ಇಂತು ಬಡಮತಿಯಿಂ ಬಸವರಾಜನ ಕೃತಿಯ ನಾನೆಂತು ರಚಿಸುವೆನೆನುತೆಣಿಸಿ ಶಿವಯೋಗನಿದ್ರಾಮುದ್ರಿತದೊಳಿರಲು ಅನುನಯದಿ ಪಾಲ್ಕುರಿಕೆ ಸೋಮೇಶನು ಮನಘದೇವಾರ್ಯನುಂ ಕನಸಿನೊಳೊಸೆದು ಬಂದು ಪ್ರಸಾದವನಿತ್ತು ನುಡಿಸಿದನು."[೧೫]

'ರಾಘವಾಂಕ ಚಾರಿತ್ರ'ದ ವಿವರಗಳನ್ನು ಒಪ್ಪಿಕೊಂಡರೆ ಭೀಮನು ರಾಘವಾಂಕನ ಕಿರಿಯ ಸಮಕಾಲೀನ. ಆದರೆ ರಾಘವಾಂಕನ ಕಾಲ ಹದಿಮೂರನೆಯ ಶತಮಾನದ ಪೂರ್ವಾರ್ಧದಲ್ಲಿ ಮುಗಿದಿರಬಹುದಾದ್ದರಿಂದ ೧೩೬೯ರಲ್ಲಿ ಕೃತಿರಚನೆ ಮಾಡಿದ ಭೀಮಕವಿಗೆ ಬಾಲ್ಯದಲ್ಲಿ ವಿದ್ಯಾಭ್ಯಾಸ ಮಾಡಿಸಿದ ಸಂಗತಿ ಐತಿಹಾಸಿಕ ಸಂಗತಿಯಾಗಿರಲಿಕ್ಕಿಲ್ಲ. ಕೊಂಡಗುಳಿಕೇಶಿ, ಸಿರಿಪತಿ ಪಂಡಿತ, ಶಿವಲೆಂಕ ಮಂಚಣ ಪಂಡಿತ, ಗುರುಮಲ್ಲಿಕಾರ್ಜುನರ ಕೃಪೆಯಿಂದ ತಾನು ಕಾವ್ಯರಚನೆ ಮಾಡಿದೆನೆಂದು ಕವಿ ಹೇಳಿಕೊಳ್ಳುವಂತೆಯೇ, ಉಭಯಕವಿಶರಭಭೇರುಂಡನಾದ ಹರಿಬುಧವರ (ಹರಿಹರ) ಹಾಗೂ ತದ್ವರಸುತನಾದ ರಾಘವನ ಕೃಪೆಯಿಂದ ಕೃತಿರಚಿಸಿರುವಂತೆ ಹೇಳಿಕೊಳ್ಳುತ್ತಾನೆ, ಹಾಗೆಯೇ ಕಾವ್ಯರಚನೆಯ ಮುನ್ನ ಶಿವತತ್ವವಿದರನ್ನೂ ಸಕಲಾಗಮಜ್ಞಪ್ರವರರನ್ನೂ ಭಾವಿಸುತ್ತಾನೆ.[೧೬] ಹೀಗಾಗಿ ರಾಘವಾಂಕನು ಭೀಮಕವಿಗೆ ವಂದ್ಯರಲ್ಲೊಬ್ಬನೇ ವಿನಾ ಸಮಕಾಲೀನ ಎನ್ನಲು ಬರುವುದಿಲ್ಲ. ಅದು ಪುರಾಣಕಾರನ ಕಲ್ಪನೆಯಾಗಿರುವಂತೆ ತೋರುತ್ತದೆ.

---

೧೪. 'ರಾಘವಂಕ ಚಾರಿತ್ರ'ದ ಹದಿನೈದನೆಯ ಸಂಧಿಯ ಪ್ರಾರಂಭದ ಪದ್ಯಗಳನ್ನು ನೋಡಿ

೧೫. ಬಸವಪುರಾಣ: ಸಂ. ೧. ಪದ್ಯ ೧೪

೧೬. ಬಸವಪುರಾಣ: ಸಂ. ೧: ಪು. ೧೦-೧೩

'ಬಸವಪುರಾಣ'ವು ಭೀಮಕವಿಯ ಸ್ವತಂತ್ರ ಕೃತಿಯಲ್ಲ. ಅದು ಪಾಲ್ಕುರಿಕೆ ಸೋಮನಾಥನ ತೆಲುಗು 'ಬಸವಪುರಾಣಮು'ವಿನ ಭಕ್ತಿಪೂರ್ಣ ಅನುಸರಣೆ. ಒಟ್ಟು ಕಾವ್ಯದ ಬಂಧಕ್ಕೆ ಕಿಂಚಿತ್ತು ಊನ ಅಥವಾ ವ್ಯತ್ಯಾಸ ತಾರದೆ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ, ಅಷ್ಟೆ. ಭೀಮಕವಿ ಸ್ವತಂತ್ರ ಕಾವ್ಯ ರಚನಾ ಶಕ್ತಿಯುಳ್ಳವನೆಂಬುದರಲ್ಲಿ ಸಂಶಯವಿಲ್ಲ. 'ಬಸವಪುರಾಣ'ವಲ್ಲದೆ ಅವನು 'ಭೃಂಗಿದಂಡಕ' ಹಾಗೂ 'ಭೀಮಕವೀಶ್ವರ ರಗಳೆ'ಯನ್ನು ಬರೆದಿದ್ದಾನಂತೆ. ಆದರೆ ಅವು ಉಪಲಬ್ಧವಿಲ್ಲ. ಆದರೂ 'ಬಸವಪುರಾಣ'ದ ಭಾಮಿನಿಷಟ್ಪದಿಯ ಓಟ ಮತ್ತು ಕೆಲವು ಸ್ವತಂತ್ರ ಭಾಗಗಳ ರಚನೆ–ಇವುಗಳಿಂದ ಭೀಮಕವಿಯು ಶಕ್ತನೆಂದು ಹೇಳಬಹುದು. ಪಾಲ್ಕುರಿಕೆ ಸೋಮನಾಥನ 'ಬಸವಪುರಾಣಮು' ಹಿಂದೆಯೇ ನೋಡಿದಂತೆ ಹರಿಹರನ ಬಸವಚರಿತ ನಿರೂಪಣೆಗಿಂತ ಭಿನ್ನವಾದುದು. ಆದರೆ ವೀರಶೈವಪುರಾಣ ಲಕ್ಷಣಗಳನ್ನು ಎಲ್ಲೂ ಪ್ರಸ್ತಾಪಿಸಿಲ್ಲ. ತನ್ನ ಕಾವ್ಯೋದ್ದೇಶವನ್ನೂ, ಕಾವ್ಯರಚನಾತಂತ್ರವನ್ನೂ ಸೋಮನಾಥ ಈ ರೀತಿ ವಿವರಿಸುತ್ತಾನೆ.

ಅಲರಿಸಿ ಬಸವನ ನೆನೆವ ನೆನಹನು
ಬಲುಹಾಗಿ ಮಾಡಿ ಭಾವಗಳನು ಮೆರೆಸಿ–
ಯಕಳಂಕಲಿಂಗ ರಹಸ್ಯಸಿದ್ಧಾಂತ
ಸಕಲವೇದ ಪುರಾಣ ಸಮ್ಮತವಾದ
ಆತತ ಸಕಲ ಪುರಾತನಭಕ್ತ
ಗೀತಾರ್ಥಸಮಿತಿಯೇ ಮಾತೃಕೆಯೆಂಬ
ಪೂರಿತವಾಗೂಪ್ಪುವಾ ಮಣಿಗಳಲಿ
ದಾರದಂತೆಯೇ ಪುರಾತನಭಕ್ತವಿತತಿ
ಚರಿತೆಗಳಲಿ ಸೇರಿಸುತ್ತ ಬಸವನ
ಚರಿತೆಯ ವರ್ಣಿಪೆ ಸತ್ಕೃತಿಯೆನಿಸೆ[೧೭]

ಇದನ್ನೇ ಭೀಮಕವಿಯೂ ಅನುಸರಿಸಿದ್ದಾನೆ. ತನ್ನ ಕಾವ್ಯೋದ್ದೇಶವಿದು.

ಆದಿ ಲಿಂಗರಹಸ್ಯ ಸಿದ್ಧಾಂ
ತಾದಿ ವೇದ ಪುರಾಣ ಸಮ್ಮತ
ವಾದ ಬಸವಪುರಾತನರ ಗೀತಾರ್ಥ ಮಾತೃಕದಿ
ಕೋದಮಣಿಗಣಸೂತ್ರದಂತಿರೆ
ಆದಿಗಣಚರಿತಂಗಳೊಳು ಸಂ
ವೇದಿಸಲು ಬಸವನ ಚರಿತೆಯಂ ಬಣ್ಣಿಸುವೆನೊಸೆದು[೧೮]

ಈ ಭಾಗದಲ್ಲಿ ಸೋಮನಾಥನು ಬಸವಕಥಾ ಸೂತ್ರದಿಂದ ಶರಣರ ಕತೆಗಳೆಂಬ ಮಣಿಗಳನ್ನು ಕೋದು ಹೇಳುವ ಉದ್ದೇಶ ಸ್ಪಷ್ಟವಾಗಿದೆ. ಆದರೆ ಅವರಲ್ಲಿ

---

೧೭. ಪಿ.ವಿ. ನಾರಾಯಣ (ಅನು): ಪಾಲ್ಕುರಿಕೆ ಸೋಮನಾಥನ ಬಸವಪುರಾಣ: ಆಶ್ವಾಸ ೧. ಸಾಲುಗಳು ೧೭೫–೧೮೪

೧೮. ಕನ್ನಡ ಬ.ಪು. ೧.೨೩

ಏಕತೆಯಿರುವುದರಿಂದಾಗಿಯೇ ಹಾಗೆ ಮಾಡಿರುವುದು. ಪ್ರಾಯಶಃ ಬಸವಣ್ಣನನ್ನು ಕೇಂದ್ರವಾಗಿರಿಸಿ ವಿವಿಧ ವೀರಶೈವ ತತ್ವಗಳ ಪ್ರತೀಕಗಳಾದ ಬೇರೆ ಬೇರೆ ಶರಣರ ಕತೆಗಳನ್ನು ಹೇಳುವ ಮೂಲಕ ವೀರಶೈವ ದರ್ಶನ ಮಾಡಿಸುವುದು ಆತನ ಉದ್ದೇಶ. ಇದು ಮುಂದೆ ಶೂನ್ಯಸಂಪಾದನೆಯ ವಿವಿಧ ಪರಿಷ್ಕರಣಗಳಲ್ಲಿ ಪರಿಪೂರ್ಣತೆಯನ್ನು ಪಡೆಯಿತು.[೧೯]

ಸೋಮನಾಥನ ಪ್ರಕಾರ ತನ್ನ ಪುರಾಣದ ಲಕ್ಷಣಗಳು ಎರಡು ಮಾತ್ರ, ಬಸವ ಚರಿತೆ ಮತ್ತು ಆದಿಗಣ ಚರಿತೆ. ಮುಂದೆ ಇವನ ಕೃತಿಯಲ್ಲಿರುವ ಇತರ ಲಕ್ಷಣಗಳನ್ನು ಗುರುತಿಸಿ, ಹೊಸ ಲಕ್ಷಣಗಳನ್ನು ಸೇರಿಸಿ ಕವಿಗಳು ವೀರಶೈಪುರಾಣದ ಸ್ವರೂಪವನ್ನು ವಿಸ್ತರಿಸಿದರು. ಲಕ್ಕಣ್ಣದಂಡೇಶನ 'ಶಿವತತ್ತ್ವ ಚಿಂತಾಮಣಿ', ವಿರೂಪಾಕ್ಷ ಪಂಡಿತನ 'ಚೆನ್ನಬಸವಪುರಾಣ', ಗುಬ್ಬಿ ಮಲ್ಲಣಾರ್ಯನ 'ವೀರಶೈವ ಮಹಾಪುರಾಣ', ಸಿದ್ಧನಂಜೇಶನ 'ಗುರುರಾಜ ಚಾರಿತ್ರ' ಮುಂತಾದ ಕೃತಿಗಳಲ್ಲಿ ವೀರಶೈವಪುರಾಣದ ಲಕ್ಷಣಗಳನ್ನು ಆಯಾ ಕವಿಗಳ ಕಲ್ಪನೆಗೆ ಅನುಗುಣವಾಗಿ ವಿವರಿಸಲಾಗಿದೆ.[೨೦] ವಿವರಗಳಲ್ಲಿ ಏನೇ ವ್ಯತ್ಯಾಸಗಳಿದ್ದರೂ ಒಟ್ಟು ನೋಟದಲ್ಲಿ ನಂತರದ ವೀರಶೈವಪುರಾಣಗಳು ಸೋಮನಾಥನ 'ಬಸವಪುರಾಣ'ವನ್ನೇ ಮಾದರಿಯಾಗಿರಿಸಿ ಕೊಂಡಿವೆ. ಆತನು ಹೇಳಿದಂತೆ ಪುರಾತನ ಭಕ್ತರ ಗೀತಗಳಲ್ಲಿ ಶಿವರಹಸ್ಯ ಸಿದ್ಧಾಂತಗಳೂ, ಸಕಲ ವೇದಪುರಾಣ ಸಮ್ಮತವಾದ ವಿಷಯಗಳಿರುವುದರಿಂದ ಆಯಾ ಭಕ್ತರ ಚರಿತ್ರೆಯನ್ನು ವಿವರಿಸುವುದೆಂದರೆ ಅವರು ಪ್ರತಿನಿಧಿಸುವ ತತ್ವಗಳ ವಿವರಣೆಯೆಂದೇ ಸೋಮನಾಥನು ಭಾವಿಸಿದ್ದ. ಈ ಮೂಲ ಸೂಚನೆಯನ್ನು ಮುಂದಿನವರು ತಮ್ಮ ಕಾಣ್ಕೆಗೆ ಅನುಗುಣವಾಗಿ ವಿಸ್ತರಿಸಿದ್ದಾರೆ.

ಸೋಮನಾಥನಿಗೆ ಬಸವಪುರಾಣವನ್ನು ಬರೆಯಲು ಆಸೆ. ಅದಕ್ಕೆ ಶ್ರೀಶೈಲದ ಭಕ್ತರನ್ನು "ಅಸದೃಶವೆನಿಪ ಬಸವಪುರಾಣವನು ಅತಿಶಯವೆನೆ ಹೇಳಲಿಷ್ಟವುಳ್ಳೆನಗೆ ವರಕಥಾ ಸೂತ್ರದ ತಿಳಿಸುತಲೆನ್ನ ಚರಿತಾರ್ಥನೆನಿಸಿರಿ ಕರುಣೆಯಿಂದ"[೨೧] ಎಂದು ಕೇಳಿಕೊಳ್ಳುತ್ತಾನೆ; ಅವರು ಅನುಗ್ರಹಿಸುತ್ತಾರೆ. ಇದಕ್ಕೆ ಸಂವಾದಿಯಾಗಿ, ಹಿಂದೆ ನೋಡಿದಂತೆ, ಭೀಮಕವಿಯ ಕನಸಲ್ಲಿ ಪಾಲ್ಕುರಿಕೆ ಸೋಮನಾಥ ಹಾಗೂ ಶಿವದೇವರು ಕಾಣಿಸಿಕೊಂಡು "ಆವುದಕ್ಕನುಮಾನಿಸದಿರೊಲಿದಾವ ಶಬ್ದಾರ್ಥ-ಮುಮನಾದಡೆ ಭಾವಿಸಲು ನಿನಗರಿಪಿ ನಿನ್ನಾತ್ಮದೊಳಗಲದಿರ್ದು ನಾವು ರಚಿಸುವೆವೆಸೆವ ಬಸವ ಕಥಾವಿಸರಮಂ ಬರೆದುಕೋಯೆಂದೋವಿದವರಾಜ್ಞೆಯನೆ ಶಿರದೊಳು ಧರಿಸಿ ಮುದವೆತ್ತು ಅಸಮಲಿಂಗೈಕ್ಯಾನುಭಾವ ಪ್ರಸರಮತಿ ಕವಿ

---

೧೯. ನೋಡಿ, ಪಿ.ವಿ. ನಾರಾಯಣ: 'ಶೂನ್ಯಸಂಪಾದನೆಯ ಬಂಧ, ವೈಶಿಷ್ಟ್ಯ' ಎಂಬ ಲೇಖನ, (ಒಳ ಹರಿವು : ಪು ೮೮-೯೫)

೨೦. ಎಸ್. ವಿದ್ಯಾಶಂಕರ: ವೀರಶೈವಪುರಾಣಗಳು: ಪು. ೧೨೦-೭

೨೧. ತೆಲುಗು ಬಸವಪುರಾಣ (ಅನುವಾದ) ಸಾಲು ೯೫-೮

ಸೋಮನಾಥನು ರಸಮೊಸರೆ ಮುನ್ನುಸುರ್ದುದನೆ ಕನ್ನಡಿಸಿ ಪೇಳೆಂದು ಎಸೆವ ಬಸವಪುರಾಣಮಂ ಪಸರಿಸುವ ನಿರ್ಮಳ ಬೋಧೆಯಂ ಕರುಣಿಸಿದರು."[೨೨]

ಸೋಮನಾಥನು ತನ್ನ ಕಾವ್ಯ ಪ್ರಾರಂಭದಲ್ಲಿ ತನಗೆ ಬಸವ ಕತೆಯನ್ನು ತಿಳಿಸಿದ ಕರಸ್ಥಲಿ ಮಲ್ಲಿನಾಥ, ರೆಂಟಾಲ ಮಲ್ಲಿನಾಥ, ನೀಲಕಂಠಾಗ್ರಜ, ಗೋಡಗಿ ತ್ರಿಪುರಾರಿ ಮುಂತಾದ ಭಕ್ತರನ್ನೂ, ದೋಚಮಾಂಬೆಯೆಂಬ ಭಕೆಯನ್ನೂ ಸ್ತುತಿಸಿದ್ದಾನೆ. ತನ್ನ ಕಥಾನಿರೂಪಣೆಗೆ ಗೊಬ್ಬೂರಿನ ಸಂಗನಾಮಾತ್ಯನನ್ನು ಶ್ರೋತೃವೆಂದು ಆರಿಸಿಕೊಂಡಿದ್ದಾನೆ. ಹಳೆಯ ಸಂಪ್ರದಾಯದಂತೆ ಕುಕವಿನಿಂದೆ ಇತ್ಯಾದಿಗಳನ್ನು ಸೋಮನಾಥ ಮಾಡಿಲ್ಲ. ಒಂದೇ ಮಾತಿನಲ್ಲಿ "ಕವಯಃ ಕಿಂ ನಪಶ್ಯಂತಿ' ಯೆನುತ ಕುಕವಿಗಳನು ಪರಿಗಣಿಸದೆ ಭರದಿ ನುತಿಸುವೆ"[೨೩] ಎಂದು ಕಥಾರಂಭ ಮಾಡುತ್ತಾನೆ. ಭೀಮಕವಿಯೂ ಕೊಂಡುಗುಳಿ ಕೇಶಿರಾಜ, ಶ್ರೀಪತಿಪಂಡಿತ, ಶಿವಲೆಂಕ ಮಂಚಣ್ಣ, ಗುರುಮಲ್ಲಿಕಾರ್ಜುನ ಪಂಡಿತರನ್ನು ಸ್ತುತಿಸಿ, ಹರಿಹರ ರಾಘವಾಂಕರನ್ನು ನೆನೆಸಿಕೊಂಡು, "ಕುಕವಿಗಳ ನಿಂದೆ ಮಾಡದೆ ವಿನುತಿಸುವೆ"[೨೪] ಎಂದು ಪ್ರಾರಂಭಿಸುತ್ತಾನೆ. ಭೀಮಕವಿ ತನ್ನನ್ನು 'ಉಭಯಕವಿ ಸಮರ್ಥ' ಎಂದು ಕರೆದುಕೊಂಡಿದ್ದಾನೆ. ಸಾಮಾನ್ಯವಾಗಿ ಉಭಯಕವಿತ್ವವೆಂದರೆ ಸಂಸ್ಕೃತ–ಕನ್ನಡಗಳಲ್ಲಿ ಬರೆಯುವ ಶಕ್ತಿ. ಆದರೆ ಭೀಮಕವಿಯು ತಾನು ಸೋಮನಾಥನ ಕಾವ್ಯವನ್ನು 'ಕನ್ನಡಿಸು'ವೆನೆಂದು ಹೇಳಿಕೊಂಡಿರುವುದರಿಂದ ಉಭಯ ಕವಿತ್ವವೆಂದರೆ ಇಲ್ಲಿ ತೆಲುಗು–ಕನ್ನಡಗಳೆಂದು ಭಾವಿಸುವುದು ಸೂಕ್ತ.

ಬಸವಾದಿಗಳು ಕನ್ನಡದಲ್ಲಿ ವಚನಗಳನ್ನು ಬರೆಯುವ ಮೂಲಕ ದೇಶಭಾಷೆಗೆ ಗೌರವದ ಸ್ಥಾನವನ್ನು ಒದಗಿಸಿದರು. ಸಾಮಾನ್ಯನ ಮಾತು ಕಡಿಮೆಯದಲ್ಲವೆಂಬ ಭಾವನೆಯನ್ನು ಜನರಲ್ಲಿ ಉಂಟುಮಾಡಿದರು. ಪಾಲ್ಕುರಿಕೆ ಸೋಮನಾಥನು ತಾನು ಜನಭಾಷೆಯಾದ ತೆಲುಗಿನಲ್ಲಿ ಬರೆಯುತ್ತಿದ್ದರೂ, ಅದು ಸಾಧಾರಣ ಭಾಷೆಯಲ್ಲವೆಂದು ಹೇಳುತ್ತಾನೆ.

"ಉರುತರವಹ ಗದ್ಯಪದ್ಯೋಕ್ತಿಗಿಂತ
ಸರಸದಿ ಮೆರೆಯುವ ಜಾನುತೆಲುಗು ವಿ
ಚಾರಿಸಲದು ಸರ್ವಸಾಮಾನ್ಯವೆನಿಸಿ
ಬರುವ ದ್ವಿಪದಗಳನೀಯೆಡೆ ಬರಿಯ
ತೆಲುಗು ಮಾತುಗಳೆನಬಹುದೆ? ವೇದಗಳ
ಸಮವೆನೆ ನೋಡಬೇಕದುವೆಯೆಂತೆನಲು
ಅಳತೆಗೆ ಕೊಳಗ ಪ್ರಮಾಣವೆನಿಸಲು
ಅಳತೆಯ ಸೊಲಗೆಯು ಪ್ರಮಾಣ ತಾನೆ?

---

೨೨. ಕನ್ನಡ ಬಸವಪುರಾಣ: ಸಂ. ೧ ಪದ್ಯ ೧೫–೧೬

೨೩. ತೆಲುಗು ಬಸವಪುರಾಣ: ೧. ೨೬೦–೨

೨೪. ಕನ್ನಡ ಬಸವಪುರಾಣ: ೧೧ – ೩೭

ಅಲ್ಪಾಕ್ಷರಗಳಿಂದನಲ್ಪಾರ್ಥ ರಚನೆ
ಯನು ಕಲ್ಪಿಸುವುದಲ್ಲವೆ ಕವಿವಿವೇಕ?"[೨೫]

ಇಲ್ಲಿ 'ಗದ್ಯಪದ್ಯೋಕ್ತಿ'ಯೆಂದು ಹೇಳುತ್ತಿರುವುದು ಚಂಪೂವನ್ನು ಕುರಿತು. 'ಜಾನು ತೆಲುಗು' ದೇಸಿಯನ್ನು ಸೂಚಿಸುತ್ತದೆ. ಇದೇ ಮಾತುಗಳನ್ನು ಭೀಮಕವಿ ಕನ್ನಡಕ್ಕೆ ಅನ್ವಯಿಸಿ ಬರೆಯುತ್ತಾನೆ.

ಪ್ರಾಸಯತಿ ಗಣಗದ್ಯ ಪದ್ಯ ಸ
ಮಾಸಯುತ ವಸ್ತುಕದ ಮುಂದೆ ವಿ
ಳಾಸಮೇ ಸಾಮಾನ್ಯಮೀ ವರ್ಣಕ ಕವಿತೆಯೆಂದು
ಓಸರಿಸದಿರಿ ಬರಿಯ ಕನ್ನಡ
ಭಾಷೆಯಯೆಂದೆನಲಾಗದಿಳೆಗಿದು
ಲೇಸಸೆನಿಪ ವೇದ ಪ್ರಮಾಣವೆನಿಪ್ಪುದೆಂತೆನಲು
ಧರೆಯೊಳು ತಡಿಯಾದ ಕೊಳಗದ
ಸರಿಯ ಸೊಲ್ಲಿಗೆ ಸಲ್ಲದಿಪ್ಪುದೆ
ಪರಿಮಿತಾಕ್ಷರತೆಯೊಳಪರಿಮಿತಾರ್ಥ ರಚನೆಯಲಿ
ವಿರಚಿಸುವುದದು ಕವಿಯ ಚತುರತೆ[೨೬]

ಮಾರ್ಗ-ದೇಶಿಗಳೆಂದು ಸೋಮನಾಥ ಕರೆದುದನ್ನು ಭೀಮಕವಿ ವಸ್ತುಕ-ವರ್ಣಕಗಳೆಂದು ಕರೆಯುತ್ತಿದ್ದಾನೆ ಅಷ್ಟೆ. ಹೀಗೆ ಸೋಮನಾಥನ ಜಾಡನ್ನು ಭೀಮಕವಿ ತಪ್ಪದೆ ಅನುಸರಿಸಿದ್ದಾನೆ.

ಸೋಮನಾಥನು ಕಾವ್ಯಪ್ರಾರಂಭದಲ್ಲಿ ಭಕ್ತರನ್ನು ನೆನೆದು ಕಥಾಪ್ರಾರಂಭಕ್ಕೆ ಮುನ್ನ ಬಸವ ಸ್ತುತಿಯನ್ನು ಮಾಡುತ್ತಾನೆ. ಭೀಮಕವಿಯು ಬಹುತೇಕ ಕಪ ದ್ವಿಪದಗಳನ್ನು ಕನಿಷ್ಠ ಮಾರ್ಪಡಿಸಿ ಭಾಮಿನೀ ಷಟ್ಪದಿಯಾಗಿಸುತ್ತಾನೆ.

ಬಸವಗೆ ಶರಣೆನ್ನೆ ಪಾಪದ ಕ್ಷಯವು
ಬಸವಗೆ ಶರಣೆನ್ನೆ ಪರಮ ಪಾವನವು
ಬಸವಗೆ ಶರಣೆನ್ನೆ ಪ್ರತ್ಯಕ್ಷ ಸುಖವು
ಬಸವಗೆ ಶರಣೆನ್ನೆ ಭವರೋಗ ನಾಶ
ಬಸವಗೆ ಶರಣೆನ್ನೆ ಭಕ್ತಿವರ್ಧನವು
ಬಸವಗೆ ಶರಣೆನ್ನೆ ಬಂಧಮೋಚನೆಯು
ಬಸವಗೆ ಶರಣೆನ್ನೆ ಭಾಗ್ಯಸೇರ್ಪಡೆಯು
ಬಸವಗೆ ಶರಣೆನ್ನೆ ಮೆರೆವುದು ಶೀಲ
ಬಸವಗೆ ಶರಣೆನ್ನೆ ಹರಿವುದಾಪದವು
ಬಸವಗೆ ಶರಣೆನ್ನೆ ಪ್ರಬಲ ಸಂಪದವು
ಬಸವಗೆ ಶರಣೆನ್ನೆ ಅತಿಶಯ ಕೀರ್ತಿ

---

೨೫. ತೆಲುಗು ಬಸವಪುರಾಣ: ೧. ೧೬೫--೧೭೪

೨೬. ಕನ್ನಡ ಬಸವಪುರಾಣ: ೧. ೨೧-೨೨

ಬಸವಗೆ ಶರಣೆನ್ನೆ ಫಲಿಸುವುದಿಚ್ಛೆ
ಬಸವಗೆ ಶರಣೆನ್ನೆಯಹುದು ವಾಕ್ಸಿದ್ಧಿ
ಬಸವಗೆ ಶರಣೆನ್ನೆ ಬುದ್ಧಿಭ್ರಾಜಿಪುದು[೨೭]

ಇದನ್ನೇ ಭೀಮಕವಿಯು ಈ ರೀತಿ ಅನುವಾದಿಸುತ್ತಾನೆ.

ಬಸವ ಶರಣೆನೆ ಪಾಪವಳಿವುಗು
ಬಸವ ಶರಣೆನೆ ತಾಪವಾರುಗು
ಬಸವ ಶರಣೆನೆ ಪರಮ ಪಾವನ ಭಾತಿ ಸಂಧಿಸುಗು
ಬಸವ ಶರಣೆನೆ ಭಕ್ತಿ ದೊರಕುಗು
ಬಸವ ಶರಣೆನೆ ಸಾರ್ಗು ಸುಸ್ಥಿತಿ
ಬಸವ ಶರಣೆನೆ ವಚನ ರಚನಾಸಿದ್ಧಿ ವರ್ಧಿಸುಗು
ಬಸವ ಶರಣೆನೆ ಭವವುಡುಗುವುದು
ಬಸವ ಶರಣೆನೆ ಕೀರ್ತಿಯೆಸೆವುದು
ಬಸವ ಶರಣೆನೆ ದುಃಸ್ಥಿತಿಗಳತ್ತತ್ತಲೋಡುವುವು
ಬಸವ ಶರಣೆನೆ ಸೌಖ್ಯವೊಂದುಗು
ಬಸವ ಶರಣೆನೆ ಭಾಗ್ಯವಪ್ಪುಗು
ಬಸವ ಶರಣೆನೆ ಕಾಮಿತೋನ್ನತ ಸಿದ್ಧಿಸಿದ್ಧಿಸುಗು[೨೮]

ಹೀಗೆ ಭೀಮಕವಿಯ 'ಕನ್ನಡಿಸುವ' ಪ್ರಕ್ರಿಯೆ ಎಂದರೆ ತೆಲುಗು ಮೂಲದ ದ್ವಿಪದಗಳ ಭಾವವನ್ನು ಆದಷ್ಟು ಯಥಾವತ್ತಾಗಿ ಕನ್ನಡದಲ್ಲಿ ಭಾಮಿನೀ ಷಟ್ಪದಿಯ ರೂಪಕ್ಕೆ ತರುವುದು.

ಕೆಲವು ವೇಳೆ ಸೋಮನಾಥನು ಬಳಸುವ, ಪದಸಮುಚ್ಚಯವನ್ನು ತಾನೂ ಅದೇ ರೀತಿಯಲ್ಲಿ ಭೀಮಕವಿ ಉಳಿಸಿಕೊಳ್ಳುತ್ತಾನೆ. ನಾರದನು ಶಿವನನ್ನು ಅವತರಿಸುವಂತೆ ಕೇಳುತ್ತ, ಭಕ್ತಿ ಕಡಿಮೆಯಾಗಿರುವುದರಿಂದ

ಅದಕೆ ದೃಷ್ಟಪ್ರತ್ಯಯಂಗಳಿಂದಲೀಗ
ಸಂದೇಹಗಳು ತಗ್ಗಿಸದ್ಭಕ್ತಿಯುಕ್ತಿ
ಸುಸ್ಥಿರವಾಗಿ ಲಿಂಗಸ್ಥಲಜಂಗ
ಮಸ್ಥಲ ತತ್ಪ್ರಸಾದಸ್ಥಲಗಳಲಿ
ಸಂಪನ್ನರಹ ಜಗಜ್ಜನರೆಲ್ಲ ಭಕ್ತಿ
ಸೊಂಪದು ಕೊಳ್ಳೆಗೆ ಒಳಗಾಗಲೇಕೆ
ನೀನೆ ಪ್ರಸನ್ನತೆಯಿಂ ಬಂದು ಲೋಕ
ಪಾವನವೆನೆ ಭಕ್ತಿ ಪಾಲಿಸಬೇಕು[೨೯]

ಎಂದು ಪ್ರಾರ್ಥಿಸುತ್ತಾನೆ. ಈ ಭಾಗವನ್ನು ಭೀಮಕವಿ ಹೀಗೆ ಬರೆಯುತ್ತಾನೆ.

---

೨೭. ತೆಲುಗು ಬಸವಪುರಾಣ: ೧. ೧೯೯–೨೦೨

೨೮. ಕನ್ನಡ ಬಸವಪುರಾಣ: ಸಂ. ೧ ಪ. ೨೫–೨೬

೨೯. ತೆಲುಗು ಬಸವಪುರಾಣ: ಸಂ. ೧ ಪ. ೨೯೯–೩೦೭

......ದೃಷ್ಟ ಪ್ರತ್ಯಯಂಗಳಲಿ
ಸಂದೆಗಂಗಳನುಳಿದು ಸತತ
ನಂದಿತಾಮಳ ಭಕ್ತಿಯುಕ್ತಾ
ನಂದ ರಸದೊಳಗಾಡುವಂತೆ ಮನುಷ್ಯಲೋಕದಲಿ
ಮುಂದೆಯಿದು ಲಿಂಗಸ್ಥಳಂ ತಾ
ನೆಂದಿದುವೆ ವರ ಜಂಗಮಸ್ಥಳ
ವೆಂದು ತದ್ವಿಮಳ ಪ್ರಸಾದಸ್ಥಳವಿದೆಂದರುಪಿ
ನೀವು ಬಿಜಯಂಗೆಯ್ದು......"[೩೦]

'ದೃಷ್ಟಪ್ರತ್ಯಯ'ಎಂಬ ಪದಸಮುಚ್ಚಯವು ಇಲ್ಲಿ ಮುಖ್ಯವೆನ್ನಿಸಿ ಭೀಮಕವಿ. ಅದನ್ನು ಹಾಗೆಯೇ ಉಳಿಸಿಕೊಂಡಿದ್ದಾನೆ. ಹಾಗೆಯೇ ಶಿವನು ತನ್ನ ಪರವಾಗಿ ನಂದಿಕೇಶ್ವರನು ಅವತರಿಸುವನೆಂದು ಹೇಳುತ್ತ ತಾನು 'ಭಕ್ತೈಕತನು'[೩೧]ವೆಂದು ಹೇಳುತ್ತಾನೆ. ಅದನ್ನೇ ಭೀಮಕವಿ[೩೨] ಉಳಿಸಿಕೊಳ್ಳುತ್ತಾನೆ. ಇಂತಹ ಕಡೆಗಳಲ್ಲಿ ತೊಂದರೆಯಿಲ್ಲ. ಆದರೆ ಮೂಲದಲ್ಲಿ ಸಂದಿಗ್ಧವೆನ್ನಿಸಬಹುದಾದ ಪದ ಸಮುಚ್ಚಯವನ್ನೇ ಕನ್ನಡದಲ್ಲಿಯೂ ಉಳಿಸಿಕೊಳ್ಳುವುದರಿಂದ ಸಂದಿಗ್ಧತೆಯು ಉಳಿದೇ ಬಿಡಬಹುದು. ನಂದಿಕೇಶ್ವರನು ಶಿವನ ಆಜ್ಞೆಗನುಗುಣವಾಗಿ ಮಾದಾಂಬೆಯ ಮಗನಾಗಿ ಹುಟ್ಟುವ ಸನ್ನಿವೇಶ ಸೋಮನಾಥನಲ್ಲಿ ಹೀಗಿದೆ:

ಪ್ರೀತಿಯ ಮಗನು ಮುಗಿದ ಕೈಗಳೊಡನೆ
ಆ ತಾಯಗರ್ಭದಿನಂದುದಯಿಸಿದ
ನರ್ಧೋದಯದೊಳಗೆ ಆತನಲಿದ್ದ
ಅರ್ಧೇಂದುಮೌಳಿ ಗುಪ್ತಾಕೃತಿ ತಳೆದು
ಅಂಗದ ಮೇಲೆಲ್ಲ ಕಡುಸಾಂಗವಾಗಿ
ಲಿಂಗಸಾಹಿತ್ಯವ ಲೀಲೆಯಿಂಗೈದ[೩೩]

ಭೀಮಕವಿಯು ಈ ಭಾಗವನ್ನು ಈ ರೀತಿಯಲ್ಲಿ ಅನುವಾದಿಸುತ್ತಾನೆ.

ಪ್ರೀತಿಯಲಿ ಪುತ್ರನು ಕರಾಂಭೋ
ಜಾತಮುಕುಳಿತನಾಗಿ ಮೆಲ್ಲನೆ
ಮಾತೆಯುದರದೊಳುದಯಿಸಲು ಅರ್ಧೋದಯದೊಳಾಗ
ಆ ತನಯನೊಳಗಿಹ ಶಿವಂ ವಿ
ಖ್ಯಾತಗುರುವಾಕಾರಮಂ ತಾ
ಳ್ದಾತನಂಗದ ಮೇಲೆ ಲಿಂಗಾಸಂಗಮಂ ಮಾಡಿ[೩೪]

---

೩೦. ಕನ್ನಡ ಬಸವಪುರಾಣ: ೧ – ೫೮–೬೦
೩೧. ತೆಲುಗು ಬಸವಪುರಾಣ: ೧–೩೨೭
೩೨. ಕನ್ನಡ ಬಸಪುರಾಣ: ೧ – ೬೨
೩೩. ತೆಲುಗು ಬಸವಪುರಾಣ: ೧ – ೭೫೭. – ೬೨
೩೪. ಕನ್ನಡ ಬಸವಪುರಾಣ: ಸಂ. ೩ – ೨೪

ನಂದಿಕೇಶ್ವರನು ಬಸವಣ್ಣನಾಗಿ 'ಅರ್ಘೋದಯ'ದಲ್ಲಿ ಉದಯಿಸಿದನೆಂಬ ಭಾಗವನ್ನು ಅರ್ಘೋದಯವೆಂದೇ ಭೀಮಕವಿ ಉಳಿಸಿಕೊಂಡಿದ್ದಾನೆ. ಈ ಪದವು ಬಸವಣ್ಣನ ಜನನದ ಮುಹೂರ್ತವನ್ನು ಸೂಚಿಸುತ್ತದೆಂದು ಭಾವಿಸುವ ತೆಲುಗು ವಿದ್ವಾಂಸರೊಬ್ಬರು ಈ ಪದವು ಜ್ಯೋತಿಷ್ಯದಲ್ಲಿ ವಿಶಿಷ್ಟ ಮುಹೂರ್ತವನ್ನು ಹೇಳುತ್ತದೆಂದು ವಾದಿಸಿ, ಆ ಪ್ರಕಾರ ಬಸವಣ್ಣನ ಜನನವು "ಸಿದ್ಧಾರ್ಥಿನಾಮ ಸಂವತ್ಸರ ಪುಷ್ಯ ಬಹುಳ ಅಮಾವಾಸ್ಯೆ ಭಾನುವಾರ ಶ್ರವಣ ನಕ್ಷತ್ರದಲ್ಲಿ ಹಗಲು ೯ ಗಂಟೆಗೆ, ಇಂಗ್ಲಿಷ್ ತಾರೀಖು ೨೧.೧.೧೧೪೦ಕ್ಕೆ ಸರಿಯಾಗಿ" ಆಯಿತೆಂದು ತೀರ್ಮಾನಿಸುತ್ತಾರೆ.[೩೫] ಮತ್ತೊಬ್ಬ ವಿದ್ವಾಂಸರು ಇದನ್ನು ಅಲ್ಲಗಳೆದು ಅರವತ್ತನಾಲ್ಕು ಶೀಲಗಳನ್ನು ಆಚರಿಸಿದ ಸೋಮನಾಥನು ತಿಥಿವಾರ ನಕ್ಷತ್ರಗಳ ಲೆಕ್ಕಹಾಕಲಾರನೆಂದು ವಾದಿಸಿ, "ಬಸವಣ್ಣನ ಹೃದಯದಲ್ಲೇ ಇದ್ದ ಶಿವನು ಗುಪ್ತಾಕೃತಿಯನ್ನು ಧರಿಸಿ ಲಿಂಗಸಾಹಿತ್ಯವನ್ನು ಮಾಡುವುದು ಅರ್ಘೋದಯದಲ್ಲಿಯೇ ಸಾಧ್ಯ"[೩೬] ಎಂದು ಹೇಳುತ್ತಾರೆ. ಈ ವಿಚಾರವನ್ನು ಇಲ್ಲಿ ಚರ್ಚಿಸಿದ ಉದ್ದೇಶವೆಂದರೆ, ಭೀಮಕವಿಯು ಈ ಪದವನ್ನು ವ್ಯಾಖ್ಯಾನಿಸಿ ಅನುವಾದಿಸಿದ್ದರೆ, ಕನಿಷ್ಠಪಕ್ಷ ಬಸವಣ್ಣನ ಜನನದ ಬಗ್ಗೆ, ಅವನ ಕಾಲದಲ್ಲಿದ್ದ ಜನರ ನಂಬಿಕೆಯನ್ನು ತಿಳಿಯಲು ನಮಗೆ ಸಾಧ್ಯವಾಗುತ್ತಿತ್ತು. ಆದರೆ ಆತನಿಗೆ ನೀಡುವವನು ಸೋಮನಾಥನೇ ಆದ್ದರಿಂದ ಏನನ್ನೂ ಬದಲಾಯಿಸಲಾರ.

ಪದಸಮುಚ್ಚಯದಂತೆಯೇ ಸೋಮನಾಥನು ಉಲ್ಲೇಖಿಸುವ ಸಂಸ್ಕೃತೋಕ್ತಿಗಳನ್ನು ಆದಷ್ಟು ಮೂಲರೂಪದಲ್ಲಿಯೇ ಭೀಮಕವಿ ಉಳಿಸಿಕೊಳ್ಳುತ್ತಾನೆ. 'ಕವಯಃಕಿಂ ನಪಶ್ಯಂತಿ', 'ಏಕ ಏವ ರುದ್ರೋ', 'ಅಣೋರಣೀಯಾನ್'[೩೭] ಮುಂತಾಗಿ ಹತ್ತಾರು ಉಕ್ತಿಗಳನ್ನು ಭೀಮಕವಿ ಹಾಗೆಯೇ ಅಳವಡಿಸಿಕೊಂಡು ಉಳಿದಂತೆ ಅನುವಾದ ಮಾಡುತ್ತಾನೆ. ಕೆಲವು ವೇಳೆ ತನ್ನ ರಚನೆಗೆ ಅವಶ್ಯಕವಾದಾಗ ಆ ಮಾತುಗಳನ್ನು ಅನುವಾದ ಮಾಡುತ್ತಾನೆ.

"ಭ್ರಾಂತಿ ಸಂಸರ್ಗಜಾಃ ಪಾಪಗುಣಾಭ
ವಂತಿ"ಯೆಂಬ ನುಡಿಯಾಯಿತು ವಸುಧೆಯಲಿ (IV–೧೬೯೦)

ಎಂಬ ಸಾಲುಗಳನ್ನು ಭೀಮಕವಿಯು

ವಿದಿತವಲ್ಲಾ ನಿನ್ನ ಸಂಸ
ರ್ಗದೊಳೆಮಗೆ ತಾಂ ದೋಷಗುಣವಾ
ದುದುಮದಲ್ಲದೆ..... (೨೫–೬೩)

ಎಂದು ಅನುವಾದ ಮಾಡುತ್ತಾನೆ.

---

೩೫. ಬಾಡಾಲ ರಾಮಯ್ಯ: ಬಸವೇಶ್ವರ ವಚನಾಲು ಸಮಗ್ರ ಸಮೀಕ್ಷ : ಪು. ೬೨

೩೬. ಗಾಜುಲ ವೇರಯ್ಯ: ಬಸವಪುರಾಣ ಬಸವರಾಜದೇವರ ರಗಳೆಗಳಲ್ಲಿರುವ ಸಾಮ್ಯ ವ್ಯತ್ಯಾಸಗಳು –(ಸಾಧನೆ ೬ – ೨ : ಪು. ೩೪ – ೩೯)

೩೭. ಕ್ರಮವಾಗಿ ತೆಲುಗು ಬಸವಪುರಾಣ I –೨೬೦, vi, ೬೪೧, vi. ೭೫೨ ಕನ್ನಡ ಬಸವಪುರಾಣ ೧–೩೭, ೫೦–೧೪, ೫೧–೩೧

ಭಾವನೆಗಳನ್ನು ಭೀಮಕವಿ ಚಾಚು ತಪ್ಪದೆ ಸೋಮನಾಥನ ಜ.ಡು ಹಿಡಿದೆ ಅನುವಾದ ಮಾಡುತ್ತಾನೆ. ತನ್ನ ಉಪನಯನದ ಮಾತು ಬಂದಾಗ ಬಸವಣ್ಣನು ತನ್ನ ತಂದೆಯೊಡನೆ ವಾದಿಸುತ್ತ ಶಿವಭಕ್ತಿ ಮಾರ್ಗದ ಸ್ವರೂಪವನ್ನು ವಿವರಿಸುವ ಮಾತುಗಳು ಸೋಮನಾಥನಲ್ಲಿ ಹೀಗೆ ಬಂದಿವೆ.

ಅಲ್ಲದೆ ಷಡ್ದರ್ಶನಾತೀತವಾದ
ಮದನಾರಿ ಸದ್ಭಕ್ತಿಮಾರ್ಗವ ಕೇಳು
ಶ್ರುತಿ 'ವಿಶ್ವತಶ್ಚಕ್ಷು ಋತ'ವೆಂದು ಹೊಗಳೆ
ಸ್ತುತಿಯ ಮೀರಿದ ಅತಿಸೂಕ್ಷ್ಮದ ರೂಪ
ಆದಿಗೆ ಆದಿ ನಿತ್ಯಾನಂದಮೂರ್ತಿ
ಶ್ರೀ ದಿವ್ಯಮೂರ್ತಿಯು ತಾನೆ ಸುದೈವ
ಇಂತಹೀಶ್ವರನನಾತ್ಮದಿ ಹೊಂದಿ ಕರದಿ
ಹಿಡಿದಿರುವಂತಹ ಪೃಥುದಯಾಮೂರ್ತಿ
ಪ್ರಕಟಿಸೆ 'ನಗುರೋರಧಿಕ'ವೆನೆ ಮೆರೆವ
ಸಕಲಸ್ವರೂಪ ಮತ್ಸಮಯ ಸದ್ಗುರುವು
ಮಂತ್ರಕೆಲ್ಲಕು, ರಾಜಮಂತ್ರವಾಗಿರುವ
ಮಂತ್ರವು ತಾನದಕಾ ಷಡಕ್ಷರಿಯು
ಭವದೂರವಹ ಜಟಾಭಸಿತರುದಾಕ್ಷ
ಸವಿಶೇಷಮೋಕ್ಷಾನುಸಾರಿ ವೇಷವದು[೩೮]

ಇದನ್ನು ತನ್ನ ಷಟ್ಪದಿಗಳಲ್ಲಿ ಭೀಮಕವಿ ಹೀಗೆ ಅನುವಾದಿಸುತ್ತಾನೆ:

ಇತ್ತ ಕೇಳ್ ಷಡುದರ್ಶನಾತೀ
ತೋತ್ತಮದ ಶಿವಭಕ್ತಿಮಾರ್ಗಾ
ಯತ್ತವಂ ಶ್ರುತಿ ವಿಶ್ವತಃಚಕ್ಷುರತವೆಂದೆನುತ
ಒತ್ತಿ ಪೊಗಳುವ ನಿಗಮತತಿಗಳು
ಮಿತ್ತತವ ಸೂಕ್ಷ್ಮರೂಪಮ
ಹತ್ತರಂ ತಾನಾದಿಗಾದಿಯನಿಪ ಪರಂಜ್ಯೋತಿ
ಇಂತೆಸೆವ ಶಿವನೆಮಗೆ ದೈವನ
ನಂತಮಹಿಮನನೆಮ್ಮ ಚಿತ್ತಾ
ಭ್ಯಂತರದೊಳೊಂದಿಸಿ ಕರಸ್ಥಲದಿಂ ಪಿಡಿಸಲಾಪ
ಸಂತತಾಮಳ ಕೀರ್ತಿ ಕರುಣಾ
ವಂತಮೂರ್ತಿ ಪ್ರಕಟಿಸುವಡ
ತ್ಯಂತ ತೇಜೋವರ್ತಿ ತಾಂ ಮತ್ ಸಮಯಸದ್ಗುರುವು
ಮೂಜಗಕೆ ರುದ್ರಾಕ್ಷಿ ಸಿತರ
ಕ್ಷಾಜಟಾವಳಿ ನಿತ್ಯ ಮುಕ್ತಿಗೆ
ಸೈಜವಪ್ಪನುಸಾರಿವೇಷವು ಭವನಿವಾರಣವು
ಯೋಜಿಸಲು ಮಂತ್ರಂಗಳಿಗೆ ಮಿಗೆ

---

೩೮. ತೆಲುಗು ಬಸವಪುರಾಣ: I – ೯೪೯ – ೯೬೨

ರಾಜಮಂತ್ರವಿಂದೆಂದೆನಿಸಿ ವಿ
ಭ್ರಾಜಿಸುವವೀ ಮಂತ್ರವಿದಕೆ ಷಡಂಗವೆನಲಿಹುದು[೩೯]

ಇಲ್ಲಿ ಕಾಣುವ ಅನುವಾದ ರೀತಿಯೆಂದರೆ, ಮೂಲದ ಭಾವವನ್ನು ಹಿಡಿಸು ಕ್ರಮವನ್ನು ಆದಷ್ಟು ಅನುಸರಿಸಿ, ಮುಖ್ಯ ವಿಷಯಗಳನ್ನು ಬಿಡದೆ, ಅತ್ಯಂತ ಮುಖ್ಯ ಪದಸಮುಚ್ಚಯವನ್ನು ಯಥಾರೀತಿ ಇರಿಸಿಕೊಂಡು ದ್ವಿಪದವನ್ನು ಭಾಮಿನೀ ಷಟ್ಪದಿಯಾಗಿಸುವುದು. ಭೀಮಕವಿಯು ಸಮರ್ಥ ಷಟ್ಪದಿಕಾರನಾದದ್ದರಿಂದಲೂ ಕನ್ನಡದ ದೇಸಿ ಹಸ್ತಗತವಾಗಿರುವುದರಿಂದಲೂ, ತೆಲುಗಿನಲ್ಲಿರುವ ರಚನೆಯ ಆತ್ಮಕ್ಕೆ ಕುಂದು ತಾರದಂತೆ ಸುಲಲಿತವಾಗಿ ಅನುವಾದಿಸುತ್ತಾನೆ. ಅವನು ವಹಿಸುವ ಸ್ವಾತಂತ್ರ್ಯ ಕೆಲವೇಳೆ ಸಣ್ಣಪುಟ್ಟ ವಿವರಗಳಿಗೆ ಸೀಮಿತವಾದಂತಹುದೇ ಹೊರತು ವಿಷಯಕ್ಕೆ ಸಂಬಂಧಿಸಿದಂತೆ ಅಲ್ಲ.

ಬಸವಣ್ಣನು ವಿಷಾರೋಗಣೆ ಮಾಡುವ ಪವಾಡವನ್ನು ವರ್ಣಿಸುವಾಗ ಮೂಲದಲ್ಲಿ ಬಂದ ವಿಷದ ವರ್ಣನೆ ಹೀಗಿದೆ.

ಶಿವನ ಮೂರನೆ ಕಣ್ಣ ರೌದ್ರಾಗ್ನಿಯಂತೆ
ಭುಗಿಲುಭುಗಿಲ್ಲನೆ ಕುದಿಯೆ ಕೆಂಬೊಗೆಯು
ನೆಗೆಯ ವಿಷಾನಿಲ ಗಗನವ ಕವಿಯೆ
ಪಟುವಹ್ನಿಯನು ಕೊಂಡು ಕೆಟ್ಟೋಡೆ ಭಾನು
ವಲ್ಲಲ್ಲಿ ಬಿದ್ದವೀರೇಳು ಲೋಕಗಳು[೪೦]

ಈ ಸಾಲುಗಳನ್ನು ಭೀಮಕವಿ ಎಷ್ಟು ಅಚ್ಚುಕಟ್ಟಾಗಿ ಷಟ್ಪದಿಯ ರೂಪಕ್ಕೆ ಮಾರ್ಪಡಿಸುತ್ತಾನೆಂಬುದನ್ನು ನೋಡಿ.

ನಿಟಿಲನಯನನ ಮೂರನೆಯ ವಿ
ಸ್ಫುಟತರಾಂಬಕ ಪಾವಕನವೊಲು
ಛಿಟಿಛಿಟಿಲು ಭುಗಿಭುಗಿಲೆನುತ ಕೆಂಬೊಗೆ ನೆಗೆವುತಿರಲು
ಚಟುಲ ವಿಷಮ ವಿಷೋಗ್ರಕೀಲಾ
ಪಟಲವಂಬರವಂ ಮುಸುಕಲಾ
ಪಟುದಹನಮಂ ಕಂಡು ಕೆಟ್ಟೋಡಿದನಹಭಾಸ್ಕರನು
ಲೋಕವಾರಕ್ಕತ್ತಲಿತ್ತ
ವ್ಯಾಕುಳವಾಯಿತ್ತು......[೪೧]

ಭಾಮಿನಿಯನ್ನು ಬಂಧಿಸುವ ಲಯ ದ್ವಿತೀಯ ಪ್ರಾಸ ಇತ್ಯಾದಿಗಳನ್ನು ದೃಷ್ಟಿಯಲ್ಲಿಟ್ಟು ಕೊಂಡು ಭೀಮಕವಿಯು ಮಾಡಿಕೊಳ್ಳುವ ವ್ಯತ್ಯಾಸವನ್ನು ಸ್ವಾತಂತ್ರ್ಯವೆಂದು ಕರೆಯಲಾಗುವುದಿಲ್ಲ. ಒಂದು ಭಾಷೆಯ ಒಂದು ಛಂದೋಗತಿಯಿಂದ

---

೩೯. ಕನ್ನಡ ಬಸವಪುರಾಣ: ೩, ೬೬ – ೬೮

೪೦. ತೆಲುಗು ಬಸವಪುರಾಣ: VII – ೧೨೨೬ – ೩೦

೪೧. ಕನ್ನಡ ಬಸವಪುರಾಣ: ೫೭, ೫೯–೬೦

ಮತ್ತೊಂದು ಭಾಷೆಯಲ್ಲಿ ಮತ್ತೊಂದು ಛಂದೋಗತಿಯಲ್ಲಿ ಮೈ ತಳೆಯುವಾಗಿನ ಅನಿವಾರ್ಯ ರೂಪವ್ಯತ್ಯಾಸವೆಂದು ಮಾತ್ರ ಹೇಳಬಹುದು.

ಬಸವಣ್ಣನು ಕೂಡಲಸಂಗಮನಲ್ಲಿ ಐಕ್ಯವಾದ ರೀತಿಯನ್ನು ಪಾಲ್ಕುರಿಕೆ ಸೋಮನಾಥನು ಹೃದಯಸ್ಪಂದಿಯಾಗಿ ವರ್ಣಿಸುತ್ತಾನೆ. ಅದು ಹೀಗಿದೆ.

ಗಾಳಿಯಿಂದಲೆ ಸುಳಿಗಾಳಿ ತಾ ಹುಟ್ಟಿ
ಗಾಳಿಯಲ್ಲಿಯೆ ಮತ್ತೆ ಬೆರೆಯುವ ರೀತಿ,
ಶರಧಿಯಲಲೆಗಳು ಜನಿಯಿಸಿ ಮತ್ತೆ
ಶರನಿಧಿಯಲ್ಲಿಯೇ ಸವೆಯುವ ರೀತಿ
ಉಡುವೀಧಿಯಲ್ಲಿ ವಿದ್ಯುಲ್ಲತೆ ಹುಟ್ಟಿ-
ಯಡುವೀಧಿಯಲ್ಲೆ ತಾನಡಗುವ ರೀತಿ
ನೀರಿನಲ್ಲಿಯೆ ವರ್ಷಾಫಲಗಳು ಹುಟ್ಟಿ
ನೀರಿನಲ್ಲಿಯೆ ತಾವು ಸವೆಯುವ ರೀತಿ
ಸದ್ಗುರು ಕಾರುಣ್ಯ ಸಂಗದಿ ಹುಟ್ಟಿ
ಸದ್ಗುರು ಕಾರುಣ್ಯ ಸಂಪದವಲರೆ
ಸದ್ಗುರು ಗರ್ಭವಿಶ್ರಾಂತಿಯಲಿಂದು
ತದ್ಗತದಲಿ ಲಿಂಗತತ್ವ ತಾನಾದ-
ನಂತುಮಲ್ಲದಲೆ ಗುರ್ವಂಘ್ರಿಯುಗಳವ
ಮುಟ್ಟಿಯೋಲೈಸುತಿರುವ ಭಕ್ತಾಳಿಗಳ
ಹೃದಯಾಂಬುಜಗಳಲಿ ಬಸವಯ್ಯನೀಗ
ಕದಲದೆ ಹೂವು ಕಂಪುಗಳನ್ನು ಹೋಲಿ
ಬೆರೆತಿರುತಿಹನಲ್ಲದೇ ಬೇರೆಯುಂಟೆ?[೪೨]

ಭೀಮಕವಿಯ ಷಟ್ಪದಿಗಳ ಓಘ ಈ ಭಾಗವನ್ನು ಹೀಗೆ ತೇಲಿಸಿಕೊಂಡು ಹೋಗುತ್ತದೆ.

ಗಾಳಿಯೊಳು ಸುಳಿಗಾಳಿಯೊಗೆದಾ
ಗಾಳಿಯೊಳು ತಾ ಮತ್ತೆ ಬೆರಸಿದ
ವೋಲುದಧಿಯೊಳು ನೊರೆಗಳೊಗೆದುದಧಿಯೊಳಡಗಿದಂತೆ
ಮೇಲೆ ನಭದೊಳೆಸೆದು ತಟಿಲ್ಲತೆ
ಮೇಲೆ ನಭದೊಳೆ ಹೊಳೆದಡಂಗಿದ
ವೋಲುದಕದಿಂದಾಲಿಕಲ್ಲೊಗೆದಲ್ಲಡಗಿದಂತೆ
ಗುರುದಯಾ ಸಂಗತಿಯೊಳುದಯಿಸಿ
ಗುರುದಯಾಸಂಪದದಿ ವರ್ಧಿಸಿ
ಗುರುಜಠರ ವಿಶ್ರಾಂತಿಯಲಿ ತದ್ಗುರುವೆ ತಾನಾಗಿ
ಬೆರಸಿದನು ಶಿವಲಿಂಗತತ್ವದೊ
ಳರರೆ ಈಗಳಹಂಗೆಯೆಲ್ಲಾ
ಗುರುಚರಣವಂ ಭಜಿಪ ಭಕ್ತರ ಚಿತ್ತಪದ್ಮದಲಿ

---

೪೨. ತೆಲುಗು ಬಸವಪುರಾಣ: VII-೨೦೦೯ - ೨೦೨೬

ಬಸವರಾಜನು ತೊಲಗದಾಗಳು
ಕುಸುಮಪರಿಮಳವೆಹಗೆ ಸಂ
ಧಿಸಿದ ಹಂಗಿರ್ದಹನದಲ್ಲದೆ ಬಳಿಕ ಗತಿಯುಂಟೆ[೪೩]

ಪಾಲ್ಕುರಿಕೆ ಸೋಮನಾಥನು ಬಸವಣ್ಣನ ವಚನಗಳನ್ನು ಚೆನ್ನಾಗಿ ಹಸ್ತಗತ ಮಾಡಿಕೊಂಡಿದ್ದಿರಬೇಕು. ತನ್ನ ಕಾಲಕ್ಕೆ ಪ್ರಚಲಿತವಿದ್ದ ಬಸವಣ್ಣನ ಬಗೆಗಿನ ಕತೆಗಳ ಜೊತೆಗೆ, ಆತನ ವಚನಗಳ ಮೂಲಕ ಅವನ ವ್ಯಕ್ತಿತ್ವ ಗ್ರಹಣವನ್ನು ಆತ ಮಾಡುತ್ತಾನೆ. (ಹರಿಹರನೂ ಇದೇ ರೀತಿ ಮಾಡಿದವನೇ). ಹಾಗಾಗಿ ತನ್ನ ನಿರೂಪಣೆಯಲ್ಲಿ ಕವಿ ಬಸವಣ್ಣನ ವಚನಗಳ ಮಾತು, ಧಾಟಿ, ಭಾವವನ್ನು ಬಳಸಿಕೊಂಡಿರುವುದನ್ನು ಕಾಣಬಹುದು. ಇಂತಹ ಕಡೆಗಳಲ್ಲಿ ಅನುವಾದ ಮಾಡುವಾಗ ಭೀಮಕವಿಗೆ ಒಂದು ಅನುಕೂಲವುಂಟು. ಬಸವನ ಭಾವಗಳನ್ನು ಸೋಮನಾಥ ತೆಲುಗಿನಲ್ಲಿ ಹೇಳಬೇಕು. ಆದರೆ ಭೀಮಕವಿ ಕಾವ್ಯವನ್ನು ಕನ್ನಡಿಸುವಾಗ ಕನ್ನಡದ ಮೂಲ ವಚನಗಳಿಗೆ ಹತ್ತಿರವಾಗಬಹುದು. ನಾವು ಇಲ್ಲಿ ಅಂತಹ ಕೆಲವು ಉದಾಹರಣೆಗಳನ್ನು ಒಂದರ ಜೊತೆಯೊಂದನ್ನಿಟ್ಟು ನೋಡಬಹುದು.

**ವ್ಯತ್ಯಸ್ತರೂಪದಲ್ಲಿ ಬಸವಣ್ಣನ ವಚನ**

(ಅ) (i) ಮಾವಿನ ಬೀಜವ ಮಹಿಯಲಿ ಬಿತ್ತೆ
ಬೇವಹುದೆ ಹೆಚ್ಚು ಕಥೆಗಳವೇಕೆ (*ತೆ.ಬ.ವ I . ೯೯೧-೨*)

(ii) ಇಳೆಗೆ ಮಾವಿನ ಬೀಜಮಂ ಬಿ
ತ್ತಲದು ತಾಂ ಬೇವಹುದೆ ಬಹುಕಥೆ
ಗಳನುಸರಲೇಂ.... (*ಕ.ಬ.ಪು. ೩.೭೫*)

(iii) ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯ ಕಟ್ಟಿ
ಆಕಳ ಹಾಲನೆರೆದು ಜೇನುತುಪ್ಪವ ಹೊಯ್ದಡೆ
ಸಿಹಿಯಾಗಬಲ್ಲುದೆ ಕಹಿಯಾಗಲೊಲ್ಲದೆ? (*ವ. ೬೨೫*)[೪೪]

(ಆ) (i) ಮನುಜೇಶ, ಬಡಗಿಯ ಮಾಚಲದೇವಿ
ಯನ್ನು ಉತ್ತಮ ವಂಶ್ಯೆ ಮಾಡುವುವೆನುತ
ಸ್ವರ್ಣಧೇನುವಿನಲ್ಲಿ ಸತಿಯನಿರಿಸುತ
ನಿರ್ನಿಮಿತ್ತವೆ ಹಾಲು ತುಂಬಲು ಹಾಕಿ
ಆ ಹೋಯ್ತು ಪೂರ್ವಾಶ್ರಯವೆನುತ... (ತೆ.ಬ.ವ. .೫೭-೬೧)

(ii) ಭೂವರನೆ ಕೇಳ್ ಬಡಗಿ ಮಾಚಲ
ದೇವಿಯಂ ಕ್ಷತ್ರಿಯ ಕುಲೀನೆಯ
ನೋವಿ ಮಾಡಿಹೆವೆಂದು ವಿಪ್ರರು ಸ್ವರ್ಣಧೇನುವನು

---

೪೩. ಕನ್ನಡ ಬಸವಪುರಾಣ: ೬೦. ೬೬ - ೬೮

೪೪. ಇಲ್ಲಿ ಕೊಟ್ಟಿರುವ ವಚನ ಸಂಖ್ಯೆಗಳು ಕರ್ನಾಟಕ ವಿಶ್ವವಿದ್ಯಾಲಯದ ಆರ್.ಸಿ. ಹಿರೇಮಠರಿಂದ ಸಂಪಾದಿತವಾದ ಸಂಕಲನಕ್ಕೆ ಸಂಬಂಧಿಸಿದ್ದು.

ತಾವು ಮಾಡಿಸಿ ಆ ಪಶುವಿನೊಳ
ಗಾ ವನಿತೆಯಂ ಪೊಗಿಸಿ ಅದರಲಿ
ತೀವಿ ಹೊನ್ನಂ ಹೋಯ್ಸಿ ಹರುಷಂ ಮಿಕ್ಕಿ ನಲಿವುತ್ತ
(ಕ.ಬ.ಪು. ೫೪.೧೪)

(iii) ಬಡಗಿ ಮಾಲಚದೇವಿಯ ಕುಲಜೆಯ ಮಾಡಿಹೆವೆಂದು
ಹೊನ್ನ ಕಪಿಲೆಯ ರಾವಣಶಾಖದ ಉಚ್ಚಿಷ್ಟದ ಹಾಲಿನಿಂದ
ಕೂಳನಟ್ಟುಂಬುವರನೇನೆಂಬೆ (ವ.೫೮೨)

(ಇ) (i) ಚನ್ನಯ್ಯನೇ ತಾತ ಚೇರಮ ತಂದೆ
ಚಿಕ್ಕಪ್ಪ ಕಕ್ಕಯ್ಯ ಮಗನು ನಾನೆಂದು (ತೆ.ಬ.ಪು. I.೧೦೧೯-೨೦)

(ii) ಅಯ್ಯನಯ್ಯನು ಚೆನ್ನಯಂ ಚಿ
ಕ್ಕಯ್ಯ ಕಕ್ಕಯನು ತೆಲುಗ ಜೊ
ಮ್ಮಯ್ಯನಯ್ಯನು ನಿಂಬಿ ತಾಯ್ ಚೇರಮನ ಮಗ ನಾನು
(ಕ.ಬ.ಪು. ೩-೮೨)

(iii) ಹಿರಿಯಯ್ಯ ಶ್ವಪಚಯ್ಯ, ಕಿರಿಯಯ್ಯ ಡೋಹರ ಕಕ್ಕಯ್ಯ
ಅಯ್ಯಗಳಯ್ಯನು ನಮ್ಮ ಮಾದಾರ ಚನ್ನಯ್ಯ (ವ. ೩೫೦)

(ಈ) (i) ಬೋಯಿತಿಗಲ್ಲವೆ ಹುಟ್ಟಿದ ವ್ಯಾಸ
ಪೂರ್ವದ್ವಿಜಾತಾಚಾರ್ಯನಿಳೆಗೆ ವಸಿಷ್ಠ
ಸೂಳೆಯೂರ್ವಶಿಗುದಯಿಸಲಿಲ್ಲವೇನು?
ಮಾತಂಗನೆನ್ನುವ ಬ್ರಹ್ಮರ್ಷಿಯೊಬ್ಬ
ಮಾತಂಗಿಗಲ್ಲವೇನುದ್ಭವಿಸಿದುದು (ತೆ.ಬ.ಪು. -೮೯೧-೪)

(ii) ಇಳೆಯೊಳೀ ಭೂಸುರರ ಗುರುಕ
ಬ್ಬಿಲಿಗನಲ್ಲಾ ವ್ಯಾಸನೊಗೆದನು
ಕುಲಜರೆಲ್ಲರೊಳಗ್ರಜನ್ಮನು ಋಷಿ ವಸಿಷ್ಠನಲಾ
ತೊಳಸಲೇನೂರ್ವಶಿಗೆ ಜನಿಸಿದ
ಅಲಘು ಮುನಿ ಮಾತಂಗನೆಂಬ
ಗ್ಗಳೆಯನುದ್ಭವಿಸಿದನಲಾ ಮಾತಂಗಿಯುದರದಲಿ
(ತೆ.ಬ.ಪು. ೫೬-೭೨)

(iii) ವ್ಯಾಸ ಬೋಯಿತಿಯ ಮಗ, ಮಾರ್ಕಂಡೇಯ ಮಾತಂಗಿಯ ಮಗ
ಸಾಕ್ಷಾತ್ ಅಗಸ್ತ್ಯ ಕಬ್ಬಿಲ, ದೂರ್ವಾಸ ಮಚ್ಚಿಗ (ವ. ೫೮೩)

(ಉ) (i) ಇಷ್ಟೆಲ್ಲ ಹೇಳಲೇತಕೆ ತಾನು ಕೊಂದು
ಜನ್ನಿಕೊಂದಿತು ಎಂಬ ದುರ್ಜಾತರೊಡನೆ
ಪ್ರತಿಮಾತನಾಡಲು ಪಾಪವೊಂದುವುದು (ತೆ.ಬ.ಪು. -೯೨೩-೫)

(ii) ಆನು ಕೊಲ್ಲೆನು ನೇಣುಕೊಂದಿತು
ತಾನೆನುತ್ತಿಹ ಪಾರ್ಬರೊಡನಾ
ಸ್ಥಾನದೊಳ್ ಪ್ರತಿನಿಂದು ನುಡಿದಡೆ ದೋಷವೊಂದುವುದು
(ಕ.ಬ.ಪು. ,-೯೨೩-೫)

(iii) ನಾನು ಕೊಲ್ಲೆ, ನೇಣು ಕೊಂದಿತ್ತೆಂಬ ಸೂನೆಗಾರನೇನೆಂಬೆ
ಕೂಡಲಸಂಗಮದೇವಾ *(ವ. ೫೭೧)*

(ಊ) (i) ಅಡರುವ ವೇದ ಭಾರಾಕ್ರಾಂತರಾದ
ಕೀಳಾದ ಬ್ರಾಹ್ಮಣ ಗಾರ್ದಭರೊಡನೆ *(ತೆ.ಬ.ಪು. ೯೯-೧೦)*

(ii) ವೇದ ಭಾರಾಕ್ರಾಂತರೆನಲಿಹ
ಮೇದಿನೀಸುರ ಗಾರ್ದಭಾಧಮ
ರಾದವಂದಿರ ಕೂಡೆ..... *(ಕ.ಬ.ಪು. ೫೬-೭೭)*

(iii) ಇದು ಕಾರಣ, ಕೂಡಲಸಂಗಮದೇವಾ
ವೇದಭಾರಾಭರಾಕ್ರಾಂತಾ ಬ್ರಾಹ್ಮಣಾಃ ಗಾರ್ದಭಾಃ ಎಂಬೆನು
*(ವ. ೫೮೬)*[೪೫]

ಹೀಗೆ ಭೀಮಕವಿಯು ಭಯಭಕ್ತಿಗಳಿಂದ ಪಾಲ್ಕುರಿಕೆ ಸೋಮನಾಥನನ್ನು ಅನುಸರಿಸಿದ್ದರೂ ಕನ್ನಡ ಬಸವಪುರಾಣದಲ್ಲಿ ಕೆಲವು ವ್ಯತ್ಯಾಸಗಳಿವೆ. ತಮಿಳಿನವರಾದ ಪುರಾತನರ ಹೆಸರುಗಳನ್ನು ಹರಿಹರನು ಹಲವೆಡೆ ಮಾರ್ಪಡಿಸಿಕೊಂಡಿರುವಂತೆಯೇ ತೆಲುಗಿನ ಬಸವಪುರಾಣದಲ್ಲಿ ಬರುವ ಹೆಸರುಗಳು ಕೆಲವೊಮ್ಮೆ ಕೊಂಚ ವ್ಯತ್ಯಾಸಗೊಂಡು ಕನ್ನಡದಲ್ಲಿ ಬಂದಿವೆ. ಇರುವದಾಂಡಾರಿ- ಇಟಿ ಭಕ್ತ, ಬಾಹೂರ ಬ್ರಹ್ಮಯ್ಯ-ಬೊಮ್ಮಯ್ಯ, ನರಸಿಂಗನಯನಾರ-ನರಸಿಂಗಮೊನೆಯಾರ, ಮಿಂಡನೈನಾರ, ಮೆರೆಮಿಂಡನಾರ, ಅರಿವಾಳು ನಾಯನಾರ-ಅರಿವಾಳು ತಾಂಡಿ, ಇರುವದಾಂಡಾರಿ-ಇದಾಂಡಾರಿ, ಅಲ್ಲಯ್ಯ ಮಧುಪಯ್ಯ-ಹರಳಯ್ಯ ಮಧುವಯ್ಯ ಹೀಗೆ. ಈ ಸಂದರ್ಭದಲ್ಲಿ ದೇವರ ದಾಸಿಮಯ್ಯ-ಜೇಡರದಾಸಿಮಯ್ಯ, ಇವರ ಹೆಸರುಗಳ ಬಗ್ಗೆ ಕೊಂಚ ವಿವೇಚನೆ ನಡೆಸಬೇಕಾಗಿದೆ. ಈಗ ಸಿದ್ಧವಾಗಿರುವ ಅಂಶವೆಂದರೆ ದೇವರ ದಾಸಿಮಯ್ಯ ಮತ್ತು ಜೇಡರ ದಾಸಿಮಯ್ಯ ಇವರುಗಳು ಬೇರೆ ಬೇರೆ ವ್ಯಕ್ತಿಗಳು; ಪೊಟ್ಟಲಕೆರೆಯವನಾದ ಚಾಲುಕ್ಯ ಇಮ್ಮಡಿ ಜಯಸಿಂಹನ ಹೆಂಡತಿ ಸುಗ್ಗಲದೇವಿಯ ಗುರುವಾದವನು 'ದೇವರ' ದಾಸಿಮಯ್ಯ. ಈತನು ವಚನಕಾರನಲ್ಲ, ಇವನ ಕಾಲ ಹನ್ನೊಂದನೆಯ ಶತಮಾನ. ಶಂಕರ ದಾಸಿಮಯ್ಯನಿಂದ ಅಹಂಕಾರ ಮರ್ದನಕ್ಕೊಳಗಾದ, ವಚನಕಾರನಾದ, ದುಗ್ಗಳೆಯ ಪತಿಯಾದ ಜೇಡರ ದಾಸಿಮಯ್ಯನು ನೇಯ್ಗೆ ಕಾಯಕದವನು, ಹನ್ನೆರಡನೆಯ ಶತಮಾನಕ್ಕೆ ಸೇರಿದವನು.[೪೬] ಇವರಿಬ್ಬರ ಮನೆದೇವರೂ ರಾಮನಾಥನೇ ಆಗಿದ್ದುದರಿಂದ ಪಾಲ್ಕುರಿಕೆ

---

೪೫. ಪಾಲ್ಕುರಿಕೆ ಸೋಮನಾಥನ ಇತರ ಕೃತಿಗಳಲ್ಲಿಯೂ ಬಸವಣ್ಣನ ವಚನಗಳ ಪ್ರಭಾವವಿರುವುದಕ್ಕೆ ನೋಡಿ ಬಾಡಾಲ ರಾಮಯ್ಯ; ಬಸವೇಶ್ವರ ವಚನಾಲು: ಸಮಗ್ರ ಸಮೀಕ್ಷೆ; ಪು. ೪೮೨-೩

೪೬. ಎಚ್. ದೇವೀರಪ್ಪ, ಆರ್. ರಾಜಪ್ಪ (ಸಂ): ಜೇಡರ ದಾಸಿಮಯ್ಯನ ವಚನಗಳು: ಪ್ರಸ್ತಾವನೆ: xxii-xx ಹಾಗೂ ಎಂ. ಚಿದಾನಂದ ಮೂರ್ತಿ: ವಚನ ಸಾಹಿತ್ಯ: ಪು. ೧೩-೧೭

ಸೋಮನಾಥನು ಗೊಂದಲಕ್ಕೊಳಗಾಗಿರುವಂತೆ ಕಾಣುತ್ತದೆ. ಇಬ್ಬರನ್ನೂ ಒಂದೇ ವಿಶೇಷದಿಂದ ಕರೆಯುತ್ತಾನೆ. ವಿಶೇಷಣವನ್ನು ಬಳಸುವ ಕಡೆಯಲ್ಲೆಲ್ಲ ಇಬ್ಬರನ್ನು 'ದೇಡರ' ಎಂದೇ ಕರೆಯುತ್ತಾನೆ. ಕರ್ನಾಟಕದಿಂದ ದೂರವಿದ್ದು ಶರಣರ ಕತೆಗಳನ್ನು ಇತರರಿಂದ ಕೇಳಿದ್ದರಿಂದಾಗಿಯೂ ಹೀಗಾಗಿರಬಹುದು. ಆದರೆ ಕನ್ನಡ ನೆಲದ ಭೀಮಕವಿ ಇದನ್ನು ಬಹುಪಾಲು ನಿವಾರಿಸಿಕೊಂಡಿದ್ದಾನೆ. ಶಂಕರ ದಾಸಿಮಯ್ಯನ ಕತೆಯನ್ನು ಹೇಳುವ ಇಪ್ಪತ್ತೆರಡನೇ ಸಂಧಿಯಲ್ಲಿ ಜೇಡರ ದಾಸಿಮಯ್ಯನ ಕತೆಯೂ ಮಿಳಿತವಾಗಿದೆ. ಇಲ್ಲಿ ಸ್ಪಷ್ಟವಾಗಿ 'ಜೇಡರ' ಎಂಬ ವಿಶೇಷಣವನ್ನು ಭೀಮಕವಿ ಬಳಸುತ್ತಾನೆ. ಅದೇ ದೇವರ ದಾಸಿಮಯ್ಯನ ಕತೆಯು ವರ್ಣಿತವಾಗಿರುವ ಐವತ್ತನೆಯ ಸಂಧಿಯಲ್ಲಿ ವಿಶೇಷಣವನ್ನು ಪ್ರಯೋಗಿಸುವ ಕಡೆ, ಒಂದು ಕಡೆ ಹೊರತಾಗಿ (ಪದ್ಯ ೩೬) 'ದೇವರ' ಎಂದೇ ಹೇಳುತ್ತಾನೆ. ಮೂಲದಲ್ಲಿ ಇಲ್ಲೆಲ್ಲ 'ದೇಡರ' ಎಂದೇ ಇದೆ. ಅದನ್ನು ಭೀಮಕವಿಯು, ವಸ್ತುಸ್ಥಿತಿಯನ್ನು ಬಲ್ಲವನಾಗಿದ್ದುದರಿಂದ, ತಿದ್ದುಕೊಂಡಿದ್ದಾನೆ. ಒಂದು ಕಡೆಯಲ್ಲಿ ಮಾತ್ರ 'ಜೇಡರ' ಎಂದು ಬರುವಲ್ಲಿ (ಸಂಧಿ, ೫೦ : ಪ. ೩೬) ಪ್ರತಿಕಾರನ ತಪ್ಪೂ ಇರಬಹುದು.

ಭೀಮಕವಿಯು ಸೋಮನಾಥನನ್ನು ಬಹುತೇಕ ವಿವರಗಳಲ್ಲಿಯೂ ತಪ್ಪದೆ ಅನುಸರಿಸುತ್ತಾನೆ. ಆದರೆ ಗಾತ್ರದಲ್ಲಿ ಕನ್ನಡ ಬಸವಪುರಾಣವು ತೆಲುಗು ಬಸವಪುರಾಣಕ್ಕಿಂತ ದೊಡ್ಡದು. ತೆಲುಗಿನ ಮೂಲವು ಏಳು ಆಶ್ವಾಸಗಳಲ್ಲಿ ಒಟ್ಟು ಹನ್ನೆರಡು ಸಾವಿರದ ಆರುನೂರ ಹತ್ತು ಸಾಲುಗಳಲ್ಲಿ[೪೭] ಹರಿಯುತ್ತದೆ. ಭೀಮಕವಿಯ ಬಸವಪುರಾಣವು ಎಂಟು ಕಾಂಡಗಳಾಗಿ ವಿಂಗಡಣೆಗೊಂಡಿವೆ. ಒಟ್ಟು ಆರವತ್ತು ಸಂಧಿಗಳಲ್ಲಿ ಮೂರು ಸಾವಿರದ ಆರುನೂರು ಇಪ್ಪತ್ತೆಂಟು ಭಾಮಿನೀಷಟ್ಪದಿಗಳನ್ನು ಒಳಗೊಂಡಿದೆ. ಮೂಲದ ಆಶ್ವಾಸಗಳನ್ನು ಭೀಮಕವಿ ಅದೇ ಕ್ರಮದಲ್ಲಿ ಕಾಂಡಗಳಾಗಿ ವಿಂಗಡಿಸಿದ್ದರೂ, ಆರನೆಯ ಕಾಂಡವು ಪೂರ್ತಿಯಾಗಿ ಭೀಮಕವಿಯೇ ಸೇರಿಸಿರುವುದು, ಹಾಗೂ ಐದನೆಯ ಕಾಂಡದ ಕೆಲವು ಭಾಗವು ಮೂಲದ ಐದನೆಯ ಆಶ್ವಾಸದ ಅನುವಾದದ ಕೊನೆಗೆ ಹೆಚ್ಚಾಗಿ ಸೇರ್ಪಡೆಯಾದದ್ದು. ಮೂಲದಲ್ಲಿ ಇಲ್ಲದ ಹತ್ತೊಂಬತ್ತು ಪ್ರಸಂಗ ಅಥವಾ ಕತೆಗಳನ್ನು ಭೀಮಕವಿ ಸೇರಿಸಿದ್ದಾನೆ. ಮೂರನೆಯ ಆಶ್ವಾಸದಲ್ಲಿ ಮುಗ್ಧಸಂಗಯ್ಯನ ಕತೆಗಿಂತ ಮೊದಲು ಭೀಮಕವಿಯು ಮಾಮಿದೇವಿಯು ಓಲೆಯನ್ನೀಯುವ ಪ್ರಸಂಗವನ್ನು ಸೇರಿಸಿದ್ದಾನೆ. (ಸಂ. ೧೦.೪೦–೪೪) ಮೂಲದಲ್ಲಿ ಐದನೆಯ ಆಶ್ವಾಸವು ತೆಲುಗು ಬೊಮ್ಮಯ್ಯನ ಕಥೆಯಿಂದ ಮುಗಿಯುತ್ತದೆ. ಭೀಮಕವಿಯು ತನ್ನ ಕಾವ್ಯದ ಐದನೆಯ ಕಾಂಡದಲ್ಲಿ ಈ ಕತೆಯಾದನಂತರ ಸಂಧಿ ೩೪ರಲ್ಲಿ ಶಿವಯೋಗ ನಿದ್ರಾಮುದ್ರೆಯ ಕತೆ, ಸಂಧಿ ೩೫ರಲ್ಲಿ ಕಿನ್ನರ ಬಸವ ಪ್ರಾಣದಾನದ ಕತೆ, ತಂಗಟೂರಿನ ಮಾರಿದೇವನ ವಿಷಯ, ಮುರಿಯ ಚಂದಯ್ಯನ ವಿಷಯ, ಕೊಂಡುಗುಳಿ ಕೇಶಿರಾಜನ ಕತೆ ಹಾಗೂ

---

೪೭. ಬಂಡಾರು ತಮ್ಮಯ್ಯನವರು ಸಂಪಾದಿಸಿರುವ 'ಬಸವಪುರಾಣಮು'

ಸಂಧಿ ೩೬ರಲ್ಲಿ ಮೇದರ ಕೇತಯ್ಯನ ಕತೆಗಳನ್ನು ಸೇರಿಸಿದ್ದಾನೆ. ಕನ್ನಡ ಬಸವಪುರಾಣದ ಇಡೀ ಆರನೆಯ ಕಾಂಡದಲ್ಲಿ ಹನ್ನೊಂದು ಕತೆಗಳನ್ನು ಭೀಮಕವಿ ಸೇರಿಸಿದ್ದಾನೆ. ದಸರಯ್ಯಗಳ ಕತೆ(ಸಂಧಿ ೩೭), ಗುರು ಭಕ್ತಯ್ಯನ ಕತೆ(ಸಂ. ೩೮), ಗುರುಭಕ್ತಾಂಡಾರಿಯ ಕತೆ(ಸಂ. ೩೯), ಶ್ವೇತನ ಕತೆ (ಸಂ. ೪೦), ಮಲುಹಣನ ಕತೆ (ಸಂ. ೪೧), ಓಹಿಲಯ್ಯನ ಕತೆ (ಸಂ. ೪೨), ಉದ್ಭಟದೇವನ ಕತೆ(ಸಂ. ೪೩), ಗುರುತನಯನಾಂಡಾರಿ ಕತೆ (ಸಂ. ೪೪) ವೇಮನಾರಾಧ್ಯರ ಕತೆ (ಸಂ. ೪೫) ಚಿಕ್ಕಮಾದಣ್ಣನ ಕತೆ(ಸಂ. ೪೬) ಹಾಗೂ ಕದಿರ ದೇವಯ್ಯನ ಕತೆ(ಸಂ. ೪೭), ಇವುಗಳು[೪೮] ಹಾಗೆಯೇ ಮೂಲದ ಏಳನೆಯ ಆಶ್ವಾಸದ ಗುಡ್ಡವ್ವೆಯ ಕತೆಯನಂತರ ತನ್ನ ಎಂಟನೇ ಕಾಂಡದಲ್ಲಿ ಭೀಮಕವಿಯು ಕಜ್ಜಾಯದ ಪವಾಡವನ್ನು (ಸಂಧಿ ೫೬, ೯೦-೯೩) ಸೇರಿಸಿದ್ದಾನೆ. ಹೀಗೆ ಮೂಲದಲ್ಲಿಲ್ಲದ ಕತೆಗಳನ್ನು ಸೇರಿಸುವುದಕ್ಕಾಗಿ ಭೀಮಕವಿಯು ತನ್ನದೇ ಆದ ಸುಮಾರು ೯೦೦ ಷಟ್ಪದಿಗಳನು ರಚಿಸಿದ್ದಾನೆ. ಆದರೆ ಈ ಸೇರ್ಪಡೆಯಿಂದ ಮೂಲದ ಒಟ್ಟು ಧಾಟಿ, ಧೋರಣೆಗಳಿಗಾಗಲೀ ಬಂಧ ಸ್ವರೂಪಗಳಿಗಾಲೀ ಕುಂದೂ ವ್ಯತ್ಯಾಸವೂ ಹೆಚ್ಚು ಬಂದಿಲ್ಲ. ಸೋಮನಾಥನ ಉದ್ದೇಶವೇ ಬಸವಣ್ಣನ ಕಥಾಸೂತ್ರದಲ್ಲಿ ಶರಣರ ಕತೆಗಳ ಮಣಿಗಳನ್ನು ಪೋಣಿಸಿ ಹೇಳುವುದು. ಅಂಥ ಕೆಲವು ಹೆಚ್ಚು ಮಣಿಗಳನ್ನಾಯ್ದು ಭೀಮಕವಿಯು ಸೇರಿಸಿರುವುದರಿಂದ ಸರವು ಕೊಂಚ ದೀರ್ಘವಾಗಿದೆಯೇ ಹೊರತು ಅದರ ಸಮಗ್ರತೆಗೆ ಭಂಗ ಬಂದಿಲ್ಲ. ಈ ಹೆಚ್ಚು ಕತೆಗಳನ್ನು ಸೇರಿಸಲು ಭೀಮಕವಿಯ ಕಾಲಕ್ಕೆ ಹೆಚ್ಚು ಕತೆಗಳು ಪ್ರಚಲಿತವಾಗಿದ್ದದ್ದು, ಆತನಿಗೆ ಹೊಸಕತೆಗಳು ತಿಳಿದಿದ್ದದ್ದು ಕಾರಣವಾಗಿರಬಹುದು; ಅಥವಾ ಶರಣರ ಕತೆಗಳು ಹೆಚ್ಚಾದಷ್ಟು ಉತ್ತಮ ಎಂಬ ಭಾವನೆಯಿಂದ ಆತ ಹೀಗೆ ಮಾಡಿರಬಹುದು. ಪುರಾಣಗಳ ಒಂದು ಲಕ್ಷಣವೆಂದರೆ ಬೆಳೆಯುತ್ತ ಹೋಗುವುದು. ಅಲ್ಲದೆ ಸೋಮನಾಥನು ಶರಣರ ಕತೆಗಳು ವೀರಶೈವದ ವಿವಿಧ ಅಂಶಗಳನ್ನು ಹೊರಗೆಡಹುವುವೆಂಬ ಕಾರಣದಿಂದ ಬಸವಕತೆಗೆ ಅವುಗಳನ್ನು ಪೋಣಿಸಿರಬೇಕು. ಇನ್ನೂ ಕೆಲವು ಭಕ್ತರ ಕತೆಗಳ ಮೂಲಕ ತನ್ನ ಅಭಿಮಾನದ ಮತಕ್ಕೆ ಸಂಬಂಧಪಟ್ಟ ಇನ್ನೂ ಕೆಲವು ಅಂಶಗಳು ತಿಳಿಯಲಿ ಎಂಬ ಕಾರಣದಿಂದ ಭೀಮಕವಿಯ ಹೊಸಕತೆಗಳನ್ನು ಸೇರಿಸಬಹುದು. ಹೀಗೆ ಸೇರಿಸಿದ ಕತೆಗಳನ್ನು ಬಿಟ್ಟರೆ, ಭೀಮಕವಿಯು ಪಾಲ್ಕುರಿಕೆ ಸೋಮನಾಥನನ್ನು ಹೆಜ್ಜೆ ಹೆಜ್ಜೆಗೆ ಅನುಸರಿಸಿದ್ದಾನೆ. ಅವನ ದ್ವಿಪದಗಳ ಭಾವವನ್ನು ಕನ್ನಡದ ಭಾಮಿನೀ ಷಟ್ಪದಿಯ ಬಂಧಕ್ಕೆ ತಿರುಗಿಸಿದ್ದಾನೆ. ಅತ್ಯಂತ ಸುಲಲಿತವಾದ ಶೈಲಿ ಭೀಮಕವಿಯದಾದ್ದರಿಂದ ಅವನ ಬಸವಪುರಾಣವು ಸ್ವತಂತ್ರ ಕೃತಿಯೆಂಬಂತೆಯೇ ಕನ್ನಡಿಗರಿಗೆ ಕಾಣುತ್ತದೆ.

*('ಅಮರವಾಣಿ' ೧೯೯೪)*

---

೪೮. ಇವುಗಳಲ್ಲಿ ಕೆಲವು ಕತೆಗಳು ಪಾಲ್ಕುರಿಕೆ ಸೋಮನಾಥನದೇ 'ಶ್ರೀ ಮಲ್ಲಿಕಾರ್ಜುನ ಪಂಡಿತಾರಾಧ್ಯ ಚರಿತೆ'ಯಲ್ಲಿವೆ.

# ತೆಲುಗು ಬಸವಪುರಾಣಗಳು

ತೆಲುಗು ಸಾಹಿತ್ಯ ಚರಿತ್ರೆಯಲ್ಲಿ ನನ್ನಯ ಮತ್ತು ತಿಕ್ಕನರ ನಡುವಣ ಕಾಲವನ್ನು, ಎಂದರೆ ಸುಮಾರು ಒಂದೂವರೆ ಶತಮಾನದ ಕಾಲಖಂಡವನ್ನು, 'ವೀರಶೈವಯುಗ' ಎಂದು ಗುರುತಿಸುವ ರೂಢಿಯಿದೆ. ಆದರೆ ಆ ಸಂಬಂಧದ ಕಾವ್ಯಗಳು ಆ ಮುಂದೆಯೂ ರಚಿತವಾಗಿರುವುದನ್ನು ಕಾಣಬಹುದು. ಪಾಲ್ಕುರಿಕೆ ಸೋಮನಾಥನಿಂದ ಪ್ರಾರಂಭವಾದ ಈ ಪರಂಪರೆಯು ಹೆಚ್ಚು ದಟ್ಟವಾದ ಪ್ರಭಾವವನ್ನು ತೆಲುಗು ಸಾಹಿತ್ಯಕ್ಕಿಂತಲೂ ಕನ್ನಡ ಸಾಹಿತ್ಯದ ಮೇಲೆ ಮಾಡಿರುವುದು ಗಮನಾರ್ಹವಾಗಿದೆ. ಬಸವಣ್ಣನ ಅಸೀಮ ಭಕ್ತನಾದ ಪಾಲ್ಕುರಿಕೆ ಸೋಮನಾಥನು ವೀರಶೈವ ಪ್ರಸಾರಕ್ಕೆ ಮಾಡಿದ ಕೆಲಸವು ಅವಿಸ್ಮರಣೀಯ. ತೆಲುಗಿನಲ್ಲಿ ಬಸವಣ್ಣನ ಮೇಲೆ, ಅಥವಾ ಇತರ ಶರಣರ ಮೇಲೆ, ಕಾವ್ಯವನ್ನು ಬರೆದ ಎಲ್ಲರು ಸೋಮನಾಥನ ನೇರ ಪ್ರಭಾವಕ್ಕೆ ಒಳಗಾದವರೇ. ಹೀಗಾಗಿ ತೆಲುಗಿನಲ್ಲಿ ವೀರಶೈವ ಪರವಾದ ಹತ್ತಾರು ಕೃತಿಗಳು ರಚಿತವಾಗಲು ಆತನೇ ಭದ್ರ ಬುನಾದಿಯಿನ್ನು ಹಾಕಿದವನು. ಬಸವಣ್ಣನ ಬಗೆಗಿನ ತೆಲುಗಿನಲ್ಲಿರುವ ಕೃತಿಗಳನ್ನು ಮೂರು ವಿಭಾಗಗಳಲ್ಲಿ ಈ ಮುಂದೆ ಸಮೀಕ್ಷೆಗೆ ಒಳಪಡಿಸಲಾಗುವುದು: (೧) ಪೂರ್ಣಪ್ರಮಾಣದ ಬಸವ ಚರಿತೆಗಳು; (೨) ಇತರ ಪುರಾಣಗಳಲ್ಲಿನ ಬಸವಣ್ಣನ ಚಿತ್ರಣ; ಹಾಗೂ (೩) ಪ್ರಾಸಂಗಿಕವಾದ ಬಸವಸ್ತುತಿ.

ತೆಲುಗಿನಲ್ಲಷ್ಟೇ ಏಕೆ ಕನ್ನಡದಲ್ಲಿಯೂ 'ಬಸವಪುರಾಣ'ದ ಪರಂಪರೆಗೆ ನೆಲಗಟ್ಟನ್ನು ಹಾಕಿದವನು ಸೋಮನಾಥನೇ. ಹರಿಹರನು 'ಬಸವರಾಜದೇವರ ರಗಳೆ'ಯನ್ನು ಪ್ರಾಯಶಃ ಪಾಲ್ಕುರಿಕೆ ಸೋಮನಾಥನಿಗಿಂತ ಮುಂಚೆಯೇ ಬರೆದಿದ್ದಾನೆ. ಆದರೆ ಅದು ಬಸವಣ್ಣನ ಚರಿತೆಗೆ ಮಾತ್ರ ಮೀಸಲಾದ ಕಾವ್ಯ. ಬಸವಣ್ಣನ ಜೀವನಚಿತ್ರವನ್ನು ಕೇವಲ ಕೇಂದ್ರ ಬಿಂದುವಾಗಿಸಿಕೊಂಡು, ಸುತ್ತಲೂ ವಿವಿಧ ಶರಣರ ಕತೆಗಳನ್ನು ಹೆಣೆಯುವುದರ ಮೂಲಕ ತನ್ನ ಕಾವ್ಯಕ್ಕೆ ಹೊಸ ಆಯಾಮವನ್ನು ದೊರಕಿಸಿದವನು ಸೋಮನಾಥ. ಅದು ಎಷ್ಟು ಪ್ರಭಾವಶಾಲಿ ಯಾಯಿತೆಂದರೆ, ಮುಂದೆ ಕನ್ನಡದಲ್ಲಿ ಬಸವಣ್ಣನ ಬಗ್ಗೆ ಕಾವ್ಯ ಬರೆದವರಲ್ಲಿ ಯಾರೂ ಹರಿಹರನನ್ನು ಅನುಸರಿಸದೆ ಎಲ್ಲರೂ ಸೋಮನಾಥನನ್ನೇ ಮಾದರಿಯಾಗಿಟ್ಟುಕೊಂಡರು. ಹೀಗೆ ಮೊದಲ ವೀರಶೈವಪುರಾಣವನ್ನು ಬರೆದು, ಕನ್ನಡ ಸಾಹಿತ್ಯದಲ್ಲಿ ಒಂದು ದೊಡ್ಡ ಪರಂಪರೆಗೇ ಆತ ಕಾರಣವಾದ.

ಹರಿಹರ-ಪಾಲ್ಕುರಿಕೆ ಸೋಮನಾಥ-ಇವರಿಬ್ಬರ ಕಾಲದ ಬಗ್ಗೆಯೂ ವಿವಾದಗಳಿವೆ. ಹರಿಹರನ ಕಾಲವು ಹದಿಮೂರನೆಯ ಶತಮಾನದ ಪ್ರಾರಂಭವೆಂದು ಸಾಮಾನ್ಯ ಅಭಿಪ್ರಾಯವಿದೆ; ಕ್ರಿ.ಶ.೧೨೦೦-೨೦ರ ಹೊತ್ತಿಗೆ ಆತನು ಹರಿಹರಕ್ಕೆ ಹೋದನೆಂಬುದು ಒಪ್ಪಿತವಾಗಿದೆ. ಕೆಲವರು ಪಾಲ್ಕುರಿಕೆ ಸೋಮನಾಥನು ಹರಿಹರನಿಗಿಂತ ಹಿರಿಯನೆಂದು ಭಾವಿಸುತ್ತಾರೆ. ಆದರೆ ಈ ಬಗ್ಗೆ ಒಮ್ಮತವಿಲ್ಲ. ಅವನ ಕಾಲವು ಕ್ರಿ.ಶ. ೧೨೬೦ ರಿಂದ ೧೩೦೦ರವರೆಗೆ ಓಲಾಡುತ್ತಿದೆ. ಸೋಮನಾಥ ಎರಡನೆಯ ಪ್ರತಾಪರುದ್ರ (೧೨೯೨-೧೩೨೬)ನ ಕಾಲದವನು ಎನ್ನಲು ಹೆಚ್ಚು ಆಧಾರಗಳಿವೆಯೆಂದು ಕೆಲವು ವಿದ್ವಾಂಸರು ಭಾವಿಸಿ, ಆತನ ಕಾಲವನ್ನು ೧೨೪೦-೧೩೧೦ರ ನಡುವೆ ಎಂದು ತೀರ್ಮಾನಿಸುತ್ತಾರೆ. ಇದೇ ಹೆಚ್ಚು ಸಂಭವನೀಯ-ವೆನಿಸುತ್ತದೆ. ಹೀಗಾಗಿ ಹರಿಹರನು ಸೋಮನಾಥನಿಗಿಂತ ಕೊಂಚ ಹಿರಿಯ; 'ಬಸವರಾಜ ದೇವರ ರಗಳೆ'ಯು 'ಬಸವ ಪುರಾಣ'ಕ್ಕಿಂತ ಮುಂಚೆಯೇ ರಚಿತವಾಯಿತು ಎಂಬುದು ನಮ್ಮ ಅಭಿಪ್ರಾಯ ಕೂಡ.

ಈ ಇಬ್ಬರು ಕವಿಗಳೂ ಬಸವಣ್ಣನ ಕಾಲಕ್ಕೆ ಅತಿ ಸಮೀಪದಲ್ಲಿದ್ದು, ಅವನ ಕಾರ್ಯದ ನೆನಪು ಹಚ್ಚ ಹಸಿರಾಗಿರುವಾಗಲೇ ಆತನ ಪ್ರಭಾವಕ್ಕೆ ಒಳಗಾಗಿ ಕಾವ್ಯವನ್ನು ರಚಿಸಿದವರು. ಈ ಇಬ್ಬರಲ್ಲಿರುವ ಸಾಮ್ಯವಂತೂ ಅಚ್ಚರಿ ಹುಟ್ಟಿಸುವಂತಹುದು. ಹರಿಹರ ಆವರೆಗೆ ಕ್ವಚಿತ್ತಾಗಿ ಮಾತ್ರ ಕನ್ನಡದಲ್ಲಿ ಬಳಕೆಯಾಗಿದ್ದ ರಗಳೆಯನ್ನು ಕಾವ್ಯಮಾಧ್ಯಮವಾಗಿ ಬಳಸಿದ; ನೂತನ ಶರಣರ ಬಗ್ಗೆ ಅಲ್ಲದೆ, ಹಲವಾರು ಮಂದಿ ಪುರಾತನರ ಬಗ್ಗೆ ಕಾವ್ಯರಚನೆ ಮಾಡಿದ. ಅಂತೆಯೇ ಸೋಮನಾಥನು ದ್ವಿಪದವನ್ನು ಮೊದಲ ಬಾರಿಗೆ ಕಾವ್ಯರಚನೆಗೆ ಬಳಸಿ ಅದಕ್ಕೊಂದು ಗೌರವ ಸ್ಥಾನವನ್ನು ಗಳಿಸಿಕೊಟ್ಟವನು; ತನ್ನ 'ಬಸವಪುರಾಣ'ದಲ್ಲಿ ಬಸವಣ್ಣನ ಕೇಂದ್ರದ ಸುತ್ತ ಹಲವಾರು ಮಂದಿ ನೂತನ ಶರಣರ ಹಾಗೂ ಪುರಾತನರ ಕಥೆಗಳನ್ನು ಹೆಣೆದವನು. ಹರಿಹರನು ರಚಿಸಿದ್ದ ರಗಳೆಗಳ ಬಗ್ಗೆ ಪ್ರಾಯಶಃ ಅರಿತಿದ್ದ ಸೋಮನಾಥನು, ವಿವಿಧ ಕಥೆಗಳನ್ನು ಒಂದೆಡೆ ಸೇರಿಸಿ ಸಮಗ್ರತೆಯನ್ನು ಸಾಧಿಸಿದಂತೆ ತೋರುತ್ತದೆ.

ರಗಳೆ-ದ್ವಿಪದಗಳು ಕನ್ನಡ-ತೆಲುಗುಗಳಲ್ಲಿ ಈ ಇಬ್ಬರು ಕವಿಗಳಿಗೆ ಮುಂಚೆ ಬಳಕೆಯಾಗುತ್ತಿದ್ದ ರೀತಿ ಸುಮಾರು ಒಂದೇ ಬಗೆಯದು: ಚಂಪೂ ಕಾವ್ಯಗಳಲ್ಲಿ ಛಂದೋವೈವಿಧ್ಯಕ್ಕಾಗಿ ಇದಕ್ಕೆ ಅವಕಾಶ, ಅಷ್ಟೆ. ರಗಳೆಯೂ ಮೂರು ವಿಧವಾಗಿದ್ದು, ಬಹುತೇಕ ಮಾತ್ರಾಗಣ ಘಟಿತವಾದದ್ದು; ಆದರೆ ದ್ವಿಪದವು ಅಂಶ ಛಂದಸ್ಸು. ಕನ್ನಡದ ರಗಳೆಯ ಮಟ್ಟಿಗೆ ಒಂದು ಊಹೆಯನ್ನಿಲ್ಲಿ ಮುಂದಿರಿಸಬಹುದು. ಜನಪದ ಸಾಹಿತ್ಯದಲ್ಲಿ ತ್ರಿಪದಿಯಂತೆಯೇ ರಗಳೆಯೂ ಅಚ್ಚಗನ್ನಡ ಛಂದೋರೂಪವಾಗಿದ್ದದ್ದು, ಬರಬರುತ್ತ ಹಲವು ಟಿಸಿಲಾಗಿ, ಮುಂದೆ ಶಿಷ್ಟಕಾವ್ಯದಲ್ಲಿ ಬಳಕೆಗೊಂಡಿರಬೇಕೆಂದು

ಮುಗಳಿಯವರು ಊಹಿಸುತ್ತಾರೆ.[೧] ದ್ವಿಪದವನ್ನು ಗಮನಿಸಿದರೆ ಇದು ಸರಿಯಾದ ಊಹೆ ಎನ್ನಿಸುತ್ತದೆ. ದ್ವಿಪದವು ದ್ವಿತೀಯ ಪ್ರಾಸವುಳ್ಳ ಎರಡು ಪಾದಗಳ ಘಟಕ; ಪ್ರತಿ ಪಾದದಲ್ಲಿ ಮೂರು ವಿಷ್ಣುಗಣಗಳೂ ಒಂದು ಬ್ರಹ್ಮಗಣವೂ ಇರುತ್ತದೆ; ಎರಡು ಗಣಗಳ ನಂತರ ಸಾಮಾನ್ಯವಾಗಿ ಯತಿ; ಕೊನೆಯ ಗಣವನ್ನು ಸ್ವಲ್ಪ ದೀರ್ಘಿಸಿಕೊಂಡರೆ ವಿಷ್ಣುವೇ ಆಗುತ್ತದೆ. ವಿಷ್ಣುಗಣದ ಮಾತ್ರಾವ್ಯಾಪ್ತಿ ನಾಲ್ಕರಿಂದ ಆರು ಮಾತ್ರೆಗಳು. ಕನ್ನಡದಲ್ಲಿ ವಿಷ್ಣುಗಣ ಹೆಚ್ಚಾಗಿ ಐದು ಮಾತ್ರೆಯ ಗಣವಾಗಿ ಮಾರ್ಪಡುತ್ತದೆ. ಹೀಗೆ, ವಿಷ್ಣುವಿನ ಮಾತ್ರಾವ್ಯಾಪ್ತಿಗೆ ಅನುಗುಣವಾಗಿ ನಾಲ್ಕು ಮಾತ್ರೆಗಳ ಮಂದಾನಿಲ, ಐದು ಮಾತ್ರೆಗಳ ಲಲಿತ ಹಾಗೂ ಆರು ಮಾತ್ರೆಗಳ (ಅಥವಾ ಮೂರು ಮಾತ್ರೆಗಳ ಪುನರಾವೃತ್ತಿಯ) ಉತ್ಸಾಹ ರಗಳೆಗಳಾಗಿ ಕವಲೊಡೆದಿರಬಹುದು.[೨]

ಒಂದು ವಿಚಾರದಲ್ಲಿ ಇಬ್ಬರಿಗೂ ವ್ಯತ್ಯಾಸವಿದೆ. ಅದೆಂದರೆ 'ಬಸವರಾಜ ದೇವರರಗಳೆ' ಮಾದರಿಯಲ್ಲಿನ ಬಸವಚರಿತ್ರೆಯು ಮುಂದುವರೆಯಲಿಲ್ಲ; ಆದರೆ ಕನ್ನಡದಲ್ಲಾಗಲೀ, ತೆಲುಗಿನಲ್ಲಾಗಲೀ ಸೋಮನಾಥವನ್ನು ಅನುಸರಿಸಿದವರು ಅಸಂಖ್ಯಮಂದಿ. ಛಂದೋರೂಪದ ವಿಷಯದಲ್ಲೂ ಇದು ನಿಜ. ಹರಿಹರನ ನಂತರ ರಗಳೆಯನ್ನು ಸಮರ್ಥವಾಗಿ ಬಳಸಿದವರು ಕೆಲವೇ ಮಂದಿ. ಆದರೆ ಸೋಮನಾಥನ ಪರಂಪರೆಯಂತೂ ಬಹು ಸಮೃದ್ಧವಾದುದು. ಒಟ್ಟು ತೆಲುಗು ಸಾಹಿತ್ಯದಲ್ಲಿ ಸೋಮನಾಥನಿಂದ ಪ್ರಾರಂಭವಾಗಿ ರಚಿತಗೊಂಡ ದ್ವಿಪದ ಕಾವ್ಯಗಳ ಸಂಖ್ಯೆ ಇನ್ನೂರ ನಲವತ್ತೈದು.[೩] ದ್ವಿಪದದಲ್ಲಿ ಕಾವ್ಯರಚನೆ ಮಾಡಿದುದು ಎಂದರೆ ತೆಲುಗುತನವನ್ನು ಕಾವ್ಯದಲ್ಲಿ ನೆಲೆಗೊಳಿಸಿದುದು ಎಂಬುದು ಕೆಲವರ ಅಭಿಪ್ರಾಯ. ಆರುದ್ರ ಅವರು ಎತ್ತಿರುವ ಉದ್ಗಾರ ಹೀಗಿದೆ; "ತೆಲುಗು ಉದ್ಯಾನದಲ್ಲಿ ಮೊದಲು ಕೋಗಿಲೆಯು ಕಂಠವೆತ್ತಿ ತೆಲುಗಿನವನಿಗಾಗಿ, ತೆಲುಗು ಛಂದಸ್ಸಿನಲ್ಲಿ ಹಾಡುಗಳನ್ನು ಹಾಡಿತು. ಆ ಕೋಗಿಲೆಯ ಹೆಸರು ಪಾಲ್ಕುರಿಕೆ ಸೋಮನಾಥ. ಆತ ಹಾಡಿದ ತೆಲುಗು ಛಂದಸ್ಸಿನ ಹೆಸರು ದ್ವಿಪದ. ತೆಲುಗು ಸಮುದಾಯ ಆತನಿಗಿತ್ತ ದಿವ್ಯಾಯುಧ ಈ ದ್ವಿಪದ. ತೆಲುಗು ಸಮುದಾಯಕ್ಕೆ ಆತನಿತ್ತ ದೊಡ್ಡ ಕಾಣಿಕೆಯೂ ಈ ದ್ವಿಪದವೇ. ಪಾಲ್ಕುರಿಕೆ ಸೋಮನಾಥನು ಹುಟ್ಟದೇ ಹೋಗಿದ್ದರೆ ತೆಲುಗರಿಗೆ ಯಾವ ಛಂದಸ್ಸೂ ಇಷ್ಟು ಒಪ್ಪುತ್ತಿರಲಿಲ್ಲವೇನೋ. ಪ್ರಜೆಗಳಿಗಾಗಿ ಆತ ಹುಟ್ಟಿದ; ಪ್ರಜೆಗಳೇ ಆತನನ್ನು ಅಮರ ಕವಿಯಾಗಿಸಿದ್ದಾರೆ."[೪]

---

೧. ರಂ.ಶ್ರೀ.ಮುಗಳಿ : 'ಪ್ರಾಚೀನ ಕನ್ನಡ ಸಾಹಿತ್ಯರೂಪಗಳು' (೧೯೮೫): ಪು. ೧೬೩

೨. ಪಿ.ಪಿ. ನಾರಾಯಣ (ಅನು): 'ಪಾಲ್ಕುರಿಕೆ ಸೋಮನಾಥನ ಬಸವಪುರಾಣ' ಪ್ರಸ್ತಾವನೆ: ಪು. XVi-XVii

೩. ಡಾ. ಜಿ. ನಾಗಯ್ಯ: 'ದ್ವಿಪದ ವಾಙ್ಮಯಮು' ಅನುಬಂಧ.

೪. ಆರುದ್ರ : 'ಸಮಗ್ರ ಆಂಧ್ರ ಸಾಹಿತ್ಯಂ' (ಎರಡನೇ ಸಂಪುಟ. ೧೯೮೯): ಪು. ೧೯೨

ಪಾಲ್ಕುರಿಕೆ ಸೋಮನಾಥನು ಇಪ್ಪತ್ತಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾನೆ. ಅನುಭವ ಸಾರಮು, ಬಸವಪುರಾಣಮು, ವೃಷಾಧಿಪ ಶತಕ, ಅಕ್ಷರಾಂಕ ಗದ್ಯ, ಅಕ್ಷರಾಂಕಪದ್ಯ, ಚತುರ್ವೇದಸಾರ, ಸದ್ಗುರು ರಗಳೆ, ಗಂಗೋತ್ಪತ್ತಿ ರಗಳೆ, ಬಸವೋದಾಹರಣ, ಚನ್ನಮಲ್ಲು ಸೀಸಮಲು, ಸೋಮನಾಥಸ್ತವ, ಮಲ್ಲದೇವಿ ಪುರಾಣ, ಪಂಡಿತಾರಾಧ್ಯ ಚರಿತ್ರಮು ಈ ತೆಲುಗು ಕೃತಿಗಳನ್ನು; ಬಸವೋದಾಹರಣ, ಸೋಮನಾಥಭಾಷ್ಯ, ರುದ್ರಭಾಷ್ಯ, ವೃಷಾಭಾಷ್ಟಕವೆಂಬ ಸಂಸ್ಕೃತ ಕೃತಿಗಳನ್ನು ಆತ ರಚಿಸಿದ್ದಾನೆ. ವೃಷಾಧಿಪಶತಕವು ತೆಲುಗು ಕೃತಿಯಾದರೂ ಅದರಲ್ಲಿ ಕನ್ನಡ, ತೆಲುಗು, ತಮಿಳು, ಮರಾಠಿ ಹಾಗೂ ಮಣಿಪ್ರವಾಳಗಳಲ್ಲಿ ಬರೆದಿರುವ ಪದ್ಯಗಳಿವೆ. ಆತನು ಕನ್ನಡದಲ್ಲಿ ಸದ್ಗುರು ರಗಳೆ, ಚೆನ್ನಬಸವ ರಗಳೆ, ಅಕ್ಷರಾಂಕ ಪದ್ಯ, ಶರಣುಬಸವ ರಗಳೆ, ಬಸವಲಿಂಗ ನಾಮಾವಳಿ, ಶೀಲಸಂಪಾದನೆ, ಶತಗಣಸಹಸ್ರನಾಮ ಎಂಬ ಕೃತಿಗಳನ್ನು ಬರೆದಿರುವನೆಂದು ವಿದ್ವಾಂಸರು ಹೇಳುತ್ತಾರೆ.

ಸೋಮನಾಥನ ಮಿಕ್ಕ ಕೃತಿಗಳು ಕಿರಿಯವು. 'ಪಂಡಿತಾರಾಧ್ಯ ಚರಿತ್ರೆ' ಹಾಗೂ 'ಬಸವಪುರಾಣ'ಗಳು ಪೂರ್ಣಪ್ರಮಾಣದ ದ್ವಿಪದ ಕಾವ್ಯಗಳು. ಬಸವಣ್ಣನ ಸಮಕಾಲೀನನೆಂದು ಹೇಳಲಾಗುವ ಮಲ್ಲಿಕಾರ್ಜುನ ಪಂಡಿತಾರಾಧ್ಯನನ್ನು ಕುರಿತದ್ದು 'ಪಂಡಿತಾರಾಧ್ಯ ಚರಿತ್ರೆ'. 'ಬಸವಣ್ಣನನ್ನು ಕೇಂದ್ರವಾಗಿರಿಸಿಕೊಂಡ ಪುರಾಣವೇ 'ಬಸವಪುರಾಣ', ಕನ್ನಡದಲ್ಲಿನ ಬಸವಪುರಾಣ ಪರಂಪರೆಗಷ್ಟೇ ಅಲ್ಲ, ವೀರಶೈವಪುರಾಣ ಪರಂಪರೆಗೂ ಇದೇ ಆದ್ಯಕೃತಿಯಾದುದರಿಂದ ಕನ್ನಡನಾಡು ಪಾಲ್ಕುರಿಕೆ ಸೋಮನಾಥನಿಗೆ ಅಪಾರ ಗೌರವವನ್ನು ತೋರಿಸಿದೆ. ವಿರಕ್ತ ತೋಂಟದಾರ್ಯ ಕವಿಯು 'ಪಾಲ್ಕುರಿಕೆ ಸೋಮೇಶ್ವರ ಪುರಾಣ'ವನ್ನು ರಚಿಸಿ ಈ ಕವಿಗೆ ದೊಡ್ಡ ರೀತಿಯಲ್ಲಿ ಗೌರವ ಸಮರ್ಪಣೆ ಮಾಡಿದ್ದಾನೆ. ಸೋಮನಾಥನು ಆವೇಶಪೂರ್ಣ ವೀರಶೈವ. ತೆಲುಗಿನಲ್ಲಿಯೂ ಈ ಕವಿಯ ಬಗ್ಗೆ 'ಪಾಲ್ಕುರಿಕೆ ಸೋಮೇಶ್ವರ ಚ್ಚರಿತ' ಎಂಬ ಯಕ್ಷಗಾನ ಕೃತಿಯಿದೆ. ಈತನಿಗೆ ಶಿವೇತರ ದೇವತಾವಿಗ್ರಹಗಳನ್ನು ನೋಡಬಾರದೆಂಬ ಛಲ. ಕೋಟೆಯೊಂದರ ಮೇಲಿದ್ದ ಗಜಲಕ್ಷ್ಮಿಯ ವಿಗ್ರಹವು ಒಮ್ಮೆ ಇವನ ಕಣ್ಣಿಗೆ ಬಿದ್ದಾಗ ಅದು ಮುರಿದುಬಿತ್ತಂತೆ. ಅರವತ್ತುನಾಲ್ಕು ಶೀಲಗಳನ್ನು ಚಾಚೂ ತಪ್ಪದೆ ಅನುಸರಿಸುತ್ತಿದ್ದ ಸೋಮನಾಥನು ಅಂಥವಳೇ ಆದ ಚನ್ನಮ್ಮನೆಂಬುವಳನ್ನು ಕಾಣಲು ದೂರದ ಊರಾದ ಬೆಂಗಳೂರಿನ ಬಳಿಯ ಕಲ್ಯಕ್ಕೆ ಬರುತ್ತಾನೆ; ಅಲ್ಲಿಯೇ ತೀರಿಕೊಳ್ಳುತ್ತಾನೆ. ಕಲ್ಯದಲ್ಲಿ ಈಗಲೂ ಕಲ್ಲೇಶ್ವರ ದೇವಾಲಯದ ಬಳಿ ಆತನದೆಂದು ಹೇಳಲಾದ ಸಮಾಧಿಯಿದೆ. ಅಸೀಮ ಬಸವಭಕ್ತನಾದ ಸೋಮನಾಥನು ತೆಲುಗುನಾಡಿವನಾದರೂ ಬಸವನ ನಾಡಿನಲ್ಲಿ ತೀರಿಕೊಂಡದ್ದು ಅರ್ಥಪೂರ್ಣವಾಗಿದೆ.

ಸೋಮನಾಥನ 'ಬಸವಪುರಾಣಮು' ೧೨೬೧೦ ಸಾಲುಗಳ ದ್ವಿಪದ ಕಾವ್ಯ.[೫] ಆದರೆ ಇದರಲ್ಲಿ ನೇರವಾಗಿ ಬಸವಣ್ಣನಿಗೆ ಸಂಬಂಧಿಸಿದವು ಮೂರು ಸಾವಿರ ಸಾಲುಗಳಿಗಿಂತ ಕಡಿಮೆ. ಕಾವ್ಯವು ಏಳು ಆಶ್ವಾಸಗಳಲ್ಲಿ ವಿಂಗಡಣೆಯಾಗಿದೆ. ಕ್ರಮವಾಗಿ ೧೨೬೮, ೧೩೩೬, ೧೩೬೮, ೨೦೯೬, ೧೮೭೨, ೧೯೯೦ ಹಾಗೂ ೨೦೮೦ ಸಾಲುಗಳಿಂದ ಕೂಡಿದೆ. ಮೊದಲನೆಯ ಆಶ್ವಾಸದಲ್ಲಿ ಕಥಾರಂಭ, ಲೋಕವೃತ್ತಾಂತ, ಶಿಲಾದನ ತಪಸ್ಸು, ನಂದಿಕೇಶ್ವರನ ಅವತಾರ, ಬಸವಣ್ಣ ಕಪ್ಪಡಿಸಂಗಮಕ್ಕೆ ಬಂದುದು, ಸಂಗಯ್ಯ ಪ್ರತ್ಯಕ್ಷನಾದದ್ದು, ಈ ವೃತ್ತಾಂತಗಳಿವೆ; ಎರಡನೆಯದರಲ್ಲಿ ಬಸವನಿಗೆ ದಂಡನಾಯಕ ಪದವಿ ದೊರೆತದ್ದು, ಆತ ಕಲ್ಯಾಣಕ್ಕೆ ಬಂದುದು, ಬಸವನ ಭಾಷೆ, ಬಸವಣ್ಣನ ಶಿವಾಚಾರನಿರತಿ, ಚೆನ್ನಬಸವನ ಮಹಿಮೆ, ಚೆನ್ನಬಸವನು ಬಸವನನ್ನು ಸ್ತುತಿಸಿದ್ದು, ಅಲ್ಲಮನ ಆಗಮನ, ಅಲ್ಲಮನಿಗೆ ಬೋನವಿಟ್ಟದ್ದು, ಪಾರ್ವತಿಯು ಪ್ರಮಥರಿಗೆ ಬೋನವಿಟ್ಟ ಕಥೆ, ಬಸವನಿಗೆ ವರವಿತ್ತದ್ದು, ಬದನೆಕಾಯಿ ಲಿಂಗಗಳಾದದ್ದು, ಬಿಲ್ಲೇಶ ಮಲ್ಲಯ್ಯನ ಕಥೆ, ಕಾಟಕೋಟನ ಕಥೆ, ಜೋಳವು ಮುತ್ತಾದ ಕತೆ, ಮೊರಟದ ಬಂಕಯ್ಯನ ಕಥೆ ಸಂಗಮೇಶನು ಬಸವನ ಮೂರನೇ ಕಣ್ಣು ಕೇಳಿದ್ದು, ಗೊಲ್ಲತಿಯ ಪವಾಡ, ತಿರುಚಿಟ್ಟಂಬಲನ ಕಥೆ ಹಾಗೂ ಸಿದ್ಧರಾಮನು ಕೈಲಾಸಕ್ಕೆ ಹೋದ ಪ್ರಸಂಗಗಳಿವೆ; ಮೂರನೆಯದರಲ್ಲಿ ನರಿಗಳು ಕುದುರೆಗಳಾದ ಕಥೆ, ಬಸವನು ಹೆಂಡತಿಯ ಸೀರೆಯನ್ನು ಜಂಗಮನಿಗಿತ್ತದ್ದು, ಮುಗ್ಧಸಂಗಯ್ಯನ ಕಥೆ, ರುದ್ರಪಶುಪತಿಯ ಕಥೆ. ನಕ್ಕನೈನಾರು ಕಥೆ, ಬೆಜ್ಜಮಹಾದೇವಿಯ ಕಥೆ, ಕೊಡಗೂಸಿನ ಕಥೆ, ದೀಪದ ಕಲಿಯಾರ ಕಥೆ, ನಾಟ್ಯನಮಿತ್ತಂಡಿಯ ಕಥೆ, ಉಡುಮೂರಿ ಕಣ್ಣಪ್ಪನ ಕಥೆ, ಕಲಿಯಂಬ ನಾಯನಾರ ಕಥೆ, ಹಾಗೂ ಸಕಲೇಶ್ವರ ಮಾದಿರಾಜಯ್ಯನ ಕಥೆಗಳಿವೆ; ನಾಲ್ಕನೆಯದರಲ್ಲಿ ಮಡಿವಾಳ ಮಾಚಯ್ಯನ ಕಥೆ, ಬಾಹೂರ ಬ್ರಹ್ಮಯ್ಯನ ಕಥೆ, ಶಂಕರದಾಸಿಮಯ್ಯನ ಕಥೆ, ನಿಂಬವ್ವೆಯ ಕಥೆ, ಸಿರಿಯಾಳ, ನರಸಿಂಗನಯನಾರು, ಕೊಟಾರಿ ಚೋಳ, ಹಲಾಯುಧ ಇವರ ಕಥೆಗಳು, ಸಿರಿಯಾಳನ ಮಹಿಮೆ, ಪಾರ್ವತಿಸಂಗಳವ್ವೆಯರ ಪ್ರಾರ್ಥನೆ, ಮಿಂಡನೈನಾರ ಕಥೆ, ಶಿವಭಕ್ತರ ಮಹಿಮೆ, ಬಾಣ ಪಿಟ್ಟವ್ವೆ ಕಲಿಕಾಮದೇವಿ, ಏಣುಮೂರ್ತಿ ನೈನಾರು, ಕಡಮಲನಂಬಿ, ಗುಗ್ಗುಳು ಕಲಿಯಾರು, ಅರಿವಾಳು ನಾಯನಾರು, ಅಡಿಭರ್ತ, ಏಣಾದಿನಾಥ, ಚೇದಿವಲ್ಲಭ, ಕರವೂರ ಚೋಳ. ಕಳಿಯೆಂಬ ನೈನಾರು, ಇರುವದಾಂಡಾರಿ, ದಂಗುಳಿ ಮಾರಯ್ಯ, ಗಣಪಾಲ, ಕುಂಬಾರ ಗುಂಡಯ್ಯ, ಪೂಸಲ ನಯನಾರು ಹಾಗೂ ಇತರರ ಕಥೆಗಳಿವೆ; ಐದನೆಯ ಆಶ್ವಾಸದಲ್ಲಿ ಕಿನ್ನರ ಬ್ರಹ್ಮಯ್ಯ, ಕುರಿಯ ಕಥೆ, ಕಲಕೇತ ಬ್ರಹ್ಮಯ್ಯ, ಮೋಳಿಗೆ ಮಾರಯ್ಯಾ, ಕನ್ನದ ಬ್ರಹ್ಮಯ್ಯ, ಮುಸುಡಿಯ ಚೌಡಯ್ಯ, ಸುರಗಿ

---

೫. ಇದು ಬಂಡಾರು ತಮ್ಮಯ್ಯನವರು ಸಂಪಾದಿಸಿದ 'ಬಸವಪುರಾಣಮು' ವಿನಲ್ಲಿರುವ ಪಾದಸಂಖ್ಯೆ. ಕೆಲವು ಪ್ರತಿಗಳಲ್ಲಿ ೬೨೫೮ ದ್ವಿಪದಗಳು ಅಂದರೆ ೧೨೫೧೬ ಸಾಲುಗಳಿವೆ.

ಚೌಡಯ್ಯ ಹಾಗೂ ತೆಲುಗು ಜೊಮ್ಮಯ್ಯನ ಕಥೆಗಳಿವೆ; ಆರನೆಯದರಲ್ಲಿ ಏಕಾಂತ ರಾಮಯ್ಯ, ಇರುತ್ತಾಂಡಿ, ಪಿಳ್ಳನೈನಾರು, ನಿಡುಮಾರು, ನಮಿನಂದಿ, ಸಾಂಖ್ಯತೊಂಡ, ಕೋವೂರ ಬ್ರಹ್ಮಯ್ಯ, ಜೇಡರ ದಾಸಯ್ಯ, ಹಿರಿಯ ನಾಚಯ್ಯ. ಸೋಮಣ್ಣ, ವೈಜಕವ್ವೆ, ಸೊಡ್ಡಳದೇವ ಬಾಚಯ್ಯ, ಅರಿಯಮ, ವೀರಶಂಕರ ಹಾಗೂ ಶಿವಲೆಂಕ ಮಂಚಯ್ಯನ ಕಥೆಗಳಿವೆ; ಕೊನೆಯದರಲ್ಲಿ ಶಿವನಾಗಮಯ್ಯ, ಕಲ್ಲಿದೇವಯ್ಯ, ಬಿಬ್ಬಬಾಚಯ್ಯ, ಮಾದಾರ ದೂಡಯ್ಯ, ಬಾಸನ ಭೀಮಯ್ಯ, ಶ್ವಪಚಯ್ಯ ಉದ್ಭಟ, ಕಕ್ಕಯ್ಯ, ಭೋಗಯ್ಯ, ಗುಡ್ಡವ್ವೆ, ಕಲ್ಯಾಣಪುರದ ಭಕ್ತರು– ಈ ಕಥೆಗಳಲ್ಲದೆ ಬೇಡರ ತಕರಾರು, ಬಸವಣ್ಣನ ವಿಷಾರೊಗಣೆ, ಜಗದೇವ ದಂಡನಾಯಕನ ಕಥೆ, ಏಲೇಶ್ವರ ಕೇತಯ್ಯನ ಕಥೆ, ಸವರದ ನಾಚಯ್ಯನ ಕಥೆ ಹಾಗೂ ಅಲ್ಲಯ್ಯ ಮಧುವಯ್ಯಗಳ ಕಥೆಗಳಿವೆ.

ಸೋಮನಾಥನು ಪಂಡಿತಾರಾಧ್ಯನ ಬಗ್ಗೆ ಬರೆದ ಕಾವ್ಯವನ್ನು ಚರಿತ್ರೆ ಎಂದು ಕರೆದರೂ, ಬಸವಣ್ಣನ ಬಗೆಗಿನ ತನ್ನ ಕಾವ್ಯವನ್ನು 'ಬಸವಪುರಾಣಮು' ಎಂದು ಹೆಸರಿಸಿದ. ಇದೇ ಮೊದಲ ವೀರಶೈವಪುರಾಣ. ಆದರೆ ವೀರಶೈವಪುರಾಣ ಲಕ್ಷಣಗಳ ಬಗ್ಗೆ ಸೋಮನಾಥನು ಎಲ್ಲೂ ಪ್ರಸ್ತಾಪಿಸಿಲ್ಲ. ತನ್ನ ಕಾವ್ಯೋದ್ದೇಶ ಹಾಗೂ ರಚನಾತಂತ್ರಗಳ ಬಗ್ಗೆ ಕವಿ ಹೀಗೆ ಹೇಳುತ್ತಾನೆ:

ಅಲರಿಸಿ ಬಸವನ ನೆನೆವ ನೆನಹನು
ಬಲುಹಾಗಿ ಮಾಡಿ ಭಾವಗಳನು ಮೆರೆಸಿ–
ಯಕಳಂಕಲಿಂಗ ರಹಸ್ಯ ಸಿದ್ಧಾಂತ
ಸಕಲವೇದಪುರಾಣಸಮ್ಮತವಾದ
ಆತತ ಸಕಲಪುರಾತನಭಕ್ತ
ಗೀತಾರ್ಥಸಮಿತಿಯೇ ಮಾತೃಕೆಯೆಂಬ
ಪೂರಿತವಾಗೊಪ್ಪುವಾ ಮಣಿಗಳಲ್ಲಿ
ದಾರದಂತೆಯೆ ಪುರಾತನಭಕ್ತಿವಿತತಿ
ಚರಿತೆಗಳಲಿ ಸೇರಿಸುತ್ತ ಬಸವನ
ಚರಿತೆಯ ವರ್ಣಿಪೆ ಸತ್ಕೃತಿಯೆನಿಸೆ?[೬]

ಎಂದರೆ ಸೋಮನಾಥನಿರಿಸಿಕೊಂಡಿದ್ದ ಉದ್ದೇಶವೆಂದರೆ ಪುರಾತನರ ಚರಿತೆಗಳೆಂಬ[೭] ಮಣಿಗಳನ್ನು ಬಸವನ ಚರಿತೆಯೆಂಬ ದಾರದಲ್ಲಿ ಪೋಣಿಸುವುದು.

---

೬. ಪಿ.ವಿ. ನಾರಾಯಣ (ಅನುವಾದ) : 'ಪಾಲ್ಕುರಿಕೆ ಸೋಮನಾಥನ ಬಸವಪುರಾಣ : ೧.೧೭೫–೧೮೪. ಇನ್ನು ಮುಂದೆ ಉದ್ಧೃತಗೊಳಿಸುವ ಸಾಲುಗಳು ಈ ಅನುವಾದ ಕೃತಿಯವೆ.

೭. ಈ ಕಾವ್ಯದಲ್ಲಿ ಮೂವತ್ತೆರಡು ಮಂದಿ ಪುರಾತನರ ಕತೆಗಳಿವೆ.

ಈ ಕಾವ್ಯದಲ್ಲಿ ಬಂದ ವಿಚಾರಗಳ ಬಗ್ಗೆ ಬಾಡಾಲ ರಾಮಯ್ಯನವರು ಹೀಗೆ ಹೇಳುತ್ತಾರೆ:[೮] ಮೊದಲು ಮೂರು ಆಶ್ವಾಸಗಳಲ್ಲಿ ಗುರುಲಿಂಗಜಂಗಮಗಳ ಪ್ರಾಧಾನ್ಯವನ್ನು ನಿರೂಪಿಸುವ ಮೂಲಕ ಸದಾಚಾರವನ್ನು; ನಾಲ್ಕನೆಯ ಆಶ್ವಾಸದಲ್ಲಿ ಶಿವಭಕ್ತರೊಡನೆ ನಡೆದುಕೊಳ್ಳಬೇಕಾದ ರೀತಿ, ಹಾಗೂ ಶಿವನಿಗಿಂತ ಶಿವಭಕ್ತರೇ ಶ್ರೇಷ್ಠರೆಂಬ ಶಿವಾಚಾರವನ್ನು; ಐದನೆಯ ಆಶ್ವಾಸದಲ್ಲಿ ಶಿವಾರ್ಚನೆಗಿಂತಲೂ ಮಿಗಿಲಾಗಿದ್ದು ಕಾಯಕವೆಂಬ ನಿತ್ಯಾಚಾರವನ್ನು; ಆರನೆಯ ಆಶ್ವಾಸದಲ್ಲಿ ಶಿವನಿಗಿಂತ ಮಿಗಿಲಾದ ದೇವರಿಲ್ಲ ಎಂಬ ನಂಬಿಕೆಯ ಗಣಾಚಾರವನ್ನು; ಏಳನೆಯದರಲ್ಲಿ ಪಾದೋದಕ ಪ್ರಸಾದಗಳ ಶ್ರೇಷ್ಠತೆ, ಶಿವಭಕ್ತರೇ ಕುಲಜರೆಂಬ ಲಿಂಗಾಚಾರ, ಅಷ್ಟಾವರಣಗಳಲ್ಲಿನ ಪಂಚಾಚಾರಗಳು ಇವನ್ನೆಲ್ಲ ಬಸವಣ್ಣನ ವಚನಗಳನ್ನಾಧರಿಸಿ ಸೋಮನಾಥನು ನಿರೂಪಿಸುತ್ತಾನೆ. ಆದರೆ ಸೋಮನಾಥನು ಕಂಡುಕೊಂಡ ಜಾಡಿನಲ್ಲಿ ನಡೆಯುತ್ತ ಮುಂದಿನ ವೀರಶೈವ ಪುರಾಣ ಕವಿಗಳು ಹೊಸ ಲಕ್ಷಣಗಳನ್ನು ಸೇರಿಸಿ ವಿಸ್ತರಿಸಿದರು.[೯]

ಸೋಮನಾಥನಿಗೆ ಬಸವಣ್ಣನ ಪ್ರಭಾವದಿಂದಾಗಿ ಜನರ ಆಡುನುಡಿಯ ಪ್ರಾಧಾನ್ಯ ಅರಿವಾಗಿರಬೇಕು. ಹಾಗಾಗಿ ಆತನು ತಾನು ಆರಿಸಿಕೊಂಡ ಭಾಷೆ-ಛಂದಸ್ಸುಗಳನ್ನು ಕುರಿತು ಹೀಗೆ ಹೇಳಿಕೊಳ್ಳುತ್ತಾನೆ:

ಉರುತರವಹ ಗದ್ಯಪದ್ಯೋಕ್ತಿಗಿಂತ
ಸರಸದಿ ಮೆರೆಯುವ ಜಾನುತೆಲುಗು ವಿ
ಚಾರಿಸಲದು ಸರ್ವಸಾಮಾನ್ಯವೆನಿಸಿ
ಬರುವ ದ್ವಿಪದಗಳನೀಯೆಡೆ ಬರಿಯ
ತೆಲುಗು ಮಾತುಗಳೆನಬಹುದೆ? ವೇದಗಳ
ಸಮವೆನೆ ನೋಡಬೇಕದುವೆಯೆಂತೆನಲು
ಅಳತೆಯ ಸೊಲಗೆಯು ಪ್ರಮಾಣ ತಾನೆ?
ಅಲ್ಪಾಕ್ಷರಗಳಿಂದನಲ್ಪಾರ್ಥ ರಚನೆ-
ಯನ್ನು ಕಲ್ಪಿಸುವುದಲ್ಲವೆ ಕವಿವಿವೇಕ?[೧೦]

ಹೇಳುವ ವಿಷಯದ ಕಾರಣದಿಂದ ಆಡುನುಡಿಗೆ ವೇದದ ಘನತೆ ಪ್ರಾಪ್ತವಾಗುತ್ತದೆಂದು ಹೇಳಿದ ಕಾರಣದಿಂದ ಸೋಮನಾಥ ತೆಲುಗಿನ ಶ್ರೇಷ್ಠತೆಯನ್ನು ಮುಂದಿನ ಕವಿಗಳಿಗೆ ಮನದಟ್ಟು ಮಾಡಿಕೊಟ್ಟಿದ್ದಾನೆ.

---

೮. ಬಾಡಾಲ ರಾಮಯ್ಯ : 'ಬಸವೇಶ್ವರ ವಚನಾಲು : ಸಮಗ್ರ ಸಮೀಕ್ಷ', ಪು. ೧೭೯-೮೦

೯. ಎಸ್. ವಿದ್ಯಾಶಂಕರ : 'ವೀರಶೈವಪುರಾಣಗಳು', ಪು. ೧೨೦-೨

೧೦. ಬಸವಪುರಾಣ : ೧. ೧೬೫-೧೭೪

ಉರುತರ ಗದ್ಯ ಪದ್ಯೋಕ್ತುಲಕಂಟೆ
ಸರಸಮೈ ಪರಗಿನ ಜಾನುದೆನುಂಗು
ಚರ್ಚಿಂಪಗಾ ಸರ್ವಸಾಮಾನ್ಯಮಗುಟ
ಗೂರ್ಚೆದ ದ್ವಿಪದಲು ಗೋರ್ಕಿದೈವಾರ
ದೆಲುಗು ಮಾಟಲನಂಗವಲದು, ವೇದಮುಲ
ಕೊಲದಿಯಕಾಜೂಡುಡಿಲನೆಟ್ಟುಲನಿನ
ಬಾಟಿತೂಮನುಕೂನು ಬಾಟಿಯೌನೇನಿ
ಬಾಟಿಂಪ ಸೋಲಯು ಬಾಟಿಯ ಕಾದೆ
ಅಲ್ಪಾಕ್ಷರ ಮೂಲನನಲ್ಪಾರ್ಥರಚನ
ಕಲ್ಪಿಂಚುಟಯು ಕಾದೆ ಕವಿವಿವೇಕಂಬು.

ಸೊಮನಾಥನನ್ನು ಅನುಸರಿಸುನ ಭೀಮಕವಿಯು 'ಗದ್ಯಪದ್ಯೋಕ್ತಿ' 'ಜಾನು ತೆಲುಗುಗಳನ್ನು' ವಸ್ತುಕ – ವರ್ಣಕಗಳೆಂದು ಹೇಳಿ, ಕನ್ನಡಕ್ಕೆ ಅನ್ವಯಿಸಿ ಈ ಭಾವವನ್ನು ಅನುವಾದಿಸುತ್ತಾನೆ.

ಬಸವಪುರಾಣವನ್ನು ಬರೆಯುವ ಆಸೆಯಿಂದ ಶ್ರೀಶೈಲದ ಭಕ್ತರನ್ನು ತನಗೆ ಕಥಾಸೂತ್ರವನ್ನು ತಿಳಿಸಲು ಕೇಳಿಕೊಳ್ಳುತ್ತಾನಂತೆ ಸೋಮನಾಥ. "ಅಸದೃಶವೆನಿಸುವ ಬಸವಪುರಾಣವನ್ನು ಅತಿಶಯವೆನೆ ಹೇಳಲಿಷ್ಟವುಳ್ಳೆನಗೆ ವರಕಥಾಸೂತ್ರವ ತಿಳಿಸುತಲೆನ್ನ ಚರಿತಾರ್ಥನೆನಿಸಿರಿ ಕರುಣೆಯಿಂದೆನುತ"[೧೧] ಕೇಳಿಕೊಂಡಾಗ ಅವರು ಅನುಗ್ರಹಿಸುತ್ತಾರೆ. ಕವಿ ತನ್ನ ಕಾವ್ಯಪ್ರಾರಂಭದಲ್ಲಿ ತನಗೆ ಬಸವಣ್ಣನ ಕತೆಯನ್ನರುಹಿದ ಕರಸ್ಥಲ ಮಲ್ಲಿನಾಥ, ರೆಂಟಾಲಮಲ್ಲಿನಾಥ, ನೀಲಕಂಠಗ್ರಜ, ಗೋಡಗಿ ತ್ರಿಪುರಾರಿ ಮುಂತಾದ ಭಕ್ತರನ್ನೂ, ದೋಚಮಾಂಬೆಯೆಂಬ ಭಕ್ತೆಯನ್ನೂ ಸ್ತುತಿಸಿದ್ದಾನೆ. ಕಥಾ ಪ್ರಾರಂಭಕ್ಕೆ ಮುನ್ನ ಬಸವಸ್ತುತಿ ಮಾಡುವ ಕವಿಯು "ಮಿಗೆ 'ಕವಯಃಕಿಂನ ಪಶ್ಯಂತಿ'ಯೆನುತ ಕುಕವಿಗಳನು ಪರಿಗಣಿಸದೆ ಭರದಿ ನುತಿಸುವೆ"[೧೨] ಎಂದು ಕತೆಯನ್ನು ಪ್ರಾರಂಭಿಸುತ್ತಾನೆ. 'ಬಸವ ಪುರಾಣ'ವೆಂದು ತನ್ನ ಕಾವ್ಯಕ್ಕೆ ಹೆಸರಿಟ್ಟ ಸೋಮನಾಥನು ಕಾವ್ಯದ ಪ್ರಾರಂಭದಲ್ಲೇ ಬಸವಣ್ಣನ ಜನನದ ರೀತಿ ಹಾಗೂ ಲಿಂಗಧಾರಣೆಗಳ ಸನ್ನಿವೇಶದ ಮೂಲಕವಾಗಿ ಒಂದು ಬಗೆಯಲ್ಲಿ ಬಸವಣ್ಣನ ಪೌರಾಣಿಕೀಕರಣವನ್ನು ಪ್ರಾರಂಭಿಸುತ್ತಾನೆ.

ಪ್ರೀತಿಯ ಮಗನು ಮುಗಿದಕೈಗಳೊಡನೆ
ಆ ತಾಯಗರ್ಭದಿನಂದುದಯಿಸಿದ–

---

೧೧. ಬಸವಪುರಾಣ : ೧ : ೯೫–೯೯
ಅಸದೃಶಂಬೈಯೊಪ್ಪು ಬಸವಪುರಾಣ
ಮೆಸಕಂಬುತೋ ಜೆಪ್ಪ ನಿಷ್ಟಮಯ್ಯಡನು
ವರಕಥಾಸೂತ್ರಂಬು ವೆರೆವೆರೆಗಿಂಚಿ
ಚರಿತಾರ್ಥು ಜೇಯರೇ ಕರುಣತೋನನುಚು

೧೨. ಅದೇ : ೧ : ೨೬೦–೧

ನರ್ಧೋದಯದೊಳಗೇ ಆತನಲಿದ್ದ
ಅರ್ಧೇಂದುಮೌಳಿ ಗುಪ್ತಾಕೃತಿ ತಳೆದು
ಅಂಗದ ಮೇಲೆಲ್ಲ ಕಡುಸಾಂಗವಾಗಿ
ಲಿಂಗಸಾಹಿತ್ಯವ ಲೀಲೆಯಿಂಗೈದ.[೧೩]

(ಪ್ರೀತಿಪುತ್ರುಡು ಮೊಡ್ಡು ಜೇತುಲ ತೋಡೆ
ನಾತಲ್ಲಿ ಗರ್ಭಂಬುನಂದುದಯಿಂಚಿ-
ನರ್ಧೋದಯಂಬುನ[೧೪] ನತನಿ ಲೋನುನ್ನ
ಯರ್ಧೇಂದು ಮೌಳಿ ಗುಪ್ತಾಕೃತಿ ದಾಲ್ಚಿ
ಯಂಗಂಬು ಪೈ ಕಡು ಪಾಂಗಂಬು ಗಾಗ
ಲಿಂಗಸಾಹಿತ್ಯಂಬು ಲೀಲನೊನರ್ಚಿ)

'ಅರ್ಧೋದಯ'ವೆಂದು ಬಸವನ ಜನನದ ಬಗ್ಗೆ ಹೇಳುವ ಪದವು ನಾನಾ ಊಹೆಗಳಿಗೆ ಕಾರಣವಾಗಿದೆ. ಒಬ್ಬ ವಿದ್ವಾಂಸರ ಪ್ರಕಾರ ಈ ಪದಕ್ಕೆ ಜ್ಯೋತಿಷ್ಯದಲ್ಲಿ ವಿಶಿಷ್ಟ ಅರ್ಥವಿದೆ; ಅದರಂತೆ ಲೆಕ್ಕಹಾಕಿದರೆ ಬಸವಣ್ಣನ ಜನನವು "ಸಿದ್ಧಾರ್ಥಿನಾಮ ಸಂವತ್ಸರ ಪುಷ್ಯ ಬಹುಳ ಅಮಾವಾಸ್ಯೆ ಭಾನುವಾರ ಶ್ರವಣನಕ್ಷತ್ರದಲ್ಲಿ ಹಗಲು ೯ ಗಂಟೆಗೆ ಇಂಗ್ಲಿಷ್ ತಾರೀಖು ೨೧-೧-೧೧೪೦ಕ್ಕೆ ಸರಿಯಾಗಿ" ಆಯಿತು.[೧೫] ಆದರೆ ಅರ್ಧೋದಯದಲ್ಲಿ (ಅರ್ಧೋದಯಮುನಂದ) ಎಂದು ಹೇಳುವ ಬದಲು ಕವಿ ಅರ್ಧೋದಯದಲ್ಲೇ (ಅರ್ಧೋದಯಂಬುನ) ಎಂದು ಹೇಳಿರುವುದನ್ನು ನೋಡಿದರೆ, ಆ ಪದವು ಮುಹೂರ್ತಸೂಚಿಯಾಗುವುದರ ಬದಲು ಹುಟ್ಟಿನ ಅರ್ಥದಲ್ಲಿಯೇ ಬಸವಣ್ಣನಿಗೆ ಲಿಂಗಸಾಹಿತ್ಯವಾಯಿತು ಎಂಬ ಅರ್ಥವೇ ಕವಿಗೆ ಮುಖ್ಯವಾಗಿತ್ತೆಂದು ಮತ್ತೊಬ್ಬರು ವಾದಿಸುತ್ತಾರೆ.[೧೬] ಏನಾದರಾಗಲಿ ಸೋಮನಾಥನ ದೃಷ್ಟಿಯಲ್ಲಿ ಬಸವಣ್ಣ ಸಾಧಾರಣನಲ್ಲ. ಆ ಭಾವನೆಗೆ ಅನುಗುಣವಾಗಿಯೇ ಅವನ ರಚನೆ ಮುಂದುವರೆಯುತ್ತದೆ.

ಬಸವಣ್ಣನ ವಚನಗಳ ಪ್ರಭಾವ ಸೋಮನಾಥನ ಮೇಲೆ ಆಗಿರಬೇಕು; ಹೀಗಾಗಿ ಅವನು ರಚಿಸುವ ಅನೇಕ ಸಾಲುಗಳು ಬಸವಣ್ಣನ ವಚನಗಳ ನೆನಪು ತರುತ್ತವೆ. 'ಮಾವಿನ ಬೀಜವ ಮಹಿಯಲಿ ಬಿತ್ತೆ ಬೇವಹುದೆ ಹೆಚ್ಚು ಕಥೆಗಳವೇಕೆ?'[೧೭] ಎಂಬ ಸಾಲುಗಳು 'ಬೇವಿನ ಬೀಜವ ಬಿತ್ತಿ, ಬೆಲ್ಲದ ಕಟ್ಟೆಯಕಟ್ಟಿ' ಎಂದು ಪ್ರಾರಂಭವಾಗುವ ವಚನದ ವ್ಯತ್ಯಸ್ತರೂಪವಿದ್ದಂತಿದೆ. 'ಮನುಜೇಶ, ಬಡಗಿಯ

---

೧೩. ಅದೇ : ೧೭೫೭-೬೨

೧೪. 'ಅರ್ಧೋದಯೇ'- ಶಂಕರಾರಾಧ್ಯ ಬಸವ ಪುರಾಣ; 'ಅರ್ಧೋದಯದೊಳು'-ಭೀಮಕವಿ

೧೫. ಬಾಡಾಲ ರಾಮಯ್ಯ : 'ಬಸವೇಶ್ವರ ವಚನಾಲು ಸಮಗ್ರ ಸಮೀಕ್ಷ', ಪು. ೬೨

೧೬. ಗಾಜುಲ ವೀರಯ್ಯ : 'ಬಸವಪುರಾಣ ಬಸವರಾಜದೇವರ ರಗಳೆಗಳಲ್ಲಿರುವ ಸಾಮ್ಯ ವ್ಯತ್ಯಾಸಗಳು' (ಸಾಧನೆ ೬.೨ : ಪು ೩೮-೩೯)

೧೭. ಬಸವಪುರಾಣ : ೧ : ೧೯೯೧-೯೨

ಮಾಚಲದೇವಿಯನು ಉತ್ತಮ ವಂಶ್ಯೆಯ ಮಾಡುವೆವೆನುತ ಸ್ವರ್ಣಧೇನುವಿನಲ್ಲಿ ಸತಿಯನಿರಿಸುತ ನಿರ್ನಿಮಿತ್ತವೆ ಹಾಲು ತುಂಬಲು ಹಾಕಿ ಆ ಹೋಯ್ತು ಪೂರ್ವಾಶ್ರಯ......'[೧೮] ಎಂಬ ಪುರಾಣದ ಸಾಲುಗಳು 'ಬಡಗಿ ಮಾಚಲದೇವಿಯ ಕುಲಜೆಯ ಮಾಡಿಹೆವೆಂದು ಹೊನ್ನ ಕಪಿಲೆಯ ರಾವಣಶಾಖದ ಉಚ್ಚಿಷ್ಟದ ಹಾಲಿನಿಂದ ಕೂಲನಟ್ಟುಂಬುವರನೇನೆಂಬೆ' ಎಂಬ ವಚನವನ್ನು ನೆನಪಿಸುತ್ತದೆ.

ಹಾಗೆಯೇ 'ಬೋಯಿತಿಗಲ್ಲವೆ ಹುಟ್ಟಿದ ವ್ಯಾಸ ಪೂರ್ವದ್ವಿಜಾಚಾರ್ಯನಿಳೆಗೆ ವಸಿಷ್ಠ ಸೂಳೆಯೂರ್ವಶಿಗುದಯಿಸಲಿಲ್ಲವೇನು? ಮಾತಂಗನೆನ್ನುವ ಬ್ರಹ್ಮರ್ಷಿಯೊಬ್ಬ ಮಾತಂಗಿಗಲ್ಲವೇನುದ್ಭವಿಸಿದುದು?'[೧೯] ಎಂಬ ಸಾಲುಗಳನ್ನೋದಿದಾಗ 'ವ್ಯಾಸ ಬೋಯಿತಿಯ ಮಗ' ಎಂದು ಮೊದಲಾಗವ ವಚನ ನೆನಪಾಗುತ್ತದೆ. 'ತಾನು ಕೊಂದು ಜನ್ನಿ ಕೊಂದಿತು ಎಂಬ ದುರ್ಜಾತರೊಡನೆ ಪ್ರತಿಮಾತನಾಡಲು ಪಾಪವೊಂದುವು'[೨೦] ಎಂಬಿವು 'ನಾನು ಕೊಲ್ಲೆ ನೇಣು ಕೊಂದಿತ್ತೆಂಬ ಸೂನೆಗಾರರನೇನೆಂಬೆ' ಎಂಬ ವಚನದ ಮಾತಿನಂತಿವೆ. "ಅಡುರುವ ವೇದ ಭರಾಕ್ರಾಂತರಾದ ಕೀಳಾದ ಬ್ರಾಹ್ಮಣ ಗಾರ್ದಭರೊಡನೆ"[೨೧] ಎಂಬ ಸಾಲುಗಳು "ಇದು ಕಾರಣ ಕೂಡಲಸಂಗಮದೇವಾ, ವೇದಭಾರಭರಾಕ್ರಾಂತಾ ಬ್ರಾಹ್ಮಣಾಃ ಗಾರ್ದಭಾಃ ಎಂಬೆನು" ಎಂಬ ವಚನವನ್ನು ಪ್ರಭಾವವಿರುವ ಭಾಗಗಳಿವೆ.[೨೨]

ಸೋಮನಾಥನು ತೆಲುಗು ನಾಡಿನಲ್ಲಿದ್ದ ಕಾರಣ ಕನ್ನಡನಾಡಿನ ಕೆಲವರು ಶರಣರ ಐತಿಹಾಸಿಕ ವಿವರಗಳು ಆತನಿಗೆ ತಿಳಿಯದೆ ಗೊಂದಲಕ್ಕೊಳಗಾಗಿರಬಹುದು. ದಾಸಿಮಯ್ಯನ ವಿಚಾರದಲ್ಲಂತೂ ಇಂತಹ ಗೊಂದಲವಿದೆ. ಚಾಲುಕ್ಯ ಇಮ್ಮಡಿ ಜಯಸಿಂಹನ ಹೆಂಡತಿ ಸುಗ್ಗಲದೇವಿಯ ಗುರುವಾದ ಪೊಟ್ಟಲಕೆರೆಯ ದಾಸಿಮಯ್ಯ 'ದೇವರ ದಾಸಿಮಯ್ಯ'; ವಚನಕಾರನೂ, ದುಗ್ಗಳೆಯ ಗಂಡನೂ, ಶಂಕರ ದಾಸಿಮಯ್ಯನಿಂದ ಅಹಂಕಾರ ಮರ್ದನಕ್ಕೊಳಗಾದವನೂ ಆದ ದಾಸಿಮಯ್ಯ 'ಜೇಡರ ದಾಸಿಮಯ್ಯ' ಎಂಬ ವಿಚಾರ ಈಗ ಸ್ಪಷ್ಟವಾಗಿದೆ. ಆದರೆ ಈ ಇಬ್ಬರನ್ನೂ ಸೋಮನಾಥನು 'ಜೇಡರ' ಎಂಬ ವಿಶೇಷಣದಿಂದಲೇ ಕರೆಯುತ್ತಾನೆ. (ಆದರೆ ಭೀಮಕವಿಯು ಒಂದೆಡೆ ಹೊರತು ಈ ಗೊಂದಲವನ್ನು ಬಹುವಾಗಿ ನಿವಾರಿಸಿಕೊಂಡಿದ್ದಾನೆ).

---

೧೮. ಅದೇ ೭ : ೫೭–೬೧

೧೯. ಅದೇ ೭ : ೮೯೦–೪

೨೦. ಅದೇ ೭ : ೯೨೩–೫

೨೧. ಅದೇ ೭ : ೯೦೯–೧೦

೨೨. ನೋಡಿ ಬಾಡಾಲ ರಾಮಯ್ಯ: 'ಬಸವೇಶ್ವರವಚನಾಲು'. ಸಮಗ್ರ ಸಮೀಕ್ಷ : ಪು. ೪೮೨–೮೩

ಸೋಮನಾಥನದು ಪುರಾಣಕಾರನ ದೃಷ್ಟಿಯಾದರೂ ಕೆಲವೆಡೆ ಅವನು ಹೃದಯಂಗಮವಾಗಿ ಬರೆಯುತ್ತಾನೆ. ಉದಾಹರಣೆಗೆ ಬೆಜ್ಜಮಹಾದೇವಿಯು ತಾಯಿಯಿಲ್ಲದ ಶಿವನ ಬಗ್ಗೆ ಮರುಗುವ ರೀತಿ ವರ್ಣನೆಯನ್ನು ನೋಡಬಹುದು:

ತಾಯಿಯು ತಾಪಸಿಯಾಗಗೊಡುವಳೇ?
ತಾಯಿಯಿದ್ದರೆ ತಲೆ ಜಡೆಯ ಕಟ್ಟುವುದೆ?
ತಾಯಿಯಿದ್ದರೆ ವಿಷ ಕುಡಿಯಲೀಯುವಳೆ?
ತಾಯಿಯಿದ್ದರೆ ಚರ್ಮವನುಡಲುಕೊಡುವಳೆ?
ತಾಯಿ ಹಾವುಗಳನ್ನು ಧರಿಸಬಿಡುವಳೆ?
ತಾಯಿ ಬೂದಿಯನೇಕೆ ಬಳಿಯಲೀಯುವಳು?
ತಾಯಿಯು ಮಗನನ್ನು ತಿರಿಯಲೀಯುವಳೆ?
ತಾಯಿ ಮಗನ ಸುಡುಗಾಡಿಗಟ್ಟುವಳೆ?
ತಾಯಿಯಿಲ್ಲದೆ ಮಗನಾದ ಕಾರಣದಿ
ಕಷ್ಟಕೆ ಸಿಲುಕಿಂಥ ಪಾಡನ್ನು ಪಡೆದ.[೨೩]

ಶಿವನ ಲಕ್ಷಣಗಳನ್ನು ಮುಗ್ಧತೆಯಿಂದ ಕಂಡು ಸಹಾನುಭೂತಿಯನ್ನು ವ್ಯಕ್ತಪಡಿಸುವುದು ಮುಗ್ಧತೆಯ ಸುಂದರ ಅಭಿವ್ಯಕ್ತಿಯಾಗಿದೆ. ಆದರೆ ಈ ಪುರಾಣದಲ್ಲಿ ಇಂತಹ ಭಾಗಗಳು ಕಡಿಮೆಯೇ. ಸೋಮನಾಥ ಕಟ್ಟಾ ವೀರಶೈವ, ಅವನ ಮಾಹೇಶ್ವರ ನಿಷ್ಠೆ ಎಷ್ಟೋ ವೇಳೆ ಪರಮತಖಂಡನೆಯ ಅತೀರೇತಕ್ಕೆ ಹೋಗುತ್ತದೆ. "ಮತಪ್ರಚಾರವನ್ನು ಮಾಡಬಯಸುವ ಸೋಮನಾಥನು ಮಹಾಭಯಂಕರ"[೨೪] ಎಂಬ ಉದ್ಗಾರ ಕೆಲವು ವಿದ್ವಾಂಸರಿಂದ ಹೊರಬಿದ್ದಿದೆ. ಈತನ ಕಾವ್ಯಗಳ ಬಗ್ಗೆ ಬಂದ ವಿಮರ್ಶೆಗಳೂ ಎರಡು ತುದಿಗೆ ನಿಲ್ಲುವಂತಹುವೇ. ಬಂಡಾರು ತಮ್ಮಯನವರಂತಹವರು ಸೋಮನಾಥನನ್ನು ನನ್ನಯ ತಿಕ್ಕನ, ಎರ್ರಾಪ್ರಗಡ, ನನ್ನೆಚೋಡ, ಶ್ರೀನಾಥರಂತಹ ಕವಿಗಳ ಸಾಲಿನಲ್ಲಿರಿಸಿದರೆ, ರಾಳ್ಲಪಳ್ಳಿ ಅನಂತಕೃಷ್ಣ ಶರ್ಮರಂತಹವರು, ಸೋಮನಾಥನ ಉದ್ದೇಶಕ್ಕೆ ಸರಿಸಮವಾಗಿ ಕೃತಿಗಳಲ್ಲಿ ದಿಕ್ಕು

---

೨೩. ಬಸವಪುರಾಣ ೩. ೬೩೫–೪೪
ತಲ್ಲಿ ಗಲ್ಲಿನ ಸೇಲ ತಪಸಿ ಗಾವಿಚ್ಚು
ದಲ್ಲಿ ಗಲ್ಲಿನ ನೇಲ ತಲ ಜಡಲ್ಗಟ್ಟು
ದಲ್ಲಿ ಯಾಂಡಿನದೋಳ್ಳುದಾಲ್ಪದ ನೇಲಿಚ್ಚು
ದಲ್ಲಿ ಪಾಮುಲ ನೇಲಧರಿಯಿಂಪನಿಚ್ಚು
ದಲ್ಲಿ ಬೂಡಿದ ಯೇಲ ತಾ ಬೂಯನಿಚ್ಚು
ದಲ್ಲಿ ಪುಚ್ಚುನೆ ಭುಪಿ ದಸಯಖನಿ ದಿರಿಯ
ದಲ್ಲಿ ಪುಚ್ಚುನೆ ಸುತು ವಲ್ಲಿಕಾಟಿತಿರಿ
ದಲ್ಲಿ ಲೇಕುಂಡಿನ ತನಯಲಗಾನ
ಪ್ರಲ್ಲದುಡ್ಕೈ ಯಿನ್ನಿ ವಾಟ್ಲಕು ವಚ್ಚೆ

೨೪. ಆರುದ್ರ : 'ಸಮಗ್ರ ಆಂಧ್ರಸಾಹಿತ್ಯಂ' ಸಂಪುಟ ೨ ಪು : ೨೦೫

ದೆಸೆಯಿಲ್ಲದೆ, ತಲೆಬಾಲವಿಲ್ಲದೆ ಪವಾಡಗಳು ಪುನರುಕ್ತಿಗಳು ಸೇರಿವೆ; ಹೀಗಾಗಿ ತೆಲುಗು ಸಹೃದಯರು ಅವುಗಳಿಂದ ತಲೆತಿರುಗಿಸಿ ಸುಮ್ಮನಿದ್ದಾರೆ ಎಂದು ಟೀಕಿಸುತ್ತಾರೆ.[೨೫] ಅವನ ಕಾವ್ಯದ ಗುಣಗಳ ಬಗ್ಗೆ ಈ ವಿರೋಧಾಭಿಪ್ರಾಯಗಳು ಕಂಡುಬಂದರೂ ಸೋಮನಾಥನು ದ್ವಿಪದಕ್ಕೆ ಸಲ್ಲಿಸಿದ ಸೇವೆಯ ಬಗ್ಗೆ ಮಾತ್ರ ಏಕಾಭಿಪ್ರಾಯವಿದೆ. ಪದ್ಯ (ಚಂಪೂ) ಕಾವ್ಯದ ದಾರಿಯನ್ನು ನನ್ನಯ್ಯನು ತೋರಿಸಿ ಹೇಗೆ ಪ್ರಥಮಾಚಾರ್ಯನಾದನೋ, ದ್ವಿಪದ ಕಾವ್ಯದ ದಾರಿ ತೋರಿಸಿದುದರಲ್ಲಿ ಸೋಮನಾಥನು ಅಂಥದೇ ಆಚಾರ್ಯನಾಗಿದ್ದಾನೆ ಎಂದು ಪಿಂಗಳಿ ಲಕ್ಷ್ಮೀಕಾಂತಂ[೨೬] ಅವರೆಂದರೆ; ಡಾ. ಬಿ. ಸುಶೀಲ ಹೀಗೆನ್ನುತ್ತಾರೆ: "ಆಂಧ್ರ ಭಾಷಾಲಕ್ಷ್ಮಿಯನ್ನು ದ್ವಿಪದವಿನ್ಯಾಸದಿಂದ ವಿವಿಧ ಭಂಗಿಗಳಲ್ಲಿ ನೃತ್ಯವಾಡಿಸಿ ಆಂಧ್ರ ವಾಙ್ಮಯರಂಗಕ್ಕೆ ನವೀನ ಬಗೆಗಳನ್ನು ಸೇರಿಸಿ, ಸಹೃದಯರ ಆದರಾಭಿಮಾನಗಳನ್ನು ಸೂರೆಗೊಂಡ ಮಹಾಮಹಿಮ ಪಾಲ್ಕುರಿಕೆ ಸೋಮನಾಥ ಕವೀಶ್ವರ."[೨೭] ಹಾಗೆಯೇ ಅವನು ಭಾಷೆಯ ಬಗ್ಗೆ, ಅವನು ಉಪಯೋಗಿಸಿದ ಜಾನುತೆಲುಗಿನ (ಅಚ್ಚ ತೆಲುಗು-ದೇಸಿ) ಬಗ್ಗೆ, ಅವನು ಬಳಸಿದ, ಅಪೂರ್ವ ಶಬ್ದಸಂಪತ್ತಿನ ಬಗ್ಗೆ ಹಿರಿಯ ವಿದ್ವಾಂಸರು ಅಚ್ಚರಿ ವ್ಯಕ್ತಪಡಿಸುತ್ತಾರೆ.[೨೮]

ಪಾಲ್ಕುರಿಕೆ ಸೋಮನಾಥನ ನಂತರ ಎರಡನೆಯ ಬಸವಪುರಾಣವು ರಚಿತವಾಗಲು ತೆಲುಗು ಭಾಷೆ ಹದಿನಾರನೆಯ ಶತಮಾನದವರೆಗೂ ಕಾಯಬೇಕಾಯಿತು. ಕನ್ನಡನಾಡಿನಲ್ಲಿ ವೀರಶೈವವು ಹೊಸ ಚೈತನ್ಯವನ್ನು ಪಡೆದದ್ದು ಶಿವಗಣಪ್ರಸಾದಿ ಮಹಾದೇವಯ್ಯನ 'ಶೂನ್ಯಸಂಪಾದನೆ' ಹಾಗೂ ಚಾಮರಸನ 'ಪ್ರಭುಲಿಂಗಲೀಲೆ'- ಈ ಕೃತಿಗಳ ರಚನೆಯ ಕಾಲದಿಂದ, ಎಂದರೆ ಹದಿನೈದನೆಯ ಶತಮಾನದಿಂದ. ಹದಿನಾರನೆಯ ಶತಮಾನದ ಮಧ್ಯಭಾಗದಲ್ಲಿದ್ದ ತೋಂಟದ ಸಿದ್ಧಲಿಂಗಯತಿಯ ಕಾಲದಲ್ಲಿಯಂತೂ ವೀರಶೈವಕ್ಕೆ ಹೊಸ ಉತ್ಕರ್ಷವುಂಟಾಯಿತು. ಪ್ರಾಯಶಃ ಇದರ ಸೋಂಕು ತೆಲುಗಿಗೂ ವ್ಯಾಪಿಸಿತೆಂದು ಕಾಣುತ್ತದೆ. ಇದೇ ಹೊತ್ತಿಗೆ ಪಾಲ್ಕುರಿಕೆ ಸೋಮನಾಥನ ಶಿಷ್ಯನೆಂದು ಹೆಸರಾದ ಪಿಡುಪರ್ತಿ ಸೋಮನನು ತೆಲುಗಿನಲ್ಲಿ ವೀರಶೈವ ಕೃತಿಗಳ ನಿರ್ಮಾಣಕ್ಕೆ ಮತ್ತೆ ಪ್ರಾರಂಭಮಾಡಿದನು. ಆದರೆ ಈ ಮುಂದೆ ತೆಲುಗು ಈ ವಿಷಯದಲ್ಲಿ ಕನ್ನಡದ ನೆರಳಾಯಿತು. ಸುಮಾರು ಕ್ರಿ.ಶ. ೧೫೬೦ರ ಹೊತ್ತಿಗೆ ಕ್ರಿಯಾಶೀಲನಾಗಿದ್ದ ಪಿಡುಪರ್ತಿ ಸೋಮನನು ಪ್ರಖ್ಯಾತವಾದ ಪಿಡುಪರ್ತಿ ಕವಿಕುಲದವನು. ಆಂಧ್ರ ಸಾಹಿತ್ಯದಲ್ಲಿ

---

೨೫. ಅದೇ : ಪು :೨೦೨-೫

೨೬. ಉದ್ಧೃತ. ಜೆ. ನಾಗಯ್ಯ : 'ದ್ವಿಪದ ವಾಙ್ಮಯಮು' : ಪು ೬೭

೨೭. ಟಿ. ಸುಶೀಲ : 'ಆಂಧ್ರ ದ್ವಿಪದ ಸಾಹಿತ್ಯ ಚರಿತ್ರ' : ಪು ೪೫

೨೮. ನಿಡುದವೋಲು ವೆಂಕಟರಾವು (ಸಂ) : 'ಬಸವಪುರಾಣಮು' (೧೯೫೨) ಪ್ರಸ್ತಾವನ: ಪು. ೩೯-೪೩

ತಾಳ್ಲಪಾಕ ಕವಿಗಳು ವೈಷ್ಣವ ಪಂಥಕ್ಕೆ ಮಾಡಿದ ಸೇವೆಯಂತಹುದೇ ಗಣನೀಯ ಸೇವೆಯನ್ನು ಈ ಪಿಡುಪರ್ತಿ ಕವಿಗಳು ವೀರಶೈವಕ್ಕೆ ಮಾಡಿದರೆಂಬ ಮಾತು ತೆಲುಗು ಸಾಹಿತ್ಯ ಚರಿತ್ರೆಯಲ್ಲಿ ಪ್ರಖ್ಯಾತವಾಗಿದೆ.[೨೯] ಪಿಡುಪರ್ತಿ ಸೋಮನನು ಮೊದಲ ಬಸವಕವಿಯ ಮಗ; ತನ್ನ ತಂದೆಯ ಆಣತಿಯಿಂತೆ ಪಾಲ್ಕುರಿಕೆ ಸೋಮನಾಥನ 'ಬಸವಪುರಾಣಮು'ವನ್ನು ಪದ್ಯ (ಚಂಪೂ)ರೂಪವಾಗಿ ಬರೆದನು; ಸೋಮನಾಥನಿಗೆ ಅಂಕಿತ ಮಾಡಿದನು. ಸಹಜವಾಗಿಯೇ ಈ ಕಾವ್ಯವು ಹೊಸದೇನನ್ನೂ ಹೇಳುವುದಿಲ್ಲ. ತನ್ನ ಕೆಲಸವನ್ನು ಸೋಮನನೇ ಈ ರೀತಿ ಹೇಲಿಕೊಂಡಿದ್ದಾನೆ:

ಸೋಮುಡೇಮಿ ಚೆಪ್ಪೆ ಸೋಮೇಶ ದ್ವಿಪದಲೇ
ರೆಟ್ಟಿ ಪದ್ಯಮುಲುಗ ಬೆನಿಚೆನಂಚು
ನನ್ಯುಲನಗವಲದು ನಾಯಯ್ಯ ಶಿಷ್ಯುಲ
ಮಗುಟೇ ಮನಕು ಜೆಲ್ಲು ನವಿಯು ನಿಲುಪ

ಹೀಗೆ ಸೋಮನಾಥನು ದ್ವಿಪದಗಳಲ್ಲಿ ಹೇಳಿದ್ದನ್ನೇ ಪಿಡುಪರ್ತಿ ಸೋಮನನು ಚಾಚೂ ತಪ್ಪದೆ ಪದ್ಯರೂಪದಲ್ಲಿ ಹೇಳಿದ್ದಾನೆ, ಅಷ್ಟೆ. ಈ ಕಾರಣದಿಂದ ಇವನಿಗೆ 'ಪ್ರಬಂಧನಿಬಂಧನ ಶಕ್ತಿಯುಕ್ತ' ಎಂಬ ಬಿರುದು ಬಂದಿತು. ಇಲ್ಲಿ ಒಂದು ಅಂಶವನ್ನು ಗಮನಿಸಬಹುದು. ಬಸವಾದಿಗಳ ಕಾರಣದಿಂದ ಆಡುನುಡಿಗೆ ಪ್ರಾಮುಖ್ಯತೆ ಬಂದು ಹರಿಹರ, ಸೋಮನಾಥರು ತಮ್ಮ ಕಾವ್ಯವನ್ನು ಸರಳವಾಗಿ ರಚಿಸಿದರು. ಆದರೆ ಕನ್ನಡದಲ್ಲಿ ಹಾಗಾಗುವುದಕ್ಕೆ ಮುಂಚೆಯೇ ತೆಲುಗಿನಲ್ಲಿ ಮತ್ತೆ ಕಾವ್ಯವನ್ನು ಪಡೆಸುತನವು ಹೊಕ್ಕಿದ್ದಕ್ಕೆ ಸೋಮನನು ಒಂದು ರೀತಿ ಕಾರಣನಾದ. (ಆದರೆ ಈತ ದ್ವಿಪದದಲ್ಲಿ 'ಪ್ರಭುಲಿಂಗಲೀಲೆ'ಯನ್ನು ಅನುವಾದಿಸಿದ).

ಆನಂತರ ಪಿಡುಪರ್ತಿ ಸೊಮನಾಥನಂತೆಯೇ ವಿಜಯವಾಡದ ಮಹಾದೇವ ಕವಿಯು 'ಬಸವಪುರಾಣ'ವನ್ನು ಚಂಪೂರೂಪವಾಗಿ ರಚಿಸಿದ. ಇದನ್ನು ವಿಜಯವಾಡದ ಶ್ರೀ ಮಲ್ಲಿಕಾರ್ಜುನ ಶಿವಲಿಂಗಕ್ಕೆ ಸಮರ್ಪಿಸಿದ್ದಾನೆ. ಪಾಲ್ಕುರಿಕೆ ಸೋಮನಾಥನ ಕಾವ್ಯದಲ್ಲಿಯಂತೆ ಇಲ್ಲಿಯೂ ಏಳು ಆಶ್ವಾಸಗಳಿವೆ. ಘಂಟಾಕರ್ಣನ ಕತೆ ಮಾತ್ರ ಆರನೆಯ ಆಶ್ವಾಸದಲ್ಲಿ ಹೆಚ್ಚಾಗಿ ಬಂದಿದೆ; ಉಳಿದಂತೆ ಪಾಲ್ಕುರಿಕೆ ಸೋಮನಾಥನ ಕಾವ್ಯದ ಅನುಸರಣೆಯಾಗಿದೆ ಈ ಕೃತಿ.

ಸುಮಾರು ಕ್ರಿ.ಶ. ೧೭೫೦ರ ಪೊತ್ತಿಗೆ 'ಬಸವ ವಿಜಯಮು' ಎಂಬ ಹೆಸರಿನ ಎರಡು ಕಾವ್ಯಗಳು ರಚಿತವಾಗಿದೆ. ಒಂದು, ನಲ್ಲಗಂಡ್ಲ ನಾಗನಾರಾಧ್ಯನ ಮೂರು ಆಶ್ವಾಸಗಳ ದ್ವಿಪದಕಾವ್ಯ; ಮತ್ತೊಂದು, ತುಮ್ಮಲಪಲ್ಲಿ ನಾಗಭೂಷಣ ಕವಿಯ ಮೂರು ಆಶ್ವಾಸಗಳ ಚಂಪೂಕಾವ್ಯ. ಇವೆರಡೂ ಒಂದು ಇನ್ನೊಂದರ ಅನುಸರಣೆ: ಆದರೆ ಯಾರು ಯಾರನ್ನು ಅನುಸರಿಸಿದ್ದಾರೋ ತಿಳಿಯುವುದಿಲ್ಲ. 'ಬಸವ

---

೨೯. ಆರುದ್ರ : 'ಸಮಗ್ರ ಆಂಧ್ರ ಸಾಹಿತ್ಯಂ', ಸಂ. ೭ (ಮೊದಲ ಮುದ್ರಣ) : ಪು ೨೯೭

ವಿಜಯಮು'ವಿನ ಕತೆಯನ್ನು ಪ್ರತಾಪರುದ್ರನಿಗೆ ನಿರೂಪಿಸಿದಂತೆಯೇ ತಾನು ರಚಿಸುತ್ತಿರುವುದಾಗಿ ಕವಿ ಹೇಳುತ್ತಾನೆ. ವೇದವಿರುದ್ಧವಾದ ಶೈವಮತವನ್ನು ಪ್ರಚಾರ ಮಾಡಿದ ಪಾಲ್ಕುರಿಕೆ ಸೋಮನಾಥನ ಮೇಲಿನ ದೂರಿನಿಂದ ಪ್ರತಾಪರುದ್ರನು ಅವನಿಗೆ ಹೇಳಿಕಳಿಸಿದನಂತೆ. ಅವನು ತನ್ನ ಪರವಾಗಿ ಮಡಿವಾಳ ಮಾಚಯ್ಯನನ್ನು ಕಳಿಸಿ ವಾದದಲ್ಲಿ ಬ್ರಾಹ್ಮಣರನ್ನು ಸೋಲಿಸುವಂತೆ ಮಾಡಿದನಂತೆ. ಆಗ ದೈವಗಳಲ್ಲೆಲ್ಲ ಸದಾಶಿವನೇ ರಾಜ ಎಂದು ಒಪ್ಪಿ ರಾಜನು ಅವನನ್ನು ಗೌರವಿಸಿದನಂತೆ. ಆ ಕತೆ ಕಾವ್ಯದ ಪ್ರಾರಂಭದಲ್ಲಿದೆ. ಈ ಭಾಗದ ಜೊತೆಗೆ ಶಿಲಾದನ ತಪಸ್ಸು, ಬಸವ ಚರಿತ್ರೆ, ತಾಮ್ರಪಟದಲ್ಲಿನ ಲಿಪಿಯನ್ನು ಬಸವನು ಓದಿ ಹೇಳಿದುದು, ಶಿವನ ಕಣ್ಣಿನ ಬೆಂಕಿಯಿಂದ ಮನ್ಮಥ ಸುಟ್ಟದ್ದು, ಕುಮಾರಸ್ವಾಮಿಯ ಜನನ, ಚೆನ್ನಬಸವಣ್ಣನ ಜನನ – ಇಷ್ಟು ಭಾಗ ಮೊದಲ ಆಶ್ವಾಸದ ವಸ್ತು. ಸೌರಾಷ್ಟ್ರರಾಜನ ಕತೆ. ಮಿಂಡಜಂಗಮರ ಕತೆ, ವಿಚಿತ್ರ ವ್ಯಾಧಿಗಳುಂಟಾದುದು ಮುಂತಾದವು ಎರಡನೆಯ ಆಶ್ವಾಸದಲ್ಲಿವೆ. ಬಿಜ್ಜಳನ ಚರಿತ್ರೆ, ಬಸವನ ಮಹಾತ್ಮೆಯನ್ನು ಕೇಳಿ ಚೋಳರಾಜನು ಅವನ ಭಕ್ತನಾದದ್ದು, ಅವನು ಕೈಲಾಸಕ್ಕೆ ಹೋದದ್ದು, ಚಾಮಂತಿರಾಜನ ಕತೆ, ಬೊಲ್ಲನಾಯನಾರು ಕತೆ, ಶ್ರೀಶೈಲ ಮಾಹಾತ್ಮ್ಯ ಮುಂತಾದವು ಮೂರನೆಯ ಆಶ್ವಾಸದಲ್ಲಿ ಬಂದಿದೆ. ಈ ಎರಡೂ ಕಾವ್ಯಗಳಲ್ಲಿ ಪಾಲ್ಕುರಿಕೆ ಸೋಮನಾಥನ ಸ್ಮರಣೆಯಿದೆ. ಆದರೆ ಬಸವಣ್ಣನ ಕತೆ ಬೇರೆಯ ರೀತಿಯಲ್ಲಿದೆ.

ಸೋಮನಾಥನನಲ್ಲಿರುವಂತೆ ಶಿಲಾದನ ತಪಸ್ಸು, ನಂದಿಕೇಶ್ವರನ ಜನನ ಈ ಭಾಗಗಳು ಇಲ್ಲಿಯೂ ಇವೆ. ಆದರೆ ಮುಂದೆ ಬೇರೆಯ ರೀತಿ. ನಂದೀಶ್ವರನು ಅನಿಮಿಷಯ್ಯನಿಗೆ ಲಿಂಗವನ್ನಿತ್ತು ಕೈಲಾಸಕ್ಕೆ ತೆರಳುತ್ತಾನೆ. ಆದರೆ ಕೈಲಾಸದ ದ್ವಾರಪಾಲಕರು ಆತನನ್ನು ತಡೆಯುತ್ತಾರೆ. ನಂದಿಯು ಲಿಂಗವಿಲ್ಲದೆ ಭವಿಯಾಗಿರುವನೆಂದು ದ್ವಾರಪಾಲಕರು ಶಿವನಲ್ಲಿ ದೂರುತ್ತಾರೆ. ನಂದಿಯನ್ನು ಭವಿಯೆಂದು ಭಾವಿಸಿದ ದ್ವಾರಪಾಲಕರಿಗೆ ಭೂಮಿಯಲ್ಲಿ ಭವಿಗಳಾಗಿ ಚಾಳುಕ್ಯ ವಂಶದಲ್ಲಿ ಹುಟ್ಟುವಂತೆ ಶಾಪವೀಯುತ್ತಾನೆ. ಹಾಗೆಯೇ 'ನೀವು ಆಳುವ ರಾಜ್ಯಕ್ಕೆ ಬಸವಣ್ಣನೆಂಬ ಹೆಸರಿನಿಂದ ನಂದಿಯೇ ಪ್ರಧಾನಿಯಾಗುತ್ತಾನೆ, ಎಂದೂ ಆಶ್ವಾಸನೆಯೀಯುತ್ತಾನೆ. ಕತೆಯು ಲಕ್ಕಣ್ಣದಂಡೇಶ, ಸಿಂಗಿರಾಜರ ಕಥಾನಿರೂಪಣೆಯಂತಿದೆ. ಅನೇಕ ಪವಾಡಗಳನ್ನು ಬಸವಣ್ಣನು ಮೆರೆದಂತೆ ಇಲ್ಲಿ ಚಿತ್ರಿತವಾಗಿದೆ.

ಇದರ ಆನಂತರದ ಕಾಲದಲ್ಲಿ ವೀರಸಂಗಯ್ಯನೆಂಬ ಕವಿಯು 'ಬಸವಪುರಾಣ ಸಾರಮು' ಎಂಬ ಮೂರು ಆಶ್ವಾಸಗಳ ಚಂಪೂಕೃತಿಯನ್ನು ರಚಿಸಿದ್ದಾನೆ. ಇದರಲ್ಲಿ ಪಾಲ್ಕುರಿಕೆ ಸೋಮನಾಥನ 'ಬಸವಪುರಾಣ'ವನ್ನು ಅನುಸರಿಸಿ, ಒಂದೊಂದು ಪದ್ಯದಲ್ಲಿ ಒಬ್ಬೊಬ್ಬ ಪುರಾತನನ ಕತೆಯನ್ನು ಹೇಳಲಾಗಿದೆ. ಆಶ್ವಾಸಾಂತ್ಯ ಗದ್ಯದಲ್ಲಿ ಕವಿಯು ಸೋಮನಾಥನನ್ನು ಸ್ಮರಿಸುತ್ತಾನೆ. ಅಲ್ಲದೆ ಗ್ರಂಥದ ಪ್ರಾರಂಭದಲ್ಲಿ ಹರಿಹರ, ರಾಘವಂಕ, ಚಿಕ್ಕನಂಜೇಶ, ಕೆರೆಯ ಪದ್ಮರಸ, ವಿರೂಪಾಕ್ಷ ಪಂಡಿತ – ಈ ಕನ್ನಡ ಕವಿಗಳನ್ನು ನೆನೆದಿದ್ದಾನೆ.

ಶರಣ ದ್ರೋಹಮು ಚೇಸಿನಟ್ಟಿ ಬಮುದಾಚಾರುಂಡುನ್ನೈ ಬಿಜ್ಜಲೋ
ದ್ಧರನಾಥಾತ್ಮುಲ ದ್ರುಂತಮಂಚು ಜಗದೇವೈಶ್ವರ್ಯುನಿಂಗೂಡಿ ತ
ತ್ಪರಿವಾರಮಬುಲ ತೋಡ ಸಂಹರಣಮೊಪ್ಪಂಜೇಯು ಶ್ರೀಮಲ್ಲ ಬ್ರ
ಹ್ಮ ರಜೋಯುಕ್ತ ಪದದ್ವಯಂಬುಲ ಧರಿಂತುನ್ನೈ ಲಲಾಟಂಬುನನ್

ಎಂದು ಬಿಜ್ಜಳನ ಕೊಲೆಗೆ ಜಗದೇವ–ಮಲ್ಲಬ್ರಹ್ಮಯ್ಯರನ್ನು ಬಸವಣ್ಣನು ಪ್ರೇರೇಪಿಸಿದನೆಂದು ಈ ಕವಿಯು ಸ್ಪಷ್ಟವಾಗಿ ಹೇಳುತ್ತಾನೆ.[೩೦]

ಇವುಗಳಲ್ಲದೆ, ಬಸವಣ್ಣನನ್ನು ಕುರಿತ ಇನ್ನೂ ಕೆಲವು ತೆಲುಗು ಕೃತಿಗಳಿವೆ. ವೇಲಾಲ ವೀರಭದ್ರ ಕವಿಯೆಂಬುವನು ಪಾಲ್ಕುರಿಕೆ ಸೋಮನಾಥನನ್ನು ಅನುಸರಿಸಿ ಸೀಸಪದ್ಯಗಳಲ್ಲಿ 'ಬಸವಪುರಾಣ'ವನ್ನು ಬರೆದಿದ್ದಾನೆ. ಇದು ಅಸಮಗ್ರವಾಗಿದೆ.[೩೧] 'ಬಸವಕಲ್ಯಾಣಮು' ಎಂಬ ಯಕ್ಷಗಾನವೊಂದನ್ನು ಅನುಮೋದ ಸಂನ್ಯಾಸಿ ಕವಿಯೆಂಬುವನು ಬರೆದಂತೆ ತೋರುತ್ತದೆ. ಹೆಸರನ್ನು ಗಮನಿಸಿದರೆ ಬಸವಣ್ಣನ ವಿವಾಹವು ಇದರಲ್ಲಿ ಚಿತ್ರಿತವಾಗಿದೆಯೆನಿಸುತ್ತದೆ. 'ಬಸವ ಮಹಿಮಾಮೃತ ವಿಲಾಸಮು' ಎಂಬ ಇನ್ನೊಂದು ಯಕ್ಷಗಾವನ್ನು ಕನೂರಿ ವರವೀರಭದ್ರಕವಿಯೆಂಬುವನು ರಚಿಸಿದ್ದಾನೆ.[೩೨] ಈ ಶತಮಾನದ ಪ್ರಾರಂಭದಲ್ಲಿ ಬ್ರಹ್ಮಶ್ರೀ ಪೂಡಿಪೆದ್ದಿ ಲಿಂಗಮೂರ್ತಿ ಪಂತುಲು ಸೋಮನಾಥ ಹಾಗೂ ಪಿಡುಪರ್ತಿ ಸೋಮನರನ್ನು ಅನುಸರಿಸಿ 'ಬಸವಪುರಾಣಮು' (ವಚನ ಕಾವ್ಯಮು)' ಎಂಬ ಕೃತಿಯೊಂದನ್ನು ರಚಿಸಿದ್ದಾನೆ. ಒಟ್ಟಾರೆ ಪಾಲ್ಕುರಿಕೆ ಸೋಮನಾಥನು ತೆಲುಗಿನಲ್ಲಿ ಬಸವಪುರಾಣದ ಆದ್ಯ ಕವಿಯಾಗುವುದರ ಜೊತೆಗೆ ಈಚಿನವರೆಗೂ ತನ್ನ ದಟ್ಟವಾದ ಪ್ರಭಾವವನ್ನು ಬೀರಿದ ಪ್ರಮುಖ ಕವಿಯಾಗಿದ್ದಾನೆ.

ಈಗ ಬಸವಣ್ಣನ ಕತೆಯು ಇತರರ ಚರಿತ್ರೆಗಳಲ್ಲಿ ಪ್ರಾಸಂಗಿಕವ ಆಗಿ ಚಿತ್ರಿತವಾದ ರೀತಿಯನ್ನು ಸ್ಥೂಲವಾಗಿ ಗಮನಿಸಬಹುದು. ಪಾಲ್ಕುರಿಕೆ ಸೋಮನಾಥನ ಮತ್ತೊಂದು ದ್ವಿಪದ ಕಾವ್ಯವೆಂದರೆ 'ಪಂಡಿತಾರಾಧ್ಯ ಚರಿತ್ರ'. ಶ್ರೀಶೈಲದಲ್ಲಿನ ಶಿವತತ್ವಗೋಷ್ಠಿಯ ಕಾಲದಲ್ಲಿ ಮಾಹೇಶ್ವರರು ಪಂಡಿತಯ್ಯನ ಕತೆಯನ್ನು ಬರೆಯಲು ಹೇಳಿದರಂತೆ. ಅದಕ್ಕನುಗುಣವಾಗಿ ೧೧,೮೧೦ ದ್ವಿಪದಗಳಲ್ಲಿ ಐದು ಪ್ರಕರಣಗಳ ಈ ಕಾವ್ಯವನ್ನು ಸೋಮನಾಥನು ಬರೆದನಂತೆ. ಮಲ್ಲಿಕಾರ್ಜುನ ಪಂಡಿತಾರಾಧ್ಯನು ಅವನನ್ನು ಕಾಣಲು ತನ್ನ ಇಳಿವಯಸ್ಸಿನಲ್ಲಿ ಕಲ್ಯಾಣದೆಡೆಗೆ ಬರುವಾಗ, ಬಸವಣ್ಣ ಆಗಲೇ ಶಿವೈಕ್ಯನಾದ ವಿಷಯವನ್ನು ಮಾರ್ಗಮಧ್ಯದಲ್ಲೇ ತಿಳಿದು ದುಃಖಿಸಿ ಶ್ರೀಶೈಲದೆಡೆಗೆ ಹೋದನಂತೆ. ಈ ಕಾವ್ಯದಲ್ಲಿಯೂ ಪಂಡಿತಾರಾಧ್ಯನ ಚರಿತ್ರಯೊಡನೆ

---

೩೦. ಜಾಡಾಲ ರಾಮಯ್ಯ : 'ಬಸವ ವಚನಾಲು : ಸಮಗ್ರ ಸಮೀಕ್ಷೆ', ಪು. ೪೯೨

೩೧. ಅದೇ : ಪು. ೪೯೩.

೩೨. Bandaru Thammaiah : 'Basavesvara in Telugu Literature' (Sri Basavesvara Commemoration Volume : p. ೪೩೫)

ಇತರ ಶಿವಭಕ್ತರ ಕತೆಗಳಿವೆ. ಬಸವಪುರಾಣದ ಕೆಲವು ಉಪಾಖ್ಯಾನಗಳೂ ಇಲ್ಲಿವೆ. ಈ ಕಾವ್ಯವನ್ನು ತೆಲುಗಿನ ಪ್ರಸಿದ್ಧ 'ಕವಿ ಶ್ರೀನಾಥನು ಚಂಪೂರೂಪದಲ್ಲಿ ಬರೆದಿರುವನಂತೆ; ಆದರೆ ಇದು ಉಪಲಬ್ಧವಿಲ್ಲ.

ಪಿಡುಪರ್ತಿ ಸೋಮನನು ಕನ್ನಡದಲ್ಲಿರುವ ಚಾಮರಸ 'ಪ್ರಭುಲಿಂಗಲೀಲೆ' ಯನ್ನು ದ್ವಿಪದದಲ್ಲಿ ರಚಿಸಿದ್ದಾನೆ. ಇದರಲ್ಲಿ ಬಸವಣ್ಣನ ಕತೆ ಬಂದಿದೆ. ಇಂಗುಳೇಶ್ವರ ಬಾಗೇವಾಡಿಯ ಮಾದರಸ–ಮಾದಾಂಬೆಯರ ಮಗನಾದ ಬಸವಣ್ಣನಿಗೆ ಆರಾಧ್ಯ ಸಂಪ್ರದಾಯದಂತೆ ಯಜ್ಞೋಪವೀತ–ಲಿಂಗಧಾರಣೆಗಳು ಒಟ್ಟಿಗೇ ಆದುವೆಂದು ಸೋಮನು ಚಿತ್ರಿಸುತ್ತಾನೆ.

ಅಜ್ಞಾತ ಲಿಪಿಯನ್ನೋದಿ ಬಿಜ್ಜಳನಿಗೆ ಹತ್ತುಕೋಟಿ ವರಹ ಬರುವಂತೆ ಮಾಡಿದ ಬಸವಣ್ಣನನ್ನು ಬಿಜ್ಜಳನು ತನ್ನ ಮಂತ್ರಿಯಾಗಿಸಿಕೊಳ್ಳುವುದು, ಪ್ರಭುದೇವರ ಆರೋಗಣೆ ಮುಂತಾದ ವಿಷಯಗಳು ಇಲ್ಲಿವೆ. ಈ ಕಾವ್ಯವನ್ನೇ ಪಿಡುಪರ್ತಿ ಸೋಮನನ ತಮ್ಮನ ಮಗನಾದ ಪಿಡುಪರ್ತಿ ರೆಂಡವ ಬಸವನ್ನ ಪದ್ಯಕಾವ್ಯವಾಗಿ ಬರೆದಿದ್ದಾನೆ. ಹಾಗೆಯೇ ಹದಿನೆಂಟನೆಯ ಶತಮಾನದಲ್ಲಿದ್ದ ಅಟ್ಟಲೂರಿ ಪಾಪಯಾಮಾತ್ಯನು ಕನ್ನಡದ ವಿರೂಪಾಕ್ಷಪಂಡಿತನ 'ಚೆನ್ನಬಸವ ಪುರಾಣ'ವನ್ನು ತೆಲುಗಿನಲ್ಲಿ ಚಂಪೂಕಾವ್ಯವಾಗಿ ರಚಿಸಿದ್ದಾನೆ.

ಮೂರನೆಯದಾಗಿ ಬಸವಸ್ತುತಿಯಿಂದ ಕೂಡಿದ ತೆಲುಗು ರಚನೆಗಳನ್ನು ಗಮನಿಸಬಹುದು. ಮಲ್ಲಿಕಾರ್ಜುನ ಪಂಡಿತಾರಾಧ್ಯನು ತೆಲುಗಿನಲ್ಲಿ 'ಶಿವತತ್ವಸಾರಮು' ಎಂಬ ಗ್ರಂಥವನ್ನು ಬರೆದಿದ್ದಾನೆ. ಅದರಲ್ಲಿ ಮೂರು ಕಂದಪದ್ಯಗಳಲ್ಲಿ ಬಸವಣ್ಣನ ಸ್ತುತಿಯಿದೆ:

ಅಸಮೇಕ್ಷಣ ಶಿವಭಕ್ತುಂ
ಡಸಮ ಶ್ರೇಷ್ಠುಡನಿ ಪಲಿಕಿ ಅನ್ಯುಲತೋಡನ್।
ಬೊಸವೋರ್ರೈ ಬಂಡಾರುಪು
ಬಸವಡು ವಿಸಮೆತ್ತಿ ತ್ರಾವಿ ವ್ರತುಕಡೆ ರುದ್ರಾ॥
ವಸುಧನುಮೇಶುಡು ದೈವವು
ಪ್ರಸಾದಮು ಪವಿತ್ರಮೀಶು ಭಕ್ತುಲೆಕುಲಜಾಲ್।
ಪೊಸವೋರ್ರೈ ಬಂಡಾರಪು
ಬಸವನ ವಿಸಮೆತ್ತಿ ತ್ರಾವಿ ಬ್ರತುಕಡೆ ರುದ್ರಾ॥
ಕುಸುಮಶರಾರೀ, ಶಿವಲಿಂ
ಗಸಮೇತುಲು ದಕ್ಕ ಬೊಂದಗಾದನಿ ನಿರ್ಮಾ॥
ಲ್ಯ ಸುಕಂಬನಿ ಬಂಡಾರಪು
ಬಸವನ ವಿಸಮೆತ್ತಿ ತ್ರಾವಿ ಬ್ರತುಕಡೆ ರುದ್ರಾ॥

ಇಲ್ಲಿ ಬಸವನು ವಿಷಕುಡಿದ ಪವಾಡದ ಉಲ್ಲೇಖವಿದೆ.

ಪಾಲ್ಕುರಿಕೆ ಸೋಮನಾಥನೇ ಬಸವನನ್ನು ತನ್ನ ಅನೇಕ ಚಿಕ್ಕ ಕೃತಿಗಳಲ್ಲಿ ಸ್ತುತಿಸಿದ್ದಾನೆ. 'ಶರಣು ಬಸವಗದ್ಯ'. 'ಬಸವಾಷ್ಟಕ' 'ಬಸವೋದಾಹರಣ' 'ವೃಷಾಧಿಪ ಶತಕ' –ಇವುಗಳನ್ನು ಹೆಸರಿಸಬಹುದು. 'ವೃಷಾಧಿಪಶತಕ'ದಲ್ಲಿ ಪ್ರತಿಪದ್ಯವೂ 'ಬಸವ ಬಸವಾ ಬಸವಾ ವೃಷಾಧಿಪ' ಎಂದು ಕೊನೆಗೊಳ್ಳುತ್ತದೆ. 'ಚತುರ್ವೇದಸಾರ' ಎಂಬುದು ಸೀಸಪದ್ಯಗಳ ರಚನೆ; 'ಬಸವಲಿಂಗ' ಎಂಬ ಮುದ್ರಿಕೆ ಪ್ರತಿಪದ್ಯದ ಕೊನೆಯಲ್ಲಿರುತ್ತದೆ. ಶ್ರೀನಾಥನು ತನ್ನ 'ಹರವಿಲಾಸಮು' ಎಂಬ ಕಾವ್ಯದಲ್ಲಿ ಬಸವಣ್ಣನನ್ನು ಈ ರೀತಿ ಸ್ಮರಿಸಿದ್ದಾನೆ:

ಕಲಿಯುಗಂಬುನ ಗಲ್ಯಾಣ ಕಟಕ ನಗರಿ
ನಾಡುಭಕ್ತುಂಡು ಬಸುವರನಾಥುಡೊಕಡು

ಎಂದು ಶಿವನು ಪಾರ್ವತಿಗೆ ಹೇಳುತ್ತಾನಂತೆ. ಸಿರಿಯಾಳನ ಕತೆಯನ್ನು ಹೇಳುವಾಗ ಶ್ರೀನಾಥನು, ಬಸವನೂ ಅಂತಹ ಭಕ್ತನೇ ಎಂದು ವರ್ಣಿಸುತ್ತಾನೆ. ಪೋತನನು ತನ್ನ 'ವೀರಭದ್ರ ವಿಜಯಮು'ವಿನಲ್ಲಿ 'ಸಿರಿಯಾಲು ಗರಿಗಾಲು ಚೇರಮನುದ್ಭಟು ಬಾಣು ಕೇಶವರಾಜು ಬಸವರಾಜು' ಎಂದು ಪ್ರಾರಂಭಿಸಿ ಅನೇಕ ಶಿವಭಕ್ತರೊಡನೆ ಬಸವಣ್ಣನ್ನು ನೆನೆಸಿಕೊಳ್ಳುತ್ತಾನೆ. ಅಜ್ಞಾತ ಕವಿಯೊಬ್ಬನ 'ಬಸವಲಿಂಗ ಶತಕಮು' ಎಂಬ ಹಸ್ತಪ್ರತಿಯಲ್ಲಿ ಅರವತ್ತೈದು ಸೀಸಪದ್ಯಗಳಿವೆಯಂತೆ, ಇದರ ಪ್ರತಿ ಪದ್ಯದ ಕೊನೆಗೆ 'ಕಲಿತ ಸಜ್ಜನ ಸತ್ಸಂಗ ಕಾರಣಾಂಗ ಪಟುದಯಾದಸಾಂದ್ರ ಶ್ರೀಗುರುಬಸವಲಿಂಗ' ಎಂಬ ಮುಕುಟವಿದೆ.[೩೩] ಕಳೆದ ಶತಮಾನದಲ್ಲಿ ಬರೆದಿದ್ದಾನೆಂದು ಬಂಡಾರು ತಮ್ಮಯ್ಯನವರು ಹೇಳುವುದು ಇದನ್ನು ಕುರಿತೇ ಎಂದು ಕಾಣುತ್ತದೆ.[೩೪] ಪಾಲ್ಕುರಿಕೆ ಸೋಮನಾಥನನ್ನು ಅನುಕರಿಸಿ, ಪೆನುಮಾಚ್ಚ ಮಹಾದೇವ ಕವಿಯು 'ಬಸವಾ ಬಸವಾ ಬಸವಾ ವೃಷಾಧಿಪ' ಎಂದೇ ಮಕುಟವುಳ್ಳ ಶತಕವೊಂದನ್ನು ಬರೆದು ಪ್ರಕಟಿಸಿರುವನೆಂದೂ ಅವರು ಹೇಳುತ್ತಾರೆ.

ಒಟ್ಟಾರೆ, ತೆಲುಗಿನಲ್ಲಿ ಬಸವ ಹಾಗೂ ವೀರಶೈವವನ್ನು ಕುರಿತಾದ ಸಾಹಿತ್ಯವು ಗಣನೀಯ ಪ್ರಮಾಣದಲ್ಲಿದೆ. ಪಾಲ್ಕುರಿಕೆ ಸೋಮನಾಥನಿಂದ ಪ್ರಾರಂಭವಾದ ಈ ಸಾಹಿತ್ಯವು ದೀರ್ಘವಾಗಿ ಬೆಳೆದರೂ ಅವನೇ ಇಂದಿಗೂ ಕನ್ನಡ – ತೆಲುಗು ಎರಡು ಭಾಷೆಗಳಲ್ಲೂ ಪರಂಪರೆಯ ನಿರ್ಮಾಪಕನೆಂಬ ಹೆಗ್ಗಳಿಕೆ ಪಾತ್ರನಾಗಿದ್ದಾನೆ.

*(ಕರ್ನಾಟಕ ವಿಶ್ವವಿದ್ಯಾಲಯದ ವಿಚಾರ ಸಂಕಿರಣ, ೧೯೯೪)*

---

೩೩. ಬಾಡಾಲ ರಾಮಯ್ಯ : 'ಬವೇಶ್ವರ ವಚನಾಲು : ಸಮಗ್ರ ಸಮೀಕ್ಷೆ' : ಪು. ೪೯೪

೩೪. ಬಂಡಾರು ತಮ್ಮಯ್ಯ : 'Basavesvara in Telugu Liturature'(sri Basavesvara Commemoration Volume : p ೪೩೫)

## 'ಬಸವಪುರಾಣಮು' ಮತ್ತು ತೆಲುಗು ಸಂಸ್ಕೃತಿ

ನನ್ನಯ್ಯನ ನಂತರ ತಿಕ್ಕನನವರೆಗೆ ಸುಮಾರು ಒಂದೂವರೆ ಶತಮಾನದ ಕಾಲಖಂಡವನ್ನು ತೆಲುಗು ಸಾಹಿತ್ಯ ಚರಿತ್ರೆಯಲ್ಲಿ 'ವೀರಶೈವ ಯುಗ' ಎಂದೇ ಗುರುತಿಸುವ ಪರಿಪಾಠವಿದೆ. ಆದರೆ ಆಗಿನ ಪ್ರಭಾವದ ನೆರಳಿನಲ್ಲಿ ಈಚಿನವರೆಗೂ ಕೃತಿಗಳು ರಚಿತವಾಗಿವೆ. ಈ ಪ್ರಭಾವವು ವಿಶೇಷವಾಗಿ ಪಾಲ್ಕುರಿಕೆ ಸೋಮನಾಥನದು ಎಂದೂ ಹೇಳಬಹುದು. ಹೀಗಾಗಿ ಈತನಿಗೆ ತೆಲುಗಿನಲ್ಲಿ ವಿಶೇಷ ಸ್ಥಾನವಿದೆ. ಇಷ್ಟಾದರೂ ಈತನ ಜೀವಿತ ಕಾಲದ ಬಗ್ಗೆ ಖಚಿತ ಅಭಿಪ್ರಾಯವಿಲ್ಲ. ಆದರೆ ಇವನು ಹದಿಮೂರನೆಯ ಶತಮಾನದ ಉತ್ತರಾರ್ಧದಲ್ಲಿ ಬದುಕಿದ್ದವನು ಎಂಬುದಕ್ಕೆ ಹೆಚ್ಚು ಬೆಂಬಲವಿದೆ. ಕೆಲವರು ಸೋಮನಾಥನು ಕನ್ನಡದ ಹರಿಹರನಿಗಿಂತ ಮುಂಚಿನಬನೆಂದು ವಾದಮಾಡುತ್ತಾರೆ. ಆದರೆ ಹರಿಹರನು ಕ್ರಿ.ಶ. ೧೨೨೦ರ ಹೊತ್ತಿಗೆ ಕ್ರಿಯಾಶೀಲನಾಗಿದ್ದನೆಂದು ವಿದ್ವಾಂಸರು ಭಾವಿಸುವುದರಿಂದ ಸೋಮನಾಥನು ಹರಿಹರನಿಗಿಂತ ಈಚಿನವನೆಂದು ಭಾವಿಸಬಹುದು.

ಹರಿಹರನು ಬಸವಾದಿಗಳಿಗೆ ಕಾಲದ ದೃಷ್ಟಿಯಿಂದಲೂ ಸಂಸ್ಕೃತಿಯ ದೃಷ್ಟಿಯಿಂದಲೂ ಭೌಗೋಳಿಕತೆಯ ದೃಷ್ಟಿಯಿಂದಲೂ ಸೋಮನಾಥನಿಗಿಂತ ಹೆಚ್ಚು ಸಮೀಪದಲ್ಲಿದ್ದವನು. ಅವನು ರಚಿಸಿದ ಪುರಾತನರ ಹಾಗೂ ವಿವಿಧ ನೂತನ ಶರಣರ ರಗಳೆಗಳು ಅನೇಕ ಬಗೆಯಲ್ಲಿ ಸೋಮನಾಥನ ಮೇಲೆ ಪ್ರಭಾವ ಬೀರಿರುವಂತೆ ತೋರುತ್ತದೆ. ನಾನಾ ಶರಣರ ಕತೆಗಳನ್ನು ಬಸವಣ್ಣನ ಕತೆಯ ಸುತ್ತ ಹೆಣೆದು ಒಂದು ಬಗೆಯ ಸಮಗ್ರತೆಯನ್ನು ಸಾಧಿಸಲು ಆತ ಪ್ರಯತ್ನಿಸಿದಂತೆ ತೋರುತ್ತದೆ. 'ಪೂರಿತವಾಗೊಪ್ಪುವಾ ಮಣಿಗಳಲಿ ದಾರದಂತೆಯೆ ಪುರಾತನಭಕ್ತವಿತತಿ ಚರಿತೆಗಳ ಸೇರಿಸುತ್ತ ಬಸವನ ಚರಿತೆಯ ವರ್ಣಿಪೆ ಸತ್ಕೃತಿಯೆನಿಸೆ, (I.೧೮೧-೪) ಎಂದು ಹೇಳುವ ಸೋಮನಾಥನ ಮಾತುಗಳಲ್ಲಿ ಈ ಅರ್ಥವೇ ಇದ್ದಂತಿದೆ. ಬಸವಾದಿಗಳ ಜನಪರ ಧೋರಣೆಯಿಂದಾಗಿ ಅಭಿವ್ಯಕ್ತಿಯೂ ಆಡು ಕನ್ನಡಕ್ಕೆ ಹತ್ತಿರವಾಯಿತು. ಆ ಪ್ರಭಾವದಿಂದಲೇ ಹರಿಹರನು ವಸ್ತುವಿನಲ್ಲಿ ಮಾತ್ರವಲ್ಲದೆ, ಶೈಲಿ-ಛಂದಸ್ಸುಗಳಲ್ಲಿಯು, ಧಾಟಿ-ಧೋರಣೆಗಳಲ್ಲಿಯೂ ಸಾಮಾನ್ಯತೆಯನ್ನು ಅಂಗೀಕರಿಸಿದ. ಆದ್ದರಿಂದಲೇ ಆವರೆಗೆ ಕ್ವಚಿತ್ತಾಗಿ ಬಳಕೆಯಲ್ಲಿದ್ದ ರಗಳೆಯನ್ನು ತನ್ನ ಕಾವ್ಯಗಳ ಪ್ರಮುಖ ಛಂದಸ್ಸನ್ನಾಗಿಸಿದ. ಭಾಷಿಕ ನೆಲೆಯಲ್ಲಿಯೂ ಆತ ಕೆಲವು ವ್ಯತ್ಯಾಸಗಳನ್ನು ತಂದು ಕ್ರಾಂತಿಕಾರನೆನಿಸಿದ. ಸೊಮನಾಥ ಇದೇ ಬಗೆಯಲ್ಲಿ

ತೆಲುಗು ಸಾಹಿತ್ಯದಲ್ಲಿ ಮಾರ್ಪಾಟುಗಳನ್ನು ತಂದ. 'ಮುದಿ ಲಂಜ' (ಮುದಿ ಸೂಳೆ) ಎಂಬ ತಿರಸ್ಕಾರಕ್ಕೆ ಒಳಗಾಗಿದ್ದ ದ್ವಿಪದ ಛಂದಸ್ಸನ್ನು ತನ್ನ ದೀರ್ಘಕಾವ್ಯಗಳಲ್ಲಿ ಬಳಸಿ ಅದಕ್ಕೊಂದು ಮರ್ಯಾದೆಯ ಸ್ಥಾನವನ್ನು ತಂದುಕೊಟ್ಟ. ಈ ಬಗ್ಗೆ ಆರುದ್ರ ಅವರು ಎತ್ತಿರುವ ಉದ್ಗಾರವನ್ನು ಕೇಳಿ: "ತೆಲುಗು ಉದ್ಯಾನವನದಲ್ಲಿ ಮೊದಲ ಕೋಗಿಲೆಯು ಕಂಠವೆತ್ತಿ ತೆಲುಗಿನವರಿಗಾಗಿ, ತೆಲುಗು ಛಂದಸ್ಸಿನಲ್ಲಿ ಹಾಡುಗಳನ್ನು ಹಾಡಿತು. ಆ ಕೋಗಿಲೆಯ ಹೆಸರು ಪಾಲ್ಕುರಿಕೆ ಸೋಮನಾಥ, ಆತ ಹಾಡಿದ ತೆಲುಗು ಛಂದಸ್ಸಿನ ಹೆಸರು ದ್ವಿಪದ. ತೆಲುಗು ಸಮುದಾಯ ಆತನಿಗಿತ್ತ ದಿವ್ಯಾಯುಧ ಈ ದ್ವಿಪದ. ತೆಲುಗು ಸಮುದಾಯಕ್ಕೆ ಆತನಿತ್ತ ದೊಡ್ಡ ಕಾಣಿಕೆಯೂ ಈ ದ್ವಿಪದವೇ. ಪಾಲ್ಕುರಿಕೆ ಸೋಮನಾಥನು ಹುಟ್ಟದೇ ಹೋಗಿದ್ದರೆ ತೆಲುಗರಿಗೆ ಯಾವ ಛಂದಸ್ಸೂ ಇಷ್ಟು ಒಪ್ಪುತ್ತಿರಲಿಲ್ಲವೇನೋ. ಪ್ರಜೆಗಳಿಗಾಗಿ ಆತ ಹುಟ್ಟಿದ; ಪ್ರಜೆಗಳೇ ಆತನನ್ನು ಅಮರಕವಿಯಾಗಿಸಿದ್ದಾರೆ". ('ಸಮಗ್ರ ಆಂಧ್ರ ಸಾಹಿತ್ಯಂ', ಎರಡನೇ ಸಂಪುಟ, ೧೯೮೯: ಪು. ೧೯೨).

ವಿಚಿತ್ರವೆಂದರೆ ಆಂಧ್ರದ ಸೋಮನಾಥನು ರಚಿಸಿದ 'ಬಸವಪುರಾಣಮು' ತೆಲುಗಿನಲ್ಲಿ ಛಂದಸ್ಸಿನ ವಿಚಯದಲ್ಲಿ ವ್ಯಾಪಕ ಪ್ರಭಾವವನ್ನು ಬಿರಿದರೂ ; ಕಾವ್ಯವಿಷಯದಲ್ಲಿ ಕನ್ನಡದ ಮೇಲೆ ಹೆಚ್ಚು ಪ್ರಭಾವವನ್ನುಂಟುಮಾಡಿತು. ಹರಿಹರನ ರಗಳೆಯ ಜಾಡನ್ನು ಕನ್ನಡದ ಆನಂತರದ ಕವಿಗಳು ಅನುಸರಿಸಿದ್ದು ಕಡಿಮೆ. (ಹಾಗೆ ನೋಡಿದರೆ ಅವನ ಪ್ರಭಾವ ಇಪ್ಪತ್ತನೆಯ ಶತಮಾನದಲ್ಲಿ ಸರಳರಗಳೆಯು ತಲೆಯೆತ್ತುವ ಮೂಲಕ ಕಾಣಿಸಿಕೊಂಡಿತು). ಅಂತೆಯೇ ಆತನ ಬಸವರಾಜದೇವರ ರಗಳೆಯ ಮಾದರಿ ಕಾವ್ಯಗಳು ಕನ್ನಡದಲ್ಲಿ ಬರಲೇ ಇಲ್ಲ. ಸೋಮನಾಥನ ವಿಷಯ ಹಾಗಲ್ಲ, ಅವನ್ನು ಎತ್ತಿ ನಿಲ್ಲಿಸಿದ ದ್ವಿಪದ ಛಂದಸ್ಸಿನಲ್ಲಿ ತೆಲುಗು ಭಾಷೆ ನೂರಾರು ಕೃತಿಗಳನ್ನು ಕಂಡಿತು. 'ದ್ವಿಪದ ವಾಙ್ಮಯಮು' ಎಂಬ ತಮ್ಮ ಕೃತಿಯ ಅನುಬಂಧದಲ್ಲಿ ಡಾ. ಜೆ. ನಾಗಯ್ಯನವರು ಇನ್ನೂರ ನಲವತ್ತೈದು ದ್ವಿಪದ ಛಂದಸ್ಸಿನ ಕೃತಿಗಳ ಪಟ್ಟಿಯನ್ನು ನೀಡುತ್ತಾರೆ. ಇನ್ನು ವೀರಶೈವ ಪುರಾಣಗಳು ಕನ್ನಡದಲ್ಲಿ ಅನುಸರಿಸಿದ್ದು ಸೋಮನಾಥನನ್ನೇ; ಅವನ ಬಗ್ಗೆ ಕನ್ನಡದಲ್ಲಿ ಅನೇಕ ಕಾವ್ಯಗಳು ಗೌರವಪೂರ್ವಕವಾಗಿ ಸ್ತುತಿಸುತ್ತವೆ. ತೋಂಟದಾರ್ಯನು 'ಪಾಲ್ಕುರಿಕೆ ಸೋಮೇಶ್ವರಪುರಾಣ'ವನ್ನು ರಚಿಸಿರುವುದಲ್ಲದೆ, ಮರಿತೋಂಟದಾರ್ಯನ 'ಸಿದ್ದೇಶ್ವರಪುರಾಣ', ಪರ್ವತೇಶನ 'ಚತುರಾಚಾರ್ಯಪುರಾಣ', ಗುಬ್ಬಿ ಮಲ್ಲಣಾರ್ಯನ 'ವೀರಶೈವಾಮೃತ ಮಹಾಪುರಾನ' ಶಾಂತಲಿಂಗ ದೇಶಿಕನ 'ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ', ಇವುಗಳಲ್ಲಿ ಈತನ ಬಗ್ಗೆ ಐತಿಹ್ಯಗಳು ಚಿತ್ರಿತವಾಗಿದೆ.

ಛಂದಸ್ಸಿನಲ್ಲಿ ಅಲ್ಲದೆ ಭಾಷಾಶೈಲಿಗಳ ವಿಷಯದಲ್ಲಿ ಸೋಮನಾಥನು ತೆಲುಗಿನಲ್ಲಿ ಹಾಕಿದ ಹಾದಿ ಕ್ರಾಂತಿಕಾರವಾಗಿತ್ತು, ತನ್ನ ಕಾವ್ಯದ ಭಾಷೆಯನ್ನು "ಸರಸದಿ ಮೆರೆಯುವ ಜಾನುತೆಲುಗು" (ಸರಸಮ್ಮೈ ಪರಗಿನ ಜಾನು ತೆನುಗಿ)

ಎಂದು ಆತ ಘೋಷಿಸಿಕೊಳ್ಳುತ್ತಾನೆ. ಜಾನುತೆನುಗು ಏನನ್ನು ಸುಚಿಸುತ್ತದೆಂದು ಖಚಿತವಾಗಿ ಹೇಳುವಂತಿಲ್ಲ, 'ಜನು' ಎಂಬುದಕ್ಕೆ ಅಂದ, ಸೌಂದರ್ಯ ಎಂಬ ಅರ್ಥಗಳಿವೆ. ಸುಂದರವಾದ ತೆಲುಗು ಎಂದು ಅನ್ನಬಹುದಾಗಿತ್ತು. ನನ್ನೆ ಚೋಡನು ಆ ಮುಂಚೆಯೇ ಬಳಸಿದ್ದ ಜಾನುತೆನುಗು ಎಂಬ ಪದವನ್ನು ಪ್ರಸ್ತಾಪಿಸಿ "ಬಹುಶಃ ಜಾಣತನದಿಂದ ಕೂಡಿದ ತೆಲುಗು (ಜಾಣ್ನುಡಿ) ಜಾನು ತೆಲುಗು ಆಗಿರಬಹುದು" ಎಂದು ಆರ್ಬೀಯಸ್ ಸುಂದರಂ ಹೇಲುತ್ತಾರೆ. (ತೆಲುಗು ಭಾಷೆ ಮತ್ತು ಸಾಹಿತ್ಯ, ೧೯೮೨; ಪು. ೩೯). ಪ್ರಾಯಶಃ ಇದು ಕನ್ನಡದ 'ದೇಸಿ'ಗೆ ಪರ್ಯಾಯವಾಗಿದೆ. "ದೇಸಿಯನೆ ನಿರ್ಮಿಸಿದ" ಪೂರ್ವಾಚಾರ್ಯದ ಬಗ್ಗೆ ಕವಿರಾಜಮಾರ್ಗಕಾರನೇ ಹೇಳುತ್ತಾನೆ, ತನ್ನ ಕಾವ್ಯವು ಮುನ್ನಿನ ಕಾವ್ಯಗಳನ್ನು ಇಕ್ಕಿಮೆಟ್ಟಲು ಮುಖ್ಯವಾಗಿ 'ದೇಸಿ' ಕಾರಣವೆಂದು ಪಂಪ ಹೇಳಿಕೊಳ್ಳುತ್ತಾನೆ (ಪಂಪಭಾರತ, ೧೪.೬೨) 'ದೇಸಿ' ಎಂಬುದನ್ನು 'ಸಹಜಸೌಂದರ್ಯ' ಎಂಬರ್ಥದಲ್ಲಿ ಅನೇಕ ಕನ್ನಡ ಕವಿಗಳು ಬಳಸಿದ್ದಾರೆ (ಕನ್ನಡ ಸಾಹಿತ್ಯ ಪರಿಷತ್ತಿನ ಕನ್ನಡ ನಿಘಂಟು, IV. ಪು. ೪೦೬೮) ಜಾನು ಎಂಬುದು ಹೀಗಾಗಿ ದೇಸಿಯೇ ಆಗಿದೆ. ಬಸವನ ಅಸೀಮಭಕ್ತರಾದ ಹರಿಹರ-ಸೋಮನಾಥರಿಗೆ ಜಡತ್ವದ ಸಂಕೇತವಾದ ಸಂಸ್ಕೃತವನ್ನು ಬಿಟ್ಟು ಆಡುಮಾತನ್ನು ಬಳಸುವುದು ಸಹಜವಾಗಿತ್ತು. ಹರಿಹರ ಕನ್ನಡದ ಮಹತ್ವದ ಬಗ್ಗೆ ನೇರವಾಗಿ ಏನೂ ಹೇಳುವುದಿಲ್ಲ. ಆದರೆ ಸೋಮನಾಥ ಅವನಿಗಿಂತ ಒಂದು ಹೆಜ್ಜೆ ಮುಂದೆ. 'ಗದ್ಯಪದ್ಯೋಕ್ತಿ'ಗಿಂತ (ಚಂಪೂ) ದ್ವಿಪದವನ್ನು ಆರಿಸಿಕೊಂಡ ಆತ ತೆಲುಗಿನ ತನ್ನ ದ್ವಿಪದಗಳು ವೇದೋಕ್ತಿಗಳಿಗೆ ಸಮ (ತೆಲುಗು ಮಾಟಲನಂಗವಲದು, ವೇದಮುಲ ಕೊಲದಿಯಕಾ ಜೂಡು) ಎಂದು ಎದೆತಟ್ಟಿ ಹೇಳುತ್ತಾನೆ. ಈ ಧೋರಣೆಯು ಬಸವಾದಿಗಳದ್ದೇ, ಹರಿಹರ ಅನುಸರಿಸಿದ್ದೇ ಆಗಿದೆ.

ಹರಿಹರನಿಗಿಂತ ಸೋಮನಾಥ ಆವೇಶಶಾಲಿ. ಹದಿಮೂರನೆಯ ಶತಮಾನದ ಕೊನೆಯ ಹೊತ್ತಿಗೆ ಆಂಧ್ರದಲ್ಲಿ ತನ್ನ ಬಿರುಸಾದ ಪ್ರಭಾವವನ್ನು ಬೀರಿದ್ದ ವೀರಶೈವವನ್ನು ಸೋಮನಾಥನು ಎಷ್ಟು ಹಚ್ಚಿಕೊಂಡನೆಂದರೆ ಅವನು ಕಟ್ಟುನಿಟ್ಟಾಗಿ ಅರವತ್ತುಮೂರು ಶೀಲಗಳನ್ನು ಆಚರಿಸಿದನಂತೆ. ವೀರಶೈವದ ಪ್ರಭಾವ ಈ ಹೊತ್ತಿಗೆ ಆಂಧ್ರದಲ್ಲಿ ವ್ಯಾಪಕವಾಗಿ ಆಗಿತ್ತು, ಬಸವಪುರಾಣವನ್ನು ಬರೆದ ತನಗೆ ಕಥಾಸೂತ್ರವನ್ನು ಕರುಣೆಯಿಂದ ಹೇಳಿದರೆಂದು ಸೋಮನಾಥನು ನೆನಸುವ ಕರಸ್ಥಲಿ ಮಲ್ಲಿನಾಥ, ರೆಂಟಾಲ ಮಲ್ಲಾನಾಥ, ನೀಲಕಂಠಾಗ್ರಜ, ದೋಚಮಾಂಬೆ, ಗೋಡಗಿ ತ್ರಿಪುರಾರಿ ಮುಂತಾದವರು ಶ್ರೀಶೈಲದವರು. ಇಷ್ಟು ಮಂದಿ ಬಸವಚರಿತ್ರೆಯನ್ನು ತಿಳಿಸುವಂತಿರ ಬೇಕಾದರೆ ಆ ಕಾಲಕ್ಕೆ ಬಸವಾದಿಗಳ ಬಗ್ಗೆ ಆಂಧ್ರದಲ್ಲಿ ಕತೆಗಳು ವ್ಯಾಪಕವಾಗಿ ಜನಜನಿತವಾಗಿತ್ತು. ಅನ್ಯಮತಗಳ ಪ್ರಭಾವದಿಂದ ಜನರನ್ನು ಬಸವಾದಿಗಳು ಮುಕ್ತಗೊಳಿಸಬೇಕಾಗಿತ್ತು; ಹರಿಹರನ ಕಾಲಕ್ಕೆ ಇದು ನಡೆದು ಸಮಗ್ರೀಕರಣ ನಡೆಯುತ್ತಿತ್ತು; ಸೋಮನಾಥನ ಕಾಲಕ್ಕೆ ವೀರಶೈವವು ಆಕ್ರಮಣಕಾರಿಯಾಗಿ ಪಸರಿಸಿತು.

ಈ ಆಕ್ರಮಣಕಾರಿತ್ವವು 'ಬಸವಪುರಾಣಮು'ವಿನ ಹತ್ತಾರು ಶರಣಚರಿತೆಗಳಲ್ಲಿ ವ್ಯಕ್ತವಾಗಿದೆ. ಸೊಡ್ಡಳ ಬಾಚಯ್ಯನ ಕತೆ ಹೇಳುವಾಗ ಅವನು "ಜಿನಸಮಯ ಸ್ಥಲ ಶಿರಗಳ ತುಳಿದು ವಿಷ್ಣುಸಮಯಿಗಳ ಮುನ್ನ ಮೂಗರಿದು ಅದ್ವೈತಿಗಳ ಹಪಾಹಪದೊಳೋಡಿಸುತ ವಿದ್ವೇಷವಾದಿಗಳನ್ನು ಧಿಕ್ಕರಿಸಿ ಚಾರ್ವಾಕರುಗಳ ಗರ್ವವನಡಗಿಸುತ ಸರ್ವೇಶ ಭಕ್ತಿಯನಿಳೆಯಲಿ ಮೆರೆಸಿದ"ನೆಂದು ವಿವರಿಸುತ್ತಾನೆ. (ಬಸವ ಪು. ೪. ೧೨೫೯-೬೩). ಇದು ಆ ಕಾಲದಲ್ಲಿ ವೀರಶೈವವು ತನ್ನ ಎದುರಾಳಿಗಳಾಗಿ ಭಾವಿಸಿದ ಪಂಗಡಗಳನ್ನು ಸೂಚಿಸುತ್ತದೆ. "ಮೊದಲು ಜೈನಮತವ್ಯಾಪ್ತಿಯು ಚೆನ್ನಾಗಿತ್ತು, ಓರಂಗಲ್ಲಿನ ಆದಿರಾಜರು ಜೈನರು, ಆಗ ಬಸವೇಶ್ವರನ ನಾಯಕತ್ವದ, ಬಿಜ್ಜಳನ ಕಲ್ಯಾಣ ರಾಜ್ಯದಲ್ಲಿ ತಲೆಯೆತ್ತಿದ, ವೀರಶೈವ ಜಂಝಾ ಮಾರುತವು ತೆಲುಗು ನಾಡಿನಾದ್ಯಂತ (ಈ ಕಾಲದಲ್ಲಿ) ಬೀಸತೊಡಗಿತು". ಎನ್ನುತ್ತಾರೆ ಸುರವರಮು ಪ್ರಸಾದರೆಡ್ಡಿ ತಮ್ಮ 'ಆಂಧ್ರುಲ ಸಾಂಘಿಕ ಚರಿತ್ರ' ಎಂಬ ಗ್ರಂಥದಲ್ಲಿ (೧೯೪೯: ಪು.೨೦). ಈ ಜಂಝಾವಾತವೆಂಬ ಮಾತು ಆ ಕಾಲದಲ್ಲಿ ನಡೆದಿರಬಹುದಾದ ಮತೀಯ ಗಲಭೆಗಳನ್ನು ಕುರಿತದ್ದು, ಸೋಮನಾಥನು ತನ್ನ 'ಬಸವಪುರಾಣ'ದಲ್ಲಿ ಚಿತ್ರಿಸುವ ಹತ್ತಾರು ಮಂದಿ ಶಿವಶರಣರು ಪರಸಮಯಧ್ವಂಸದ ಆದರ್ಶಹೊತ್ತ ಜಂಝಾವಾತಗಳೇ.

ವೀರಶೈವ ಹರಡುವಿಕೆ, ಪ್ರಭಾವಗಳಿಂದ ತೆಲುಗು ನಾಡಿನ, ಸಾಮಾಜಿಕ ಪರಿಸ್ಥಿತಿಯ ಮೇಲೂ ಅನೇಕ ಬಗೆಯ ಪ್ರಭಾವಗಳಾದವು. ಸ್ತ್ರೀಯರಿಗೆ ಆ ಕಾಲದಲ್ಲಿ ಆಸ್ತಿಯ ಹಕ್ಕು ಇರಲಿಲ್ಲವಾದರೂ ವೀರಶೈವ ನ್ಯಾಯವೇತ್ತರ 'ಸಮತಾದೃಕ್ಪಥ'ದಿಂದಾಗಿ ಸ್ತ್ರೀಯರ ಆರ್ಥಿಕ ಸ್ಥಿತಿಗತಿಯು ಉತ್ತಮವಾಯಿತೆಂದು 'ಆಂಧ್ರುಲ ಸಂಸ್ಕೃತಿ ಚರಿತ್ರ-II' ಎಂಬ ಗ್ರಂಥದಲ್ಲಿ ಪ್ರಸಿದ್ಧ ವಿದ್ವಾಂಸರಾದ ಕಂಭಂಪಾಟಿ ಸತ್ಯನಾರಾಯಣ ಅಭಿಪ್ರಾಯಪಡುತ್ತಾರೆ (೧೯೮೨: ಪು. ೪೯). ಹಾಗೆಯೇ ಜಾತಿ ಸಂಬಂಧಿಯಾದ ಸಮಾಜಧೋರಣೆಯೂ ಬದಲಾಯಿತು. ಜೈನ, ವೈಷ್ಣವ, ವೀರಶೈವಗಳು ಜಾತಿವಿರೋಧಿ ನಿಲವನ್ನು ತಳೆದರೂ, ವೀರಶೈವ ಉಳಿದೆರಡು ಮತಗಳಿಗಿಂತ ಹೆಚ್ಚು ಪ್ರಭಾವವನ್ನು ಕರ್ನಾಟಕದಲ್ಲಿ ಹೇಗೋ ಹಾಗೆ ತೆಲುಗು ನಾಡಿನಲ್ಲೂ ಬೀರಿತು. ಆದರೆ ವಿಚಿತ್ರ : ಜಾತಿಗಳ ಸಂಖ್ಯೆ ಹೆಚ್ಚಾಯಿತು! ಹಿಂದೆ ಹದಿನೆಂಟು ಜಾತಿಗಳನ್ನು ಹೆಸರಿಸುತ್ತಿದ್ದುದು ನಿಂತು, ಮುಂದೆ ಪರ್ಯಾಯ ಶಬ್ದಗಳನ್ನು ಸೃಷ್ಟಿಸಿ ಜಾತಿ ಸಂಖ್ಯೆ ಬೆಳೆಯಿತು. ಈ ಅಂಶವನ್ನು ಸುರವರಮು ಪ್ರತಾಪರೆಡ್ಡಿ ಪ್ರಸ್ತಾಪಿಸುತ್ತಾರೆ (ಆಂಧ್ರುಲ ಸಾಂಘಿಕ ಚರಿತ್ರ, ೧೯೪೯; ಪು. ೩೩-೩೪). ಹೊಸಮತಕ್ಕೆ ಸೇರಿದವರು ಹಳೆಯ ಜಾತಿಯನ್ನು ಉಳಿಸಿಕೊಂಡದ್ದೇ ಇದಕ್ಕೆ ಕಾರಣವೆನ್ನಬಹುದು. ಎಲ್ಲ ಜಾತಿಗಳು ಎಲ್ಲ ಮತಗಳಲ್ಲೂ ಉಳಿದು ಬಂದದ್ದರಿಂದ ಜಾತಿ ವೈಪುಲ್ಯ ಕಾಣಿಸಿತು. ವಿವಿಧ ಮತಗಳಲ್ಲಿನ ಒಂದೇ ಜಾತಿಗೆ ಸೇರಿದವರು ತಮ್ಮನ್ನು ಬೇರೆ ಎಂದೇ ಭಾವಿಸಿದರೆ ಇನ್ನೇನಾದೀತು? ಮತಧರ್ಮಗಳ

ನಾಯಕರ ಮೂಲ ಉದ್ದೇಶವನ್ನೇ ಮರೆತು ಸಂಕುಚಿತ ದೃಷ್ಟಿಯಿಂದ ಮತಪ್ರಸಾರಕ್ಕೆ ಹೊರಟಾಗ ಪರಿಣಾಮ ವಿಪರೀತವಾಗುತ್ತದೆ. ಈ ಬಗ್ಗೆ ಪ್ರತಾಪರೆಡ್ಡಿಯವರು ಹೀಗೆನ್ನುತ್ತಾರೆ: "ವೀರಶೈವರೂ ವೈಷ್ಣವರೂ ಸ್ವಲ್ಪಮಟ್ಟಿಗೆ ಸಮಾಜಸುಧಾರಕರೇ ಹೊರತು, ಅವರು ಅಸಹನೆ ಮತೋನ್ಮಾದಗಳು ಹಿಂದೂ ಸಮಾಜದಲ್ಲಿ ಪ್ರವೇಶಿಸುವಂತೆ ಮಾಡಿದರು" ("ವೀರಶೈವುಲುನು ವೈಷ್ಣವುಲುನು ಕೊಂತವರಕು ಸಂಘಸಂಸ್ಕರ್ತಲೇ ಕಾನಿ ವಾರು ಅಸಹಮುನು, ಮತೋನ್ಮಾದಮುನು ಹಿಂದೂಸಂಘಮಂದು ಪ್ರವೇಶ ಪೆಟ್ಟಿನ ವಾರ್ರೈರಿ." (ಅದೇ: ಪು. ೨೮).

ಕರ್ನಾಟಕದಲ್ಲಿ ವಚನಕಾರರಿಂದ ಕನ್ನಡದ ಮಹತ್ವ ಮನದಟ್ಟಾದಂತೆಯೇ, ವೀರಶೈವದ ಪ್ರಸಾರದಿಂದಾಗಿ ಆಂಧ್ರದಲ್ಲಿ ತೆಲುಗು ಪ್ರಾಮುಖ್ಯಕ್ಕೆ ಬಂದುದನ್ನು ಆಗಲೇ ಗಮನಿಸಿದ್ದೇವೆ. ಈ ವಿಷಯದಲ್ಲಿ ಶೈವಪ್ರಾಬಲ್ಯದ ಸ್ವರೂಪದಲ್ಲಿ ಬಂದ ಸ್ವಾರಸ್ಯಕರ ಅಂಶವೆಂದರೆ: ಅಕ್ಷರಾಭ್ಯಾಸವನ್ನು ಪ್ರಾರಂಭಿಸುವಾಗ ಬಳಸುತ್ತಿದ್ದ ಸ್ತುತಿವಾಕ್ಯವು ಬೇರೆಯಿದ್ದದ್ದು ವ್ಯಾಪಕವಾಗಿ "ಓ ನಮಃ ಶಿವಾಯ" ಎಂದು ಬದಲಾಯಿತಂತೆ (ಅದೇ: ಪು. ೪೮). ಆದರೆ ಸೋಮನಾಥನೇನು ಇದನ್ನು ಹೇಳುವುದಿಲ್ಲ. ನಂದಿಕೇಶ್ವರನ ಅವತಾರನಾದ ಬಸವಣ್ಣನಿಗೆ "ಸರ್ವವಿದ್ಯೆಗಳು ಸಹಜವಾಗಿ ಬಂತು" ಎನ್ನುತ್ತಾನೆ. (ಬಸವಪುರಾಣ: I. ೮೫೦). ಪಾಲ್ಕುರಿಕೆ ಸೋಮನಾಥನು ತನ್ನ ಕಾವ್ಯದಲ್ಲಿ ಹೇಳುವ ಶಿವಶರಣರುಗಳಲ್ಲಿ ಬಹು ಮಂದಿ ಸಾಮಾನ್ಯರೇ ಆಗಿರುವುದರಿಂದ ಜನಸಾಮಾನ್ಯರ ರೀತಿ ನೀತಿಗಳು ಅಲ್ಲಿ ಕೆಲವೆಡೆ ಕಾಣಸಿಗುತ್ತವೆ. ಪಂಡಿತಾರಾಧ್ಯ ಚರಿತ್ರೆಯಲ್ಲಿ ಸೋಮನಾಥನು ತುಮ್ಮೆನ ಪದಗಳು, ವೆನ್ನೆಲ ಪದಗಳು, ಶಂಕರ ಪದಗಳು, ಪರ್ವತ ಪದಗಳು, ನಿವಾಳಿಪದಗಳು, ವಾಲೇಶು ಪದಗಳು ಮುಂತಾದವನ್ನು ಹೆಸರಿಸುತ್ತಾನೆ. ತನ್ನ ಬಸವಪುರಾಣಕ್ಕೆ "ಆತತ ಬಸವಪುರಾತನ ಭಕ್ತ ಗೀತಾರ್ಥಸಮಿತಿಯೇ ಮಾತೃಕೆ" (ಬಸವಪುರಾಣ: I, ೧೭೯-೮೦) ಎಂಬ ಮಾತು ಈ ಬಗೆಯ ಜಾನಪದಗೀತಗಳನ್ನು ಸೂಚಿಸುತ್ತದೆ ಎಂದು ದಿವಾಕರ್ಲ ವೆಂಕಟಾವಧಾನಿ ಹೇಳುತ್ತಾರೆ ('ಆಂಧ್ರ ವಾಙ್ಮಯ ಚರಿತ್ರೆ', ಅನುವಾದ : ಪು. ೧೨). 'ಬಸವಪುರಾಣ'ದಲ್ಲಿ ಬರುವ ಸಿರಿಯಾಳನ ಕತೆಯ ಭಾಗದಲ್ಲಿ ಈ ಸಾಲುಗಳಿವೆ;

ಮೇಟಿಯ್ಯೆ ಚನು ಭಕ್ತಕೂಟುವಲಂದು
ಪಾಟಲುಗಾ ಗಟ್ಟಿ ಪಾಡೆಡುವಾರು
ಪ್ರಸ್ತುತೊಕ್ತುಲ ಗದ್ಯಪದ್ಯಕಾವ್ಯಮುಲ
ವಿಸ್ತಾರಮುಗ ಜೇಸಿ ವಿನುತಿಂಚುವಾರು
ಅಟುಗಾಕ ಸಾಂಗ ಭಾಷಾಂಗ ಕ್ರಿಯಾಂಗ
ಪಟುನಾಟಕಂಬುಲ ನಟಿಯಿಂಚುವಾರು
ಮುನುಮಾಡಿ ವೀರು ವಾರನನೇಲ ಕೂಡಿ
ಕನುಗೊನ ರೋಳ್ಳ ರೋಕಳ್ಳ ಬಾಡೆದರು

(ಅಧಿಕದಿ ಭಕ್ತರ ಕೂಟಗಳಲ್ಲಿ
ಹಾಡುಗಳನು ಕಟ್ಟಿ ಹಾಡುತ್ತಲಿಹರು;
ಪ್ರಸ್ತುತೋಕ್ತಿಯ ಗದ್ಯಪದ್ಯಕಾವ್ಯಗಳ
ವಿಸ್ತಾರದಲಿ ಮಾಡಿ ವಿನುತಿಸುತಿಹರು;
ಅಲ್ಲದೆ ಸಾಂಗ ಭಾಷಾಂಗ ಕ್ರಿಯಾಂಗ
ಪಟುನಾಟಕಗಳನು ನಟಿಸುತ್ತಲಿಹರು;
ಸರದಿಯಲವರಿವರೆನ್ನದಲೆಲ್ಲ
ಸೇರುತಲೊನಕೆವಾಡುಗಳ ಹಾಡುವರು)

*(ಬಸವಪುರಾಣ: IV– ೧೨೩೧ – ೩೮)*

ಇಲ್ಲಿ ಭಕ್ತಕೂಟಗಳ ವಿಷಯವಿದೆ, ಗದ್ಯಪದ್ಯಗಳಲ್ಲಿ ಆಶುಕವಿತೆಯನ್ನು ಸ್ತೋತ್ರವನ್ನು ರಚಿಸುವ ಪ್ರಸ್ತಾಪವಿದೆ; ಆಶುನಾಟಕಗಳನ್ನೂ ರಚಿಸಿ ಆಡುವುದನ್ನು ಹೇಳಲಾಗಿದೆ; ಎಲ್ಲರೂ ಕೂಡಿ ಒನಕೆವಾಡುಗಳನ್ನು ಹಾಡುವ ಬಗೆಯ ವರ್ಣನೆಯಿದೆ. ಕುಟ್ಟುವಾಗ ಹಾಡಲೆಂದು ಕಟ್ಟಿದ ಹಾಡುಗಳು ಮೊದಲು ಒನಕೆವಾಡುಗಳೆನ್ನಿಸಿಕೊಂಡಿದ್ದರೂ ಪ್ರಾಯಶಃ ಕುಟ್ಟುವ ಲಯಕ್ಕೆ ಅನುಗುಣವಾದ ಎಲ್ಲ ಹಾಡುಗಳನ್ನು ಮುಂದೆ ಆ ಹೆಸರಿನಿಂದಲೇ ಕರೆಯುತ್ತಿದ್ದಿರಬೇಕು. ಹಾಡಿನ ಜೊತೆಗೆ ಕೋಲಾಟ ಕುಣಿತಗಳು ಇರುತ್ತಿದ್ದ ಪ್ರಸ್ತಾಪವೂ ಸೋಮನಾಥನಲ್ಲಿದೆ. ಕೋಲಾಟವಲ್ಲದೆ, ಗೊಂಡಿ (ಗರ್ಭವೃತ್ತ), ಪೇರಣಿ (ಕುಂಭನೃತ್ಯ)ಗಳನ್ನು ಅವನು ಹೆಸರಿಸುತ್ತಾನೆ (ಬಸವಪುರಾಣ, I. ೧೦೫೭–೮) ಬಸವಪುರಾಣದಲ್ಲಿ 'ದೇಶಿಮಾರ್ಗ' ಸಂಗೀತ ಸಂಪ್ರದಾಯಗಳ ಉಲ್ಲೇಖವಿದೆ. (III. ೧೮೬೦) ನಾನಾ ರಾಗಗಳ ಹೆಸರುಗಳಲ್ಲದೆ, ಸ್ತ್ರೀ–ಪುರುಷರಾಗಗಳನ್ನೂ ಹೆಸರಿಸುತ್ತಾನೆ, (III, ೧೮೬೦–೧೮೯೨). ವಿಧವಿಧವಾದ ಸಂಗೀತವಾದ್ಯಗಳ ಉಲ್ಲೇಖವೂ ಅಲ್ಲಿ ದೊರೆಯುತ್ತದೆ (II, ೧೮೩೦–೪೦).

ಬದುಕಿನ ವಿವಿಧ ಕ್ಷೇತ್ರಗಳಲ್ಲಿ ಆ ಕಾಲದಲ್ಲಿದ್ದ ವಸ್ತುರೀತಿಗಳನ್ನು ಪಟ್ಟಿ ಮಾಡುವುದರಿಂದೇನೂ ಹೆಚ್ಚು ಪ್ರಯೋಜನವಾಗದು. ಕನ್ನಡನಾಡು – ತೆಲುಗು ನಾಡುಗಳಲ್ಲಿ ಜೀವನ ರೀತಿಯಲ್ಲಿ ಈಗಿಗಿಂತ ಆಗ ಹೆಚ್ಚಿ ಸಾಮ್ಯವಿದ್ದಿರಬೇಕು. ತೆಲುಗರ ಬದುಕಿನ ರೀತಿ ಕನ್ನಡಿಗರದಕ್ಕಿಂತ ತೀರ ಭಿನ್ನವಾಗಿರಲು ಸಾಧ್ಯವಿಲ್ಲ. ಅಕ್ಕಪಕ್ಕದ ನಾಡುಗಳು ಪರಸ್ಪರ ಪ್ರಭಾವ, ಕೊಳು–ಕೊಡೆಗಳಿಂದಾಗಿ ಜನರು ಹತ್ತಿರ ಬರುತ್ತಾರೆ. ಗಡಿಪ್ರದೇಶಗಳಲ್ಲಿ ಈ ಸಾಮ್ಯ ಇನ್ನೂ ಹೆಚ್ಚು. ಪಾಲ್ಕುರಿಕೆ ಸೋಮನಾಥ ತೆಲಂಗಾಣ ಪ್ರಾಂತದವನು. ಬಸವಾದಿಗಳ ಕಾರ್ಯಕ್ಷೇತ್ರವಾದ ಕಲ್ಯಾಣದಿಂದ ಇದು ತುಂಬ ದೂರವೇನಲ್ಲ. ಹಾಗೆ ನೋಡಿದರೆ ಶಿವಶರಣರ ಪ್ರಭಾವವು ತುಂಗಭದ್ರಾನದಿಯನ್ನು ದಾಟಿ ದಕ್ಷಿಣ ಕರ್ನಾಟಕದ ಮೇಲೆ ಬೀಳುವುದಕ್ಕಿಂತ ಮೊದಲೇ ಸಹಜವಾಗಿ ಅಕ್ಕಪಕ್ಕ ಹರಿದು ತೆಲಂಗಾಣವನ್ನು ಸೇರಿರಬೇಕು. ಆ ಕಾರಣಕ್ಕಾಗಿಯೇ ಸೋಮನಾಥನಂತಹ ಕವಿಗಳು ಮೊದಲು ಆಂಧ್ರದಲ್ಲಿ ಬಂದರು.

ಸೋಮನಾಥನ ದ್ವಿಪದ ಕಾವ್ಯಗಳಾದ 'ಬಸವಪುರಾಣ' ಹಾಗೂ 'ಪಂಡಿತಾರಾಧ್ಯ ಚರಿತ್ರೆ'ಗಳು ಒಂದು ಬಗೆಯಲ್ಲಿ ವೈಯಕ್ತಿಕ ಆವೇಶದ ಅಭಿವ್ಯಕ್ತಿಯೂ ಹೌದು; ಮತ್ತೊಂದು ರೀತಿಯಲ್ಲಿ ಆಗಿನ ವಾತಾವರಣದ ಚಿತ್ರಣವೂ ಹೌದು. ಈತನ ಕಾವ್ಯದ ಭಾವುಕತೆ ಕೇಳುಗರಲ್ಲಿ ಆವೇಶವನ್ನು ಹೆಚ್ಚಿಸಿರಬೇಕು; ಅಂತೆಯೇ ಸಮಾನ ಮನಸ್ಕರ ಭಾವಾವೇಶ ಇವನಲ್ಲಿ ಹುರುಪನ್ನು ಮೂಡಿಸಿರಬೇಕು. ಶ್ರೀಶೈಲದ ಅನೇಕ ಜಂಗಮರು ಸೋಮನಾಥನಿಗೆ ಬಸವಕಥೆಯನ್ನು ನಿರೂಪಿಸಿ, ಅದನ್ನು ಪುರಾಣವಾಗಿಸಲು ಹೇಳಿದರೆಂಬುದರ ಅರ್ಥ ಇದೇ ಆಗಿದೆ. ಇಲ್ಲಿಯ ಕತೆ ಹಲವರಿಂದಾದದ್ದು, ಹಾಗೆಯೇ ಇಲ್ಲಿಯ ಭಾವವೂ ಅಂದಿನ ವಾತಾವರಣದಿಂದ ಮೂಡಿದ್ದು. 'ಪುರಾಣ' ಎಂದು ತನ್ನ ರಚನೆಯನ್ನು ಸೋಮನಾಥ ಕರೆದುದು ಇದಕ್ಕೇ ಇರಬೇಕು. ಏಕೆಂದರೆ 'ಪುರಾಣ'ವು ಒಬ್ಬನ ರಚನೆಯಾಗಿರುವುದಿಲ್ಲ; ಒಬ್ಬನ ಮೂಲಕ ಅಭಿವ್ಯಕ್ತಿ ಪಡೆಯುವ ಸಮುದಾಯದ ರಚನೆಯಾಗಿರುತ್ತದೆ.

*(ಕರ್ನಾಟಕ ವಿಶ್ವವಿದ್ಯಾಲಯದ ವಿಚಾರ ಸಂಕಿರಣ, ೧೯೯೭)*



ಹದಿಮೂರನೆಯ ಶತಮಾನದ ಆರಂಭದಲ್ಲಿದ್ದ ಹರಿಹರನಿಂದ ರಚಿತವಾದ 'ಬಸವರಾಜದೇವರ ರಗಳೆ'ಯು ಬಸವಣ್ಣನ ಬಗ್ಗೆ ಬಂದ ಮೊದಲ ಕೃತಿಯಾದರೂ, ಪಾಲ್ಕುರಿಕೆ ಸೋಮನಾಥನ ತೆಲಗು 'ಬಸವ ಪುರಾಣಮು' ಬಸವಣ್ಣನನ್ನು ಕುರಿತ ಮೊದಲ ಪುರಾಣಕಾವ್ಯ; ಇದು ಮೊತ್ತ ಮೊದಲ ವೀರಶೈವ ಪುರಾಣವೂ ಹೌದು. ಹೀಗಾಗಿ ಇದಕ್ಕೊಂದು ವಿಶಿಷ್ಟ ಸ್ಥಾನವಿದೆ. ಇದರಲ್ಲಿ ವೀರಶೈವ ದರ್ಶನವು ಬಸವಣ್ಣನ ಚರಿತ್ರೆಯೊಂದಿಗೆ ಹಾಸುಹೊಕ್ಕಾಗಿದೆ ಹಾಗೂ ಹತ್ತಾರು ಶರಣರ ಕತೆಗಳೊಂದಿಗೆ ಹೆಣೆದುಕೊಂಡಿದೆ.

ಈ ಕೃತಿಯನ್ನು ಹದಿನಾಲ್ಕನೆಯ ಶತಮಾನದ ಭೀಮಕವಿಯ ಭಾಮಿನೀ ಷಟ್ಪದಿಯಲ್ಲಿ ಕನ್ನಡಕ್ಕೆ ಅನುವಾದಿಸಿ, ಜೊತೆಗೆ ತನ್ನದೇ ಕೆಲವು ಕತೆಗಳನ್ನೂ ಜೋಡಿಸಿದ. ಹೀಗಾಗಿ ಇದರಲ್ಲಿ ಭೀಮನದೆಷ್ಟು ಸೋಮನದೆಷ್ಟು ಎಂಬುದು ತೆಲಗು ಬಾರದವರಿಗೆ ತಿಳಿಯದಾಗುತ್ತದೆ. ಪ್ರಸ್ತುತ ಅನುವಾದವು ತೆಲುಗಿನಲ್ಲಿರುವಂತೆ ಅಂಶಘಟಿತ ದ್ವಿಪದಿಯಲ್ಲಿಯೇ ಕನ್ನಡಕ್ಕೆ ಬಂದಿದ್ದು ಅಲ್ಲಿರುವಷ್ಟು ಸಾಲುಗಳನ್ನೇ ಒಳಗೊಂಡು ಮೂಲದ ಪ್ರತಿಬಿಂಬದಂತಿದೆ. ಈ ಸಂಪುಟದಲ್ಲಿ ಅನುವಾದದೊಡನೆ ಎರಡೂ ಭಾಷೆಗಳ ಬಸವ ಪುರಾಣಗಳ ಬಗ್ಗೆ ಡಾ. ಪಿ.ವಿ. ನಾರಾಯಣ ಅವರು ನಡೆಸಿರುವ ತೌಲನಿಕ ಅಧ್ಯಯನಗಳು ಸೇರಿದ್ದು ಅಭ್ಯಾಸಿಗಳಿಗೆ ಹೆಚ್ಚು ಉಪಯುಕ್ತವಾಗುವಂತಿವೆ.

**ವಸಂತ ಎಂಟರ್‌ಪ್ರೈಸಸ್**

ನಂ. 224, 4ನೇ ಮುಖ್ಯ ರಸ್ತೆ, 3ನೇ ಅಡ್ಡ ರಸ್ತೆ,
ಚಾಮರಾಜಪೇಟೆ, ಬೆಂಗಳೂರು - 560 011

ಬೆಲೆ ರೂ. 275/-